ಮಘುಮಘಿಪ ಜಾದಿಪೊಂಗೇ- । ದಗೆಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ॥
ಬಗೆಯರಿದುನೀಡುಗುಂ ಮಾ- । ಲೆಗಾರನಂ ಪೋಲ್ತುದಗ್ರಮಾಲ್ಯಮಹೀಜಂ ॥ ೭ ॥
ಮಕುಟಂ ಕೇಯೂರಂ ಕ- । ರ್ಣಕುಂತಲಂ ಕೊಪ್ಪುಸರಿಗೆ ದೂಸರಂ ಮಣಿಮು- ॥
ದ್ರಿಕೇತಿಸರವೆಂಬ ಭೂಷಾ- । ನಿಕಾಯಮಂ ಭೂಷಣಾಂಗತರು ಕುಡುತಿಕ್ಕುಂ ॥ ೮ ॥
ಆಪೊತ್ತುಂ ಮಣಿದೀಪಕ- । ಳಾಪೋದ್ಯಜ್ಜ್ಯೋತಿಗಳು ದಿಶಾಮಂಡಲಮಂ ॥
ವ್ಯಾಪಿಸುತ್ತಿರೆಸೊಗಯಿಸುವು । ದೀಪಾಂಗ ಜ್ಯೋತಿರಂಗಕಲ್ಪಕುಜಂಗಳ್ ॥ ೯ ॥
ಅತಿಮೃದುರವದಾಯಿಗಳಂ । ತತಘನಸುಷಿರಾವನದ ವಾದ್ಯಂಗಳನೇ ॥
ಮತಮರೆದೋಲಗಿಪುದುದಂ । ಪಡಿಗೆಂದುಮವಾರ್ಯವೀರ್ಯತೂರ್ಯಕ್ಷ್ಮಾಜಂ ॥ ೧೦ ॥

ಗಾಹೆ ॥ ಅವಸಪ್ಪಿಣಿ ಉಸ್ಸಪ್ಪಿಣಿ ಕಾಲಚ್ಚಿಯು ರಹಟಘಟೀಯಣಾಯೇಣ ।
ಹೊಂತಿ ಯಣಂತಾಣಂತೋ ಭರಹೈರಾವದಖಿದಿಂವ್ಹಿಪುಡಂ ॥ ೨ ॥

ಅರ್ಥ—ಅವಸರ್ಪಿಣಿ ಉತ್ಸರ್ಪಿಣಿ ಕಾಲಗಳು ರಾಟಾಳದ ಗುಂಡಿಗೆಯ ಹಾಗೆ ಅನಂತಾನಂತಗಳು. ಭರತೈರಾವತ ಕ್ಷೇತ್ರಗಳಲ್ಲಿ ವರ್ತಿಸುವದು.

ಗಾಹೆ ॥ ಅವಸಪ್ಪಿಣಿ ಉಸ್ಸಪ್ಪಿಣಿಕಾಲಸಲಾಯಾ ಅಸಂಖಪರಿವತ್ತೇ ।
ಹುಂಡಾವಸಪ್ಪಿಣಿಸಾಯೆಕ್ಕಾಜಾಯೇದಿತಿಯ ಚಿಮ್ಹಾಮಿಉಂ ॥ ೩ ॥

ಅರ್ಥ—ಅವಸರ್ಪಿಣಿ ಉತ್ಸರ್ಪಿಣಿಕಾಲಶಲಾಕೆಗಳ ಸಂಖ್ಯಾತಂಗಳ್ಪರಿವರ್ತಿಸಲೊಂದು ಹುಂಡಾವಸರ್ಪಿಣಿಕಾಲವಾಗುವದು ಅದರ ಚಿಹ್ನಂಗಳಿವು.

ಗಾಹೆ ॥ ತಸ್ಸಪಿ ಸುಸಮು ದುಸ್ಸಮುಕಾಲಸ್ಸದಿದಿವ್ಹಿದೋವಾ ।
ಅವಸೇಸೆಣಿವಡದಿಪಾಸಉಬಹುದಿಯದಿಯ ಜೀವ ಉಪ್ಪತ್ತಿ ॥ ೪ ॥

ತಾ—ಅಲ್ಲಿ ಸುಷಮದುಷ್ಷುಮಕಾಲಸ್ಥಿತಿಯೊಳೇನಾನುಮುಳಿದಲ್ಲಿ ಮಳೆಮಾಗಿ ಬೇಸಗೆ ಮೊದಲಾದವುಂ ವಿಕಲೇಂದ್ರಿಯ ಜೀವೋತ್ಪತ್ತಿಯುಂ

ಗಾಹೆ ॥ ಕಪ್ಪತರೂಣಾ ವಿರಾಮೋವಾ ಗಾರೋಹೋದಿ ಕಮ್ಮಭೂಮಿಯೆ ।
ತಕ್ಕಾಳೇ ಜಾಯಂತೇ ಪಢಮಜಿಣೋ ಪಢಮುಚಕ್ಕೀಯ ॥ ೫ ॥
ಚಕ್ಕಿಸ್ಸವಿಜಯಭಂಗೋ ಣಿಬ್ಬದಿಗಮಣೇ ಥೋವಜೀವಾಣಂ ।
ಚಕ್ಕಹರಾ ಉದಿಜಾಣಂ ಹವೇಯಿವಂ ಸಸ್ಸ ಉಪ್ಪತ್ತಿ ॥ ೬ ॥

ತಾ—ಕಲ್ಪವೃಕ್ಷದ ವಿರಾಮವುಂ ಕರ್ಮಭೂಮಿಯ ವ್ಯಾಪಾರವುಂ ತತ್ಕಾಲದಲ್ಲಿ ಪ್ರಥಮ ತೀರ್ಥಕರುಂ ಪ್ರಥಮಚಕ್ರವರ್ತಿಯುಂ ಹುಟ್ಟುವರು. ಆ ಚಕ್ರಿಗೆ ವಿಜಯಭಂಗವುಂ ಆತನ ದೆಶೆಯಿಂದ ವಿಪ್ರವಂಶೋತ್ಪತ್ತಿಯುಂ, ನಿರ್ವಾಣಕ್ಕೆ ಹೋಗುವವರು ಕೆಲವರೇ ಆಗುವರು.

ಗಾಹೆ ॥ ದುಸ್ಸಮು ಸುಸಮೋ ತಿಸಠ್ಠಿಪಮಾಣ ಸಲಾಯಪುರುಸಾಯ ।
ಣವಮಾದಿಸೋಳಸತ್ತೇ ಸಂತಸುತಿವ್ವೇಸುದಮುಚೋಚೇದೋ ॥ ೭ ॥

ತಾ—ದುಷ್ಷುಮಸುಷಮಕಾಲದಲ್ಲಿ ಅರವತ್ತೂರು (೬೩) ಶಲಾಕಾಪುರುಷರು ಕ್ರಮದಿಂದ ಹುಟ್ಟುವರು. ನವಮಾದಿ ಷೋಡಶಾಂತ್ಯವಾದ ಸಪ್ತ (೭) ತೀರ್ಥಾಂತರದಲ್ಲಿ ಧರ್ಮ

ವ್ಯುಚ್ಛಿತ್ತಿಯುಂ, ಸಪ್ತತೀರ್ಥಾಂತರವರ್ಧಪಲ್ಯದ. ಚತುರ್ಭಾಗೇ, ದ್ವಿಭಾಗೇ, ತ್ರಿಭಾಗೇ, ದ್ವಿಭಾಗೇ, ಚತುರ್ಭಾಗೇ ಪರಿಯಂತಂ ಪೋದುವರುಂ, ಕೇಳುವರುಂ, ಹೇಳುವರುಂ, ನೆಗಳುವರುಂ, ಇಲ್ಲಗೆ ಆಗುವದರಿಂದ ಶ್ರೀಜಿನಧರ್ಮವು ವಿಚ್ಛಿನ್ನವಾಗಿ ಪ್ರವರ್ತಿಸುವದು.

ಗಾಹೆ ॥ ಎಕ್ಕರಸ ಹೊಂತಿ ರುದ್ದಾ ಕಲಹಾಪಿಯ ಣಾರದೋಯ ಣವಸಂಖಾ ।
ಸತ್ತಮು ತೇವೀಸಂತಿಮತಿಥ್ಥಯರಾಣಂ ಚ ಉವಸಗ್ಗೋ ॥ ೪ ॥

ವ—ಏಕಾದಶರುದ್ರರುಂ, ಕಲಹಪ್ರಿಯರಾದ ನವನಾರದರುಂ ಉಂಟಾಗುವರು. ಏಳನೆಯ, ಇಪ್ಪತ್ಮೂರನೆಯ, ಕಡೆಯ ತೀರ್ಥಕರುಗಳಿಗೆ ಉಪಸರ್ಗವಾಗುವದು.

ಗಾಹೆ ॥ ತಯ ಚದು ಪಚಮೇ ಸುಕ್ಕಾಲೇಸುಂ ಪರಮ ದುಮ್ಮಣಯಸಾರಾ ।
ವಿವಿಹ ಕುದೇವ ಕುಲಿಂಗಿಸತ್ತ್ ಕಥ್ಥ, ಪಾವಿಥ್ಥಾ ॥ ೯ ॥
ಚಂಡೋಳ ಸಬರ ಪಾಣಾ ಪುಣಿಂದ ಣಾಹಳ ಚಿಳಾಳ ಪಹುಡಿಕುಳಾ ।
ದುಸ್ಸಮುಕಾಳೇ ಕಕ್ಕಿ ಉವಕಕ್ಕಿ ಹೊಂತಿ ಚಾದಾಳಾ ॥ ೧೦ ॥
ಅಚ್ಛುಟ್ಠಿ ಅಣಾಉಟ್ಠಿ ಭೂವಡ್ಡಿ ವಜ್ಜ ಅಗ್ಗಿಪ ಮುಹಾಯ ।
ಯಿಹಣಾವಿಹ ದೋಸಾ ವಿಚಿತ್ತಭೇದಾ ಹರತ್ತಿಪುಢಂ ॥ ೧೧ ॥

ತಾ—ತೃತೀಯ, ಚತುರ್ಥ, ಪಂಚಮಕಾಲಗಳಲ್ಲಿ ಶ್ರೀಜಿನಧರ್ಮನಾಶಕರಾದ ಹಲವುತೆರದ ಕುದೇವತೆಗಳುಂ, ಕುಲಿಂಗಿಗಳುಂ, ಕಷ್ಟಪಾಪಿಷ್ಠರುಗಳಾದ ಚಾಂಡಾಲ ಶಬರ ಪಾಣ ಪುಳಿಂದ ನಾಹಳ ಚಿಲಾತಾದಿ ಕುತ್ಸಿತಂ ಮತದವರುಂ, ದುಷಮಕಾಲದಲ್ಲಿ ಕಲ್ಕಿಯುಂ ಉಪಕಲ್ಕಿಯುಂ ಎಂಬುವ ೪೨ ಜನರು ಹುಟ್ಟುವರು. ಅತಿವೃಷ್ಟಿ ಅನಾವೃಷ್ಟಿ ಭೂವೃಧ್ಧಿ ವಜ್ರಾಗ್ನಿಯುಂ ಮೊದಲಾದ ನಾನಾವಿಧ ದೋಷಗಳುಂ, ವಿಚಿತ್ರಭೇದಗಳುಂ, ಮತ್ತೂ ಈ ಭರತಕ್ಷೇತ್ರದ ಹುಂಡಾವಸರ್ಪಿಣಿಯ ತೃತೀಯಕಾಲದ ಕಡೆಯ ಪಲ್ಯಾಷ್ಟಮಭಾಗ ಉಳಿದಲ್ಲಿ ಕಲ್ಪವೃಕ್ಷದ ವೀರ್ಯಹಾನಿಯುಂ, ಕರ್ಮಭೂಮಿಯ ಉತ್ಪತ್ತಿಚಿಹ್ನಂಗಳುಂ ಪ್ರಕಟವಾಗಲು ಅದೆಲ್ಲವನ್ನೂ ತಿಳಿಸಿದ ಮನುಗಳೆಲ್ಲರನ್ನೂ ಪೇಳ್ವೆನವರಾರೆಂದೊಡೆ ॥

## ಸೂತ್ರಂ ॥ ಚತುರ್ದಶ ಕುಲಂಕರಾ: ಇತಿ ॥ ೫ ॥

ತಾ—ಈ ಜಂಬೂದ್ವೀಪದ ಭರತಾಪೇಕ್ಷೆಯಿಂ ಪ್ರತಿಶ್ರುತಿಯುಂ ೧, ಸನ್ಮತಿಯುಂ ೨, ಕ್ಷೇಮಂಕರನುಂ ೩, ಕ್ಷೇಮಂಧರನುಂ ೪, ಸೀಮಂಕರನುಂ ೫, ಸೀಮಂಧರನುಂ ೬, ವಿಮಲವಾಹನನುಂ ೭, ಚಕ್ಷುಷ್ಮನುಂ ೮, ಯಶಶ್ವಿಯುಂ ೯, ಅಭಿಚಂದ್ರನುಂ ೧೦, ಚಂದ್ರಾಭನುಂ ೧೧, ಮರುದ್ದೇವನುಂ ೧೨, ಪ್ರಸೇನಜಿತುವುಂ ೧೩, ನಾಭಿರಾಜನುಂ ೧೪. ಎಂಬೀ ಹದಿನಾಲ್ಕು ಮನುಗಳುಂ, ಪೂರ್ವಭವದಲ್ಲಿ ವಿದೇಹದಲ್ಲಿ ಸತ್ಪಾತ್ರಕ್ಕೆ ವಿಶಿಷ್ಟವಾದ ಆಹಾರದಾನವನ್ನು ಕೊಟ್ಟ ಫಲದಿಂದ ಮನುಷ್ಯಗತಿಗಾಯುಷ್ಯಮಂ ಕಟ್ಟಿದಿಂ ಬಳಿಕಂ ಕ್ಷಾಯಿಕ ಸಮ್ಯಕ್ತ್ವವನ್ನು ಪಡೆದು ಬಂದಿಲ್ಲಿ ಕ್ಷತ್ರಿಯ ಕುಲದಲ್ಲಿ ಹುಟ್ಟಿ ಕೆಲವರು ಅವಧಿಜ್ಞಾನದಿಂದಲೂ, ಕೆಲವರು ಜಾತಿಸ್ಮರಣದಿಂದಲೂ ಮೇಣ್ ಕಲ್ಪವೃಕ್ಷದ ಸಾಮರ್ಥ್ಯದ ಹಾನಿಯಲ್ಲಿ ಉಂಟಾದ ಸ್ವರೂಪವನ್ನು ತಿಳಿಸುತ್ತಾರೆ. ಅದು ಹ್ಯಾಗಂದರೆ—

ಸಾಸಿರದೆಂಟುನೂರು ( ೧೮೦೦ ) ಬಿಲ್ಲಿಡಿಯನುಂ, ಪಲ್ಯದ ದಶಭಾಗಾಯುಷ್ಯನುಂ, ಸ್ವಯಂಪ್ರಭಾಪತಿಯಾದ ಪ್ರತಿಶ್ರುತಿಯೆಂಬ ಪ್ರಥಮ ಕುಲಂಕರಂ, ಜ್ಯೋತಿರಂಗದ ಕಾಂತಿಯ ಹಾನಿಯಿಂದ ಆಷಾಢ ಪೌರ್ಣಮಿಯ ದಿವಸ ಚಂದ್ರಾದಿತ್ಯರನ್ನು ಕಂಡು ಜನಗಳು ಭೀತರಾಗಲು ಹೆದರದಿರೆಂದು ಅವರ ಮನಸ್ಸಿನ ಭಯವನ್ನು ಹೋಗಲಾಡಿಸಿದನು. ॥ ೧ ॥

ಆತನ ತರುವಾಯ ಪಲ್ಯದೆಂಭತ್ತನೆಯ ಭಾಗ ಕಳಿದ ಮೇಲೆ ಸಾವಿರದ ಮುನ್ನೂರು ( ೧೩೦೦ ) ಚಾಪೋತ್ಸೇಧನುಂ, ಪಲ್ಯದ ಶತಭಾಗಾಯುಷ್ಯನುಂ, ಯಶಸ್ವತಿಪತಿ ಸನ್ಮತಿಯೆಂಬೆ ರಡನೆಯ ಕುಲಂಕರಂ, ಸೂರ್ಯಾಸ್ತಮಾನವಾಗಲು ಕತ್ತಲೆಯಲ್ಲಿ ನಕ್ಷತ್ರಗಳನ್ನು ಕಂಡು ಭೀತರಾಗಲು ಅಂಜದಿರೆಂದು ಅವರ ಮನಸ್ಸಿನ ಭಯವನ್ನು ನಿವಾರಣೆಮಾಡಿದನು ॥ ೨ ॥

ಮತ್ತಂ ಅನಂತರ ಪಲ್ಯದೆಂಟುನೂರು ಭಾಗವು ಹೋಗಲು ಎಂಟುನೂರು ( ೮೦೦ ) ಕೋದಂಡಾಂತರನುಂ, ಪಲ್ಯದ ಸಹಸ್ರಭಾಗಜೀವಿತನುಂ ( ೧೦೦೦ ) ಸುನಂದಾನಾಥಂ ಕ್ಷೇಮಂಕರನೆಂಬ ಮೂರನೆಯ ಮನುವು, ಕ್ರೂರಮೃಗಗಳ ಬಾಧೆಯನ್ನು ನಿವಾರಿಸುವ ಉಪಾಯವನ್ನು ಮಾಡಿದನು ॥ ೩ ॥

ಆತನ ತರುವಾಯ ಪಲ್ಯಾಷ್ಟಸಹಸ್ರಭಾಗಾನಂತರಂ ( ೮೦೦೦ ) ಯೇಳ್ನೂರೆಪ್ಪತ್ತೈದು ( ೭೭೫ ) ಧನುತ್ತುಂಗನುಂ, ಪಲ್ಯದ ದಶಸಹಸ್ರಭಾಗ ( ೧೦೦೦೦ ) ಜೀವಿತನುಂ, ವಿಮಲಾರಮಣನುಂ, ಕ್ಷೇಮಂಧರನೆಂಬಂ ಚತುರ್ಥಕುಲಂಕರಂ, ದೀಪಾಂಗದ ಹಾನಿಯಿಂದ ಭೀತರಾಗಲು ದೀಪೋದ್ಯೋತನೋಪಾಯವನ್ನೂ, ಕ್ರೂರಪ್ರಾಣಿಗಳನ್ನು ದಂಡಾದಿಗಳಿಂದ ಪರಿಹರಿಸುವದನ್ನೂ ಹೇಳಿದನು ॥ ೪ ॥

ಆತನಿಂದನಂತರಂ ಪಲ್ಯದೆಂಭತ್ತುಸಹಸ್ರಭಾಗವು ಕಳಿಯಲು ಯೇಳ್ನೂರೈವತ್ತು ( ೭೫೦ ) ಬಾಣಾಸನೋತ್ಸೇಧನುಂ, ಪಲ್ಯದ ದಲಕ್ಷಭಾಗಾಯುಷ್ಯನುಂ ೧೦೦೦೦೦ ಮನೋಹರಿಯ ಮನೋರಮಣನುಂ, ಸೀಮಂಕರನೆಂಬಯ್ದನೆಯ ಮನುವು, ವೃಕ್ಷಗಳನ್ನು ಸೀಮಾಪ್ರಮಾಣಮಂ ತೋರಿದನು ॥ ೫ ॥

ಆತನಿಂ ಬಳಿಕ ಪಲ್ಯಾಷ್ಟಲಕ್ಷ ( ೮೦೦೦೦೦ ) ಭಾಗವು ಕಳಿಯಲು ಯೇಳ್ನೂರಿಪ್ಪತ್ತೈದು ( ೭೨೫ ) ಚಾಪೋತ್ಸೇಧನುಂ, ಪಲ್ಯದ ದಶಲಕ್ಷಭಾಗಾಯುಷ್ಯನುಂ ( ೧೦೦೦೦೦೦ ), ಯಶೋಧಾರುಣಿಪ್ರಿಯಂ ಸೀಮಂಧರನೆಂಬಾರನೆಯ ಕುಲಂಕರಂ, ಸೀಮೆಯ ಗುರುತುಗಳನ್ನು ತೋರಿಸಿಕೊಟ್ಟನು ॥ ೬ ॥

ಆತನಿಂದನಂತರಂ ಪಲ್ಯದೆಂಭತ್ತುಲಕ್ಷಭಾಗಂ ( ೮೦೦೦೦೦೦ ) ಕಳಿಯಲು ಯೇಳ್ನೂರು ( ೭೦೦ ) ಕಾರ್ಮುಕೋನ್ನತಮೂರ್ತಿಯುಂ, ಪಲ್ಯದ ಕೋಟ್ಯೈಕಭಾಗ ( ೧೦೦೦೦೦೦೦ ) ಆಯುಷ್ಯನುಂ, ಸುಮತಿಸತಿಪತಿ ವಿಮಲವಾಹನನೆಂಬೇಳನೆಯ ಮನುವು, ಕರಿತುರಗಾದಿ ವಾಹನಗಳನ್ನು ಏರುವ ಉಪಾಯಗಳನ್ನು ತೋರಿಸಿದನು ॥ ೭ ॥

ಮತ್ತಂ ಆ ಮನುಕುಲತಿಲಕನಿಂದ ಬಳಿಕ್ಕಂ ಪಲ್ಯದೆಂಟುಕೋಟಿ ( ೮೦೦೦೦೦೦೦ ) ಭಾಗವು ಕಳಿಯಲು ಆರುನೂರೆಪ್ಪತ್ತೈದು ( ೬೭೫ ) ದಂಡೋನ್ನತಿಯುಂ, ಪಲ್ಯದ ದಶಕೋ

ಟ್ಯೈಕಭಾಗ (೧೦,೦೦೦೦೦೦೦) ಆಯುಷ್ಯನುಂ, ವಸುಂಧರಾರುಣಿ ಜೀವಿತೇಶನುಂ ಚಕ್ಷು ಷ್ಮನೆಂಬೆಂಟನೆಯ ಮನುವು, ಸುತಮುಖಾವಲೋಕನದಿನತಿ ಕುತೂಹಲಮನಪ್ಪಕೆಯ್ದು—

ವೃ॥ ಯುಗಳಂಗಳಪ್ಪಟ್ಟಿಸಿಂತಾಗುಳಿಸಿ ಪಿತೃಯುಗಂ ಸತ್ತು ಸ್ವರ್ಗಂಗಳೊಳ್ ಪು ।
ಟ್ಟುಗುಮಿಲ್ಲಿಂದಿತ್ತಲೆಂದುಂ ಕತಿಪಯದಿನದೊಳ್ ಮಕ್ಕಳುಂ ನೋಡಿಸಾವೆ ।
ಯ್ದುಗುಮಿಗಳ್ ಕರ್ಮಭೂಮಿಸ್ಥಿತಿಮೊಗಸಿದುದಿಂ ಬಾಳಕಾಳೋಕದಿಂದು ।
ಬ್ಬೆಗಮಿಲ್ಲೆಂದಿತ್ತಕಾಲಸ್ಥಿತಿಯನವರ್ಗತಿವ್ಯಕ್ತಮಪ್ಪಂತುಪೇಳ್ದಂ ॥ ೧ ॥

ತಾತ್ಪರ್ಯ—ಆ ಚಕ್ಷುಷ್ಮನೆಂಬ ಮನುವು ಮಕ್ಕಳ ಮುಖಾವಲೋಕನದಿಂದ ಬಹಳ ಕುತೂಹಲಪಡುತ್ತಿದ್ದವರನ್ನು ನೋಡಿ, ಇದುವರಿಗೆ ಯುಗಳಗಳು ಹುಟ್ಟಿದ ಕೂಡಲೇ ತಂದೆ ತಾಯಿಗಳು ಸತ್ತುಹೋಗಿ ಸ್ವರ್ಗದಲ್ಲಿ ಹುಟ್ಟುತ್ತಿದ್ದರು. ಇನ್ನು ಇಲ್ಲಿಂದ ಮುಂದೆ ಯಾವಾಗಲೂ ಕೆಲವು ದಿವಸದಲ್ಲಿ ಮಕ್ಕಳುಗಳನ್ನು ನೋಡಿ ಮರಣಹೊಂದುವರು. ಈಗ ಕರ್ಮ ಭೂಮಿಸ್ಥಿತಿಯು ಉತ್ಪತ್ತಿಯಾದುದರಿಂದ ಮಕ್ಕಳ ಅವಲೋಕನದಿಂದ ನಿಮಗೆ ದುಃಖವುಂಟಾ ಗುವದಿಲ್ಲವೆಂದು ಆ ಕಾಲದ ಸ್ಥಿತಿಯನ್ನು ಅವರಿಗೆ ಚನ್ನಾಗಿ ತಿಳಿಯುವ ಹಾಗೆ ಉಪದೇಶ ಮಾಡಿದನು ॥ ೮ ॥

ಆತನ ಕಡೆಯಲ್ಲಿ ಪಲ್ಯದೆಂಭತ್ತುಕೋಟಿ (೮೦,೦೦೦೦೦೦೦) ಭಾಗ ಕಳಿಯಲು, ಆರ್‍ನೂರೈವತ್ತು (೬೫೦) ಶರಾಸನೋನ್ನತದೇಹನುಂ, ಪಲ್ಯದ ಶತಕೋಟ್ಯೈಕ (೧೦೦,೦೦೦೦೦೦೦) ಆಯುಷ್ಯನುಂ, ಕಾಂತಮಾಲಾಕಾಂತನುಮಪ್ಪ ಯಶಸ್ವಿಯೆಂಬ ಪೊಂಭತ್ತನೆಯ ಕುಲಧರಂ ಶಿಶುಗಳಿಗೆ ನಾಮಕರಣಮಂ ಪ್ರಕಟಿಸಿದನು ॥ ೯ ॥

ಆತನಿಂದನಂತರಂ ಪಲ್ಯದೆಂಟುನೂರುಕೋಟ್ಯೈಕಭಾಗ (೮೦೦,೦೦೦೦೦೦೦) ಕಳಿದ ನಂತರ ಆರುನೂರಿಪ್ಪತ್ತೈದು (೬೨೫) ಮಾರ್ಗಣಾಸನೋತ್ಸೇದನುಂ, ಪಲ್ಯದ ಸಹಸ್ರ ಕೋಟ್ಯೈಕಭಾಗದ (೧೦೦೦,೦೦೦೦೦೦೦) ಆಯುಷ್ಯನುಂ, ಶ್ರೀಮತಿಯೆಂಬ ಪತ್ನಿಯಿಂದ ಕೂಡಿದ ಅಭಿಚಂದ್ರನೆಂಬ ಹತ್ತನೆಯ ಮನುವು ಚಂದ್ರದರ್ಶನಾದಿಯಿಂದ ಶಿಶುಗಳ ಕೇಳಿ ಯನ್ನು ತೋರಿಸಿದನು ॥ ೧೦ ॥

ಮತ್ತಮನಂತರಂ ಪಲ್ಯಾಷ್ಟಸಹಸ್ರಕೋಟ್ಯೈಕ (೮೦೦೦,೦೦೦೦೦೦೦) ಭಾಗಾ ನಂತರಂ ಆರುನೂರು (೬೦೦) ಮಾರ್ಗಣಾಸನೋತ್ಸೇದನುಂ, ಪಲ್ಯದ ದಶಸಹಸ್ರಕೋ ಟ್ಯೈಕ (೧೦,೦೦೦,೦೦೦೦೦೦೦) ಭಾಗ ಜೀವಿತನುಂ, ಪ್ರಭಾವತಿಪ್ರಭುವುಂ ಚಂದ್ರಾಭನೆಂಬ ಹನ್ನೊಂದನೆಯ ಮನುಕುಲನಾಥಂ ಮಕ್ಕಳುಗಂ ತಮಗಂ ಕತಿಪಯ ಸಂವತ್ಸರಂ ಸಹ ಜೀವನವಾಗುವದೆಂದು ತಿಳಿಸಿದನು ॥ ೧೧ ॥

ಆತನಿಂ ಬಳಿಕ್ಕಂ ಪಲ್ಯದಶೀತಿಸಹಸ್ರಕೋಟ್ಯೈಕಭಾಗಕಾಲವು (೮೦,೦೦೦,೦೦೦೦೦೦೦) ಕಳಿಯಲು ಐನೂರೆಪ್ಪತ್ತೈದು (೫೭೫) ಬಾಣಾಸನೋನ್ನತ ಶರೀರನುಂ, ಪಲ್ಯದ ದಶಲಕ್ಷಕೋ ಟ್ಯೈಕಭಾಗಕಾಲ (೧೦,೦೦೦೦೦,೦೦೦೦೦೦೦) ಆಯುಷ್ಯನುಂ, ಅನುಪಮಾಮಣಿರಮಣಂ

ಮರುದ್ದೇವನೆಂಬ ಹನ್ನೆರಡನೆಯ ಮನುಕುಲತಿಲಕಂ ಪೇರ್ಮಳೆಸುರಿಯೆ ೪೦ ಚಿಣ್ಣನದಿನದಾದಿಗಳು ಹುಟ್ಟಲು ಜಲತ್ತರಣೋಪಾಯವನ್ನು ಜನಗಳಿಗೆ ಉಪದೇಶಮಾಡಿಕೊಟ್ಟನು ॥ ೧೨ ॥

ಆ ಮನುವಿಂದನಂತರಂ ಪಲ್ಯದಶಲಕ್ಷಕೋಟ್ಯೈಕಭಾಗಕಾಲವು (೧೦,೦೦೦೦೦,೦೦೦೦೦೦೦) ಕಳಿಯಲು, ಅಯ್ನೂರೈವತ್ತು ( ೫೫೦ ) ಸಿಲೀಮುಖಾಸನೋನ್ನತದೇಹನುಂ, ಪಲ್ಯದ ಶತಲಕ್ಷಕೋಟ್ಯೈಕಭಾಗ ( ೧೦೦,೦೦೦೦೦,೦೦೦೦೦೦೦ ) ಆಯುಷ್ಯನುಂ, ಅಮೃತಮತಿಯ ಪತಿಯಾದ ಪ್ರಸೇನಜಿತುವೆಂಬ ಹದಿಮೂರನೆಯ ಮನುವು ಮಕ್ಕಳು ಪ್ರಸವಿಸುವಾಗ ಮೇಲಿರುವ ಜರಾಯುವನ್ನು ತೆಗೆಯುವದನ್ನು ಹೇಳಿದನು ॥ ೧೩ ॥

ಅಯ್ನೂರಿಪ್ಪತ್ತೈದು ( ೫೨೫ ) ಶರಾಸನೋನ್ನತ ಶರೀರನುಂ, ಪೂರ್ವಕೋಟಿಮಿತ ಪರಮಾಯುಷ್ಯನುಂ, ದೂಪಸೇನೆಜಿತ್ತಿಂಗಂ ಅಮೃತಮತಿಗಂ ಪುಟ್ಟಿದವನುಂ, ಮರುದೇವಿ ಮನೋಹರನುಂ, ಸರ್ವಲಕ್ಷಣಸಂಪೂರ್ಣನುಂ, ಸಕಲಕಲಾಪ್ರವೀಣನಾದ ನಾಭಿರಾಜನೆಂಬ ಹದಿನಾಲ್ಕನೆಯ ಮನುನಾಥಂ ನಾಭಿನಿಕರ್ತನಂ ಕಾಲಸ್ವಭಾವದಿಂ ಬಿಡದೆರಗಿದ ಕಲಮಾದಿ ಧಾನ್ಯಗ್ರಹಣೋಪಾಯವನ್ನೂ, ತದ್ಧಾನ್ಯ ಪಚಯನೋಪಾಯಗಳನ್ನೂ, ಪುಂಡ್ರೇಕ್ಷುದಂಡಂಗಳಂ ಪಿಂಡಿ ಹಿಳಿದುಕೊಂಡು ಕುಡಿಯುವ ಉಪಾಯವನ್ನು ಉಪದೇಶಮಾಡಲು ಆ ರಸವನ್ನು ಕುಡಿದ ಜನಂಗಳೆಲ್ಲಂ ತದ್ವಂಶಮಿಕ್ಷ್ವಾಕ್ಷುವಂಶಮಕ್ಕುಮೆಂದು ಪರಸಲಾವಂಶಮನ್ವರ್ಥಮಾದುದು. ಮತ್ತಂ ಆ ನಾಭಿರಾಜನ ಸುತನಾದ ವೃಷಭೇಶ್ವರಂ ಪ್ರಥಮತೀರ್ಥಕರನುಂ, ಹದಿನೈದನೆಯ ಮನುವುಂ, ಮತ್ತಮಾವೃಷಭತೀರ್ಥಕರನ ಸುತನಾದ ಭರತೇಶ್ವರಂ ಪ್ರಥಮ ಚಕ್ರವರ್ತಿಯುಂ ಹದಿನಾರನೆಯ ಮನುವುಮಾದನಿನ್ನದರೊಳಗೆ—

ಕಂ ॥ ಹಾದಂಡಮಯ್ವರೊಳ್ ಹಾ । ಮಾದಂಡ ಮನುಗಳಯ್ವರೊಳ್ ಹಾಮಾದಿಗ್ಭೇದ ॥<br>
ಪ್ರದಂಡಮಯ್ವರೊಳಾದುದು । ಭರತಾವನೀಶನಿಂ ತನುದಂಡಂ ॥ ೧೧ ॥

ವ ॥ ಮತ್ತಮದು ಉತ್ಸರ್ಪಿಣಿಯ ದ್ವಿತೀಯಕಾಲದ ಕಡೆಯ ಸಹಸ್ರವರ್ಷ ಉಳಿದಲ್ಲಿ ೧ ಕನಕ, ೨ ಕನಕಪ್ರಭ, ೩ ಕನಕರಾಜ, ೪ ಕನಕಧ್ವಜ, ೫ ಕನಕಪುಂಗವ, ೬ ನಳಿನ, ೭ ನಳಿನಪ್ರಭ, ೮ ನಳಿನರಾಜ, ೯ ನಳಿನಧ್ವಜ, ೧೦ ನಳಿನಪುಂಗವ, ೧೧ ಪದ್ಮ, ೧೨ ಪದ್ಮಪ್ರಭ, ೧೩ ಪದ್ಮರಾಜ, ೧೪ ಪದ್ಮಧ್ವಜ, ೧೫ ಪದ್ಮಪುಂಗವ, ೧೬ ಮಹಾಪದ್ಮನೆಂದಿವರನಾಗತ ಷೋಡಶಮನುಗಳಾಗುವರು. ಈ ರೀತಿಯಾದೀ ಐದುಸೂತ್ರಗಳಿಂದ ರಾಜರುಂ ಕುಲಂಕರವತಾರವುಂ ಹೇಳಲ್ಪಟ್ಟಿತು. ಇನ್ನೊಂಭತ್ತು ಸೂತ್ರಗಳಿಂದ ತೀರ್ಥಕರರ ವಿಭವವು ಹೇಳಲ್ಪಡುವದು.

## ಸೂತ್ರಂ ॥ ಷೋಡಶಭಾವನಾಃ ॥ ೧೬ ॥

೧ ದರ್ಶನವಿಶುದ್ಧಿಯುಂ, ೨ ವಿನಯಸಂಪನ್ನತೆಯುಂ, ೩ ಶೀಲಗಳಲ್ಲಿಯೂ ವ್ರತಗಳಲ್ಲಿಯೂ ಅತಿಚಾರವಿಲ್ಲದಿರುವುದುಂ, ೪ ಎಡೆಮರಿಯದ ಬೋಧೋಪಯೋಗಮುಂ, ೫ ಧರ್ಮಾನುರಾಗವುಂ, ೬ ಶಕ್ತಿಗೆ ತಕ್ಕ ತ್ಯಾಗವುಂ, ೭ ಶಕ್ತಿಗೆ ತಕ್ಕ ತಪವುಂ, ೮ ಸಾಧುಗಳ್ಗೆ ಸಮಚಿತ್ತವನ್ನು

ಮಾಡುವದುಂ, ೯ ವೈಯ್ಯಾವೃತ್ಯಮುಂ, ೧೦ ಅರ್ಹದ್ಭಕ್ತಿಯುಂ, ೧೧ ಆಚಾರ್ಯಭಕ್ತಿಯುಂ, ೧೨ ಬಹುಶ್ರುತಭಕ್ತಿಯುಂ, ೧೩ ಪರಮಾಗಮಭಕ್ತಿಯುಂ, ೧೪ ಷಡಾವಶ್ಯಕಗಳನ್ನು ಎಡೆವರಿಯದೆ ಮಾಡುವುದುಂ, ೧೫ ಜಿನಮಾರ್ಗಮಂ ಪ್ರಭಾವಿಸುವುದುಂ, ೧೬ ಚಾತುರ್ವರ್ಣದಲ್ಲಿ ವಾತ್ಸಲ್ಯವುಂ, ಎಂದಿವು ಷೋಡಶಭಾವನೆಗಳಾಗುವವು.

ಇವು ತೀರ್ಥಂಕರ ನಾಮಕರ್ಮದುದಯಬಂಧಕ್ಕೆ ಕಾರಣಂಗಳುಂ. ಆ ತೀರ್ಥಂಕರ ನಾಮಕರ್ಮಬಂಧವು ಅಸಂಯತ ಸಮ್ಯಗ್ದೃಷ್ಟಿಯಿಂ ಅಪೂರ್ವಕರಣನ ಷಟ್ಸಪ್ತಮಭಾಗಂವರಿಗೂ ಆಗುವದು. ಅದರಲ್ಲಿ ದರ್ಶನವಿಶುದ್ಧಿ ಮೊದಲಾದ ಹದಿನಾರು ಭಾವನೆಗಳು ದೊರೆಕೊಂಡರೆ ತೀರ್ಥಂಕರ ಪುಣ್ಯಬಂಧವಾಗುವದು.

ಗಾಹೆ ॥ ಪಢಮುವಸಮಯ ಸಂಮೇಸೇಸರಿಯೇ ಅವಿರದಾದಿ ಚತ್ತಾರಿ ।
ತಿಥಯರ ಬದ್ಧಹರತಿಭಯಾಣರಾ ಕೇವಳಿದುಗನ್ತೇ ॥ ೧೨ ॥

## ಸೂತ್ರಂ ॥ ಚತುರ್ವಿಂಶತಿ ತೀರ್ಥಂಕರಾಃ ॥ ೧೩ ॥

ನಿರ್ವಾಣ, ಸಾಗರ, ಮಹಾಸಾಧು, ವಿಮಲಪ್ರಭ, ಶ್ರೀಧರ, ಸುದತ್ತ, ಅಮಲಪ್ರಭ, ಉದ್ಧರಾ, ಅಂಗಿ, ಸನ್ಮತಿ, ಸಿಂಧು, ಕುಸುಮಾಂಜಲಿ, ಶಿವಗಣ, ಉತ್ಸಾಹ, ಜ್ಞಾನೇಶ್ವರ, ಪರಮೇಶ್ವರ, ವಿಮಲೇಶ್ವರ, ಯಶೋಧರ, ಕೃಷ್ಣ, ಜ್ಞಾನಮತಿ, ಶುದ್ಧಮತಿ. ಶ್ರೀಭದ್ರ, ಅತಿಕ್ರಾಂತ, ಶಾಂತಾಶ್ಚೇತಿಯೆಂದು ಇವರತೀತಕಾಲದ ಚತುರ್ವಿಂಶತಿ ತೀರ್ಥಂಕರರು. ॥ ೧ ॥

ವೃಷಭ, ಅಜಿತ, ಶಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವ, ವರ್ಧಮಾನರೆಂದಿವರು ವರ್ತಮಾನಕಾಲದ ಚತುರ್ವಿಂಶತಿ ತೀರ್ಥಂಕರರು. ॥ ೨ ॥

ಮಹಾಪದ್ಮ, ಸುರದೇವ, ಸುಪಾರ್ಶ್ವ, ಸ್ವಯಂಪ್ರಭ, ಸರ್ವಾತ್ಮಭೂತ, ದೇವಪುತ್ರ, ಕುಲಪುತ್ರ, ಉದಂಕ, ಪ್ರೌಷ್ಠಿಲ, ಜಯಕೀರ್ತಿ, ಮುನಿಸೂವ್ರತ, ಅರ, ನಿಷ್ಪಾಪ, ನಿಷ್ಕಷಾಯ, ವಿಪುಲ, ನಿರ್ಮಲ, ಚಿತ್ರಗುಪ್ತ, ಸಮಾದಿಗುಪ್ತ, ಸ್ವಯಂಭು, ಅನಿವರ್ತಕ, ಜಯ, ವಿಮಲ, ದೇವಪಾಲ, ಅನನ್ತವೀರ್ಯರೆಂದಿವರು ಅನಾಗತ ಚತುರ್ವಿಂಶತಿ ತೀರ್ಥಂಕರರಾಗುವರು ॥ ೩ ॥

ವರ್ತಮಾನ ತೀರ್ಥಂಕರರ ಭವಾವಳಿಯನ್ನು ಯಥಾಕ್ರಮದಿಂದ ಹೇಳುತ್ತೇನೆ.

ಪೂರ್ವಭವದಲ್ಲಿ ೧ ಜಯವರ್ಮನುಂ, ೨ ಮಹಾಬಲಖೇಚರನುಂ, ೩ ಲಲಿತಾಂಗದೇವನುಂ, ೪ ವಜ್ರಜಂಘಭೂಪತಿಯುಂ, ೫ ಭೋಗಭೂಮಿಜನುಂ, ೬ ಶ್ರೀಧರಾಮರನುಂ, ೭ ಸುವಿಧಿನರಾಧಿಪನುಂ, ೮ ಅಚ್ಯುತೇಂದ್ರನುಮಾಗಿ, ಸತ್ಕುಲದಲ್ಲಿ ವಜ್ರನಾಭಿಯೆಂಬ ಸಕಲಚಕ್ರವರ್ತಿಯಾದ ಭವದಲ್ಲಿ ಷೋಡಶಭಾವನೆಗಳನ್ನು ಭಾವಿಸಿ ತೀರ್ಥಂಕರ ಪುಣ್ಯಮಂ ಕಟ್ಟಿ

ಸರ್ವಾರ್ಥಸಿದ್ಧಿಯೊಳಹಮಿಂದ್ರನಾಗಿ ಹುಟ್ಟಿ ಅಲ್ಲಿಂದ ಬಂದೀ ಜಂಬೂದ್ವೀಪದ ಭರತಕ್ಷೇತ್ರ ದಾರ್ಯಾಖಂಡದ ಸುಕೋಶಲದೇಶದ ಅಯೋಧ್ಯಾಪುರದಲ್ಲಿ ನಾಭಿರಾಜರಿಗೂ ಮರುದೇವಿ ಮಹಾದೇವಿಗೂ ಪ್ರಥಮತೀರ್ಥಕರನಾಗಿ ಹುಟ್ಟಿ ಪಂಚಶತ (೫೦೦) ಶಿಲೀಮುಖಾಸ ನೋತ್ಸೇದನುಂ ಚತುರುತ್ತರಾಶೀತಿಲಕ್ಷಪೂರ್ವ (೮೪೦೦೦೦೦) ಪರಮಾಯುಷ್ಯನುಂ, ತಪ್ತತಪನೀಯಛ್ಛಾಯಾಂಗನುಂ, ಅಷ್ಟೋತ್ತರಶತಶುಭಲಕ್ಷಣನವಶತವ್ಯಂಜನಾಲಂಕೃತಶರೀ ರನುಂ, ಆಗಿ ವೃಷಭೇಶ್ವರನೆಂಬ ಅನ್ವರ್ಥನಾಮವನ್ನು ಹೊಂದಿ ಇಪ್ಪತ್ತು (೨೦) ಲಕ್ಷ ಪೂರ್ವಂ ಕುಮಾರಕಾಲ ಹೋಗಲು ಬಳಿಕ ರಾಜ್ಯದಲ್ಲಿ ನಿಂತು ಷಟ್ಕರ್ಮವ್ಯವಹಾರವನ್ನೂ, ಕುಲಭೇದವನ್ನೂ, ವಿಷಯವಿಭಾಗವನ್ನೂ, ಗ್ರಾಮನಗರಾದಿ ವಿಕಲ್ಪಮುಮೆಂಬಯಿಂತು ಮೊದಲಾದವುಗಳನ್ನು ಕೃತಯುಗಾದಿಯಲ್ಲಿ ಪಡೆದು ಚತುಷಷ್ಠಿಸಹಸ್ರವರ್ಷ ಕಲಾ ವಿಜ್ಞಾನವನ್ನು ಮಕ್ಕಳುಗಳಿಗೆಲ್ಲಾ ಉಪದೇಶಮಾಡಿ ರಾಜ್ಯಕಾಲದಲ್ಲಿ ಅರವತ್ಮೂರುಲಕ್ಷ ಪೂರ್ವಂ ಹೋಗಲು ನೀಲಾಂಜನಾನೃತ್ಯವ್ಯತೀಕರದಲ್ಲಿ ತ್ರಿವಿಧನಿರ್ವೇಗಪರಾಯಣನಾಗಿ ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗಂಗೆಯ್ದು ಸಹಸ್ರಸಂವತ್ಸರಂ ಛದ್ಮಸ್ಥಕಾಲಂ ಸಲೆ ಪುರಿ ಮತಾಲಪುರದ ಬಹಿರುದ್ಯಾನವನದ ವಟವಿಟಪಿಯಡಿಯಲ್ಲಿ ಶುಕ್ಲಧ್ಯಾನದಲ್ಲಿ ನಿಂತು ಘಾತಿ ಗಳನ್ನು ಘಾತಿಸಿ ಸಕಲ ವಿಮಲ ಕೇವಲಜ್ಞಾನಿಯಾಗಲು ಸಮವಸರಣದಲ್ಲಿ ವೃಷಭಸೇನಾದಿ ಚತುರಾಶೀತಿ ಗಣಧರರುಂ ಬ್ರಾಹ್ಮಿ, ಸೌಂದರಿ ಮೊದಲಾದರ್ಜಿಯರುಂ, ವೃಷಭಯ ಕ್ಷನುಂ, ಚಕ್ರೇಶ್ವರಿಯಕ್ಷಿಯುಂ, ವೃಷಭಲಾಂಛನಮುಂ ಬೆರಸೊಪ್ಪುತ್ತಂ ಸಾಸಿರವರ್ಷದಿಂ ಕುಂದಿದೊಂದುಲಕ್ಷಪೂರ್ವ (೧೦೦೦೦೦) ಕಾಲಂ ಪ್ರವರ್ತಿಸುತ್ತ ಧರ್ಮಾಮೃತವರ್ಷದಿಂ ಭವ್ಯಸಸ್ಯ ಸಂಪತ್ತಿಯನ್ನು ಮಾಡಿ ಸಾಸಿರದೆಂಟನ್ವರ್ಥನಾಮಗಳನ್ನು ಧರಿಸಿ ಕೈಲಾಸಪರ್ವ ತದಲ್ಲಿ ಪಲ್ಯಂಕಾಸನದಲ್ಲಿ ಮೋಕ್ಷಶ್ರೀಯನ್ನು ಹೊಂದಿದನು ॥ ೧ ॥

ಶ್ರೀಮದಾದಿದೇವಂಗಂ ಯಶಸ್ವತಿಮಹಾದೇವಿಗಂ ಸುಬಾಹುಚರನಾದ ಸರ್ವಾರ್ಥಸಿ ದ್ಧಿಯಿಂದಹಮಿಂದ್ರಂ ಬಂದು ಭರತೇಶ್ವರನೆಂಬ ಪ್ರಥಮ ಚಕ್ರವರ್ತಿಯಾಗಿ ದಶಾಂಗಭೋಗ ಮನನುಭವಿಸಿ ಜಿನರೂಪವನ್ನು ಧರಿಸಿ ನಿರ್ವಾಣವನ್ನು ಹೊಂದಿದನು. ಆ ಕಾಲದಲ್ಲಿ ಭೀಮ ಸೇನನೆಂಬ ಪ್ರಥಮರುದ್ರನಾದನು. ಮತ್ತಮಾವೃಷಭನಾಥರ ತೀರ್ಥಸಂತಾನಮಯ್ವತ್ತುಲಕ್ಷ ಕೋಟಿ (೫೦,೦೦೦೦೦,೦೦೦೦೦೦೦) ಸಾಗರೋಪಮಕಾಲಂ ಪ್ರವರ್ತಿಸುವಂಥಾ ಕಾಲದಲ್ಲಿ ವಿಮಲವಾಹನಚರನಾದ ನವಾಣುತ್ತರೆಯ ವಿಜೆಯವಿಮಾನದ ಅಹಮಿಂದ್ರನು ಬಂದು ಸಾಕೇ ತಪುರದ ಜಿತಶತ್ರುಮಹಾರಾಜನಿಗೂ ವಿಜಯಸೇನೆ ಮಹಾದೇವಿಗೂ ಹುಟ್ಟದ ಅಜಿತಜಿನೇಶ್ವ ರನು ಎಪ್ಪತ್ತೆರಡುಲಕ್ಷಪೂರ್ವ (೭೨೦೦೦೦೦) ಆಯುಷ್ಯನುಂ, ನಾನೂರೈವತ್ತು (೪೫೦) ಧನುತ್ಸೇದನುಂ ಸುವರ್ಣಛಾಯಾಂಗನುಂ ಏಳೆಲೆಬಾಳೆಯ ಮರದ ಕೆಳಗೆ ಕೇವಲಬೋ ಧೋತ್ಪತ್ತಿಯಾಗೆ, ಕೇಸರಿಸೇಣಂ ಮೊದಲಾಗಿ ತೊಂಭತ್ತೆರಡು (೯೨) ಗಣಧರರುಂ, ಆತ್ಮ ಕುಬ್ಜಾಗಣಿನಿ ಮುಖ್ಯಯರ್ಜಿಕಾಸಮುದಾಯಂ, ಮಹಾಯಕ್ಷ, ರೋಹಿಣಿಯಕ್ಷಿಯುಂ, ಗಜಲಾಂಛನಮುಂ, ಸಮ್ಮೇದಗಿರಿಯೊಳ್ ಪರಿನಿರ್ವಾಣಕಲ್ಯಾಣವನ್ನು ಹೊಂದಿದಂ ಅಜಿ ತನಾಥಂ ॥ ೨ ॥

ಮತ್ತಂ ಅಜಿತನಾಥ ತೀರ್ಥಸಂತಾನದಲ್ಲಿ ಜಲಸೇನಚರನಾದ ಆರಣಕಲ್ಪದ ಮಹಾಬಲನು ಸಾಕೇತಪುರದಲ್ಲಿ ಸಗರನೆಂಬ ಎರಡನೇ ಚಕ್ರವರ್ತಿಯಾಗಿ ತಪದಿಂದ ಅಪವರ್ಗಲಕ್ಷ್ಮಿಯ ಮುಖಾವಲೋಕನವನ್ನು ಮಾಡಿದನು.

ಮತ್ತಮಾಕಾಲದಲ್ಲಿ ಜಿತಶತ್ರುವೆಂಬೆರಡನೆಯ ರುದ್ರನಾದನು. ಶ್ರೀಮದಜಿತನಾಥರ ತೀರ್ಥಸಂತಾನವು ಮೂವತ್ತುಲಕ್ಷಕೋಟಿ (೩೦,೦೦೦೦೦,೦೦೦೦೦೦೦) ಸಾಗರೋಪಮಕಾಲವು ಪ್ರವರ್ತಿಸುವಂಥಾಕಾಲದಲ್ಲಿ ವಿಮಲಚರನಾದ ಅಧೋಗ್ರೈವೇಯಕದ ಸುದರ್ಶನವಿಮಾನದ ಅಹಮಿಂದ್ರನು ಬಂದು ಶ್ರಾವಸ್ತಿಪುರದ ವಿಜಿತಾರಿ ಮಹಾರಾಜನಿಗೂ ಸುಷೇಣಾದೇವಿಗೂ ಹುಟ್ಟಿದ ಶಂಭವ ತೀರ್ಥಂಕರಂಗೆ ಅರವತ್ತುಲಕ್ಷ (೬೦,೦೦೦೦೦) ಪೂರ್ವಾಯುಷ್ಯವುಂ, ಚತುಶ್ಶತ (೪೦೦) ಚಾಪೋತ್ಸೇದನುಂ, ಶಾತಕುಂಭವರ್ಣದ ಶರೀರನುಂ, ಶಾಲ್ಮಲೀ ವೃಕ್ಷದ ಮೂಲದಲ್ಲಿ ಪರಮಜ್ಞಾನೋತ್ಪತ್ತಿಯಾಗಲು, ಚಾರುದತ್ತ ಗಣಧರಮೊದಲಾಗಿ ನೂರೈದು (೧೦೫) ಗಣಧರರುಂ, ಧರ್ಮಶ್ರೀ ಮೊದಲಾದರ್ಜಿಯರುಂ, ತ್ರಿಮುಖಯಕ್ಷನುಂ, ಪ್ರಜ್ಞಪ್ತಿಯಕ್ಷಿಯುಂ, ತುರಗಾಂಕಮುಂ, ಸಮ್ಮೇದಾದ್ರಿಯೊಳ್ ಮೋಕ್ಷಲಕ್ಷ್ಮೀಪಕ್ಷವಿಕ್ಷೇಪನಾದನು ೩

ಶಂಭವನಾಥನ ಸನ್ತಾನವು ಹತ್ತುಲಕ್ಷಕೋಟಿ (೧೦,೦೦೦೦೦,೦೦೦೦೦೦೦) ಪ್ರವರ್ತಿಸುವಂಥಾಕಾಲದಲ್ಲಿ ಮಹಾಬಲಚರನಾದ ಅಣುತ್ತರೆಯ ಜಯವಿಮಾನದ ಅಹಮಿಂದ್ರನು ಬಂದು ಸಾಕೇತನಗರದ ಅರಸನಾದ ಸಂಬರರಾಜನಿಗೂ ಸಿದ್ಧಾರ್ಥಮಹಾದೇವಿಗೂ ಹುಟ್ಟಿದ ಅಭಿನಂದನ ಸ್ವಾಮಿಗೆ ಪಂಚಾಸಲ್ಲಕ್ಷ (೫೦,೦೦೦೦೦) ಪೂರ್ವಾಯುಷ್ಯವುಂ, ಮೂನ್ನೂರೈವತ್ತು (೩೫೦) ಕೋದಂಡೋನ್ನತನುಂ, ಹಾಟಕಾಭದೇಹನುಂ, ಸರಳತರುವಿನೊಳ್ ಸಕಲಾರ್ಥವೇದಿಬೋಧೋತ್ಪತ್ತಿಯಾಗಿ, ವಜ್ರಚವರಮೊದಲಾದ ಗಣಧರನೂರುಮೂವರುಂ (೧೦೩) ಮೇರುಷೇಣಗಣಿನಿ ಮುಖ್ಯೆಯರುಂ, ಯಕ್ಷೇಶ್ವರಯಕ್ಷನುಂ, ವಜ್ರಶ್ರುಂಖಲಾ ಯಕ್ಷಿಯುಂ, ಮರ್ಕಟಲಾಂಛನಮಾಗೆ ಸಮ್ಮೇದಗಿರಿಯೊಳ್ ಪರಮಪದ ಪ್ರಾಪ್ತನಾದನು ॥೪॥

ಆ ಶಂಭವತೀರ್ಥಕರ ಸಂತಾನವು ಪೊಂಭತ್ತುಲಕ್ಷಕೋಟಿ (೯೦೦೦೦೦,೦೦೦೦೦೦೦) ಸಾಗರೋಪಮಕಾಲಂ ಪ್ರವರ್ತಿಸುವಕಾಲದಲ್ಲಿ ರತಿಷೇಣಚರನಾದ ಪಂಚಾಣುತ್ತರೆಯ ವೈಜಯಂತವಿಮಾನದ ಅಹಮಿಂದ್ರನು ಬಂದು ಸಾಕೇತರಾಜಧಾನಿಯ ಮೇಘರಥಮಹೀಪತಿಗೂ ಮಂಗಳಾದೇವಿಗೂ ಹುಟ್ಟಿದ ಸುಮತಿ ತೀರ್ಥೇಶ್ವರಂಗೆ ನಾಲ್ವತ್ತುಲಕ್ಷ (೪೦,೦೦೦೦೦) ಪೂರ್ವಾಯುಷ್ಯವುಂ, ಮುನ್ನೂರು (೩೦೦) ಕೋದಂಡ ಉನ್ನತನುಂ, ಕಾಂಚನವರ್ಣವುಂ, ಪ್ರಿಯಂಗುವೃಕ್ಷಮೂಲದಲ್ಲಿ ಪಂಚಮಬೋಧೋತ್ಪತ್ತಿಯಾಗಲು, ವಜ್ರಗಣಧರಮೊದಲಾಗಿ ನೂರ್ಹದಿನಾರು (೧೧೬) ಗಣಧರರುಂ, ಅನಂತಮತಿಕ್ಷಾಂತಿಕಾಮುಖ್ಯೆಯುಂ, ತುಂಬುರಯಕ್ಷನುಂ, ಪುರುಷದತ್ತೆಯಕ್ಷಿಯುಂ, ಚಕ್ಕವಕ್ಕಿಯಂಕಮುಮಾಗೆ, ಸಮ್ಮೇದನಗದೊಳ್ ನಿರ್ವಾಣರಮಣೀ ರಮಣನಾದನು ॥ ೫ ॥

ಆ ಸುಮತಿನಾಥಂ ತೀರ್ಥಸಂತಾನವು ನವತಿಸಹಸ್ರಕೋಟಿ (೯೦,೦೦೦,೦೦೦೦೦೦೦) ಪ್ರಮಿತಂ ಪ್ರವರ್ತಿಸುವಂಥಾ ಕಾಲದಲ್ಲಿ ಅಪರಾಜಿತಚರನಾದುಪರಿಮಗ್ರೈವೇಯಕದ ಅಹ

ಮೀಂದ್ರನು ಬಂದು ಕೌಶಂಬಿಪುರದ ವರುಣಮಹಾರಾಜನಿಗೂ ಸುಷಿಮಾದೇವಿಗೂ ಹುಟ್ಟಿದ ಪದ್ಮಪ್ರಭಜಿನಾಧಿಪಂಗೆ ಮೂವತ್ತುಲಕ್ಷ (೩೦,೦೦೦೦೦) ಪೂರ್ವಾಯುಷ್ಯವುಂ, ಇನ್ನೂರೈವತ್ತು (೨೫೦) ಕಾರ್ಮುಕೋನ್ನತನುಂ, ಅರುಣಾಂಗನುಂ, ಸಿರೀಸದ ತರುವಿನೊಳ್ ಪರಮಾನಂದಾಮೃತಜ್ಞಾನೋತ್ಪತ್ತಿಯಾಗೆ, ಅದತ್ತ ಗಣಧರಮೊದಲಾಗಿ ನೂರ್ಹನ್ನೊಂದು (೧೧೧) ಗಣಧರರುಂ, ರತಿಷೇಣಕ್ಷಾಂತಿಕಾಮುಖ್ಯರುಂ, ಕುಸುಮಯಕ್ಷನುಂ, ಮನೋವೇಗಿಯಕ್ಷಿಯುಂ, ಪದ್ಮಲಾಂಛನವುಂ, ಸಮ್ಮೇದಪರ್ವತದೊಳ್ ನಿರ್ವೃತಿನಾಥನಾದನು ॥ ೬ ॥

ಆ ಪದ್ಮಪ್ರಭತೀರ್ಥಸಂತಾನವು ನವಸಹಸ್ರಕೋಟಿ ಜಲಧಿಪ್ರಮಾಣ (೯೦೦೦,೦೦೦೦೦೦೦) ಕಾಲವು ಪ್ರವರ್ತಿಸುವಂಥಾ ಕಾಲದಲ್ಲಿ ನಂದಿಷೇಣಚರನಾದ ಮಧ್ಯಮಗ್ರೈವೇಯಕದ ಭದ್ರವಿಮಾನದ ಅಹಮಿಂದ್ರನು ಬಂದು ವಾರಣಾಶಿಪುರದ ಸುಪ್ರತಿಮಹಾರಾಜನಿಗೂ ಪೃಥ್ವೀಮಹಾದೇವಿಗೂ ಹುಟ್ಟಿದ ಸುಪಾರ್ಶ್ವಭಟ್ಟಾರಕಂಗೆ ವಿಂಶತಿಲಕ್ಷ (೨೦,೦೦೦೦೦) ಪೂರ್ವಾಯುಷ್ಯವುಂ, ದ್ವಿಶತದಂಡೋತ್ಸೇದನುಂ (೨೦೦), ಪಚ್ಚೆವರ್ಣನುಂ ನಾಗವಾದಪದೊಳು ಕೇವಲಜ್ಞಾನೋತ್ಪತ್ತಿಯಾಗೆ, ಜಲಗಣಧರಮೊದಲಾಗಿ ತೊಂಭತ್ತೈದು (೯೫) ಗಣಧರರುಂ, ಮೀನಶ್ರೀಮುಖ್ಯಾರ್ಜಿಕೆಯರುಂ, ಪರನಂದಿಯಕ್ಷನುಂ, ಕಾಳಿಯಕ್ಷಿಯುಂ, ಸ್ವಸ್ತಿಕಾಂಕಮುಂ ಸಮ್ಮೇದಶಿಖರದೊಳ್ ಮುಕ್ತ್ಯಂಗನಾತುಂಗಪಯೋಧರಾಲಿಂಗನಂಗೈದನು ॥ ೭ ॥

ಸುಪಾರ್ಶ್ವನಾಥತೀರ್ಥಸಂತಾನವು ನವಶತಕೋಟಿವಾರ್ಧಿಪ್ರಮಿತ (೯೦೦,೦೦೦೦೦೦೦) ಕಾಲಂ ಸಲ್ಲುವಂಥಾಕಾಲದಲ್ಲಿ ಶ್ರೀವರ್ಮನುಂ, ಶ್ರೀಧರದೇವನುಂ, ಅಜಿತಸೇನಚಕ್ರಿಯುಂ, ಅಚ್ಯುತೇಂದ್ರನುಂ, ಪದ್ಮನಾಭನುಂ ಆಗಿ ಪಂಚಾಣುತ್ತರೆಯ ವೈಜಯಂತ ವಿಮಾನದೊಳು ಹುಟ್ಟಿದ ಅಹಮಿಂದ್ರನು ಬಂದು ಚಂದ್ರಪುರದ ಮಹಾಸೇನ ಮಹಾರಾಜನಿಗೂ ಲಕ್ಷ್ಮಣಾಮಹಾದೇವಿಗೂ ಹುಟ್ಟಿದ ಚಂದ್ರಪ್ರಭಸ್ವಾಮಿಗೆ ದಶಲಕ್ಷ (೧೦,೦೦೦೦೦) ಪೂರ್ವಾಯುಷ್ಯವುಂ, ನೂರೈವತ್ತು (೧೫೦) ದಂಡಾಸನೋನ್ನತ ಶರೀರವುಂ, ಧವಲವರ್ಣನುಂ ನಾಗಕುಂಜದೊಳ್ ಅನಂತಜ್ಞಾನಲಕ್ಷ್ಮೀಪತಿಯಾದಂಗೆ, ದತ್ತಗಣಧರಮೊದಲಾಗಿ ತೊಂಭತ್ತೂರು (೯೩) ಗಣಧರರುಂ, ವರುಣ ಶ್ರೀಗಣಿನಿಮುಖ್ಯರುಂ, ವಿಜಯ (ಶ್ಯಾಮ) ಯಕ್ಷನುಂ, ಜ್ವಾಲಾಮಾಲಿನಿಯಕ್ಷಿಯುಂ, ಚಂದ್ರಲಾಂಛನವುಂ, ಸಮ್ಮೇದೋರ್ವೀಧರದೊಳ್ ಮುಕ್ತ್ಯಂಗನಾ ವಲ್ಲಭನಾದನು ॥ ೮ ॥

ಆ ಚಂದ್ರಪ್ರಭತೀರ್ಥಸಂತಾನವು ನವಕೋಟಿವಾರಾವಾರೋಪಮ (೯೦,೦೦೦೦೦೦) ಕಾಲ ಪ್ರವರ್ತಿಸುವಂಥಾ ಕಾಲದಲ್ಲಿ ಮಹಾಪದ್ಮಚರನಾದ ಪ್ರಾಣತೇಂದ್ರನು ಬಂದು ಕಾಕಂದಿಪುರದರಸನಾದ ಸುಗ್ರೀವಮಹಾರಾಜನಿಗೂ, ಜಯರಾಮಾದೇವಿಗೂ ಹುಟ್ಟಿದ ಪುಷ್ಪದಂತಸ್ವಾಮಿಗೆ ಎರಡುಲಕ್ಷ ಪೂರ್ವ (೨೦೦೦೦೦) ಆಯುಷ್ಯವುಂ, ಶತಶಿಲೀಮುಖಾಸನೋನ್ನತತನುವುಂ, ಶ್ವೇತವರ್ಣನುಂ, ನಾಗಫಣಿನಿಮೂಲದಲ್ಲಿ ಕೇವಲಜ್ಞಾನವು ಹುಟ್ಟಿ, ವಿದರ್ಭಗಣಧರಮೊದಲಾಗಿ ಎಂಭತ್ತೆಂಟು (೮೮) ಗಣಧರರುಂ, ಘೋಷತಿ ವಿನಯತಿಮುಖ್ಯರುಂ, ಅಜಿತ

ಯಕ್ಷನುಂ, ಮಹಾಕಾಳಿಯಕ್ಷಿಯುಂ, ಕರಿಯ ಕರಲಾಂಛನವುಂ (ಮೊಸಳೆ), ಸಮ್ಮೇದಾದ್ರಿ ಯೊಳ್ ಮುಕ್ತ್ಯಂಗನಾವಲ್ಲಭನಾದನು ‖ ೯ ‖

ಆ ಕಾಲದಲ್ಲಿ ರುದ್ರನೆಂಬ ತೃತೀಯರುದ್ರನುಂಟಾದನು. ‖ ೩ ‖

ಆ ಸುವಿಧಿತೀರ್ಥಕರ ಕಾಲವು ಒಂಭತ್ತುಕೋಟಿ (೯೦೦೦೦೦೦೦) ವಾರಾಸ್ಯೋಪಮ ಕಾಲಂ ಪ್ರವರ್ತಿಸುವಂಥಾ ಕಾಲದ ಕಡೆಯೊಳು ಪಲ್ಯೋಪಮದ ಚತುರ್ಥಭಾಗಕಾಲವು ಧರ್ಮವು ಕೆಟ್ಟಿರಲು ತತ್ಕಾಲದಲ್ಲಿ ಪದ್ಮಗುಲ್ಮಮಹೀಭುಜಚರನಾದ ಆರಣೇಂದ್ರನು ಬಂದು ಭದ್ರಿಳಾಪುರದ ದೃಢರಥಮಹಾರಾಜನಿಗೂ ಸುನಂದಾದೇವಿಗೂ ಹುಟ್ಟಿದ ಶೀತಲತೀರ್ಥವಲ್ಲ ಭಂಗೆ ಏಕಲಕ್ಷ (೧೦೦೦೦೦) ಪೂರ್ವಾಯುಷ್ಯವುಂ, ಪೂರ್ವದ ಪ್ರಮಾಣಮೆನಿತೆಂದೊಡೆ.

‖ ಕಂದ ‖ ಸುರಸಣಿಗಗನಘನವ । ಭರದಂಬುದಮೇಘಪವನ ಜಲದಪಥಂ ಪು ‖
ಷ್ಕರಶರಖರಂ ಗಿರಿಯುಂ । ಪರಮಾರ್ಥಂ ಪೂರ್ವಸಂಖ್ಯೆಯತಿಪತಿಮತದೊಳ್ ‖

ಯೆಪ್ಪತ್ತುಲಕ್ಷಮಯ್ವತ್ತಾರುಸಾಸಿರಕೋಟಿ (೭೦,೫೬,೦೦೦,೦೦೦೦೦೦೦) ವರ್ಷವು ಒಂದುಪೂರ್ವದ ವರ್ಷದ ಸಂಖ್ಯೆಯಾಗುವದು. ನವತಿ (೯೦) ನಾರಾಚಸಮೋನ್ನತ ಮೂರ್ತಿ ಯುಂ, ಹಿರಣ್ಯವರ್ಣನುಂ, ಬೆಲ್ಲವತ್ತದ ಭೂರುಹದಲ್ಲಿ ನವಕ್ಷಾಯಿಕ ಲಬ್ಧಿಗಧಿನಾಥನಾಗೆ, ನಾಗಗಣಧರಮೊದಲಾಗಿ ಯೆಂಭತ್ತೇಳು (೮೭) ಗಣಧರರುಂ, ಧರಿಣಿಶ್ರೀನತಿಕಾಮುಖ್ಯೆ ಯುಂ, ಬ್ರಹ್ಮಯಕ್ಷನುಂ, ಮಾನವಿಯಕ್ಷಿಯುಂ, ಶ್ರೀವೃಕ್ಷಲಾಂಛನವುಂ, ಸಮ್ಮೇದಾಚಲದಲ್ಲಿ ನಿಶ್ರೇಯಸ ಶ್ರೀನಾಥನಾದನು. ‖ ೧೦ ‖

ಆ ಕಾಲದಲ್ಲಿ ವಿಶ್ವಾನಲನೆಂಬ ನಾಲ್ಕನೆಯ ರುದ್ರನು ಹುಟ್ಟಿದನು. ‖ ೪ ‖

ಆ ಶೀತಲನಾಥರ ತೀರ್ಥಸಂತಾನವು ನೂರುಸಾಗರೋಪಮ ಮೂವತ್ತಾರುಲಕ್ಷ ಮಿಪ್ಪತ್ತಾರುಸಾಸಿರದ (೩೬೨೬೦೦೦) ವರ್ಷದಿಂ ಕೂಡಿದ ಒಂದುಕೋಟಿ ಸಾಗರೋಪಮದ ಕಡೆಯಲ್ಲಿ ಉಳಿದಿದ್ದ ಅರ್ಧಪಲ್ಯೋಪಮಕಾಲವು ಧರ್ಮವ್ಯವಚ್ಛಿನ್ನವಾಗೆ ತತ್ಕಾಲದಲ್ಲಿ ನಲಿನ ಪ್ರಭಚರನಾದ ಅಚ್ಯುತಕಲ್ಪದ ಪುಷ್ಪೋತ್ತರವಿಮಾನದ ಅಚ್ಯುತೇಂದ್ರನು ಬಂದು ಸಿಂಹಪುರದ ವಿಷ್ಣುಮಹಾರಾಜನಿಗೂ, ವೇಣುದೇವಿಗೂ ಹುಟ್ಟಿದ ಶ್ರೇಯಾಂಸತೀರ್ಥಕರಿಗೆ ಚತುರಶೀತಿ (೮೪೦೦೦೦೦) ಲಕ್ಷ ವರ್ಷಾಯುಷ್ಯವುಂ, ಅಶೀತಿ (೮೦) ಕಾರ್ಮುಕೋನ್ನತಿಯುಂ, ಕಾರ್ತಸ್ವರವರ್ಣವುಂ, ತುಂಬುರತರುವಿನೊಳ್ ಅನನ್ತಚತುಷ್ಟಯ ಪ್ರಾಪ್ತಿಯಾಗಲು, ಕುಂಥು ಗಣಧರಮೊದಲಾಗಿ ಯೆಪ್ಪತ್ತೇಳು (೭೭) ಗಣಧರರುಂ, ಧಾರಣಾವ್ರತಿಕೆ ಮುಖ್ಯೆಯುಂ, ಯಕ್ಷೇಶ್ವರಯಕ್ಷನುಂ, ಗೌರಿಯಕ್ಷಿಯುಂ, ಗಂಡಮೃಗಲಾಂಛನವುಂ, ಸಮ್ಮೇದಾದ್ರಿಯೊಳ್ ಶಿವಪದಪ್ರಾಪ್ತನಾದನು. ‖ ೧೧ ‖

ಆ ಶ್ರೇಯೋನಾಥರ ತೀರ್ಥಸಂತಾನದಲ್ಲಿ ವಿಜಯನುಂ, ತ್ರಿಪೃಷ್ಟನುಮೆಂಬ ಪ್ರಥಮ ರಾಮಕೇಶವರು ಮಹಾಶುಕ್ಲಕಲ್ಪದಿಂದ ಬಂದು ಪೌದನಾಪುರದ ಅಧಿಪತಿಯಾದ ಪ್ರಜಾಪಾಲ ಮಹಾರಾಜನಿಗೆ ತನೆಯರಾಗಿ ಬೆಳೆಯುತ್ತಿರೆ ಅವರ ವೃದ್ಧಿಯನ್ನು ಸೈರಿಸಲಾರದೆ ಅಶ್ವಗ್ರೀವ

ನೆಂಬ ಖೇಚರನಾದ ಪ್ರತಿವಾಸುದೇವಂ ತ್ರಿಖಂಡಮಂಡಲಾಧಿಪತಿಯುಂ ಮೇಲೆತ್ತಿಬಂದು ಕಾದಿ ತನ್ನ ಚಕ್ರದಿಂದವರನ್ನು ಹೊಡೆಯಲು ಆ ಚಕ್ರದಿಂದಲೇ ಕೇಶವನು ಅಶ್ವಗ್ರೀವನನ್ನು ಕೊಂದು ಭರತತ್ರಿಖಂಡಮಂಡಲವನ್ನು ಆಳಿ, ಶಂಖ, ಚಕ್ರ, ಗದಾ, ಶಕ್ತಿ, ಧನುರ್ದಂಡ ಅಸಿ ಗಳೆಂಬೀ ಯೇಳು ರತ್ನಂಗಳಿಗಧಿಪತಿಯಾಗಿ, ಹಲ, ಮುಸಲ, ಗದಾರತ್ನ ಮಾಲಾಭಿದಾನ ವಾದ ನಾಲ್ಕು ರತ್ನಗಳಿಗೆ ವಿಜಯನೊಡೆಯನಾಗಿ ಸುಖದಿಂ ರಾಜ್ಯಂಗೆಯ್ಯುತ್ತಿರೆ ಕೆಲವಾನು ಕಾಲದಿಂ ಕೇಶವಂ ಕೃಷ್ಣಲೇಶ್ಯಾಪರಿಣಾಮದ ಉತ್ಕೃಷ್ಟದಿಂದ ಗತಜೀವಿತನಾಗಿ ಸಪ್ತಮ ನರಕಭೂಮಿಗೆ ಪ್ರಾಪ್ತನಾದನು. ಆ ತ್ರಿಪೃಷ್ಟನೊಳಾದಿಪ್ಪನಿಯೋಗದಿಂದ ಉತ್ಕೃಷ್ಟ ತಪ ಸ್ಸನ್ನು ಮಾಡಿ ವಿಜಯನು ಅಜರಾಮರತ್ವವನ್ನು ಪಡೆದನು. ಅಶ್ವಗ್ರೀವನಧೋಗಾಮಿಯಾದನು, ಮತ್ತವರಕಾಲದಲ್ಲಿ ಭೀಮನೆಂಬುವನು ಪ್ರಥಮ ನಾರದನಾದನು. ಆ ಕಾಲದಲ್ಲಿ ಸುಪ್ರತಿಷ್ಠ ನೆಂಬ ಐದನೆಯ ರುದ್ರನು ಹುಟ್ಟಿದನು ॥ ೫ ॥

ಆ ಶ್ರೇಯೋಭಟ್ಟಾರಕರ ತೀರ್ಥಸಂತಾನವು ಚತುಷ್ಪಂಚಾಶತ್ (೫೪) ಮಕರಾಕ ರೋಪಮ ಕಾಲಸ್ಥಿತಿಯೊಳು ಪಲ್ಯೋಪಮದ ತ್ರಿಚತುರ್ಭಾಗಕಾಲವು ಧರ್ಮಮಂತರಿಸಿ ತತ್ಕಾಲದಲ್ಲಿ ಪದ್ಮೋತ್ತರಚರನಾದ ಮಹಾಶುಕ್ರಕಲ್ಪದ ದೇವನು ಬಂದು ಚಂಪಾಪುರದ ವಾಸು ಪೂಜ್ಯ ಮಹಾರಾಜನಿಗೂ ಜಯಾವತಿ ಮಹಾದೇವಿಗೂ ಹುಟ್ಟಿದ ವಾಸುಪೂಜ್ಯ ತೀರ್ಥಕರಂಗೆ, ಕುಂಕುಮವರ್ಣವುಂ, ಎಪ್ಪತ್ತೆರಡು ಲಕ್ಷ (೭೨,೦೦೦೦೦) ಸಂವತ್ಸರಾಯುಷ್ಯವುಂ, ಸಪ್ತತಿ (೭೦) ಚಾಪೋತ್ಸೇದನುಂ, ಕಡವಿನ ಮರದಡಿಯೊಳು ವಿಮಲ ಕೈವಲ್ಯೋತ್ಪತ್ತಿಯಾಗೆ, ಧರ್ಮಗಣಧರರ್ಮೊದಲಾಗಿ ಅರವತ್ತಾರು (೬೬) ಗಣಧರರುಂ, ವರಸೇನಕ್ಷಾಂತಿಕಾ ಮುಖ್ಯೆ ಯರುಂ, ಕುಮಾರಯಕ್ಷನುಂ, ಗಾಂಧಾರಿಯಕ್ಷಿಯುಂ, ಮಹಿಷಲಾಂಛನವುಂ, ಚಂಪಾಪುರದ ಬಹಿರುದ್ಯಾನವನದೊಳು ನಿತ್ಯಾನಂದೈಕಲಕ್ಷ್ಮೀವಲ್ಲಭನಾದನು. ॥ ೧೨ ॥

ಆ ವಾಸುಪೂಜ್ಯ ತೀರ್ಥಕರ ಕಾಲದಲ್ಲಿ ಪ್ರಾಣತಕಲ್ಪದ ದೇವರಿಬ್ಬರು ದ್ವಾರಾವತಿ ಪುರದಲ್ಲಿ ಅಚಲನುಂ ದ್ವಿಪಿಷ್ಟನುಮೆಂಬ ಎರಡನೆಯ ರಾಮಕೇಶವರಾಗಿ ತಮಗಿದಿರ್ಚಿದ ಪ್ರತಿವಾಸುದೇವನಾದ ತಾರಕನನ್ನು ಯುದ್ಧಮಾಡಿ ಕೊಂದು ಭರತಾರ್ಧಮಂಡಲವನ್ನು ಆಳಿ ಕಡೆಗಾಲದೊಳು ಕೇಶವಂ ಲೋಕಾಂತರಿತನಾಗಿ ಮಹಾತಮಪ್ರಭಾಭೂಮಿನಿಮಗ್ನನಾದನು. ಆತನ ಅಗಲಿಕೆಯಿಂದ ಅಚಲನು ದೀಕ್ಷೆಯನ್ನು ಧರಿಸಿ ಮೋಕ್ಷಲಕ್ಷ್ಮಿಯನ್ನು ಹೊಂದಿದನು. ತಾರಕನು ಅಧೋಭೂಮಿನಿಮಗ್ನನಾದನು. ತತ್ಕಾಲದಲ್ಲಿ ಮಹಾಭೀಮನೆಂಬ ಎರಡನೇ ನಾರ ದನಾದನು. ಅನಂತರಂ ಅಚಲನೆಂಬಾರನೆಯ ರುದ್ರನುಂಟಾದನು. ॥ ೬ ॥

ಮತ್ತಮಾ ತೀರ್ಥಕರ ಸಂತಾನವು ತ್ರಿಂಶದಬ್ಧ್ಯುಪಮದ ಕಡೆಯೊಳುಳಿದೊಂದು ಪಳಿ ತೋಪಮಕಾಲವು ಧರ್ಮವು ಕೆಟ್ಟಿರೆ ತತ್ಕಾಲದಲ್ಲಿ ಪದ್ಮಸೇನಚರನಾದ ಸಹಸ್ರಾರೇಂದ್ರನು ಬಂದು, ಕಾಂಪಿಲ್ಯಪುರದ ಕೃತವರ್ಮ ಮಹಾರಾಜನಿಗೂ, ಜಯಶ್ಯಾಮಾ ಮಹಾದೇವಿಗೂ ಹುಟ್ಟಿದ ವಿಮಲತೀರ್ಥಕರಂಗೆ ಕನಕವರ್ಣವುಂ, ಅರವತ್ತುಲಕ್ಷ (೬೦,೦೦೦೦೦) ವರ್ಷಾ ಯುಷ್ಯವುಂ, ಅರವತ್ತು (೬೦) ಕೋದಂಡೋನ್ನತನುಂ, ಜಂಬೂಶಾಖೆಯೊಳು ಅನನ್ಯಚತು

ಷ್ಟವಿಯಪ್ರಾಪ್ತಿಯಾದಂಗೆ, ಮಂದಿರಗಣಧರರ್ಮೊದಲಾಗಿ ಐವತ್ತೈದು (೫೫) ಗಣಧರರರುಂ, ಪದ್ಮಶ್ರೀ ಮೊದಲಾದ ಅಜ್ಜಿಯರುಂ, ಷಣ್ಮುಖಯಕ್ಷನುಂ, ವೈರೋಟಿಯಕ್ಷಿಯುಂ, ವರಹಾಂಕ ಮುಂ, ಸಮ್ಮೇದಶೃಂಗಿಯೊಳಜರಾಮರಪದಪ್ರಾಪ್ತನಾದನು. ‖ ೧೩ ‖

ತತ್ಕಾಲದಲ್ಲಿ ಅನುತ್ತರೆಯ ವಿಮಾನದ ಅಹಮಿಂದ್ರನುಂ, ಲಾಂತವಕಲ್ಪದ ದೇವನುಂ, ದ್ವಾರಾವತಿಪುರದಲ್ಲಿ ಸುಧರ್ಮನುಂ, ಸ್ವಯಂಭುವೆಂಬ ಮೂರನೆಯ ಬಲದೇವ ವಾಸುದೇವ ರಾಗಿ, ಪ್ರತಿವಾಸುದೇವನಾದ ಮೇರಕನನ್ನು ಯುದ್ಧದಲ್ಲಿ ಕೊಂದು ತ್ರಿಖಂಡಮಂಡಲಾಧಿಪತಿ ಯಾಗಿ ಕೆಲವು ಕಾಲದಮೇಲೆ ಕೇಶವನು ಸತ್ತು ನರಕಕ್ಕೆ ಹೋದನು. ಆತನ ವಿಯೋಗದಿಂದ ಪರಮ ಯೋಗಧರನಾಗಿ ಸುಧರ್ಮನು ಶಾಶ್ವತ ಶರ್ಮೋತ್ಕಲಕ್ಷ್ಮಿಗೆ ಪತಿಯಾದನು, ಮೇರ ಕನು ತೃತೀಯನಾರದನಾದ ತತ್ಕಾಲದೊಳಿಂದ್ರನೆಂಬ ಮೂರನೆಯ ನಾರದನಾಗಿ ಹುಟ್ಟಿದನು, ಪುಂಡರೀಕನೆಂಬೇಳನೆಯ ರುದ್ರನುಂಟಾದನು. ‖ ೭ ‖

ಆ ವಿಮಲತೀರ್ಥಕರ ಸಂತಾನವು ಯೊಂಭತ್ತುಮಿನಾಕರೋಪಮದ ಕಡೆಯ ಪಲ್ಯೋ ಪಮದ ತ್ರಿಚತುರ್ಭಾಗಕಾಲಂ ಧರ್ಮವ್ಯುಚ್ಛಿತ್ತಿಯಾಗಿ ತತ್ಕಾಲದಲ್ಲಿ ಪದ್ಮರಥ ಚರಾಚ್ಯು ತೇಂದ್ರನು ಬಂದು ಸಾಕೇತಪುರದಲ್ಲಿ ಸಿಂಹಸೇನ ಮಹಾರಾಜನಿಗೂ ಲಕ್ಷ್ಮೀಮತಿ ಮಹಾದೇ ವಿಗೂ ಹುಟ್ಟಿದ ಅನಂತತೀರ್ಥಕರಿಗೆ ಹಿರಣ್ಯವರ್ಣವುಂ, ಮೂವತ್ತು ಲಕ್ಷ (೩೦,೦೦೦೦೦) ಪರಮಾಯುಷ್ಯವುಂ, ಐವ್ವತ್ತು (೫೦) ನಾರಾಚಾಪವೀನ್ನತಿಯುಂ, ಅಶ್ವತ್ಥಾನೋಕಹ ದೊಳು ಲೋಕಾಲೋಕ ಪ್ರಕಾಶಬೋಧೋತ್ಪತ್ತಿಯಾಗಿ, ಜಯಗಣಧರರ್ಮೊದಲಾಗಿ ಐವ ತ್ತು (೫೦) ಗಣಧಗರುಂ, ಸರ್ವಶ್ರೀಗಣಿನಿಯರುಂ, ಪಾತಾಳಯಕ್ಷನುಂ, ಅನಂತಮತಿಯ ಕ್ಷಿಯುಂ, ಕರಡಿಯ ಲಾಂಛನವುಂ, ಸಮ್ಮೇದಕುದರತುದಿಯೊಳು ಪರಮಾರ್ಹಂತ್ಯ ಕಲ್ಯಾಣ ಪದ ಪ್ರಾಪ್ತನಾದನು. ‖ ೧೪ ‖

ಆ ಅನಂತತೀರ್ಥನಾಥಸಂತಾನದಲ್ಲಿ ಸಹಸ್ರಾರಕಲ್ಪದಿಂದ ಬಂದ ಸುಪ್ರಭನುಂ, ಪುರ ಷೋತ್ತಮನೆಂಬ ನಾಲ್ಕನೆಯ ರಾಮಕೇಶವರು ತಮಗೆ ಪ್ರತಿಶತ್ರುವಾದ ನಿಕುಂಭನೆಂಬ ಪ್ರತಿ ವಾಸುದೇವನನ್ನು ರಣರಂಗದಲ್ಲಿ ಗೆದ್ದು ದ್ವಾರಾವತಿಯಲ್ಲಿ ಅರ್ಧಚಕ್ರವರ್ತಿಗಳಾಗಿ ವಾಸು ದೇವ ಪ್ರತಿವಾಸುದೇವರಧೋಗತಿಗಳಿಗೆ ಹೋದರು, ಬಲದೇವನು ಮುಕ್ತಿಯುಕ್ತನಾದನು. ಮಹಾರುದ್ರನೆಂಬ ನಾಲ್ಕನೆಯ ನಾರದನು ಹುಟ್ಟಿದನು, ಅಜಿತಂಧರನೆಂಬ ಎಂಟನೇ ರದ್ರನು ಉತ್ಪತ್ತಿಯಾದನು. ‖ ೮ ‖

ಮತ್ತು ಆ ಅನಂತತೀರ್ಥಕರ ನೋಂಪಿಯನ್ನು ಗಣಧರಸ್ವಾಮಿಗಳು ಬಲನಾರಾಯಣ ಮುಖ್ಯರಾಗಿ ವಿನಯಜನಂಗಳಿಗೆ ಉಪದೇಶವನ್ನು ಮಾಡಿದರು. ಅದು ಹ್ಯಾಗಂದರೆ?

ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ದಶಿಯ ದಿವಸದಲ್ಲಿ ಉಪವಾಸವನ್ನು ಮಾಡಿ ಮನೋಹರಸ್ಥಾನದಲ್ಲಿ ಅಷ್ಟಮಹಾಪ್ರಾತಿಹಾರ್ಯಸಮೇತರಾದ ಅರ್ಹತ್ಪ್ರತಿಮೆಯನ್ನು ಸ್ಥಾಪಿಸಿ ರಮಣೀಯವಾದ ಪುಷ್ಪಮಂಟಪವನ್ನು ವಿರಚಿಸಿ ಯಥಾವಿಧಿಯಿಂದ ಮಹಾಭಿಷೇಕವನ್ನು ಮಾಡಿ ಸುಗಂಧದಿಂ ಗಂಧೋದಕವನ್ನು ಓಂ ನಮೋ ಅರ್ಹತೇ ಭಗವತೇ ತ್ರೈಲೋಕ್ಯನಾ

ಥಾಯ ಪ್ರಕ್ಷೀಣಾಶೇಷಕಲ್ಮಷಾಯ ದಿವ್ಯತೇಜೋಮೂರ್ತಯೇ ಅನಂತತೀರ್ಥಕರಾಯ ಅನಂತಸುಖಪ್ರದಾಯ ನಮಃ ಸ್ವಾಹಾ । ಎಂಬ ಈ ಮಂತ್ರದಿಂದ ದೇವರಿಗೆ ಅಷ್ಟವಿಧಾರ್ಚನೆಯನ್ನು ಮಾಡುವದು, ಚತುರ್ದಶ ಧಾನ್ಯಗಳನ್ನು ಪುಂಜಗಳಂ ಪುಂಜಿಸಿ ಚತುರ್ದಶ ಪ್ರಕಾರ ಸುಪುಷ್ಪಫಲಭಕ್ಷ್ಯಗಳಿಂ ಪೂಜಿಸಿ ಚತುರ್ದಶ ಪ್ರಕೀರ್ಣಕಂಗಳನಿಟ್ಟು ಶ್ವೇತಸೂತ್ರದಿಂ ವಿರಚಿಸಿದ ಪದಿನಾಲ್ಕು ಗಂಟಿನ ದಾರವನ್ನು ಶ್ರೀಗಂಧ ಕುಂಕುಮ ಕರ್ಪೂರ ಸಮ್ಮಿಶ್ರಿತವಾದ ಗಂಧದಿಂ ಪೂಸಿ ಈ ಯಂತ್ರವನ್ನು ಮೇಲೆ ಇಟ್ಟು ಬಳಿಕೀ ಮಂತ್ರದಿಂದ ಧಾರವನ್ನು ಅರ್ಚನೆಮಾಡುವದು, ಓಂ ನಮೋ ಅರ್ಹತೇ ಭಗವತೇ ತ್ರೈಲೋಕ್ಯನಾಥಾಯ । ಅನಂತಜ್ಞಾನದರ್ಶನ ವೀರ್ಯಸುಖಾತ್ಮಕಾಯ ಸ್ವಾಹಾ ॥ ಎಂದು ೧೪ ಜಲಧಾರೆ, ೧೪ ತಿಲಕ, ೧೪ ಹಿಡಿಯಕ್ಕಿ, ೧೪ ಪುಷ್ಪ, ೧೪ ಪ್ರಕಾರದ ಚರು, ೧೪ ದೀಪ, ೧೪ ಸದ್ಧೂಪ, ೧೪ ಪ್ರಕಾರದ ಫಲ ವಸ್ತು, ೧೪ ಅಡಕೆ, ೧೪ ಯಲೆಯು ನಿಂತಷ್ಟವಿಧಾರ್ಚನೆಯು ಮಂತ್ರದಿಂ, ಓಂ ಹ್ರೀಂ ಅನಂತತೀರ್ಥಕರಾಯ ಓಂ ಹ್ರಾಂ ಹ್ರೀಂ ಹ್ರೂಂ ಹ್ರೌಂ, ಹ್ರಃ ಅಸಿಆಉಸಾ ಮಮ ಸರ್ವಶಾಂತಿಂ ಕಾಂತಿಂ ತುಷ್ಟಿಪುಷ್ಟಿಂ ಸೌಭಾಗ್ಯಮಾಯುರಾರೋಗ್ಯಮಿಷ್ಟಸಿದ್ಧಿಂ ಕುರು೨ ಸರ್ವವಿಘ್ನಪರಿಹರಾಂ ಕುರು೨ ಮಮ ವಷಟ್ ಸ್ವಾಹಾ ॥ ಎಂದು ಅರ್ಘ್ಯವನ್ನೆತ್ತುವದು. ಬಳಿಕ ಓಂ ಐಂ ದ್ರೀಂ ಹ್ರೀಂ ಕ್ಲೀಂ ಅರ್ಹಂ ಮಮ ಸರ್ವಶಾಂತಿ ಕುರು೨ ವಷಟ್ ಸ್ವಾಹಾ । ಯೆಂದು ಈ ಮಂತ್ರವನ್ನು ಹೇಳಿ ದಾರವನ್ನು ಕೊರಳೊಳು ಯಿಕ್ಕಿ ಮೇಣ್ ತೋಳೊಳು ಮೇಣ್ ಕಯ್ಯೊಳು ಮೇಣ್ ಕಿವಿಯೊಳು ಕಟ್ಟಿಕೊಂಡು ಮುಂದಿನ ದಾರವನ್ನು ಓಂ ಶ್ರೀಂ ಹ್ರೀಂ ಅರ್ಹಂ ನಮಃ ಸರ್ವ ಕರ್ಮಬಂಧನ ವಿನಿರ್ಮುಕ್ತಾಯ ಅನಂತತೀರ್ಥಕರಾಯ ಅನಂತಸುಖಪ್ರದಾಯ ನಮಃ ಸ್ವಾಹಾ । ಯೆಂದೀ ಮಂತ್ರವನ್ನು ಹೇಳಿ ಬಿಡುವದು, ಶ್ರುತವನ್ನೂ ಗುರುಗಳನ್ನೂ ಅರ್ಚಿಸಿ ಪದಿನಾಲ್ವರು ಸುವಾಸಿನಿಯರಿಗೆ ೧೪, ೧೪, ತೆರದ ಭಕ್ಷ್ಯಫಲಗಳನ್ನೂ ಬಾಯಿನವನ್ನೂ ಕೊಟ್ಟು ಆ ಇರುಳು ಜಾಗರಮಿರ್ಪುದು, ಮರುದಿನಂ ಸಮುದಾಯವನ್ನು ಮಾಡಿ ಪಾರಣೆಯನ್ನು ಮಾಡುವದು. ಈ ಪ್ರಕಾರವಾಗಿ ೧೪ ವರ್ಷಂ ಆದಿಮಧ್ಯಾವಸಾನದಲ್ಲಿ ಯಥಾ ಘಟಣೆಯಿಂದ ಬಡವರೊಡೆಯರೆನ್ನದೆ ಶಕ್ತ್ಯಾನುಸಾರ ಭಕ್ತಿಪೂರ್ವಕಂ ಮಾಡುವದು, ನಾಂದೀಮುಖದಲ್ಲಿ ಹದಿನಾಲ್ಕು ಜೈನಮಿಥುನಂಗಳ್ಗೆ ಉಣಲುಂ, ಉಡಲುಂ, ಕೊಡುವುದು. ಪ್ರತಿಷ್ಠಾನಂತರಂ ಪದಿನಾಲ್ವರಾಚಾರ್ಯರಿಗೆ ಶ್ರುತಪೂಜೆಯನ್ನು ಮಾಡುವದು, ೧೪ ತಂಡ ಅಜ್ಜಿಯರಿಗೆ ಉಡಲುಂ ಕೊಡುವುದು, ದೇವರಿಗೆ ಚತುರ್ದಶ ಸಂಖ್ಯ ಪೂಜೋಪಕರಣಮಂ ಮಾಡಿಸಿ ಕೊಡುವದು, ದೀನಾನಾಥರ್ಗೆ ಸುವರ್ಣವಸ್ತ್ರಾದಿಗಳನ್ನೂ ಚಾತುರ್ವರ್ಣಕ್ಕೆ ಆಹಾರದಾನವನ್ನೂ ಕೊಡುವುದು, ಕಡು ಬಡವರೊಡವೆಯಿಲ್ಲೆಂದು ತಡದಿರದೆ ೧೪ ಹಿಡಿಯಕ್ಕಿಯನ್ನು ೧೪ ಪುಂಜದಿಂದರ್ಚಿಸಿ ನೋಂಪುವುದು, ಈ ಅನಂತತೀರ್ಥಕರ ನೋಂಪಿಯ ಫಲದಿಂದ ಅನಂತತೀರ್ಥಕರ ಮಹಿಮೆಯನ್ನು ಕೈಕೊಂಡು ಅನಂತಜ್ಞಾನಾದ್ಯನಂತಗುಣಗಳನ್ನು ಪಡೆದು ಅನಂತಕಾಲಂ ಅನಂತ ಸುಖಿಗಳಾಗಿರುವರು. ॥

ಮತ್ತಮಾತೀರ್ಥಕರ ಸನ್ತಾನವು ಚತುರುದಧಿಪರಿಮಾಣಂ ಪೋಗೆ ಕಡೆಯ ಪಲ್ಯೋಪಮದರ್ಧಕಾಲಂ ಧರ್ಮಂ ವ್ಯವಚ್ಛಿನ್ನಮಾಗಿ ತತ್ಕಾಲದಲ್ಲಿ ದಶರಥನೆಂಬ ಸರ್ವಾರ್ಥಸಿದ್ಧಿ

ಅಹಮಿಂದ್ರನು ಬಂದು ರತ್ನಗತಿಪುರದಲ್ಲಿ ಭಾನುರಾಜನಿಗೂ ಸೂವ್ರತಾ ಮಹಾದೇವಿಗೂ ಹುಟ್ಟಿದ ಧರ್ಮತೀರ್ಥೇಶ್ವರಂಗೆ, ಹೇಮವರ್ಣವುಂ, ಹತ್ತುಲಕ್ಷ (೧೦,೦೦೦೦೦) ಪರಮಾಯುಷ್ಯವುಂ, ನಲವತ್ತೈದು (೪೫) ಶರಾಸನೋನ್ನತ ಶರೀರನುಂ, ದಧಿವರ್ಣತರುವಿನೊಳು ಕೇವಲಜ್ಞಾನೋತ್ಪತ್ತಿಯಾಗಿ, ಮೊದಲಾದ ನಲ್ವತ್ತೆರಡು (೪೨) ಗಣಧರರುಂ ಅಜ್ಜಿಕೆಯರುಂ, ಕಿನ್ನರಯಕ್ಷನುಂ, ಪರಭೃತಿಯಕ್ಷಿಯುಂ, ವಜ್ರಲಾಂಛನವುಂ, ಸಮ್ಮೇದಗಿರಿಯಲ್ಲಿ ಮೋಕ್ಷಲಕ್ಷ್ಮೀಕಾಂತನಾದನು. ॥ ೧೫ ॥

ಮತ್ತು ಆ ತೀರ್ಥಕರ ಸನ್ತಾನವು ಪಳಿತೋಪಮದ ಅರ್ಧಕಾಲ ಧರ್ಮವ್ಯವಚ್ಛಿನ್ನವಾಗಿ ಕಳಿಯಲು ತತ್ಕಾಲದಲ್ಲಿ ಶ್ರೀಷೇಣನುಂ, ಕೌರವನುಂ, ಶ್ರೀಪ್ರಭದೇವನುಂ, ಅಮಿತತೇಜನೆಂಬ ಖೇಚರನುಂ, ಆದಿತ್ಯಚೂಲನುಂ, ಅಪರಾಜಿತನುಂ, ಅಚ್ಯುತೇಂದ್ರನುಂ, ವಜ್ರಾಯುಧನುಂ, ಅಹಮಿಂದ್ರನುಂ, ಮೇಘರಥನುಂ ಆಗಿ, ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದ ಅಹಮಿಂದ್ರಂ ಗರ್ಭಾವತರಣಕಲ್ಯಾಣ ಪೂಜಾಪೂರ್ವಕಮವತರಿಸಿ ಹಸ್ತಿನಾಪುರದ ವಿಶ್ವಸೇನ ಮಹಾರಾಜನಿಗೂ, ಐರಾಮಹಾದೇವಿಗೂ ಹುಟ್ಟಿ ಜನ್ಮಾಭಿಷೇಕಕಲ್ಯಾಣವನ್ನು ಹೊಂದಿದ ಹದಿನಾರನೆಯ ತೀರ್ಥಕರಂ, ಹದಿನಾರನೆಯ ಕಾಮದೇವನುಂ, ಐದನೆಯ ಸಕಲಚಕ್ರವರ್ತಿಯುಂ ಆದ ಶಾನ್ತಿತೀರ್ಥಕರ್ಗೆ ಷೋಡಶಸ್ವರ್ಣವರ್ಣನುಂ, ಒಂದು ಲಕ್ಷ್ಯವರುಷ (೧೦೦೦೦೦) ಪರಮಾಯುಷ್ಯನುಂ, ನಲವತ್ತು (೪೦) ಕಣಾಸನೋನ್ನತಿಯುಂ, ಮೂವತ್ತೆರಡು ಸಾಸಿರ ವಿಷಯಂಗಳ್ಗನಿಬರೆ ಮಕುಟಬದ್ಧರ್ಗಂ, ತತ್ಪ್ರಮಾಣದ ಸಂಗೀತಕನಾಟ್ಯಶಾಲೆಗಳಿಂ, ತೊಂಭತ್ತಾರು ಸಾಸಿರ (೯೬೦೦೦) ಮಂದಿ ಮಂತಃಪುರಕ್ಕುಂ, ಎಂಭತ್ತುನಾಲ್ಕುಲಕ್ಷ (೮೪೦೦೦೦೦) ಭದ್ರಹಸ್ತಿಗೂ, ಅಷ್ಟೇ ಪ್ರಮಾಣದ ರಥಗಳಿಗೂ, ಹದಿನೆಂಟು ಕೋಟ (೧೮೦೦೦೦೦೦೦) ಜಾತ್ಯಶ್ವಗಳಿಗೂ, ಎಂಭತ್ತನಾಲ್ಕು ಕೋಟ (೮೪೦೦೦೦೦೦೦) ಪದಾತಿಬಲಕ್ಕೂ, ಮಾಗಧವರತನುಪ್ರಭೃತಿವ್ಯನ್ತರ ಬಲಕ್ಕೂ, ವಿದ್ಯಾಧರಬಲಕ್ಕೂ, ಜೀವಾಜೀವದ ಚತುರ್ದಶ (೧೪) ಮಹಾರತ್ನಂಗಳಿಗೂ, ಯಾರು ಎಷ್ಟು ತೆಗೆದುಕೊಂಡರೂ ತೀರದ ನವನಿಧಿಗಳಿಗೂ, ಅಧಿಪನಾಗಿ ಸಾಮ್ರಾಜ್ಯ ಸುಖಮನನುಭವಿಸಿ, ಬಳಿಕಂ ಸಮುತ್ಪನ್ನ ಬೋಧದಿಂದ ಅವುಗಳೆಲ್ಲವನ್ನೂ ಜರತೃಣಸಮಾನವಾಗಿ ಯೋಚಿಸಿ ದೇವೇಂದ್ರರಿಂ ದೀಕ್ಷಾಗ್ರಹಣವನ್ನು ಹೊಂದಿ ನರಾಧಿವೃಕ್ಷಮೂಲದಲ್ಲಿ ಶುಕ್ಲಧ್ಯಾನಮಹೋಗ್ರಕುಠಾರದಿಂದ ಘಾತಿಗಳೆಂಬ ಮಹಾಟವಿಯನ್ನು ಕತ್ತರಿಸಿ ಕೇವಲಜ್ಞಾನಾದಿ ನವಲಬ್ಧಿಗಳ ಪ್ರಾಪ್ತಿಯಿಂದ ತತ್ಕಲ್ಯಾಣವಿಭೂತಿಯನ್ನು ಪಡೆದು, ಚಕ್ರಾಯುಧಂ ಮೊದಲಾಗಿ ಮೂವತ್ತಾರು (೩೬) ಗಣಧರರುಂ, ಹರಿಷೇಣಾರ್ಜಿಕಾ ಮುಖ್ಯೆಯರುಂ, ದ್ವಾದಶಗಣಕ್ಕೆ ಧರ್ಮಮನುಪದೇಶವನ್ನು ಮಾಡಿದವನಿಗೆ, ಗರುಡಯಕ್ಷನುಂ, ಮಹಾಮಾನಸಿಯಕ್ಷಿಯುಂ, ಹರಿಣಾಂಕನುಂ, ಶಾಂತಿಸ್ವಯಂಭುನಾಮಾದಿ ಸಹಸ್ರಾಷ್ಟಗುಣನಾಮಗಳನ್ನು ಧರಿಸಿ ಸಮ್ಮೇದಗಿರಿಯಲ್ಲಿ ನಿರ್ವಾಣಪದಪ್ರಾಪ್ತನಾಗಿ ಪಂಚಕಲ್ಯಾಣವನ್ನು ಹೊಂದಿದನು ॥ ೧೬ ॥

ಆಕಾಲದಲ್ಲಿ ಪೀಠನೆಂಬ ರುದ್ರನುಂಟಾದನು.

ತತ್ತೀರ್ಥಸನ್ತಾನವು ಪಳಿತೋಪಮದರ್ಧಕಾಲ ವ್ಯವಚ್ಛಿನ್ನವಾಗಿ ನಡೆಯುತ್ತಿರಲಾಕಾಲದಲ್ಲಿ ಸಿಂಹರಥಚರನಾದ ಸರ್ವಾರ್ಥಸಿದ್ಧಿಯಹಮಿಂದ್ರಂ ಬಂದು ಹಸ್ತಿನಾಪುರದ ಸೂರಸೇನಮಹಾರಾಜನಿಗೂ ಶ್ರೀಮತಿ ಮಹಾದೇವಿಗೂ ಹುಟ್ಟಿದ ಕುಂಥುಭಟ್ಟಾರಕಂ ಹದಿನೇಳನೆಯ ತೀರ್ಥಂಕರನಾದನಾರನೆಯ ಸಕಲ ಚಕ್ರವರ್ತಿಯುಂ, ಜಾತರೂಪವರ್ಣನುಂ, ತೊಂಭತ್ತೈದು ಸಾಸಿರ (೯೫೦೦೦) ವರುಷಾಯುಷ್ಯನುಂ, ಮುವ್ವತ್ತೈದು (೩೫) ಬಿಲ್ಲಿಡಿಯನುಂ, ತ್ರಿಲೋಕಪತಿಗಳುಮಂ ಷಟ್ಖಂಡ ಮಂಡಲದರಸುಗಳನ್ನು ಎರಗಿಸಿ ತಿಲಕಾನೋಕಹದಲ್ಲಿ ಕೇವಲಜ್ಞಾನಾದ್ಯತಿಶಯಂಗಳನೆಯ್ದಿ ಧರ್ಮಮನತಿ ವಿಷದಿಂಮಾಡಿ, ಸ್ವಯಂಭೂಗಣಧರರ್ವೊದಲಾಗಿ ಮೂವತ್ತೈದು (೩೫) ಗಣಧರರುಂ, ಭಾವಶ್ರೀಕ್ಷಂತಿಕಾಮುಖ್ಯೆಯುಂ, ಗಂಧರ್ವಯಕ್ಷನುಂ, ಜಯಾಯಕ್ಷಿಯುಂ, ಅಜಲಾಂಛನವುಂ, ಸಮ್ಮೇದಕುಂಭಿನೀದರದೊಳು ಕರ್ಮತ್ರಯನಿರ್ಮಲೋತ್ಪನ್ನಾ ತೀಂದ್ರಿಯ ಸುಖಮಯನಾದನು ‖ ೧೭ ‖

ತತ್ತೀರ್ಥಸನ್ತಾನವು ಸಹಸ್ರಕೋಟಿ ಸಂವತ್ಸರಂ ಕುಂದಿದೊಂದು ಪಳಿತೋಪಮ ಚತುರ್ಥಭಾಗಕಾಲಂ ಪ್ರವರ್ತಿಸುವಕಾಲದಲ್ಲಿ, ಧನಪತಿಚರನಾದ ಅನುತ್ತರೆಯ ವೈಜಯಂತಿ ವಿಮಾನದಹಮಿಂದ್ರಂ ಬಂದು ಹಸ್ತಿನಾಪುರದ ಸುದರ್ಶನ ಮಹಾರಾಜನಿಗೂ ಸುಮಿತ್ರಾ ಮಹಾದೇವಿಗೂ ಹುಟ್ಟಿದ ಅರತೀರ್ಥಕರೇಳನೆಯ ಸಕಲಚಕ್ರವರ್ತಿಯುಂ, ಸ್ವರ್ಣವರ್ಣವುಂ, ಚತುರಶೀತಿ ಸಹಸ್ರ (೮೪೦೦೦) ಸಂವತ್ಸರಾಯುಷ್ಯನುಂ, ತ್ರಿಂಶ (೩೦) ದಂಡೋನ್ನತಿಯುಂ, ಚೂತವೃಕ್ಷದೊಳು ಪರಮಾರ್ಹನ್ತ್ಯಲಕ್ಷ್ಮೀಪತಿಯಾಗಿ ಕುಂಭಗಣಧರರ್ವೊದಲಾಗಿ ಮೂವತ್ತು ಗಣಧರರುಂ (೩೦) ಕೂರ್ಮಶ್ರೀವ್ರತಿಕಾಮುಖ್ಯೆಯರುಂ, ಮಹೇಂದ್ರಯಕ್ಷನುಂ, ವಿಜಯಯಕ್ಷಿಯುಂ, ನಂದ್ಯಾವರ್ತಲಾಂಛನಮುಂ, ಸಮ್ಮೇಧಕ್ಷ್ಮಾಧರದೊಳು ಅಮೃತಶ್ರೀ ಪ್ರಿಯನಾದನು ‖ ೧೭ ‖

ತತ್ತೀರ್ಥಸಂತಾನದಲ್ಲಿ ಸುಭೌಮನೆಂಬಂ ತನ್ನ ಮೂರನೆಯ ಭವದೊಳು ಭೂಪಾಲನೆಂಬರಸನಾಗಿ ತಪದಿಂ ಮಹಾಶುಕ್ರಕಲ್ಪದೊಳು ದೇವನಾಗಿ ಬಂದು ಅಯೋಧ್ಯೆಯೊಳು ಎಂಟನೆಯ ಚಕ್ರವರ್ತಿಯಾಗಿ ಬಹ್ವಾರಂಭ ಪರಿಗ್ರಹತ್ವದಿಂದ ನರಕಾಯುಷ್ಯಮಂ ಕಟ್ಟಿ ಪೂರ್ವಭವದ ವೈರಿಯಾದ ದೇವನಿಂ ಘೋರೋಪಸರ್ಗಮನೆಯ್ದಿ ಮಹಾರೌದ್ರಧ್ಯಾನದಿಂ ಸತ್ತು ಸಪ್ತಮನರಕಕ್ಕೆ ಸಂದನು, ಮತ್ತು ಅರಭಟ್ಟಾರಕರ ಕಾಲದೊಳು ಸುಭೌಮನಿಂದನಂತರಂ ಸೌಧರ್ಮಕಲ್ಪದಿಂ ಬಂದ ನಂದಿಷೇಣನುಂ, ಪುಂಡರೀಕನುಂ ಚಕ್ರಪುರದೊಳು ಆರನೆಯ ರಾಮಕೇಶವರಾದವರ್ಗೆ ಬಲಿಯೆಂಬ ವಿದ್ಯಾಧರನು ಪ್ರತಿವಾಸುದೇವನಾಗಿ ಬಲಿಯನ್ನು ರಣಾಗ್ರದಲ್ಲಿ ಕೊಂದು ಪುಂಡರೀಕನು ತ್ರಿಖಂಡಮಂಡಲಾಧಿಪತಿಯಾದಂ, ವಾಸುದೇವನುಂ, ಪ್ರತಿವಾಸುದೇವನುಂ ಆರನೆಯ ನರಕಕ್ಕೆ ಸಂದರು, ಹಲಧರನು ದೀಕ್ಷೆಯನ್ನು ಧರಿಸಿ ಮೋಕ್ಷಲಕ್ಷ್ಮೀಪತಿಯಾದನು, ಮತ್ತು ಮಹಾಕಾಳನೆಂಬ ಆರನೆಯ ನಾರದನು ಹುಟ್ಟಿದನು.

ಶ್ರೀಮದರಭಟ್ಟಾರಕರಸನ್ತಾನಂ ಸಹಸ್ರಕೋಟಿ (೧೦೦೦,೦೦೦೦೦೦೦) ಸಂವತ್ಸರಂಗಳಂ ಪ್ರವರ್ತಿಸುವಂಥಾಕಾಲದಲ್ಲಿ ವೈಶ್ರವಣಚರನಾದ ಅನುತ್ತರೆಯ ಅಪರಾಜಿತ ವಿಮಾ

ನದ ಅಹಮಿಂದ್ರನು ಬಂದು ಮಿಥಿಲಾಪುರದ ಕುಂಭರಾಜನಿಗೂ ಪ್ರಭಾವತಿ ಮಹಾದೇವಿಗೂ ಹುಟ್ಟಿದ ಮಲ್ಲಿ ತೀರ್ಥಕರಿಗೆ, ಕಲ್ಯಾಣ ವರ್ಣತನುವುಂ, ಐವತ್ತೈದು ಸಾಸಿರ (೫೫೦೦೦) ವರುಷಾಯುಷ್ಯನುಂ, ಇಪ್ಪತ್ತೈದು (೨೫) ಬಿಲ್ಲಿಡಿಯನುಂ, ಅಶೋಕವೃಕ್ಷದಡಿಯೊಳು ಪರಮಪಾವನಜ್ಞಾನೋತ್ಪತ್ತಿಯಾಗೆ, ವಿಶಾಲಗಣಧರಮೊದಲಾಗಿ ಇಪ್ಪತ್ತೆಂಟು (೨೮) ಗಣಧರರುಂ, ಅಮರಸೇನಾರ್ಜಿಕಾ ಮುಖ್ಯೆಯುಂ, ಕುಬೇರಯಕ್ಷನುಂ, ಅಪರಾಜಿತಾಯಕ್ಷಿಯುಂ, ಕನಕಕಲಶಚಿಹ್ನಮುಂ, ಸಮ್ಮೇದಕುಧರದೊಳು ಸಪ್ತಪರಮಸ್ಥಾನ ಸಂಸ್ಥಾನನಾದನು ‖ ೧೯ ‖

ಆ ಮಲ್ಲಿ ಭಟ್ಟಾರಕರಕಾಲದೊಳು ಸೌಧರ್ಮಕಲ್ಪದಿಂ ಬಂದ ನಂದಿಮಿತ್ರನುಂ ದತ್ತನುಮೆಂಬರು ವಾರಣಾಶಿಪುರದೊಳಗೆ ಏಳನೆಯ ಬಲದೇವವಾಸುದೇವರಾದರು. ಅವರಿಗೆ ಪ್ರಹರಣನೆಂಬ ಖೇಚರನು ಪ್ರತಿಶತ್ರುವಾದನು ಆ ಕೃಷ್ಣನಿಂದ ಪ್ರತಿವಾಸುದೇವ ಗತಜೀವಿತನಾಗಿ ನರಕಕ್ಕಿಳಿದನು, ಕೇಶವನುಂ ಪಂಚಮಶ್ವಭ್ರಾಂತಮನೆಯ್ದಿದನು, ಹಲಧರನು ಮುಕ್ತನಾದನು, ದುರ್ಮುಖನೆಂಬೇಳನೆಯ ನಾರದನಾದನು ‖ ೭ ‖

ಆ ಮಲ್ಲಿ ಭಟ್ಟಾರಕರ ಕಾಲದಲ್ಲಿ ಪ್ರಜಾಪಾಲನಾದ ಅಚ್ಯುತೇಂದ್ರನು ಬಂದು ವಾರಣಾಶಿಪುರದಲ್ಲಿ ಪದ್ಮನೆಂಬ ಒಂಭತ್ತನೇ ಸಕಲಚಕ್ರವರ್ತಿಯಾಗಿ ದಶಾಂಗಭೋಗವನ್ನು ಅನುಭವಿಸಿ ತಪಸ್ಸಿನಿಂದ ಮುಕ್ತನಾದನು ‖ ೯ ‖

ಆ ತೀರ್ಥಕರ ಸಂತಾನವು ಐವತ್ತುನಾಲ್ಕು ಲಕ್ಷ (೫೪,೦೦೦೦೦) ವರ್ಷಂ ಪರಿವರ್ತಿಸುವಂಥಾ ಕಾಲದಲ್ಲಿ ಹರಿವರ್ಮಚರನಾದ ಪ್ರಾಣತೇಂದ್ರನು ಬಂದು ರಾಜಗೃಹನಗರದ ಸುಮಿತ್ರ ಮಹಾರಾಜನಿಗೂ ಪದ್ಮಾವತಿ ಮಹಾದೇವಿಗೂ ಹುಟ್ಟಿದ ಮುನಿಸೂವ್ರತ ತೀರ್ಥಕರಿಗೆ, ಕೃಷ್ಣವರ್ಣವುಂ, ಮೂವತ್ತು ಸಾಸಿರ (೩೦,೦೦೦) ವರ್ಷದಾಯುಷ್ಯವುಂ, ಇಪ್ಪತ್ತು (೨೦) ಚಾಪೋತ್ಸೇದಮುಂ, ಚಂಪಕಭೂರುಹದಲ್ಲಿ ಪರಮಾತ್ಮಜ್ಯೋತಿಪ್ರಕಾಶವಾಗಿ, ಮಲ್ಲಿಗಣಧರಮೊದಲಾಗಿ ಹದಿನೆಂಟು (೧೮) ಗಣಧರರುಂ, ಪುಷ್ಪದಂತಾರ್ಜಿಕಾಮುಖ್ಯೆಯುಂ, ವರುಣಯಕ್ಷನುಂ, ಬಹುರೂಪಿಣಿಯಕ್ಷಿಯುಂ, ಕಚ್ಛಾಂಕಮುಂ, ಸಮ್ಮೇದ ಧರಣಿಧರದೊಳು ನಿರ್ವಾಣಕಾಂತಾಕಟಾಕ್ಷವಿಕ್ಷೇಪಲಕ್ಷ್ಯನಾದನು. ‖ ೨೦ ‖

ಆ ಮುನಿಸೂವ್ರತತೀರ್ಥಕರ ಸಂತಾನದೊಳು ಸನತ್ಕುಮಾರಕಲ್ಪದ ವಿಸಾಳವಿಮಾನದಿಂ ಬಂದು ಭೋಗಪುರದಲ್ಲಿ ಹರಿಷೇಣನೆಂಬ ಹತ್ತನೆಯ ಸಕಲಚಕ್ರವರ್ತಿಯಾಗಿ ದಶಾಂಗಭೋಗವನ್ನನುಭವಿಸಿ ವಿಷಯವಿರಕ್ತನಾಗಿ ಜಿನರೂಪವನ್ನು ಧರಿಸಿ ನಿರ್ವಾಣಶ್ರೀಯನ್ನು ಹೊಂದಿದನು. ಮತ್ತಮಾ ಮುನಿಸುವ್ರತತೀರ್ಥಭಟ್ಟಾರಕರ ಕಾಲದಲ್ಲಿ ಎಂಟನೆಯ ಬಲದೇವ, ವಾಸುದೇವರು, ತಮ್ಮ ಮೂರನೆಯ ಭವದಲ್ಲಿ ವಿಜಯನುಂ, ಚಂದ್ರಚೂಳನುಮೆಂಬಿಬ್ಬರುಂ ನಿರ್ಗ್ರಂಥ ಮಾರ್ಗವನ್ನು ಆಚರಿಸಿ, ಸನತ್ಕುಮಾರಕಲ್ಪದಲ್ಲಿ ವಿಜಯನುಂ, ಕನಕಪ್ರಭವಿಮಾನದಲ್ಲಿ ಕನಕಚೂಳನೆಂಬುವನಾಗಿ ಹುಟ್ಟಿದನು. ಚಂದ್ರಚೂಳನು ಮಣಿಪ್ರಭವಿಮಾನದಲ್ಲಿ ಮಣಿಚೂಳನಾಗಿ ಹುಟ್ಟಿದನು. ಆ ರೀತಿಯಾಗಿ ಇಬ್ಬರುಂ ಬಳಿಕ್ಕ

ಅಲ್ಲಿಂದ ಬಂದು ಅಯೋಧ್ಯಾಪುರದ ದಶರಥಮಹೀಭುಜನಿಗೂ, ಅಪರಾಜಿತಾಮಹಾದೇವಿಗೂ, ಸುಮಿತ್ರಾ ಮಹಾದೇವಿಗೂ, ರಾಮ, ಲಕ್ಷ್ಮಣರೆಂಬ ತನಯರಾಗಿ, ಬಲದೇವ, ವಾಸುದೇವರ ನಿಸಿ, ಬಲಯುತನಾಗಿ ಲಂಕಾಪುರವನ್ನು ಆಳುತ್ತಿದ್ದ ಖೇಚರರಾಜನಾದ ರಾವಣನೆಂಬ ಪ್ರತಿ ವಾಸುದೇವನು ರಾಮನಗ್ರಮಹಾದೇವಿಯೆನಿಸಿದ ಸೀತಾದೇವಿಯನ್ನು ಕಪಟದಿಂದ ಎತ್ತಿ ಕೊಂಡು ಹೋಗಲು ರಾಮ, ಲಕ್ಷ್ಮಣರು ಮುನಿದು ಮಸಗಿ ಅವನ ಮೇಲೆ ದಂಡೆತ್ತಿ ಹೋಗಿ ಮಹಾಯುದ್ಧಂ ದ್ವಂದ್ವಯುದ್ಧಂಗಳಿಂ ಕಾದಿ ಪುಣ್ಯಕ್ಷಯದಿಂದ ರಾವಣನು ತನ್ನ ವಿದ್ಯೆಗಳೆಲ್ಲಂ ಬೆಸಕೆಯ್ಯದಿರೆ ಮುನಿದು ಚಕ್ರಾಯುಧವನ್ನು ಬಿಡಲು ಅದು ಮುಟ್ಟದೆ ಲಕ್ಷ್ಮಣನನ್ನು ಪ್ರದ ಕ್ಷಿಣೆಮಾಡಿ ಅವನ ಬಲಭಾಗದಲ್ಲಿ ನಿಲ್ಲಲು, ಶಿಟ್ಟನಿಂದ ಆ ಚಕ್ರವನ್ನು ತೆಗೆದುಕೊಂಡು ಅಚ್ಯುತನು ಆ ರಾವಣನನ್ನು ಕೊಂದು ದಿಗ್ವಿಜಯವನ್ನು ಮಾಡಿ ದಕ್ಷಿಣಭರತತ್ರಿಖಂಡವನ್ನು ಪರಿಪಾಲಿಸಿ ಮಾಗಧ ಪ್ರಮುಖರಾದ ದೇವರುಂ, ವಿದ್ಯಾಧರರಾಜರುಂ, ತ್ರಿಖಂಡಮಂಡಲದರಸು ಗಳನ್ನು ಅಡಿಗೆರಗಿಸಿ ಹದಿನಾರುಸಾಸಿರ ಅಂತಃಪುರವನ್ನು ಪ್ರತ್ಯೇಕ ಸಹಸ್ರ ಯಕ್ಷರಕ್ಷಿ ತಂಗಳಾದ ಶಂಖ, ಚಕ್ರ, ಗಧಾ, ಶಕ್ತಿ, ಧನು, ಅಸಿ, ಮಣಿರತ್ನವೆಂಬ ಏಳು ರತ್ನಂಗಳುಂ ಲಕ್ಷ್ಮಣನಿಗಾಗಲು, ಮತ್ತು ಎಂಟುಸಾವಿರಮಂತಃಪುರವುಂ, ಹಲ, ಮುಸಲ, ಗದಾ, ರತ್ನ ಮಾಲಾಭಿದಾನಂಗಳೆಂಬ ಈ ನಾಲ್ಕು ರತ್ನಗಳು ರಾಮನಿಗಾಗಲು ತ್ರಿಖಂಡಮಂಡಲಕ್ಕೂ, ಇಪ್ಪತ್ತೆಂಟು ಅಂತ:ಪುರಕ್ಕೂ, ಹದಿನಾರುಸಾಸಿರ ವಿಷಯಕ್ಕೂ, ಅನಿಬರೇಮುಕುಟಬದ್ಧರಿಗೂ, ನಾಲ್ವತ್ತೆರಡು ಲಕ್ಷ ಗಜಬಲಗಳಿಗೂ. ಅಷ್ಟೇ ರಥಗಳಿಗೂ, ಪೊಂಭತ್ತುಕೋಟಿ ತುರಗಬಲ ಗಳಿಗೂ, ನಾಲ್ವತ್ತೆರಡು ಕೋಟಿ ವೀರಭಟರಿಗೂ, ಮೇಷ್ಟಾಸಿರ್ವರ್ಮೆಯ್ಗಾಪಿನ ಗಣಬದ್ಧ ದೇವರಿಗೂ, ಅಧಿಪತಿಯಾಗಿ ಸುಖದಿಂದ ರಾಜ್ಯಭಾರವಮಾಡುತ್ತಿರಲು, ಅಂತ್ಯದಲ್ಲಿ ಆ ಲಕ್ಷ್ಮಣನು ಗತಜೀವಿತನಾಗಿ ಪಂಕಪ್ರಭಾಭೂಮಿಗೆ ನಿಮಗ್ನನಾದನು, ಆತನ ವಿಯೋಗದಲ್ಲಿ ಆರುತಿಂಗ ಳವರಿಗೂ ಆತನ ಶವವನ್ನು ಹೊತ್ತು ತೊಳಲಿ ರಾಮನು ಕಡೆಯಲ್ಲಿ ವೈರಾಗ್ಯದಿಂದ ದಿಗ್ವಾಸ ನಾಗಿ ಧರ್ಮಶುಕ್ಲಧ್ಯಾನದಿಂ ಕರ್ಮನಿರ್ಮೂಲನಮಾಡಿ ಸಿದ್ಧಾಲಯ ಪ್ರಾಪ್ತನಾದನು. ರಾವ ಣನು ನಾಲ್ಕನೆಯ ನರಕಕ್ಕೆ ಸಂದನು. ನರಕಮುಖನೆಂಬ ಎಂಟನೆಯ ನಾರದನೂ ಆ ನರ ಕಕ್ಕೆ ಹೋದನು. ॥

ಶ್ರೀಮುನಿಸೂವ್ರತಸನ್ತಾನವು ಆರುಲಕ್ಷ ವರ್ಷ (೬೦೦೦೦೦)ವು ಪ್ರವರ್ತಿಸುವಂಥಾ ಕಾಲದಲ್ಲಿ ಸಿದ್ಧಾರ್ಥಚರ್ರನಾದ ಅನುತ್ತರೆಯ ಅಪರಾಜಿತ ವಿಮಾನದ ಅಹಮಿಂದ್ರನು ಬಂದು ಮಿಥಿಲಾಪುರದ ಜಯುವರ್ಮಮಹಾರಾಜನಿಗೂ, ಮಹಿಳಾಮಹಾದೇವಿಗೂ ಹುಟ್ಟಿದ ಇಪ್ಪ ತ್ತೊಂದನೆಯ ನಮಿತೀರ್ಥಕರಿಗೆ ಚಾಮೀಕರ ವರ್ಣಮುಂ, ದಶಸಹಸ್ರ (೧೦೦೦೦) ವರ್ಷ ದಾಯುಷ್ಯವುಂ, ಪಂಚದಶ (೧೫) ಶಿಲೀಮುಖಾಸನೋನ್ನತಿಯುಂ, ವಕುಳಮಹೀರುಹದಲ್ಲಿ ಸಕಲ ವಿಮಲ ಕೇವಲಾವಬೋಧೋತ್ಪತ್ತಿಯಾಗಲು, ಸೋಮಗಣಧರರ್ಮೊದಲಾಗಿ ಹದಿನೇಳು (೧೭) ಗಣಧರರುಂ, ಮಾರ್ಗಶ್ರೀ ಪ್ರತಿಕಾಮುಖ್ಯೆಯರುಂ, ಭೃಕುಟಿಯಕ್ಷನುಂ, ಚಾಮುಂಡಿ ಯಕ್ಷಿಯುಂ, ನೀಲೋತ್ಪಲ ಚಿಹ್ನಮಾಗಿಯುಂ, ಸಮ್ಮೇಧಿಮೇದಿನೀಧರದ ಮೇಲೆ ಕರ್ಮಕ್ಷ ಯದಿಂದೀಷತ್ಪ್ರಾಗ್ಭಾರಶಿಖರಶೇಖರನಾದನು ॥ ೨೧ ॥

ಮತ್ತಮಾನಮಿ ಭಟ್ಟಾರಕಾಲದಲ್ಲಿ ಜಯಸೇನನೆಂಬ ಹನ್ನೊಂದನೆಯ ಚಕ್ರವರ್ತಿಯಾದನು, ಆತನು ಪೂರ್ವಜನ್ಮದಲ್ಲಿ ಮಹಾಶುಕ್ರಕಲ್ಪದಲ್ಲಿ ಮಹಾರ್ಥಿಕದೇವನಾಗಿ ಹುಟ್ಟಿ ಬಂದು ಕೌಸಂಬಿಪುರದಲ್ಲಿ ಸಾಮ್ರಾಜ್ಯಪದವಿಯಲ್ಲಿದ್ದು ದಶಾಂಗಭೋಗವನ್ನನುಭವಿಸಿ, ದೀಕ್ಷೆಯನ್ನುಧರಿಸಿ ಮುಕ್ತಿಗೆ ಸಂದನು. ಶ್ರೀ ನಮಿಭಟ್ಟಾರಕರ ತೀರ್ಥಸಂತಾನವು ಐದುಲಕ್ಷ ವರ್ಷ (೫೦೦೦೦೦)ವು ಪ್ರವರ್ತಿಸುವಂಥಾಕಾಲದಲ್ಲಿ ವಿಂಧ್ಯಶಬರನುಂ ದಿವ್ಯಕೇತು ಶ್ರೇಷ್ಠಿಯುಂ, ಸ್ವರ್ಗಜನುಂ, ಭೂಪಾಲಭೂಪನುಂ, ಸೌಧರ್ಮಕಲ್ಪಜನುಂ, ಚಿನ್ತಾರತಿ ವಿದ್ಯಾಧರನುಂ, ಮಹೇಂದ್ರಕಲ್ಪಜನುಂ, ಅಪರಾಜಿತನರಪತಿ ಅಚ್ಯುತೇಂದ್ರನುಂ, ಸುಪ್ರತಿಷ್ಟನಾತನುಂ ಆಗಿ ಪಂಚಾಣುತ್ತರೆಯಿಂ ಜಯನ್ತವಿಮಾನದೊಳು ಅಹಮಿಂದ್ರಂ ಬಂದು ಶೌರಿಪುರದ ಸಮುದ್ರವಿಜಯ ಮಹಾರಾಜನಿಗೂ, ಶಿವದೇವಿ ಮಹಾದೇವಿಗೂ, ಗರ್ಭಾವತರಣಪುರಸ್ಸರಂ ಹುಟ್ಟಿದ ನೇಮಿತೀರ್ಥಕರಂಗೆ, ಇಂದ್ರನೀಲವರ್ಣಮುಂ, ಸಹಸ್ರ (೧೦೦೦) ಸಂವತ್ಸರಾಯುಷ್ಯವುಂ, ದಶಚಾಪೋನ್ನತಿಯುಂ, ಸ್ರುಂಗಮಹೀಕುಹದೊಳು ಚತುರ್ಥಕಲ್ಯಾಣ ಫಲವೆನಿಸಿದ ಕೇವಲ ಬೋಧೋತ್ಪತ್ತಿಯಾಗೆ, ವರದತ್ತ ಗಣಧರನೊದಲಾದ ಏಕಾದಶ (೧೧) ಗಣಧರರುಂ, ಯಕ್ಷಶ್ರೀ ಮೊದಲಾದರ್ಜಿಕೆಯರುಂ, ಸರ್ವಾಹ್ಣಯಕ್ಷನುಂ, ಆಮ್ರಕೂಷ್ಮಾಂಡಿಯಕ್ಷಿಯುಂ, ಶಂಖಚಿಹ್ನವುಂ, ಊರ್ಜಯಂತ ವಿಶ್ವಂಭರಾಧರದೊಳು ಪರಮಾತ್ಮಲಕ್ಷ್ಮೀಸಂಗತಸೌಖ್ಯೈಕನಿಷ್ಟನಾದನು ‖ ೨೨ ‖

ಶ್ರೀನೇಮಿನಾಥರ ತೀರ್ಥಸನ್ತಾನದಲ್ಲಿ ಬಲನುಂ, ಕೃಷ್ಣನುಂ ಎಂಬಿವರು ಒಂಭತ್ತನೆಯ ರಾಮ, ಕೇಶವರಾದರು, ಅವರು ತಮ್ಮ ತೃತೀಯಜನ್ಮದಲ್ಲಿ ಘೋರವೀರ ತಪಶ್ಚರಣದಿಂ ವೈಮಾನಿಕದೇವರಾಗಿ ಹುಟ್ಟಿ ಬಂದು ಶೌರೀಪುರದ ವಸುದೇವನಿಗೂ ಆತನ ಅರಸಿಯರು ರೋಹಿಣಿದೇವಿಗೂ, ದೇವಕಿದೇವಿಗೂ, ಬಲ, ನಾರಾಯಣರಾಗಿ ಬೆಳೆಯುತ್ತಿರಲು, ಜರಾಸಂಧನೆಂಬ ಭೂವರನಾದ ಪ್ರತಿವಾಸುದೇವನು ಕೃಷ್ಣನಲ್ಲಿ ವಿಗ್ರಹ (ಜಗಳ)ವನ್ನು ಮಾಡಿ ಸಮರಸನ್ನದ್ಧನಾಗಿ ಬಂದು ಕಾದಿ ಚಕ್ರದಿಂದ ಕೃಷ್ಣನನ್ನು ಹೊಡೆಯಲು ಆಗ ಆ ಚಕ್ರಾಯುಧದಿಂದಲೇ ಕೃಷ್ಣನು ಪ್ರತಿವಾಸುದೇವನನ್ನುಕೊಂದು ತ್ರಿಖಂಡಮಂಡಲವನ್ನು ಆಳಿ ದಕ್ಷಿಣ ಭರತದವರನ್ನೂ, ಉಭಯ ಶ್ರೇಣಿಯ ವಿದ್ಯಾಧರರನ್ನೂ ಅಡಿಗೆರಗಿಸಿ ರಾಜ್ಯಶ್ರೀಯನನುಭವಿಸುತ್ತಿರ್ದು ನೇಮಿನಾಥರ ಸಮವಸರಣವನ್ನು ವಂದಿಸಿ ಅಸಂಯ್ಯತನಾಗಿಯುಂ ದರ್ಶನವಿಶುದ್ಧ್ಯಾದಿ ಷೋಡಶಭಾವನೆಗಳಿಂ ತೀರ್ಥಕರ ಪುಣ್ಯಮಂಕಟ್ಟ, ದೀಪಾಯನಮುನಿಗಳಕಾರಣದಿಂ ದ್ವಾರಾವತಿಸುಡಲು ಅಚ್ಯುತತದಚ್ಯುತಿಯೊಳು ಮುನ್ನಬದ್ಧಾಯುಷ್ಯನಪ್ಪುದರಿಂ ಕಟ್ಟಿದುದಂ ಕಳೆಯನೆಂಬಂತೆ ತೃತೀಯನರಕ ಪ್ರಾಪ್ತನಾದನು. ಮುಂದೆ ಅಲ್ಲಿಂದ ಬಂದು ಭಾವಿತೀರ್ಥಕರ ಪರಮದೇವನಾಗುವನು. ಅಂಥಾ ಕೇಶವನ ವಿಯೋಗದಲ್ಲಿ ಹಲಧರನು ಆರು ತಿಂಗಳವರಿಗೂ ಆತನ ಮೃತಕಶರೀರವನ್ನು ಹೊತ್ತು ತೊಳಲಿ ಕಡೆಯಲ್ಲಿ ವೈರಾಗ್ಯದಿಂದ ಸರ್ವಸಂಗ ನಿವೃತ್ತಿಯನ್ನು ಮಾಡಿ ಉತ್ಕೃಷ್ಟ ಬ್ರಹ್ಮಚರ್ಯದಿಂದ ಬ್ರಹ್ಮಲೋಕ ಪ್ರಾಪ್ತನಾದನು. ಜರಾಸಂಧನು ತೃತೀಯನರಕಕ್ಕೆ ಹೋದನು. ಅಧೋಮುಖನೆಂಬ ಒಂಭತ್ತನೆಯ ನಾರದನೂ ಕೂಡಾ ಅದೇ ನರಕಕ್ಕೆ ಹೋದನು. ಮತ್ತೂ ಆ ನೇಮಿಸ್ವಾಮಿಗಳ ಕಾಲದಲ್ಲಿ ಬ್ರಹ್ಮದತ್ತ

ನೆಂಬ ಹನ್ನೆರಡನೆಯ ಸಕಲ ಚಕ್ರವರ್ತಿಯು ತೃತೀಯ ಜನ್ಮದಲ್ಲಿ ನಿಧಾನಶಲ್ಯದಿಂದ ತಪಸ್ಸನ್ನು ಮಾಡಿ ವೈಮಾನಿಕದೇವನಾಗಿ ಹುಟ್ಟಿಬಂದು ಚಕ್ರರತ್ನಂ ಮೊದಲಾಗಿ ಹದಿನಾಲ್ಕು ರತ್ನಗಳೂ ನವನಿಧಿಗಳೂ ಹುಟ್ಟಲು ದಕ್ಷಿಣಭರತದ ತ್ರಿಖಂಡವನ್ನು ಪಾಲಿಸಿ ಮತ್ತು ಉತ್ತರಭರತತ್ರಿಖಂಡವನ್ನು ಜಯಿಸಲಿಕ್ಕೋಸ್ಕರ ಹೋಗುತ್ತಿರುವ ಕಾಲದಲ್ಲಿ ವಿಜಯಾರ್ಧಪರ್ವತದ ತಿಮಿಸ್ರಗುಹಾಭ್ಯಂತರದಲ್ಲಿ ಗತಜೀವಿತನಾಗಿ ಮೃಗವ್ಯಸನದಲ್ಲಿ ಬಹಳ ಪ್ರೀತಿಯುಳ್ಳವನಾದದ್ದರಿಂದ ಏಳನೆಯ ನರಕಕ್ಕೆ ಹೋದನು.

ಶ್ರೀನೇಮಿಸ್ವಾಮಿಗಳ ತೀರ್ಥಸಂತಾನವು ಎಂಭತ್ಮೂರು ಸಾವಿರದ ಏಳನೂರೈವತ್ತು ವರ್ಷ (೮೩೭೫೦) ಪ್ರವರ್ತಿಸುವಂಥಾ ಕಾಲದಲ್ಲಿ ಮರುಭೂತಿಯುಂ, ವಜ್ರಘೋಷಸಾಮಜಮುಂ, ಸಹಸ್ರಾರಕಲ್ಪಜನುಂ, ರತಿವೇಗನುಂ, ಅಚ್ಯುತಾಮರನುಂ, ವಜ್ರನಾಭಿಯುಂ, ಅಹಮಿಂದ್ರನುಂ ಆನಂದಮಹಾರಾಜನುಮಾಗಿ, ಆನತಕಲ್ಪದಲ್ಲಿ ಹುಟ್ಟಿದ ಆನತೇಂದ್ರನು ಬಂದು ವಾರಣಾಶಿಪುರದ ವಿಶ್ವಸೇನಮಹಾರಾಜನಿಗೂ, ಬ್ರಾಹ್ಮಿಲಾ ಮಹಾದೇವಿಗೂ ಹುಟ್ಟಿದ ಪಾರ್ಶ್ವಭಟ್ಟಾರಕರಿಗೆ, ಶತಾಬ್ದಾಯುಷ್ಯವುಂ (೧೦೦), ಒಂಭತ್ತು ಮೊಳ ನಿಡಿಯನುಂ, ನೀಲವರ್ಣವುಂ, ಪಾರುತರುಮೂಲದೊಳು ಕಾರ್ಯಸಮಯಸಾರರೂಪವಾದ ಅನಂತಚತುಷ್ಟಯ ಪ್ರಾಪ್ತಿಯಾಗಲು ಸ್ವಯಂಭು ಗಣಧರಮೊದಲಾಗಿ ಏಕಾದಶ (೧೧) ಗಣಧರರುಂ, ಸುಲೋಚನಾರ್ಜಿಕೆಮುಖ್ಯೆಯರುಂ, ಧರಣೇಂದ್ರಯಕ್ಷನುಂ, ಪದ್ಮಾವತಿಯಕ್ಷಿಯುಂ, ಸರ್ಪಲಾಂಛನವುಂ ಆಗಿ, ಸಮ್ಮೇದ ಕುತ್ಕಿಲಾಗ್ರದೊಳು ಸಕಲ ಗುಣಮಣಿಭೂಷಣಭೂಷಿತನಾಗಿ ಮೋಕ್ಷಕಾಂತಾಕಾಂತನಾದನು. || ೨೩ ||

ಶ್ರೀಪಾರ್ಶ್ವತೀರ್ಥನಾಥ ಸಂತಾನವು ಇನ್ನೂರೈವತ್ತು (೨೫೦) ವರ್ಷ ಪ್ರವರ್ತಿಸುವಂಥಾ ಕಾಲದಲ್ಲಿ ವಿದೇಹದೇಶದ ಕುಂಡಪುರದ ಸಿದ್ಧಾರ್ಥಮಹಾರಾಜನಿಗೂ ಪ್ರಿಯಕಾರಿಣಿ ಮಹಾದೇವಿಗೂ ಗರ್ಭಾವತರಣ ಕಲ್ಯಾಣಪೂರ್ವಕ ಷೋಡಶಸ್ವಪ್ನಾನಂತರಂ ಉತ್ಪನ್ನವಾದ ಶ್ರೀವರ್ಧಮಾನಸ್ವಾಮಿಯ ಪೂರ್ವಭವಾವಳಿಯು ಹ್ಯಾಗಂದರೆ:—೧ ಪುರೂರವನುಂ, ೨ ಸೌಧರ್ಮಕಲ್ಪಜನುಂ, ೩ ಆದಿತೀರ್ಥೇಶ್ವರ ತೀರ್ಥಕರ ಸುತಂ ಭರತೇಶ್ವರ ಚಕ್ರವರ್ತಿ ಮಗಂ ಮರೀಚಿಯೆಂಬುವನು ಕುಮತೋಪದೇಶಂ ಮಾಡಿ ತಾನುಂ ಆ ತಪಸ್ಸಿನಲ್ಲಿ ಉಗ್ರೋಗ್ರವನ್ನು ಮಾಡಿ, ೪ ಬ್ರಹ್ಮಕಲ್ಪಜನುಂ, ೫ ಜಟಿಳನೆಂಬ ಬ್ರಾಹ್ಮಣನುಂ, ೬ ಸೌಧರ್ಮದ ದೇವನುಂ, ೭ ಪುಷ್ಯಮಿತ್ರದ್ವಿಜನುಂ, ೮ ಸೌಧರ್ಮಕಲ್ಪದ ದೇವನುಂ, ೯ ಅಗ್ನಿಸಹಮಿತ್ರನುಂ, ೧೦ ಸನತ್ಕುಮಾರಾಮರನುಂ, ೧೧ ಕೌಶಿಕಧರಾಮರನುಂ, ೧೨ ಮಹೇಂದ್ರಕಲ್ಪದ ಸುಮನನುಂ, ೧೩ ಭಾರದ್ವಾಜದ್ವಿಜನ್ಮನುಂ, ೧೪ ಮಹೇಂದ್ರಕಲ್ಪದ ದೇವನುಂ, ಅಲ್ಲಿಂ ಬಳಿಕ ಚತುರ್ಗತಿಯಲ್ಲಿಯೂ, ತ್ರಸಸ್ಥಾವರಂಗಳಾಗಿ ತಿರ್‍ರನೆ ತಿರಿದು ಬಂದು ಬಳಿಕಂ ಸ್ಥಾವರನೆಂಬ ವೇದಪಾರಗನುಂ, ಮಹೇಂದ್ರದ, ದಿವೌಕಸನುಂ, ವಿಶ್ವನಂದಿಭೂಪತಿಯುಂ, ಮಹಾಶುಕ್ರದ ನಾಕಜನುಂ, ತ್ರಿಪೃಷ್ಟನುಮೆಂಬ ಪ್ರಥಮವಾಸುದೇವನುಂ, ಸಪ್ತಮನಾರಕನುಂ, ಸಿಂಹನುಂ, ಪ್ರಥಮನಾರಕನುಂ, ಮತ್ತೂ ಸಿಂಹವಾಗಿ ಹುಟ್ಟಿದ ಭವದಲ್ಲಿ, ಅರಿಂಜಯ ಭಟ್ಟಾರಕರ ಧರ್ಮೋಪದೇಶವು ದೊರಕೊಳ್ಳಲು, ಸನ್ಯಸನದಿಂದ ಸಮಾಧಿಯನ್ನು ಪಡೆದು, ಸೌಧರ್ಮಕಲ್ಪ

ದೊಳಹಮಿಂದ್ರಂ ಸಿಂಹಧ್ವಜನೆಂಬ ದೇವನಾಗಿ ಹುಟ್ಟಿದನು. ಕನಕಧ್ವಜನೆಂಬ ವಿದ್ಯಾಧರ ರಾಜನಾಗಿ, ಕಾಪಿಷ್ಟಕಲ್ಪದಲ್ಲಿ ದೇವನಾಗಿ ಬಂದು, ಹರಿಷೇಣ ಮಹಾರಾಜನುಂ, ಮಹಾಶುಕ್ರ ಕಲ್ಪದಲ್ಲಿ ಪ್ರೀತಿಂಕರಾಮರನುಂ, ಪ್ರಿಯಮಿತ್ರವರ್ತಿಯುಂ, ಸಹಸ್ರಾರಕಲ್ಪದೊಳು ಸೂರ್ಯಾ ಸೂರ್ಯಪ್ರಭದೇವನೆಂಬನಾಗಿ ಬಂದು, ನಂದನಮಹಾರಾಜನೆಂಬರಸನಾದ ಭವದಲ್ಲಿ ಷೋಡಶಭಾವನೆಗಳನ್ನು ಭಾವಿಸಿ, ತಿರ್ಥಕರ ಪುಣ್ಯವು ಕಟ್ಟಿ, ಸಮಾಧಿವಿಧಾನದಿಂದ ಅಚ್ಯುತೇಂದ್ರ ಕಲ್ಪದಲ್ಲಿ, ಪುಷ್ಪೋತ್ತರವಿಮಾನದಲ್ಲಿ, ಅಚ್ಯುತೇಂದ್ರನಾಗಿ ಹುಟ್ಟಿ ಬಂದು, ವರ್ಧಮಾನ ಸ್ವಾಮಿಯಾಗಿ, ಚಾಮೀಕರವರ್ಣಮುಂ, ಎಪ್ಪತ್ತೆರಡು (೭೨) ವರುಷಾಯುಷ್ಯವುಂ, ಏಳು (೭) ಮೊಳ ಉತ್ಸೇದತನುವುಂ, ಮೂವತ್ತು ವರ್ಷ ಕುಮಾರಕಾಲವು ಕಳೆಯಲು, ಪೂರ್ವ ಭವದ ಸ್ಮರಣೆಯಿಂದ ವೈರಾಗ್ಯವನ್ನು ಹೊಂದಿ ದೀಕ್ಷೆಗೊಂಡು, ಉಗ್ರೋಗ್ರ ತಪಸ್ಸುಮಾಡಿ ಹನ್ನೆರಡು ವರ್ಷ ಛದ್ಮಸ್ಥಕಾಲವು ಕಳೆಯಲು, ಶಾಲೋರ್ಭಿರುಹದಲ್ಲಿ ಪರಮಾರ್ಹಂತ್ಯ ಪದ ವೀಶ್ವಗನಾಗಿ, ೧ ಇಂದ್ರಭೂತಿಯುಂ, ೨ ವಾಯುಭೂತಿಯುಂ, ೩ ಅಗ್ನಿಭೂತಿಯುಂ, ೪ ಸುಧರ್ಮನುಂ, ೫ ಮಾರ್ಯನುಂ, ೬ ಮುಂಡಿಪುತ್ರನುಂ, ೭ ಮೈತ್ರೇಯನುಂ, ೮ ಅಕಂಪನುಂ, ೯ ಅಂದನುಂ, ೧೦ ಅಚಲನುಂ, ೧೧ ಪ್ರಭಾವನುಂ ಎಂದು ಹನ್ನೆರಡು ಜನಗಣಧರರು:ಂ, ಚಂದನಾರ್ಜಿಕಾಮುಖ್ಯೆಯರುಂ, ಮಾತಂಗಯಕ್ಷನುಂ, ಸಿದ್ಧಾಯಿನಿಯಕ್ಷಿಯುಂ, ಸಿಂಹಲಾಂಛನದಿಂದೊಪ್ಪುತ್ತಂ, ಮೂವತ್ತು ವರ್ಷಮುಂ ವಿನಿತಾಖಂಡದಲ್ಲಿ ವಿಹಾರಿಸಿ ಸದ್ಧರ್ಮಾಮೃತಸಾರದಿಂದ ಭವ್ಯಸಸ್ಯ ಸಂಪತ್ತಿಯಂ ಮಾಡುತ್ತಂ ವೀರವರ್ಧಮಾನ ಸನ್ಮತಿನಾಥ ಮಹತಿಮಹಾವೀರನೆಂಬಿವು ಮೊದಲಾದ ಸಾವಿರದೆಂಟು ಅನ್ವರ್ಥನಾಮಗಳಿಂದ ಪಾವಾಪುರದ ಬಹಿರುದ್ಯಾನವನ ಸರೋಜಷಂಡಮಂಡಿತಭೂಮಂಡಲದಲ್ಲಿ ನಿತ್ಯಾನಂದಾಖಂಡೈಕಚಿತ್ಪಿಂಡ ಧ್ಯಾನಮಂಡನಮಂಡಿತನಾಗಿ, ಮುಕ್ತ್ಯಂಗನಾತುಂಗಪಯೋಧರಾಲಿಂಗನಸಂಗನಾದನು. ॥೨೪॥

ಆ ಕಾಲದಲ್ಲಿ ಸತ್ಯಕೀಯನೆಂಬ ಹನ್ನೊಂದನೆಯ ರುದ್ರನುಂಟಾದನು. ತೀರ್ಥಕರುತ್ಸೇದ ಆಯುಷ್ಯದ ಗಾಹೆಗಳು.

ದಣುರಣು ತುಂಗೋತಿಥ್ಥೇಪಂಚಸಯುಪ್ಪಣ್ಣದಸಪಣಾಣಕಮು ।
ಅಥ್ಥಸು ಪಂಚಸು ಅಥ್ಥಸುಪಾಸದುಗೇಣವಯುಸತ್ತಕರಾ ॥ ೧೩ ॥
ತಿಥ್ಥಾವುಚುಳಸಿದಿ ಬಿಹತ್ತರಿಸಠ್ಠಿ ಪಣ್ಣಸುದಸುದ ಸಹಿಣ ।
ಬಿಗಿಪುಬ್ಬಲಖ್ಖಮೇತೋ ಚುಳಸಿದಿ ಬಹತ್ತರಿಸಠ್ಠಿ ॥ ೧೪ ॥
ತಿಯಿಸದ ಸಯಕ್ಕಲಖ್ಖೋಪಣಣವುದಿ ಚದುರಸಿದ್ದಿ ।
ಪಣವಣವಂಣತ್ತಿ ಸದ್ದಸಗಿಸಹಸ್ಸಸ್ಸಯ ಬಾಹತ್ತರಿಕ ಮಸೋ ॥ ೧೫ ॥

ಮತ್ತು ಈ ಮುಕ್ತಿ ಪ್ರಸ್ತುತದಲ್ಲಿ ಯಾದವವಂಶದಲ್ಲಿ ಎಂಟುಕೋಟಿ ಮುನಿಗಳ್ವೆರಸು ಬಲಭದ್ರ ಸಪ್ತಕಂ ತುಂಗಗಿರಿತುಂಗದೊಳು ಮುಕ್ತರಾದರು. ಮೂರುವರೆಕೋಟಿ ಋಷಿಗಳ್ವೆರಸು ವರದತ್ತನುಂ ವರಾಂಗನುಂ ಸಾಗರದತ್ತನುಂ ಎಂಬಿವರು ತಾರಾಗಿರಿ ಶಿಖರದಲ್ಲಿ ಮುಕ್ತರಾದರು. ಪಂಚಕೋಟಿ ಲಾಟಸ್ಸಹಿತಂ ರಾಮಸುತರಾದ ಲವಾಂಕುಶರು ಪಾವಾಪುರದಲ್ಲಿ ಪಾವನಗತಿಗತರಾದರು. ದ್ರವಿಣ ಶ್ರವಣಾಷ್ಟಕೋಟಿ ಸಮೇತಂ ಪಾಂಡುಸುತರಾದ ಧರ್ಮ

ಪುತ್ರನುಂ, ಭೀಮನುಂ, ಅರ್ಜುನನುಂ, ಯೆಂಬೀ ಮೂವರುಂ ಶತ್ರುಂಜಯಕುಧರದಲ್ಲಿ ಚಿದಾನಂದಾಮೃತಸ್ಯಂದಿ ಸುಖಮಯಮುಕ್ತಿಯುಕ್ತರಾದರು, ಯೆಪ್ಪತ್ತೆರಡುಕೋಟಿಯುಮೇಳುನೂರು ಕುಮಾರಯತಿಗಳು ಸಮನ್ವಿತಂ ನಮಿನೇಮಿಪ್ರದ್ಯುಮ್ನ, ಶಂಭುಕುಮಾರ, ಅನಿರುದ್ಧರೆಂಬಿವರು ಊರ್ಜಯನ್ತಿ ಶೈಲಾಗ್ರದಲ್ಲಿ ಲೋಕಾಗ್ರವಾದ ನಿತ್ಯಾಗ್ರಸುಖನಿರತರಾದರು.

ಗಾಹೆ ॥ ಸತ್ತೇವಯ ಬಳಭದ್ದಾ ಜಾಯವರಾಯಾಣು ಯತ್ಥಕೋಡೀಯೋ ।
ತುಂಗೀಯೇ ಗಿರಿಸಿಹರೇ ಣಿಬ್ಬಾಣ ಗಯಾಣಮೋತೇಸಿಂ ॥ ೧೬ ॥
ವರದತ್ತೋಯ ವರಂಗೋ ಸಾಗರದತ್ತೋಯತಾರಗಿರಿ ಸಿಹರೇ ।
ಅವುತ್ಥಕೋಟಿ ಸಹಿಯಾ ಣಿಬ್ಬಾಣ ಗಯಾಣಮೋತೇಸಿಂ ॥ ೧೭ ॥
ರಾಮಸುದಾ ಬೇಣಿಜಿಣಾಲಾಳಣರಿಂದಾಯ ಪಂಚಕೋಡೀವೋ ।
ಪಾವಾಯೇಣಯರಿಎ ಣಿಬ್ಬಾಣಗಯಾಣಮೋತೇಸಿಂ ॥ ೧೮ ॥
ಪಥ್ಥುಸುದಾ ತಿಂಣಿಜಿಣಾ ದವಿಣಣ ರಿಂದಾಯ ಅಠ್ಠಕೋಡೀವಾ ।
ಸತ್ತುಂಜಯ ಗಿರಿ ಸಿಹರೇ ಣಿಬ್ಬಾಣ ಗಯಾಣಮೋ ತೇಸಿಂ ॥ ೧೯ ॥
ಣಮಿಣೇಮಿ ಪಜ್ಜುಂಣೋ ಸಂಭುಕುಮಾರೋ ಜವಾಯ ಅಣುರುದ್ದೋ ।
ಬಾಹತ್ತರಿಕೋಡೀವೋ ಸಗಸಯ ಉಜ್ಜತ್ತಯೇಸಿದ್ಧಾ ॥ ೨೦ ॥

ಆ ತೀರ್ಥಕರಕಾಲದಲ್ಲಿ ಗೌತಮ, ಸುಧರ್ಮ, ಜಂಬೂನಾಥರೆಂಬೀ ಮೂವರನು ಬದ್ಧಕೇವಲಿಗಳ ಕಾಲ ಪ್ರಮಾಣವು ಅರುವತ್ತೆರಡು (೬೨) ವರ್ಷಗಳಾಗುವವು. ೧ ನಂದಿಯುಂ, ೨ ನಂದಿಮಿತ್ರನುಂ, ೩ ಅಪರಾಜಿತನುಂ, ೪ ಗೋವರ್ಧನನುಂ, ೫ ಭದ್ರಬಾಹುಸ್ವಾಮಿಗೆಳೆಂಬ ಐವರು ಶ್ರುತಕೇವಲಿಗಳಾದಕಾಲವು ಶತ (೧೦೦) ವರ್ಷಗಳಾಗುವವು. ಮತ್ತೂ ೧ ವಿಶಾಲನುಂ, ೨ ಪ್ರೋಷ್ಠಿಲನುಂ, ೩ ಕ್ಷತ್ರಿಯನುಂ, ೪ ಜಯನುಂ, ೫ ನಾಗನುಂ, ೬ ಸಿದ್ಧಾರ್ಥನುಂ, ೭ ದ್ರುತಷೇಣನುಂ, ೮ ವಿಜೆಯನುಂ, ೯ ಬುದ್ಧಿಲನುಂ, ೧೦ ಗಂಧದೇವನುಂ, ೧೧ ಸುಧರ್ಮನುಂ, ಎಂಬ ದಶಪೂರ್ವಧರರು ಏಕಾದಶಂ (೧೧) ಅವರ ಕಾಲವು ೧೮೩ ವರ್ಷಗಳಾಗುವವು, ಪುನಃ ೧ ನಕ್ಷತ್ರನುಂ, ೨ ಜಯಪಾಲನುಂ, ೩ ಪಾಂಡುವುಂ, ೪ ಧ್ರುವಸೇನನುಂ, ಕಂಸಾಚಾರ್ಯನುಮೆಂದೇಕಾದಶಾಂಗಧರ ಪಂಚಕಲಕಾಲ ಪ್ರಮಾಣವು ಇನ್ನೂರಿಪ್ಪತ್ತು (೨೨೦) ವರ್ಷಗಳಾಗುವವು. ಪುನಃ ಆ ತೀರ್ಥಸಂತಾನದಲ್ಲಿ ೧ ಸುಭದ್ರನುಂ, ೨ ಯಶೋಭದ್ರನುಂ, ೩ ಯಶೋಬಾಹುವುಂ, ೪ ಮೋಹನಾಮನುಮೆಂದು ಆಚಾರಾಂಗಧರ ಚತುಷ್ಟಯರಕಾಲವು ನೂರಹದಿನೆಂಟು (೧೧೮) ವರ್ಷಗಳಾಗುವವು. ಈ ಪ್ರಕಾರವಾಗಿ ಗೌತಮಾದಿಗಳ ಕಾಲವೆಲ್ಲಾ ಕೂಡಿ ಆರುನೂರೆಂಭತ್ಮೂರು (೬೮೩) ವರ್ಷಗಳಾಗುವವು. ಮತ್ತಂ ಈ ಆಚಾರಾಂಗಧರರಿಂ ಬಳಿಕಂ ಸಾಸಿರದೆಂಭತ್ತೆರಡನೆಯ ಹೇಮಣಂಬಿಯಂದೀ ಶಾಸ್ತ್ರಸಾರಸಮುಚ್ಚಯಂ ಹುಟ್ಟಿತು. ಅಂತೂ ಸಾಸಿರದೇಳನೂರ ಅರವತ್ತೈದು (೧೭೬೫) ವರ್ಷಗಳಾಗುವವು.

ಮತ್ತೂ ಈ ಶ್ರೀಮಹಾವೀರ ಸ್ವಾಮಿಯಕಾಲವು ಹತ್ತೊಂಭತ್ತುಸಾಸಿರದ ಇನ್ನೂರ ಮೂವತ್ತೈದು (೧೯೨೩೫) ವರ್ಷ ಮುಂದೆ ಪ್ರವರ್ತಿಸುವದು. ಪುನಃ ಈ ವರ್ಧಮಾನ

ಸ್ವಾಮಿಯು ಮೋಕ್ಷಹೊಂದಿದನಂತರ ಆರುನೂರೈದು ವರ್ಷವುಂ ಐದು ತಿಂಗಳುಂ ಕಳೆದ ಮೇಲೆ, ಶಕರಾಜನು ಹುಟ್ಟಿದನು. ವರ್ಷಂ ( ೬೦೫ ) ಮಾಸ ೫.

ಗಾಹೆ ॥ ಪಣಛಸ್ಸವಸ್ಸಂಪಣ ಮಾಸಜುದಂ ಗಮಿಯ ವೀರ ಣಿಬ್ಬುದದೇ।
ಸಗರಾಜೋತೋಕರತ್ತಿ ಚಪುಣವತಿ ಸಹಸ್ಸದಿಯ ಸಗಮಾಸಂ ॥ ೨೧ ॥

ಆ ಅರಸನಿಂ ಬಳಿಕ ಕಲ್ಕಿಯುತ್ಪತ್ತಿ ವರ್ಷಂಗಳು ೩೯೪ ಮಾಸಂ ೭ ಮತ್ತಂ ಸಘಾತ ದವರು ಹೇಳುವ ಶಕನಕಾಲ ಹ್ಯಾಗೆಂದರೆ:—

ಆರ್ಯೆ ॥ ಷಟ್ಟತನವವರುಷೇಭ್ಯಃ। ಸಂಜಾತೇಭ್ಯಃ ಶಕಃ ಸಮುತ್ಪನ್ನಃ।
ವರ್ಧಮಾನ ಭಗವತಿ ಮೋಕ್ಷಗತೇ ಸ್ವೇತಪಟದೃಷ್ಟ್ಯಾ ॥

ಗಾಹೆ ॥ ಪಚ್ಛಕ್ಥಸತ್ತಣವಕೇವದಿ ಸೇತಿದೇದು ಪಂಚಮಾಸಹೀಯೇ।
ಜಿಣಣಿಬ್ಬುಯದ ಜಾದಾಸಗರಾವೋ ಜಾಬುತಿಯಮರೆ ॥ ೨೨ ॥
ವರ್ಷಂಗಳು ( ೭೮೫ ) ಮಾಸ ೫.

ಆರ್ಯೆ ॥ತ್ರಿಕನವಕ ಸಪ್ತಚತುರೇಕ ವರ್ಷಸಂಖ್ಯಾಭಿರಜನಿ ಶಕರಾಜಃ।
ಶ್ರೀವರ್ಧಮಾನ ಭಗವತಿ ಮೋಕ್ಷಗತೇ ಕಾಷ್ಟಸಂಗಮಂತೇ ॥
ವರ್ಷಂಗಳ೯೩ ಚಂದ್ರತುರ್ಯ ಜಲಧಿಸಂಖ್ಯಾಃ ಹಿತೇಸವಷ್ಯೈಸ್ಸ ಕೋರ್ಧನವಮಾಸ್ಯೈಃ
ವುಡಿಪದಿವರ್ಧಮಾನೇ ಮೋಕ್ಷಗತೇ ದ್ರವಿಳಸಂಘಮತೇ ॥

ವರ್ಷ ೪೬೧ ಮಾಸ ಅರ್ಧ ೧೫,

ಈ ರೀತಿಯಾಗಿ ಹೇಳಿದ ಮತಂಗಳಲ್ಲಿ ಮೊದಲಗಾಥಾಭಿಪ್ರಾಯದ ಶ್ರೀಸಂಘಮತವೇ ಸತ್ಯವು. ಅದು ಹ್ಯಾಗಂದರೆ:—ಆ ವರ್ಧಮಾನಸ್ವಾಮಿಗಳ ಪ್ರಥಮಕಾಲದಾಯುಷ್ಯಂ ನೂರಿಪ್ಪತ್ತು ( ೧೨೦ ) ವರ್ಷಂ, ಆ ಪಂಚಮಕಾಲದನ್ತ್ಯದಾಯುಷ್ಯಮಿಪ್ಪತ್ತು ವರ್ಷಂ ( ೨೦ ) ೨೧೦ ಅದನಂದಂದಿನ ವರುಷಗಳನ್ನು ಗುಣಿಸಿ ಬಂದ ಲಬ್ಧ ವರ್ಷಗಳನ್ನು ನಾನೂರಿಪ್ಪತ್ತು ( ೪೨೦ ) ವರ್ಷಗಳಲ್ಲಿ ಕಳೆದರೆ ಅಂದಿನಾಯುಷ್ಯ ಪ್ರಮಾಣವಾಗುವದರಿಂದ ಸತ್ಯವೆಂದು ನಂಬುವದು.

ಗಾಹೆ ॥ ಬಿಸುತ್ತರ ವಾಸಸದೇವಿಸಟೀವಾಸಾಣಿ ಸೋಹಿಲೂಣತದಾ।
ಯಿನಿವಿಸಹಸ್ಸೇ ಹಿಂಭಜಿದೇ ಆವೂಣಖಯವಡ್ಡೇ ॥ ೨೩ ॥
ಸಗಣಿವವಾಸ ಜುದಾಣಂ ಚವುಸದ ಇಗಿಸಠ್ಠಿವಾಸ ಸಹುದೀಣೆ।
ದಹಜುದದೋ ಸಯಹರಿದೇಲದ್ಧಂ ಸೋಹೇಂಜಬಿ ಊಣಸಠ್ಠಿ ಎ ॥ ೨೪ ॥

ಮತ್ತೂ ಪಾಟಲೀಪುತ್ರನಗರದ ಶಿಶುಪಾಲಂಗಂ ಚತುರ್ಮುಖನೆಂಬಂ ಪ್ರಥಮ ಕಲ್ಕಿಗೆ ಪ್ಪತ್ತು ( ೭೦ ) ಸಂವತ್ಸರಾಯುಷ್ಯವು, ಇಪ್ಪತ್ತೆಂಟು ವರ್ಷ ಕುಮಾರಕಾಲ ಕಳೆಯಲು, ಆ ಆಚಾರಾಂಗಧರರಿಂ ಬಳಿಕ ಇನ್ನೂರೆಪ್ಪತ್ತೈದು ( ೨೭೫ ) ಸಂವತ್ಸರಾನನ್ತರಂ ಇಂದ್ರಪು ರದೋಳ್ಪಟ್ಟಂಗಟ್ಟಲು ಆತನು ತಕ್ಕ ದೇಶವನ್ನು ಸಾಧಿಸಿ ಬಳಿಕ ಆಕಾಲದಲ್ಲೋರ್ವ ಜಿನಮು ನಿಯ ಪ್ರಥಮಪಾನೀಯಂ ಸುಂಕಮೆಂದು ಬೇಡಲವರು ಕೊಟ್ಟು ಅಂತರಾಯವನ್ನು ಮಾಡಲು

ಅವಧಿಜ್ಞಾನಂ ಪುಟ್ಟುಗುಮಿತ್ತಲಸುರದೇವಂ ಮುನಿಯುಪಸರ್ಗವನ್ನು ತಿಳಿದು ಬಂದಾಕಾಲದ ಕಲ್ಕಿಯನ್ನು ವಜ್ರಾಯುಧದಿಂದ ಹೊಡೆದು ಕೊಲ್ಲಲು, ಅವನ ಮಗನಾದ ಅಜಿತಂಜಯನು ಹೆದರಿ ತನ್ನ ಹೆಂಡತಿಯಾದ ಅಚೇಲೆವೆರಸು ಆ ಅಸುರದೇವನನ್ನು ಶರಣುಹೊಂದಲು ಆ ಅಜಿತಂಜಯನನ್ನು ಸಮ್ಯಕ್ತ್ವದಲ್ಲಿಯೂ ರಾಜ್ಯದಲ್ಲಿಯೂ ಇರಿಸಿದನು. ಅಲ್ಲಿಂ ಬಳಿಕ್ಕಂ ಸಮ್ಯಗ್‌ಧರ್ಮಂ ಕ್ರಮಹಾನಿಯಿಂ ಪ್ರವರ್ತಿಸುಗುಂ ಇನ್ನೂಸಾಸಿರ ವರ್ಷಕ್ಕೊಬ್ಬ ಕಲ್ಕಿಯುಂ ಆಯ್ನೂರು ವರ್ಷಕ್ಕೊಬ್ಬ ಉಪಕಲ್ಕಿಯುಂ ಆಗುವರು. ಆ ಕಲ್ಕಿಗಳ ಕಾಲದಲ್ಲಿ ಒಬ್ಬ ಸಾಧುಗಳಿಗೆ ಅವಧಿಜ್ಞಾನವು ಹುಟ್ಟುವದು. ಈ ದುಷ್ಷಮಕಾಲ ಪ್ರಭಾವದಿಂದ ವಸ್ತುಗಳೆಲ್ಲಾ ನಿಸ್ಸಾರಗಳಾಗುವವು. ರಾಜರಿಂದಲೂ ಚೋರಾರಿಮಾರಿಘೋರೋಪಸರ್ಗಗಳುಂ ಅಧಿಕವಾಗುವವು. ಮತ್ತೂ ಕಡೆಯ ಕೇವಲಿಯಾದ ಶ್ರೀಧರನು ಕುಂಡಗಿರಿಯಲ್ಲಿ ಮುಕ್ತನಾದನು. ಚಾರಣರಲ್ಲಿ, ಪಾರ್ಶ್ವಚಂದ್ರನುಂ, ಪ್ರಜ್ಞಾಶ್ರವಣರಲ್ಲಿ, ವಜ್ರಯಶನುಂ, ಅವಧಿಜ್ಞಾನಗಳಲ್ಲಿ, ಶ್ರೀರಾಮನುಂ, ಎಂಬಿವರಿಂದ ಬಳಿಕ ಆ ರೀತಿಯಾದವರಿಲ್ಲ. ಮತ್ತು ಚಂದ್ರಗುಪ್ತನೆಂಬ ಮಕುಟಬದ್ಧನು ದಿಕ್ಷೆತೆಗೆದುಕೊಂಡನು. ಅವನ ತರುವಾಯ ಮಕುಟಬದ್ಧರಿಗೆ ದೀಕ್ಷೆಯಿಲ್ಲ.

ಇಂದ್ರವಜ್ರೆ ॥ ಸಿಲೇಖಾಸಂಬಣಂ । ಬಲೇಣಬಾಹುಂ ಪತ್ತಿಯಾವಿಣ ।
ಕುಲಕ್ಕಮೇಣ ಇಚ್ಛೇವ ಮಾದೀಹಿ ॥
ಗುಣಪಹಿಮುಕ್ಕಾ ಸೇವತ್ತಿ ಣಿಚಣ್ಣ ಸುಹಂಲಭಂತೇ ॥

ಅರ್ಥ—ಶೀಲ, ಸತ್ಯ, ಬಲ, ಬೋಧೋತ್ಪತ್ತಿ, ತೇಜ, ಕುಲ, ಕ್ರಮಾದಿಗುಣಗಳನ್ನು ಬಿಟ್ಟು, ನೀಚರ ಸೇವೆಮಾಡಿ ಸುಖವನ್ನು ಪಡೆಯುವರು. ಮತ್ತೂ ಪರಮೋತ್ಕೃಷ್ಟ ಸಂಯತರು ಇಲ್ಲದ್ದರಿಂದ ಚಾರಣಋಷಿಯರುಂ, ದೇವತೆಗಳುಂ, ವಿದ್ಯಾಧರರುಂ, ಅವಧಿಜ್ಞಾನಿಗಳುಂ, ಮನಃಪರ್ಯಯಜ್ಞಾನಿಗಳುಂ ಈ ಕ್ಷೇತ್ರಕ್ಕೆ ಬರುವದಿಲ್ಲ. ಅತಿವೃಷ್ಟಿಯುಂ, ಅನಾವೃಷ್ಟಿಯುಂ, ಸ್ವಚಕ್ರವುಂ, ಪರಚಕ್ರವುಂ, ಮೂಷಕ, ಶಲಭಾದಿಗಳ ದೆಸೆಯಿಂದ ಪ್ರಜೆಗಳಿಗೆ ಪೀಡೆಯು ವರ್ತಿಸುವದು. ಪುನಃ ಆ ಕಾಲದ ಕಡೆಯಲ್ಲಿ ಇಪ್ಪತ್ತೊಂದನೆಯ (೨೧) ಜಲಮಂಡಲನೆಂಬ ಕಲ್ಕಿಯು ಹುಟ್ಟುವನು. ಆ ಕಾಲದಲ್ಲಿ ವೀರಾಂಗದನೆಂಬ ಜಿನಮುನಿಯೂ, ಸರ್ವಶ್ರೀಯೆಂಬರ್ಜಿಕೆಯುಂ, ಅಗ್ಗಿಲನೆಂಬ ಶ್ರಾವಕನುಂ, ಪಂಗುಶ್ರೀಯೆಂಬ ಶ್ರಾವಕಿಯುಂ ಉಂಟಾಗುವರು. ಆಗ ಆ ಕಲ್ಕಿಯು ತನಗೆ ತಕ್ಕ ಭೂಮಿಯನ್ನು ಸಾಧಿಸಿ, ನನಗಿನ್ನಸಾಧ್ಯರಾರೆಂದು ತನ್ನ ಮಂತ್ರಿಯನ್ನು ಕೇಳಲು ಮಂತ್ರಿಯು ಜಿನಮುನಿಗಳು ಮಾತ್ರ ಇರುತ್ತಾರೆಂದು ಹೇಳಲು, ಆತನ ನಡವಳಿಕೆ ಹ್ಯಾಗೆ ಹೇಳೆನ್ನಲು, ಬಾಹ್ಯಾಭ್ಯಂತರ ಪರಿಗ್ರಹರಹಿತನುಂ, ಸಕಲ ಸಂಯಮ ಸಂಪನ್ನನುಂ ಸ್ವಾತ್ಮಧ್ಯಾನನಿರತರುಂ, ಶರೀರಸಂರಕ್ಷಣಾರ್ಥಂ ಮಧ್ಯಾಹ್ನಕಾಲದಲ್ಲಿ ಪರಗೃಹದಲ್ಲಿ ನಿರವದ್ಯವಾದ ಆಹಾರವನ್ನು ನಿರ್ವಿಘ್ನವಾಗೆ ಪಾಣಿಪುಟದಲ್ಲಿ ಚರಿಗೆಮಾಡುವನೆಂದು ಹೇಳಲು, ಅವರ ಪ್ರಥಮಪಾನೆಯನ್ನು ಸುಂಕಕೊಡಬೇಕೆಂದು ಕೇಳಲು, ಅವರು ಆಹಾರವನ್ನು ಬಿಟ್ಟು ಅಂತರಾಯವನ್ನು ಮಾಡಿ, ನಿಜನಿವಾಸಕ್ಕೆ ಹೋಗಲು ಆಗ ಅವರಿಗವಧಿಜ್ಞಾನ ಹುಟ್ಟಲು ಒಡನೆ ದುಷ್ಷಮಕಾಲದ ಅವಸಾನವನ್ನು ತಿಳಿದು ಆ ಚಾತುರ್ವರ್ಣಕ್ಕೆ ತಿಳಿಸಿ ನಮಗೆಲ್ಲರಿಗೂ ಮೂರುದಿನದ ಆಯುಷ್ಯವುಂಟೆಂದು ಹೇಳಲು, ಆ ನಾಲ್ಕುಜನಗಳುಂ ಆಹಾರ ಶರೀ

ರನಿವೃತ್ತಿರೂಪವಾದ ಸಕಲ ಸಂನ್ಯಸನವನ್ನು ಮಾಡಿ, ಕಾರ್ತಿಕದ ಕೃಷ್ಣಾಂತ್ಯದ ಸ್ವಾತಿ ನಕ್ಷತ್ರದ ಸೂರ್ಯೋದಯದಲ್ಲಿ ನಾಲ್ಕುಜನಗಳೂ ಸಮಾಧಿಯನ್ನು ಪಡೆಯಲು, ಆ ಮುನಿಯು ಸೌಧರ್ಮಕಲ್ಪದಲ್ಲಿ ಸಾಗರೋಪಮ ಸ್ಥಿತಿಯನ್ನುಳ್ಳ ದೇವನಾಗುವನು, ಉಳಿದ ಮೂವರು ಸಾಧಿಕ ಪಲ್ಯೋಪಮ ಸ್ಥಿತಿಯನ್ನುಳ್ಳವರಾಗಿ, ಆ ಕಲ್ಪದಲ್ಲಿಯೇ ಹುಟ್ಟುವರು. ಆ ದಿವಸದ ಪ್ರಾತಃಕಾಲದಲ್ಲಿ ಅವರ ಮರಣದಿಂದ ಧರ್ಮನಾಶವುಂ, ಮಧ್ಯಾಹ್ನದಲ್ಲಿ ಅಸುರದೇವನಿಂದ ಆ ಕಲ್ಕಿರಾಜನು ಸಾಯಲು, ರಾಜನಾಶನವುಂ, ಪುದ್ಗಲನಿಸ್ಸಾರತೆಯುಂ, ಅಪರಾಹ್ಣದಲ್ಲಿ ಅಗ್ನಿಯೂ ಕೂಡಾ ನಾಶವಾಗುವದು.

ಗಾಹೆ ॥ ಪೊಗ್ಗಳವಿರುಖ್ಖಾದೋಜಳಣಿ ದಂಮೇಣಿರಾಸಯೇ ಣಹದೇ ।
ಅಸುರವೈಣ್ಣಾಣರಿಂದೇ ಸಯಳಾಲೋ ಲೋಹವೇ ಅದ್ದಾ ॥ ೨೫ ॥
ಎರಮಿಗಿ ವಿಸಕಕ್ಕಿತೆತ್ತಿಯಾಯಾಯ ಪುಂಮಾರಿ ।
ಜಂಮುಂತಿದಂಮದೋಹ ಜಳಣಿಹಿ ಉವಮಾಣಿ ಆಉಜುದಾ ॥ ೨೬ ॥

ಈ ಏಕವಿಂಶತಿ ( ೨೧ ) ಕಲ್ಕಿಗಳಿಗೆ ಉಪಕಲ್ಕಿಗಳು ಏಕವಿಂಶತಿ ( ೨೧ ) ಎಂಬ ಈ ನಲವತ್ತೆರಡು ( ೪೨ ) ಜನಗಳುಂ ಸಾಗರೋಪಮಸ್ಥಿತಿಯನ್ನುಳ್ಳ ಪ್ರಥಮ ನರಕದಲ್ಲಿ ಹುಟ್ಟುವರು. ಮತ್ತಂ

ಗಾಹೆ॥ ಯೇಥ್ಥ ಉದಾಣಿರುಯದುಗಂಣಿರಯರೇ ರಿಖ್ಖಾದುಜಂಣಮೇಥಹವೇ ।
ದೋವಜಳದಾಯಿಮೇಘಾ ಭೂಸ್ಸಾರಾಣರಾತಿಬ್ಬಾ ॥ ೨೭ ॥

ಅರ್ಥ—ಇಲ್ಲಿ ಮೃತರಾದವರು ನರಕತಿರ್ಯಗ್ಗತಿಗಳಲ್ಲಿ ಹುಟ್ಟುವರು, ನರಕತಿರ್ಯಗ್ಗತಿಯಿಂದ ಬಂದವರು ಇಲ್ಲಿ ಹುಟ್ಟುವರು. ಅಲ್ಪವೃಷ್ಟಿಯುಂ ಭೂಮಿನಿಸ್ಸಾರವುಂ ನರತ್ತಿಬ್ರರುಂ ಆಗುವರು.

ಗಾಹೆ ॥ ತದಿಯಾದಿಸುತಿಸಕ್ಕಾಲೇತಿಯುವಾಸತಮಾಸಪಖ್ಖ ಪರಿಸೇಸೇ ।
ವಸಹೋವೀರೋಸಿದ್ಧೋಕತ್ತಿಮುಖಥಥ್ಥ ಕಾಲಪಾರಬ್ಭೋ ॥ ೨೮ ॥

ಅರ್ಥ:—ತೃತೀಯಕಾಲದ ಕಡೆಯಲ್ಲಿ ಮೂರು ವರುಷವುಂ, ಎಂಟು ತಿಂಗಳುಂ, ಹದಿನೈದು ದಿವಸ ಉಳಿದಿರುವಾಗ ವೃಷಭತೀರ್ಥಕರು ಮುಕ್ತರಾದರು. ಚತುರ್ಥಕಾಲದ ಅಂತ್ಯದಲ್ಲಿ ನಿನ್ನಂತೆ ಮೂರು ವರ್ಷವುಂ, ಎಂಟು ತಿಂಗಳುಂ ಹದಿನೈದು ದಿವಸ ಉಳಿದಿರುವ ಕಾಲದಲ್ಲಿ ವರ್ಧಮಾನತೀರ್ಥಕರು ಮುಕ್ತರಾದರು. ಪಂಚಮಕಾಲದ ಕಡೆಯಲ್ಲಿ ಮೂರು ವರ್ಷವುಂ, ಎಂಟು ತಿಂಗಳುಂ, ಹದಿನೈದು ದಿವಸ ಉಳಿದಲ್ಲಿ ಕಲ್ಕಿಯು ಮೃತನಾಗುವನು, ಆಗ ಷಷ್ಟಮಕಾಲ ಪ್ರಾರಂಭವಾಗುವದು. ಪೂರ್ವತೀರ್ಥಕರ ಕಾಲದೊಳಪರತೀರ್ಥಕರ ಆಯುಷ್ಯವುಂಟೆಂದರಿವುದು.

ಗಾಹೆ ॥ ಉಣವಂಣದಿವಸವಿರಹಿದಯಿಗಿವಿಸಸಹಸ್ಸವಾಸವಾಸವಿಛೇದೇ ।
ಜಂತುಚ್ಛಯಕರಕಾಲಾಪಳಯೊತ್ತಿಪಯಟ್ಟದೇಘೋರೋ ॥ ೨೯ ॥

ನಾಲ್ವತ್ತೊಂಭತ್ತು ೪೯ ದಿನ ಬಾಕಿ ಉಳಿದು ಇಪ್ಪತ್ತೊಂದು ಸಾವಿರ (೨೧೦೦೦) ವರ್ಷ ಕಳಿಯಲು, ಪ್ರಾಣಿಗಳಿಗೆ ಭಯಂಕರವುಂಟಾಗುವ ಘೋರತರವಾದ ಪ್ರಳಯಕಾಲವು ಪ್ರವರ್ತಿಸುವುದು.

ಶ್ಲೋಕ॥ ಶ್ಯಾಮೋಪಾರ್ಶ್ವಸುಪಾರ್ಶ್ವದ್ವೌ ನೀಲಾಂಭೌ ನೇಮಿಸುವ್ರತೌ ॥
ಚಂದ್ರದಸ್ತಾಸಿತೌಸೋಣೌ ಪದ್ಮಪೂಜ್ಯೌಪರೇಪರೇ ॥ ೧ ॥
ಶೇಷಾಷೋಡಶಹೇಮಾಭಾಃ ಕುಮಾರಾಃ ಪಂಚದೀಕ್ಷಕಾಃ ॥
ವಾಸುಪೂಜ್ಯಜಿನೋಮಲ್ಲಿ ನೇಮಿಃ ಪಾರ್ಶ್ವೋಥಸನ್ಮತಿಃ ॥ ೨ ॥
ವೀರಮಥವರ್ಧಮಾನಂ ಸನ್ಮತಿನಾಥಂ ಚ ಮಹತಿಮಹವೀರಂ ॥
ಹರಿಪಿರ್ಥ್ವಸಂಗಮಚಾರಣಫಣಿರುಕೃತಾಭಿದಾನಮಹಮಭಿವಂದೇ ॥ ೩ ॥
ವೀರೋನಾಥ ಕುಲೋದ್ಭೂತಃ ಪಾರ್ಶ್ವಸ್ತೂಗ್ರವಂಶಜಃ ॥
ಹರಿವಂಶಾಂಬರಾರ್ಕೋದ್ವೌನೇಮಿಶಮುನಿಸುವ್ರತೌ ॥ ೪ ॥
ಧರ್ಮಕುಂಥರತೀರ್ಥೇಶಾಕುರುವಂಶೋದ್ಭವಾಸ್ತ್ರಯಃ ॥
ಇಕ್ಷ್ವಾಕುಕುಲಸಂಭೂತಾಃ ಶೇಷಾಸಪ್ತದಶೇಸಿನಃ ॥ ೫ ॥
ವೃಷಭಸ್ಯವಾಸುಪೂಜ್ಯಸ್ಯ ನೇಮೇಃ ಪರ್ಯ್ಯಂಕಬಂಧತಃ ॥
ಕಾಯೋತ್ಸರ್ಗಸ್ಥಿತೀನಾಂತು ಸಿದ್ಧಿಃ ಶೇಷಜಿನೇಶಿನಾಂ ॥ ೬ ॥

## ಸೂತ್ರಂ॥ ಚತುಃಸ್ತ್ರಿಂಶದತಿಶಯಾಃ ॥ ೧೮ ॥

ಅರ್ಥ—ಯೆಲ್ಲಾಕಾಲವುಂ, ೧ ನಿಶ್ವೇದತ್ವವುಂ, ೨ ನಿರ್ಮಲತ್ವವುಂ, ೩ ಕ್ಷೀರಗೌರರುಧಿರತ್ವವುಂ, ೪ ಸಮಚತುರಸ್ರಸಂಸ್ಥಾನವುಂ, ೫ ವಜ್ರವೃಷಭನಾರಾಚಸಂಹನನವುಂ, ೬ ಸುರೂಪತ್ವವುಂ, ೭ ಸುರಭಿಗಂಧತ್ವವುಂ, ೮ ಶುಭಲಕ್ಷಣತ್ವವುಂ, ೯ ಅಪ್ರಮಿತವೀರ್ಯವುಂ, ೧೦ ಪ್ರಿಯಹಿತವಾದಿತ್ವವುಂ. ಎಂದು ಸ್ವಭಾವಿಕಾತಿಶಯಗಳು ಹತ್ತುಂ.

೧ ಗವ್ಯೂತಿಶತಚತುಷ್ಟಯವುಂ, ೨ ಸುಭಿಕ್ಷತೆಯುಂ, ೩ ಗಗನಗಮನವುಂ, ೪ ಪ್ರಾಣಿಪೀಡೆಯಿಲ್ಲದಿರುವುದುಂ, ೫ ಕ್ಷುಧಾಬಾಧೆಯಿಲ್ಲದಿರುವುದುಂ, ೬ ಉಪಸರ್ಗಾಭಾವವುಂ, ೭ ಚತುರಾನನತ್ವವುಂ, ೮ ಸರ್ವವಿದ್ಯೇಶ್ವರತ್ವವುಂ, ೯ ಅಛ್ಛಾಯತ್ವವುಂ, ೧೦ ಅಪಕ್ಷ್ಮಸ್ಪಂದತ್ವವುಂ, ೧೧ ಸಮಪ್ರಸಿದ್ಧನಖಕೇಶತ್ವವುಂ, ಎಂದು ಘಾತಿಕ್ಷಯದಿಂದಾದತಿಶಯಗಳು ಹತ್ತುಂ.

೧ ಸರ್ವಾರ್ಧಮಾಗಧೀಯಭಾಷೆಯುಂ, ೨ ಸಮಸ್ತಪ್ರಾಣಿಗಳಿಗೆಲ್ಲಾ ತಮ್ಮ ತಮ್ಮ ವಿಷಯದಲ್ಲಿ ವೈರವನ್ನು ಬಿಟ್ಟು ಮಿತ್ರರಾಗಿರುವುದುಂ, ೩ ಆರು ಋತುಗಳ ತರುಲತಾಗುಲ್ಮಗಳೆಲ್ಲಾ ತಂತಮ್ಮ ಕಾಲದೊಳುಮೊಡಮೊಳೆಯಂತುರಿತ ಪಲ್ಲವಿತ ಕೊರಗಿತ ಕುಸುಮಿತ ಫಲಿತಂಗಳಾಗಿ ತೋರುವುದುಂ, ೪ ದರ್ಪಣಸದೃಶರತ್ನಮಯಭೂಮಿತಲವುಂ, ೫ ಸುರಭಿಗಂದಾನಿಲಯನುಂ, ೬ ಸಕಲಭುವನಜನಾನಂದವುಂ, ೭ ಮರುತ್ಕುಮಾರರಿಂದ ಉಪಶಮಿಸಲ್ಪಟ್ಟ ಧೂಳಿ ಕಂಟಕ ತೃಣಕೀಟಕಾದಿಗಳಿಲ್ಲದ ಒಂದು ಯೋಜನಾಂತರದ ಭೂಭಾಗವುಂ, ೮ ಸ್ತನಿತಕುಮಾರಕೃತ ಬಂಧುರಗಂಧೋದಕವೃಷ್ಟಿಯುಂ, ೯ ಅಡಿಯಿಡುವೆಡೆಗೆಲ್ಲಂ ಮುಂದೇಳು,

ಹಿಂದೇಳು ಸಹಸ್ರಪತ್ರಾಂಬುಜಂಗಳುಂ, ಫಲಭಾರಗಳಿಂದ ನಮ್ರಗಳಾಗಿ ಸೊಗಯಿಸುವ ಶಾಲಿವ್ರೀಹ್ಯಾದಿ ಸಮಸ್ತ ಸಸ್ಯಸಂಪತ್ತಿಯುಂ, ೧೦ ಶರತ್ಸಮಯ ಶರತ್ಸಲಿಲ ದಿಗಂತರಾಳಂ ಗಳುಂ, ೧೧ ಸುರವೃಂದಾಕರ ಪರಸ್ಪರಾಹ್ವಾನನಾದವುಂ, ೧೨ ಮುಂದೆ ನಡೆಯುವ ಧರ್ಮಚ ಕ್ರವುಂ, ಭೃಂಗಾರ, ಕಲಶ, ದರ್ಪಣ, ಛತ್ರ, ಚಾಮರ, ಧ್ವಜ, ಬಿಜ್ಜಣಿಗೆ, ಸಂಗಡರಿಗಗಳೆಂಬ ಅಷ್ಟಮಂಗಲಗಳೆಂಬ ದೈವಿಕಾತಿಶಯಗಳು ಹದಿನಾಲ್ಕುಂ, ಸ್ವಭಾವಿಕಗಳು ೧೦, ಘಾತಿಕ್ಷಯ ದಿಂದಾದವು ಹತ್ತುಂ. ಇವೆಲ್ಲಾ ಕೂಡಿ ಚತುಸ್ತ್ರಿಂಶ ( ೩೪ ) ಅತಿಶಯಗಳಾಗುವವು.

## ಸೂತ್ರಂ ॥ ಪಂಚಮಹಾಕಲ್ಯಾಣಾನಿ ॥ ೧೯ ॥

೧ ಗರ್ಭಾವತರಣ, ೨ ಜನ್ಮಾಭಿಷೇಕ, ೩ ಪರಿನಿಷ್ಕ್ರಮಣ, ೪ ಕೇವಲಜ್ಞಾನ, ೫ ನಿರ್ವಾಣವೆಂದು, ಐದು ಪಂಚಮಹಾಕಲ್ಯಾಣಗಳು.

ಗಾಹೆ ॥ ಸಬ್ಬಥ್ಥ ಸಿದ್ಧಿತಾಣಾ ಅವರಿಂಣಾ ಉಸಹಧಂಮ ಪಟದಿತಿಯಾ ।
ವಿಜೇಯಾಣದ್ದಣ ಅಜಿಯಾ ಚಂದಪ್ಪಹ ವೈಜಯಂತಾದು ॥ ೩೦ ॥

ಅಪರಾಜಿಯಾಬಿಹಾಣಾ ಅರ ಣಮಿ ಮಲ್ಲಿ ಮುಣಮಿಣಾಹಾ ।
ಅಸುರಾಯೇ ಜಯುನ್ತರಾಣಾ ಅರಣಜುಗಳಾಯ ಸುವಿಹಿಸಿಯ್ಯುಳಯಾ ॥ ೩೧ ॥

ಪುಪ್ಫುತ್ತರ ಬೇಹಂ ಅಣುತ ಸೇಯಂಸವಡ್ಡಮಾಣಾಜಿಣಾ ।
ವಿಕಳಾಯ ಸಹಸ್ಸಾರಾಪಾಣದಕಪ್ಪಾಯ ಸುರಬದೋವಾಸೋ ॥ ೩೨ ॥

ಹೇವಠಿಮುಂರುಮ ಉವರಿಮುಗೇ ವರಜಾಣ ಮಾಗದಾಮುಹಾಸತ್ತಾ ।
ಸಂಭವ ಸುಪಾಸಪವುಮಾಮುಹಸುಕ್ಕೇ ವಾಸುಪುಜ್ಜಜಿಣೋ ॥ ೩೩ ॥

ಅರ್ಥ—ಸ್ವರ್ಗಾವತರಣದಿಂ ಮುನ್ನರುದಿಂಗಳುಂಟೆನೆ, ದೇವೇಂದ್ರನು ಆಸನಕಂಪ ದಿಂದರಿದು ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿಮೊದಲಾದ ದೇವಿಯರನ್ನು ತೀರ್ಥಕರ್ತೃ ವಿನ ಜನನಿಗೆ ಗರ್ಭಶೋಧನೆಯನ್ನು ಮಾಡಲಿಕ್ಕೆ ಕಳುಹಿಸಿಕೊಟ್ಟು, ಕುಬೇರನನ್ನು ಪ್ರತಿದಿನ ಸವೂ ಮೂರುವರೆ ಕೋಟಿ ರತ್ನದ ಮಳೆಯನ್ನು ಮೂರು ಸಂಧ್ಯಾಕಾಲಗಳಲ್ಲಿಯೂ, ಹದಿ ನೈಯ್ದು ತಿಂಗಳವರಿಗೂ ಮಾಡಬೇಕೆಂದು ನೇಮಿಸಿದನು. ಬಳಿಕ್ಕಂ ಶುಭಗಳಾದ ೧ ಗಜೇಂ ದ್ರವುಂ, ೨ ವೃಷಭವುಂ, ೩ ಸಿಂಹದಮರಿಯುಂ, ೪ ಲಕ್ಷ್ಮಿಯುಂ, ೫ ಪೂತಲೆಯುಂ, ೬ ಚಂ ದ್ರನುಂ, ೭ ಆದಿತ್ಯನುಂ, ೮ ಮೀನುಗಳುಂ, ೯ ಪೂರ್ಣಕುಂಭವುಂ, ೧೦ ತಾವರೇಕೊಳವುಂ, ೧೧ ಸಮುದ್ರವುಂ, ೧೨ ಸಿಂಹವಿಷ್ಟರವುಂ, ೧೩ ದೇವವಿಮಾನವುಂ, ೧೪ ನಾಗಾಲಯವುಂ, ೧೫ ರತ್ನರಾಶಿಯುಂ, ೧೬ ಅಗ್ನಿಯುಂ, ಈ ಪ್ರಕಾರವಾದ ಷೋಡಶ ( ೧೬ ) ಸ್ವಪ್ನಪುರಸ್ಸರಂ ಗರ್ಭಾವತರಣವಾದ ದಿನಗಳು ಯಾವವುಗಳೆಂದರೆ:—

ಆಷಾಢ ಬಹುಳ ಬಿದಿಗೆ ಉತ್ತರಾಷಾಢ ನಕ್ಷತ್ರದಲ್ಲಿ ಆದಿ ಜೀನೇಶ್ವರನಿಗೆ ಆದಿಕಲ್ಯಾಣ ವಾಯಿತು ॥ ೧ ॥

ಜ್ಯೇಷ್ಠಮಾಸದ ಅಮಾವಾಸ್ಯೆಯ ರೋಹಿಣೀ ನಕ್ಷತ್ರದಲ್ಲಿ ಬೆಳಗಿನ ಝಾವದಲ್ಲಿ ಅಜಿತ ತೀರ್ಥಕರನು ಗರ್ಭಾವತರಣವನ್ನು ಮಾಡಿದನು ॥ ೨ ॥

ಫಾಲ್ಗುಣ ಶುದ್ಧ ಅಷ್ಟಮಿಯ ಮೃಗಶಿರಾನಕ್ಷತ್ರದಲ್ಲಿ ಶಂಭವಂ ಪ್ರಥಮ ಕಲ್ಯಾಣವನ್ನು ಹೊಂದಿದನು ॥ ೩ ॥

ವೈಶಾಖ ಶುದ್ಧ ಷಷ್ಠಿ ವಿಶಾಖಾನಕ್ಷತ್ರದಲ್ಲಿ ಅಭಿನಂದನಂ ಗರ್ಭಕ್ಕವತರಿಸಿದನು ॥ ೪ ॥

ಶ್ರಾವಣ ಶುದ್ಧ ಬಿದಿಗೆಯ ಬೆಳಗಿನ ಝಾವದ ಮಘಾನಕ್ಷತ್ರದಲ್ಲಿ ಸುಮತಿ ಜನ್ಮಸ್ಥನಾದನು ॥ ೫ ॥

ಮಾಘ ಬಹುಳ ಏಕಾದಶಿ ಚಿತ್ತೆಯಲ್ಲಿ ಪದ್ಮಪ್ರಭನು, ಪ್ರಥಮಕಲ್ಯಾಣ ಪ್ರಾಪ್ತನಾದನು ॥ ೬ ॥

ಭಾದ್ರಪದ ಶುಕ್ಲ ಅಷ್ಟಮಿ ವಿಶಾಖಾನಕ್ಷತ್ರದಲ್ಲಿ ಸುಪಾರ್ಶ್ವಂಗೆ ಜನ್ಮಕಲ್ಯಾಣವಾಯಿತು ॥ ೭ ॥

ಚೈತ್ರ ಬಹುಳ ಪಂಚಮಿ ಜ್ಯೇಷ್ಠಾನಕ್ಷತ್ರದಲ್ಲಿ ಚಂದ್ರಪ್ರಭಂ ಗರ್ಭಕ್ಕವತರಿಸಿದನು ॥೮॥

ಫಾಲ್ಗುಣ ಬಹುಳ ನವಮಿ ಮೂಲಾನಕ್ಷತ್ರದಲ್ಲಿ ಪುಷ್ಪದಂತಂ ಪೂರ್ವಕಲ್ಯಾಣವನ್ನು ಹೊಂದಿದನು ॥ ೯ ॥

ಚೈತ್ರ ಕೃಷ್ಣ ಅಷ್ಟಮಿ ಪೂರ್ವಾಷಾಢನಕ್ಷತ್ರದಲ್ಲಿ ಶೀತಲಂ ಭೂತಲಾವತಾರನಾದಂ ॥೧೦॥

ಜ್ಯೇಷ್ಠ ಕೃಷ್ಣ ಷಷ್ಠಿ ಶ್ರವಣನಕ್ಷತ್ರದಲ್ಲಿ ಶ್ರೇಯಾಂಸನು ತಾಯಗರ್ಭದಲ್ಲಿ ನೆಲಸಿದನು ॥ ೧೧ ॥

ಆಷಾಢ ಕೃಷ್ಣ ಷಷ್ಠಿ ಶತವಿಶಾಖೆಯಲ್ಲಿ ವಾಸುಪೂಜ್ಯನು ತ್ರಿದಿವಾವತಾರವನ್ನು ಮಾಡಿದನು ॥ ೧೨ ॥

ಜ್ಯೇಷ್ಠ ಬಹುಳ ದಶಮಿ ಉತ್ತರಾಭಾದ್ರಪಥೆಯಲ್ಲಿ ವಿಮಲಂ ನಾಕಚ್ಯುತನಾದನು ॥೧೩॥

ಕಾರ್ತೀಕ ಬಹುಳ ಪಾಡ್ಯರೇವತಿಯಲ್ಲಿ ಅನಂತಂ ಜನನಾವತಾರವನ್ನು ಮಾಡಿದನು ॥೧೪॥

ವೈಶಾಖ ಕೃಷ್ಣ ತ್ರಯೋದಶಿ ರೇವತೀ ನಕ್ಷತ್ರದಲ್ಲಿ ಧರ್ಮನಿಗೆ ಸ್ವರ್ಗಾಗಮನವಾಯಿತು ॥ ೧೫ ॥

ಭಾದ್ರಪಥ ಬಹುಳ ಸಪ್ತಮಿ ಭರಣಿಯಲ್ಲಿ ಶಾಂತಿಗಂತ್ಯಶರೀರ ಪ್ರಾಪ್ತಿಯಾಯಿತು ॥೧೬॥

ಶ್ರಾವಣ ಬಹುಳ ದಶಮಿ ಕೃತ್ತಿಕಾನಕ್ಷತ್ರದಲ್ಲಿ ಕುಂಥುಜಿನಂಗೆ ಊರ್ಧ್ವಲೋಕಾವತರಣವಾಯಿತು ॥ ೧೭ ॥

ಫಾಲ್ಗುಣ ಶುಕ್ಲ ತದಿಗೆ ರೇವತಿಯಲ್ಲಿ ಅರಪರಮೇಶ್ವರನಿಗೆ ಚರಮಶರೀರಧಾರಣೆಯಾಯಿತು ॥ ೧೮ ॥

ಚೈತ್ರ ಶುಕ್ಲ ಪಾಡ್ಯದ ಅಶ್ವಿನಿಯಲ್ಲಿ ಮಲ್ಲಿಜಿನಂಗೆ ಆದಿಕಲ್ಯಾಣವಾಯಿತು ॥ ೧೯ ॥

ಶ್ರಾವಣ ಬಹುಳ ಬಿದಿಗೆ ಶ್ರವಣರಿಕ್ಷೆಯಲ್ಲಿ ಮುನಿಸುವ್ರತಜಿನನಿಗೆ ಗರ್ಭಾವತರಣವಾಯಿತು ॥ ೨೦ ॥

ಆಶ್ವೀಜ ಬಹಳ ಅಶ್ವಿನೀ ನಕ್ಷತ್ರದಲ್ಲಿ ನಮಿನಾಥನಿಗೆ ಸುಮನಲೋಕಾವತರಣವಾಯಿತು ॥ ೨೧ ॥

ಕಾರ್ತೀಕ ಶುಕ್ಲ ಷಷ್ಠಿ ಉತ್ತರಾಷಾಢದಲ್ಲಿ ನೇಮಿಸ್ವಾಮಿ ಭೂಮಿಗವತರಿಸಿದನು॥೨೨॥

ವೈಶಾಖ ಕೃಷ್ಣ ದ್ವಿತೀಯ ವಿಶಾಖಾನಕ್ಷತ್ರದಲ್ಲಿ ಪಾರ್ಶ್ವಂ ಧರಣಿಗವತರಿಸಿದನು ॥೨೩॥
ಆಷಾಢ ಶುಕ್ಲ ಷಷ್ಠಿಯ ಉತ್ತರಾನಕ್ಷತ್ರದಲ್ಲಿ ವರ್ಧಮಾನಜಿನನು ಊರ್ಧ್ವಲೋಕ ದಿಂದ ಧರಣಿಗವತರಿಸಿದನು ॥ ೨೪ ॥

ಈ ರೀತಿ ಗರ್ಭಾವತರಣವಾಯಿತು. ಅನಂತರ ನವಮಾಸಾವಸಾನದಲ್ಲಿ ಮತಿ, ಶ್ರುತಿ, ಅವಧಿಗಳೆಂಬ ತ್ರಿಜ್ಞಾನಧರನಾಗಿ ಚೈತ್ರಮಾಸದ ಕೃಷ್ಣಪಕ್ಷದ ನವಮಿ ಉತ್ತರಾಷಾಢ ನಕ್ಷತ್ರ ದಲ್ಲಿ ಆದಿಜಿನೇಶ್ವರನ ಜನ್ಮಕಲ್ಯಾಣಮಹೋತ್ಸವವು. ॥ ೧ ॥

ಮಾಘಶುಕ್ಲ ದಶಮಿ ರೋಹಿಣಿಯಲ್ಲಿ ಅಜಿತಜಿನ ಜನನಂ. ॥ ೨ ॥
ಮಾರ್ಗಶಿರ ಪೌರ್ಣಮಿ ಮೃಗಶಿರೆಯಲ್ಲಿ ಶಂಭವಸ್ವಾಮಿ ಹುಟ್ಟಿದನು. ॥ ೩ ॥
ಮಾಘ ಶುಕ್ಲ ದ್ವಾದಶಿ ಪುನರ್ವಸುವಿನಲ್ಲಿ ಅಭಿನಂದನೋತ್ಪತ್ತಿಯು ॥ ೪ ॥
ಚೈತ್ರ ಶುಕ್ಲ ಏಕಾದಶಿ ಚಿತ್ತೆಯಲ್ಲಿ ಸುಮತಿಗೆ ಜನ್ಮಾಭಿಷೇಕವಾಯ್ತು ॥ ೫ ॥
ಕಾರ್ತಿಕ ಕೃಷ್ಣ ತ್ರಯೋದಶಿ ಚಿತ್ತೆಯಲ್ಲಿ ಪದ್ಮಪ್ರಭಂ ಪ್ರಭವಿಸಿದನು ॥ ೬ ॥
ಜ್ಯೇಷ್ಠ ಶುಕ್ಲ ದ್ವಾದಶಿ ವಿಶಾಖೆಯಲ್ಲಿ ಸುಪಾರ್ಶ್ವಂ ಪ್ರಕಟನಾದನು ॥ ೭ ॥
ಪುಷ್ಯ ಕೃಷ್ಣೇಕಾದಶಿ ಅನುರಾಧೆಯಲ್ಲಿ ಚಂದ್ರಪ್ರಭಂ ಜನಿಸಿದನು ॥ ೮ ॥
ಮಾರ್ಗಶಿರ ಶುಕ್ಲ ಪಾಡ್ಯ ಮೂಲಾನಕ್ಷತ್ರದಲ್ಲಿ ಸುವಿಧಿ ಜಿನನುದಿಸಿದನು ॥ ೯ ॥
ಮಾಘ ಕೃಷ್ಣ ದ್ವಾದಶಿ ಪೂರ್ವಾಷಾಢದಲ್ಲಿ ಶೀತಲಂ ಜಾತನಾದನು ॥ ೧೦ ॥
ಫಾಲ್ಗುಣ ಕೃಷ್ಣೇಕಾದಶಿಯಲ್ಲಿ ಶ್ರವಣದಲ್ಲಿ ಶ್ರೇಯಾಂಸಂ ಜನಿಸಿದನು ॥ ೧೧ ॥
ಫಾಲ್ಗುಣ ಶುಕ್ಲ ೧೪ ವಿಶಾಖೆಯಲ್ಲಿ ವಾಸುಪೂಜ್ಯಂಗೆ ಜನ್ಮಕಲ್ಯಾಣವಾಯ್ತು ॥ ೧೨ ॥
ಮಾಘ ಶುಕ್ಲ ೧೪ ಪೂರ್ವಾಭಾದ್ರಪದೆಯಲ್ಲಿ ವಿಮಲಜಿನನುತ್ಪನ್ನನಾದನು ॥ ೧೩ ॥
ಜ್ಯೇಷ್ಠ ಕೃಷ್ಣ ೧೨ ರೇವತಿಯಲ್ಲಿ ಅನನ್ತನಾಥನು ಉದಯಿಸಿದನು ॥ ೧೪ ॥
ಮಾಘ ಶು. ೧೨ ಪುಷ್ಯೆಯಲ್ಲಿ ಧರ್ಮ ಜನ್ಮಾಭಿಷೇಕಕಲ್ಯಾಣ ಹೊಂದಿದನು ॥ ೧೫ ॥
ಜ್ಯೇಷ್ಠ ಕೃ. ೧೨ ಭರಣಿಯಲ್ಲಿ ಶಾಂತಿ ಜಿನೋದಯವಾದನು ॥ ೧೬ ॥
ವೈಶಾಖ ಶು. ೧ ಕೃತ್ತಿಕೆಯಲ್ಲಿ ಕುಂಥುಜಿನನು ಸಂಭವಿಸಿದನು ॥ ೧೭ ॥
ಮಾರ್ಗಶಿರ ಶು. ೧೪ ರೋಹಿಣಿಯಲ್ಲಿ ಅರಜಿನ ಜನ್ಮಕಲ್ಯಾಣಂ ॥ ೧೮ ॥
ಮಾರ್ಗಶಿರ ಶು. ೧೧ ಅಶ್ವಿನಿಯಲ್ಲಿ ಮಲ್ಲಿಜಿನೋದಯಂ ॥ ೧೯ ॥
ಚೈತ್ರ ಬ. ೫ ಶ್ರವಣರಿಕ್ಷೆಯಲ್ಲಿ ಮುನಿಸುವ್ರತಜಿನಜನನಂ ॥ ೨೦ ॥
ಆಷಾಢ ಬ. ೧೦ ಅಶ್ವಿನಿಯಲ್ಲಿ ನಮಿಸ್ವಾಮಿ ಸಂಭೂತಿಯುಂ ॥ ೨೧ ॥
ಶ್ರಾವಣ ಶು. ೬ ಚಿತ್ತೆಯಲ್ಲಿ ನೇಮಿಜಿನರ ಜನ್ಮಕಲ್ಯಾಣತ್ವಂ ॥ ೨೨ ॥
ಪುಷ್ಯ ಕೃಷ್ಣೇಕಾದಶಿ ವಿಶಾಖೆಯಲ್ಲಿ ಪಾರ್ಶ್ವಜಿನೋತ್ಪತ್ತಿಯುಂ ॥ ೨೩ ॥
ಚೈತ್ರ ಶುಕ್ಲ ತ್ರಯೋದಶಿಯುತ್ತರೆಯಲ್ಲಿ ವೀರಜಿನಜನನಂ ॥ ೨೪ ॥

ಮತ್ತಂ ಈ ತೀರ್ಥಕರು ಹುಟ್ಟಿದುದನ್ನು ಶಂಖಧ್ವನಿಯಿಂದ ಭವನವಾಸಿಗರುಂ ಪಟಹ ರವದಿಂ—ವ್ಯಂತರಿಗರುಂ ಸಿಂಹಧ್ವನಿಯಿಂದ ಜ್ಯೋತಿಷ್ಕರುಂ ಘಂಟಾನಾದದಿಂದ, ಕಲ್ಪವಾಸಿ ಗರುಂ ತಿಳಿದು ತಮ್ಮ ಸಿಂಹಾಸನದಿಂದೆದ್ದು ಏಳಡಿಯನ್ನು ನಡೆದು ಸರ್ವಾಂಗಪ್ರಣತರಾಗಿ ತಮ್ಮ

ನೆಲೆಯಿಂದ ಹೊರಟು ಬಂದು ಚತುರ್ನಿಕಾಯಂ ಜಿನಶಿಶುವನ್ನು ಐರಾವತವೆಂಬ ಆನೆಯ ಮೇಲೇರಿಸಿಕೊಂಡು ಹೋಗಿ ಮಂದರಮಹೀಧರದ ಪಾಂಡುಕಶಿಲಾತಲವೇ ಮಣೆಯಾಗೆ, ದೇವೇಂದ್ರನೇ ಮಜ್ಜನತಳ್ಪನಾಗೆ, ಕ್ಷೀರವಾರಾಸಿಯ ನೀರೇ ಮಜ್ಜನ ಜಲವಾಗೆ, ದೇವಾಂಗನೆಯರೇ ಘಟರಾಶಿಯರಾಗೆ, ಜನ್ಮಾಭಿಷೇಕಕಲ್ಯಾಣವನ್ನು ಹೊಂದಿ ನಿಸ್ವೇದತ್ವಾದಿ ಸ್ವಭಾವಾತಿಶಯದೊಳು ಕೂಡಿದರು.

ಇಂದ್ರವಜ್ರೆ ॥ ದಮ್ಮಾರಕುಂಥೂ ಕುದುವಸ್ಸಜಾತಾ।
ಣಾಹೊಗ್ಗವಾಸಾ ಸುವಿವೀರಪಾಸೋ।
ಸೋಸುಬ್ಬದೋಜಾದವವಂಶ ಜಮ್ಮಾ।
ಣೇಮಿಯಯಿಖ್ವಾಕುಳವ್ವಿಸೇಸೋ ॥

ಮತ್ತಮಾತೀರ್ಥಕರು ವಿಷಕಂಟಕಶೀತಾತಪಾನಲಾದ್ಯಾಗಂತುಕಬಾಧಾರಹಿತರುಂ ಆದಿವ್ಯಾಧಿಚ್ಯೇಸತರುಮಾಗಿ, ಯೌವನೋದಯದಲ್ಲಿ ವಿವಾಹವಿಧಿಯನ್ನು ಹೊಂದಿ, ಯುವರಾಜಪದವಿಯಲ್ಲಿ ನಿಂತು, ಬಳಿಕಂ ದೇವೇಂದ್ರರಿಂದಲೂ, ನರೇಂದ್ರರಿಂದಲೂ, ಮೂರ್ಧಾಭಿಷಕ್ತರಾಗಿ ಸಾಮ್ರಾಜ್ಯಪದವಿಯನ್ನು ಅನುಭವಿಸುತ್ತಂ––

ಗಾಹೆ ॥ ಚಡಿದೂಣ ಚಉಗತಿವೊ ಧಾರುಣದುಬ್ಬಾರ ದು:ಖಖಾಣಿವೋ।
ಪರಮಾಣಂ ದಣಿಹಾಣಂ ಣಿಬ್ಬಾಣಂ ಆಸುವಚ್ಚಾಮೋ ॥ ೨೮ ॥

ಯೆಂದು ರಾಜ್ಯಶ್ರೀಯೆಲ್ಲವನ್ನು ತೊರೆದು ಜರತೃಣಸಮಾನವಾಗಿಯೋಚಿಸಿ ವಿಶಿಷ್ಟವೈರಾಗ್ಯಂ ಹುಟ್ಟಲೊಡನೆ ಲೋಕಾಂತಿಕ ದೇವರೆಲ್ಲಂ ಬಂದು, ದೇವದೇವ ಶುಭಪರಿಣಾಮವನ್ನು ಮಾಡಿದುದಕ್ಕೆ ಮಹಾಪ್ರಸಾದವೆಂದು ಕಲ್ಪವೃಕ್ಷದ ಪುಷ್ಪಗಳಿಂದರ್ಚಿಸಿ ಹೋದರಿತ್ತಲು..–

ಗಾಹೆ ॥ ಧಾರವಲುಣೇಮಿಸೇಸಾತೇವಿಸತೇಸುತಿತ್ತಯರಾ।
ಣಿಯುಣಿಯಚೋದಪುರೆಸುಂಗೆ ಹತ್ತಿಜಿಣಿಂದ ದಿಂಖಾವಾ ॥ ೨೯ ॥

ಚೈತ್ರಬಹುಳ ೯ ಉತ್ತರಾಷಾಢ ನಕ್ಷತ್ರದಲ್ಲಿ ಆದಿಜಿನಂಗೆ ಅಪರಾಹ್ಣದಲ್ಲಿ ದೀಕ್ಷೆಯಾಯಿತು ॥ ೧ ॥

ಮಾಘ ಶುಕ್ಲ ೯ ರೋಹಿಣಿಯಲ್ಲಿ ಅಪರಾಹ್ಣದಲ್ಲಿ ಅಜಿತಜಿನಂಗೆ ದೀಕ್ಷೆಯಾಯಿತು ॥ ೨ ॥

ಮಾರ್ಗಶಿರದ ೧೫ ಜ್ಯೇಷ್ಠಾನಕ್ಷತ್ರದ ಅಪರಾಹ್ಣದಲ್ಲಿ ಶಂಭವತೀರ್ಥಕರಂಗೆ ತಪೋಲಕ್ಷ್ಮಿಯಾಯಿತು ॥ ೩ ॥

ಮಾಘ ಶುದ್ಧ ೧೨ ಪುನರ್ವಸುತಾರೆಯ ಪೂರ್ವಾಹ್ಣದಲ್ಲಿ ಅಭಿನಂದನಂಗೆ ಮಹಾವ್ರತಗ್ರಹಣವಾಯಿತು ॥ ೪ ॥

ವೈಶಾಖ ಶುದ್ಧ ೯ ಮಘಾನಕ್ಷತ್ರದ ಪೂರ್ವಾಹ್ಣದಲ್ಲಿ ಸುಮತಿಜಿನಂಗೆ ಪರಿನಿಷ್ಕ್ರಮಣವಾಯಿತು ॥ ೫ ॥

ಕಾರ್ತೀಕ ಬಹುಳ ೧೩ ಚಿತ್ತಾನಕ್ಷತ್ರದ ಅಪರಾಹ್ಣದಲ್ಲಿ ಪದ್ಮಪ್ರಭಜಿನಂಗೆ ದೀಕ್ಷಾಕಲ್ಯಾಣವಾಯಿತು ॥ ೬ ॥

ಜ್ಯೇಷ್ಠ ಶುದ್ಧ ೧೨ ಪೂರ್ವಾಹ್ಣದ ವಿಶಾಖಾನಕ್ಷತ್ರದಲ್ಲಿ ಸುಪಾರ್ಶ್ವನಾಥಂಗೆ ಪರಿನಿಷ್ಕ್ರಮಣ ಕಲ್ಯಾಣವಾಯಿತು ॥ ೭ ॥

ಪುಷ್ಯ ಕೃಷ್ಣ ೧೧ ಅಪರಾಹ್ಣದ ಅನುರಾಧಾರಿಕ್ಷೆಯಲ್ಲಿ ಚಂದ್ರಪ್ರಭ ತೀರ್ಥಕರಂಗೆ ತೃತೀಯ ಕಲ್ಯಾಣವಾಯಿತು ॥ ೮ ॥

ಮಾರ್ಗಶಿರ ಶುದ್ಧ ೧ ಅಪರಾಹ್ಣದ ಅನುರಾಧೆಯಲ್ಲಿ ಪುಷ್ಪದಂತಂ ಪಂಚಮಹಾವ್ರತಾಂಕಿತನಾದನು ॥ ೯ ॥

ಮಾಘ ಬಹುಳ ೧೨ ಅಪರಾಹ್ಣದ ಪೂರ್ವಾಷಾಢ ನಕ್ಷತ್ರದಲ್ಲಿ ಶೀತಲಜಿನಂಗೆ ಪ್ರವ್ರಜ್ಯೇಯಾಯ್ತು ॥ ೧೦ ॥

ಫಾಲ್ಗುಣ ಬಹುಳ ೧೧ ಪೂರ್ವಾಹ್ಣದ ಶ್ರವಣನಕ್ಷತ್ರದಲ್ಲಿ ಶ್ರೇಯಾಂಸಂಗೆ ದೀಕ್ಷಾಕಲ್ಯಾಣವಾಯಿತು ॥ ೧೧ ॥

ಫಾಲ್ಗುಣ ಬಹುಳ ೧೪ ಅಪರಾಹ್ಣದ ವಿಶಾಖಾನಕ್ಷತ್ರದಲ್ಲಿ ಒಂದು ಉಪವಾಸಪೂರ್ವಕಂ ವಾಸುಪೂಜ್ಯಜಿನಂ ತಪೋಯುಕ್ತನಾದನು ॥ ೧೨ ॥

ಮಾಘ ಶುದ್ಧ ೪ ಅಪರಾಹ್ಣದ ಉತ್ತರಾಭಾದ್ರಪಥನಕ್ಷತ್ರದಲ್ಲಿ ವಿಮಲನಾಥಂಗೆ ದೀಕ್ಷೆಯಾಯಿತು ॥ ೧೩ ॥

ಜ್ಯೇಷ್ಠ ಕೃಷ್ಣ ೧೨ ಅಪರಾಹ್ಣದ ರೇವತಿರಿಕ್ಷೆಯಲ್ಲಿ ಅನಂತನಾಥನಿಗೆ ಸಂಯಮಧಾರಣೆಯಾಯಿತು ॥ ೧೪ ॥

ಭಾದ್ರಪಥ ಶುದ್ಧ ೧೩ ಪುಷ್ಯತಾರೆಯ ಅಪರಾಹ್ಣದಲ್ಲಿ ಧರ್ಮಂ ದಶಧರ್ಮಧರನಾದನು ॥ ೧೫ ॥

ಜ್ಯೇಷ್ಠ ಕೃಷ್ಣ ೧೪ ಅಪರಾಹ್ಣದ ಭರಣಿನಕ್ಷತ್ರದಲ್ಲಿ ಶಾಂತಿಜಿನಂಗೆ ತೃತೀಯಕಲ್ಯಾಣವಾಯಿತು ॥ ೧೬ ॥

ವೈಶಾಖ ಶುದ್ಧ ೧ ಕೃತ್ತಿಕೆಯ ಅಪರಾಹ್ಣದಲ್ಲಿ ಕುಂಥುಜಿನಂಗೆ ಸಕಲಸಂಯಮ ಸಂಪತ್ತಿಯಾಯಿತು ॥ ೧೭ ॥

ಮಾರ್ಗಶಿರ ಶುದ್ಧ ೧೦ ಅಪರಾಹ್ಣದ ರೇವತಿ ನಕ್ಷತ್ರದಲ್ಲಿ ಅರಪರಮೇಶ್ವರಂಗೆ ಪರಮತಪಶ್ಚರಣೆಯಾಯಿತು ॥ ೧೮ ॥

ಮಾರ್ಗಶಿರ ಶುದ್ಧ ೧೧ ಅಪರಾಹ್ಣದ ಅಶ್ವಿನೀ ನಕ್ಷತ್ರದಲ್ಲಿ ಮಲ್ಲಿವಲ್ಲಭಂಗೆ ತೃತೀಯ ಕಲ್ಯಾಣವಾಯಿತು ॥ ೧೯ ॥

ವೈಶಾಖ ಬ. ೧೦ ಅಪರಾಹ್ಣದ ಶ್ರವಣ ನಕ್ಷತ್ರದಲ್ಲಿ ಮುನಿಸುವ್ರತಜಿನಭಾಸ್ಕರಂಗೆ ಮಹಾವ್ರತ ಪ್ರಾಪ್ತಿಯಾಯಿತು ॥ ೨೦ ॥

ಆಷಾಢ ಬಹುಳ ೧೦ ಅಪರಾಹ್ಣದ ಅಶ್ವಿನೀ ನಕ್ಷತ್ರದಲ್ಲಿ ನಮಿಸ್ವಾಮಿಗೆ ಶ್ರವಣತ್ವವಾಯಿತು ॥ ೨೧ ॥

ಚೈತ್ರ ಶುದ್ಧ ೬ ಅಪರಾಹ್ಣದಲ್ಲಿ ಶ್ರವಣ ನಕ್ಷತ್ರದಲ್ಲಿ ನೇಮಿಸ್ವಾಮಿಗೆ ಪ್ರವ್ರಜ್ಯೇಯಾಯಿತು ॥ ೨೨ ॥

ಪುಷ್ಯ ಕೃಷ್ಣೈಕಾದಶಿ ಪೂರ್ವಾಹ್ಣದಲ್ಲಿ ವಿಶಾಖಾ ನಕ್ಷತ್ರದಲ್ಲಿ ಪಾರ್ಶ್ವಜಿನಂಗೆ ದೀಕ್ಷೆಯಾಯಿತು ॥ ೨೩ ॥

ಮಾರ್ಗಶಿರ ಬಹುಳ ೧೦ ಅಪರಾಹ್ಣದ ಉತ್ತರೆಯಲ್ಲಿ ವರ್ಧಮಾನಜಿನಂ ದೀಕ್ಷೆಗೊಂಡನು ॥ ೨೪ ॥

ಮತ್ತಮಾ ವೃಷಭೇಶ್ವರಂ ಚತುಸ್ಸಹಸ್ರ (೪೦೦೦) ಅರಸುಮಕ್ಕಳು ವೆರಸುದೀಕ್ಷೆಗೊಂಡನು.

ವಾಸುಪೂಜ್ಯಜಿನನು ಆರುನೂರೆಪ್ಪತ್ತಾರು (೬೭೬) ಅರಸುಮಕ್ಕಳು ಸಹಿತಂ ದೀಕ್ಷೆಗೊಂಡನು.

ಮಲ್ಲಿಜಿನನುಂ, ಪಾರ್ಶ್ವನಾಥನುಂ ಮುನ್ನೂರು (೩೦೦) ರಾಜಕುಮಾರರೊಡನೆ ದೀಕ್ಷೆಗೊಂಡರು.

ವೀರಸ್ವಾಮಿಯೊಬ್ಬನೇ ದೀಕ್ಷೆಗೊಂಡನು, ಉಳಿದ ಏಕೋನವಿಂಶತಿ (೧೯) ತೀರ್ಥಂಕರುಂ ಪ್ರತ್ಯೇಕ ಸಹಸ್ರ (೧೦೦೦) ರಾಜವರ್ಗರಸು ದೀಕ್ಷೆ ತೆಗೆದುಕೊಳ್ಳುವಾಗ ತಮಗಿಂತ ಹಿರಿಯವರಿಲ್ಲದ್ದರಿಂದ ನಮಃ ಸಿದ್ಧೇಭ್ಯಃ ಯೆಂದು ದೀಕ್ಷೆಯನ್ನು ಸ್ವೀಕರಿಸಲೊಡನೆ ಮನಃಪರ್ಯಯಜ್ಞಾನವು ಹುಟ್ಟುವದು, ದೀಕ್ಷಾಕಲ್ಯಾಣವಾದ ಒಂದು ವರುಷದ ಮೇಲೆ ಇಕ್ಷುರಸದಿಂದ ಪುರುಜಿನಂ ಪಾರಣೆಯನ್ನು ಮಾಡಿದನು, ಉಳಿದ ಜಿನರು ಕ್ಷೀರಾನ್ನದಿಂ ನಾಲ್ಕನೆಯ ದಿನದಲ್ಲಿ ಪಾರಣೆಯನ್ನು ಮಾಡಿದರು, ಮತ್ತಮೆಲ್ಲರ ಪಾರಣೆಯಲ್ಲಿ ಉತ್ಕೃಷ್ಟದಿಂದ ಹನ್ನೆರಡು ಕೋಟಿಯು ಐವತ್ತು ಲಕ್ಷ (೧೨,೫೦,೦೦೦೦೦), ಜಘನ್ಯದಿಂದ ಒಂದು ಲಕ್ಷದ ಇಪ್ಪತ್ತೈದು ಸಾಸಿರ (೧,೨೫೦೦೦) ರತ್ನದ ಮಳೆಯು, ಧಾತ್ರುಗಳ ಪರಿಣಾಮಾನುಸಾರದಿಂ ಹೀನಾಧಿಕವಾಗುವದು. ದೇವದುಂದುಭಿಯುಂ, ದೇವರ್ಕಳ ಪ್ರಶಂಸೆಯುಂ, ಕುಸುಮವೃಷ್ಟಿಯುಂ, ಸುಗಂಧಶೀತಲವಾದ ತಂಗಾಳಿಯುಂ, ಇಂತಿವು ದಾನಜನಿತ ಪಂಚಾಶ್ಚರ್ಯಗಳಾಗೆ, ಬಳಿಕ್ಕಂ ಗ್ರಾಮನಗರಾದಿಗಳನ್ನು ವಿಹರಿಸುತ್ತಂ, ಧರ್ಮಾಧರ್ಮಗಳನ್ನು ತಿಳಿಸಿ ಘೋರವೀರತಪಶ್ಚರಣೆಗಳನ್ನು ಮಾಡಿ ಯೋಗಯೋಗ್ಯ ಪ್ರದೇಶದಲ್ಲಿ ನಿಂದ ಛದ್ಮಸ್ತಕಾಲ ಪ್ರಮಾಣವು ಹ್ಯಾಗಂದರೆ—

ಗಾಹೆ ॥ ಉಸಹಾದಿಣವ್ವಾಪಾಥದಾಮತ್ತಕಾಳೆ । ಛ್ಛಂಬಿಯಪಲುಮಪ್ಪಪೋಮಾಸಾ ॥ ೨೦ ॥

ವರ್ಷ ॥ ೧೦೦೦ ॥ ೧೨ ॥ ೧೪ ॥ ೧೮ ॥ ೨೦ ॥ ಮಾಸ ೬.

ಗಾಹೆ ॥ ವಾಸಾಣಣವಸುಷಾಸೇ । ಮಾಸಾಚದ್ದಪ್ಪಹಂಮಿತಿಂಣೆತದೋ ।

ಚದುತಿದುಯಕ್ಕೋಕಿಗದುಗಿ । ಸೋಳಚವುವಗ್ಗಚವುಕದಿವಾಹಂ ॥ ೨೧ ॥

ಚಂದ್ರಪ್ರಭಂಗೆ ಪೊಂಭತ್ತು ವರ್ಷ ಮೂರು ತಿಂಗಳು, ಪುಷ್ಪದಂತರಿಗೆ ನಾಲ್ಕು ೪ ವರ್ಷಂ, ಶೀತಲಂಗೆ ವರುಷ ಮೂರು ೩, ಶ್ರೇಯಾಂಸರಿಗೆರಡು ೨ ವರ್ಷ, ವಾಸುಪೂಜ್ಯರಿಗೆ ಪೊಂದು ೧ ವರ್ಷಂ, ವಿಮಲಜಿನರಿಗೆ ಮೂರು ೩ ವರ್ಷವು, ಅನಂತನಾಥರಿಗೆರಡು ೨ ವರ್ಷಂ, ಧರ್ಮಜಿನರಿಗೊಂದು ೧ ವರ್ಷಂ, ಶಾಂತಿನಾಥ ಪ್ರಭುವಿಗೆ ೧೬, ಕುಂಥುನಾಥರಿಗೆ ೧೬ ವರ್ಷಂ, ಅರಜಿನಂಗೆ ಹದಿನಾರು ೧೬ ವರ್ಷವು.

ಗಾಹೆ ॥ ಮಲ್ಲಿಜಿಣೇಛದ್ದಿವಸಾ । ಯೆಕ್ಕಾರಸಸುಬ್ಬದಜಿಣೇಮಾಸಾ ॥
ಣಮಿಣಾಹೇಣವವಸ್ಸಾ । ದಿಣಾಣಿಛಪ್ಪಂಣುಣೇಮಿಜಿಣೇ ॥ ೩೨ ॥

ಅರ್ಥ—ಮಲ್ಲಿಜಿನರಿಗಾರುದಿವಸಂ. ಮುನಿಸುವ್ರತರಿಗೆ ಏಕಾದಶ (೧೧) ತಿಂಗಳು. ನಮಿಜಿನರಿಗೆ ಪೊಂಭತ್ತು (೯) ವರ್ಷಂ. ನೇಮಿತೀರ್ಥಕರಿಗಯ್ವತ್ತಾರು (೫೬) ದಿವಸಂ.

ಗಾಹೆ ॥ ಪಾಸಜಿಣೇ ಚಉಮಾಸಾ । ಬಾರಸವಾಸಾಣಿವಡ್ಡಮಾಣಜಿಣೇ ॥
ಯತ್ತಿಯಮುತ್ತೇಸಮಯೇ ಕೇವಳಣಾಣಂಣತಾಣ ಉಪ್ಪಂಣಂ ॥ ೩೩ ॥

ಅರ್ಥ—ಪಾರಿಶ್ವಪ್ರಭುವಿಗೆ ಚಾತುರ್ಮಾಸ (೪) ವುಂ. ವೀರಜಿನರಿಗೆ ದ್ವಾದಶ (೧೨) ಸಂವತ್ಸರವುಂ. ಈ ರೀತಿಯಾಗಿ ಛದ್ಮಸ್ತಕಾಲವು ಹೋಗಲು, ಪ್ರತಿಮಾಯೋಗದಿಂ ಮೇಣ್ ಪಲ್ಯಂಕಾಸನದಿಂದಿದ್ದು, ನಿಜನಿರಂಜನಶುದ್ಧಾತ್ಮಧ್ಯಾನದ ಬಲದಿಂದ ಘಾತಿಕರ್ಮಗಳನ್ನು ಘಾತಿಸಿ, ನವಕ್ಷಾಯಿಕಲಬ್ಧಿಗಳನ್ನು ಪಡೆದ ದಿನಗಳನ್ನು ಹೇಳುತ್ತೇನೆ.

ಫಾಲ್ಗುಣ ಬಹುಳೇಕಾದಶಿ ಉತ್ತರಾಷಾಢ ತಾರೆಯಲ್ಲಿ ಆದಿದೇವನಿಗೆ ಕೇವಲಜ್ಞಾನೋತ್ಪತ್ತಿಯಾಯಿತು ॥ ೧ ॥

ಪುಷ್ಯ ಶುದ್ಧೇಕಾದಶಿಯಲ್ಲಿ ರೋಹಿಣಿಯೊಳಜಿತಜಿನರಿಗೆ ಪರಮ ಬೋಧೋತ್ಪತ್ತಿಯಾಯಿತು ॥ ೨ ॥

ಕಾರ್ತೀಕ ಕೃಷ್ಣಪಕ್ಷ ಪಂಚಮಿ ಮೃಗಶಿರನಕ್ಷತ್ರದಲ್ಲಿ ಶಂಭವಜಿನನಿಗೆ ಪಂಚಮಜ್ಞಾನ ಪ್ರಾಪ್ತಿಯಾಯಿತು ॥ ೩ ॥

ಪುಷ್ಯ ಶುದ್ಧ ೧೪ ಪುನರ್ವಸುವಿನಲ್ಲಿ ಅಭಿನಂದನಜಿನರಿಗೆ ಸಕಲ ವಿಮಲ ಕೇವಲ ಬೋಧವುಂ ॥ ೪ ॥

ವೈಶಾಖ ಶುದ್ಧ ದಶಮಿ ಮಘಾನಕ್ಷತ್ರದಲ್ಲಿ ಸುಮತಿನಾಥರಿಗೆ ಪರಮ ಚಿತ್ಪ್ರಕಾಶವುಂ ॥೫॥

ವೈಶಾಖ ಶುದ್ಧ ದಶಮಿ ಚಿತ್ತೆಯಲ್ಲಿ ಪದ್ಮಪ್ರಭರಿಗೆ ನಿಜನಿರಂಜನ ಪ್ರಕಾಶವುಂ ॥ ೬ ॥

ಫಾಲ್ಗುಣ ಬಹುಳ ಸಪ್ತಮಿ ವಿಶಾಖಾತಾರೆಯಲ್ಲಿ ಸುಪಾರಿಶ್ವಜಿನರಿಗೆ ಕೈವಲ್ಯವುಂ ॥ ೭ ॥

ಫಾಲ್ಗುಣ ಕೃಷ್ಣ ಸಪ್ತಮಿಯನುರಾಧಾತಾರೆಯಲ್ಲಿ ಚಂದ್ರಪ್ರಭಜಿನರಿಗೆ ವಿಶ್ವಪ್ರಕಾಶ ಕೇವಲಜ್ಞಾನವುಂ ॥ ೮ ॥

ಕಾರ್ತೀಕ ಶುದ್ಧ ತದಿಗೆ ಮೂಲನಕ್ಷತ್ರದಲ್ಲಿ ಸುವಿಧಿಗೆ ಸಹಜಜ್ಞಾನವುಂ ॥ ೯ ॥

ಪುಷ್ಯ ಬಹುಳ ೧೪ ಪೂರ್ವಾಷಾಢದಲ್ಲಿ ಶೀತಲಂಗೆ ಸುಬೋಧವುಂ ॥ ೧೦ ॥

ಮಾಘದಮಾವಾಸ್ಯೆ ಶ್ರವಣ ನಕ್ಷತ್ರದಲ್ಲಿ ಶ್ರೇಯಾಂಸರಿಗೆ ಕೇವಲಜ್ಞಾನೋತ್ಪತ್ತಿಯುಂ॥೧೧

ಮಾಘ ಶುದ್ಧ ಬಿದಿಗೆ ಶತವಿಶಾಖೆಯಲ್ಲಿ ವಾಸುಪೂಜ್ಯರಿಗೆ ಆರ್ಹಂತ್ಯ ಪದವಿಯುಂ ॥೧೨॥

ಮಾಘ ಶುದ್ಧ ಷಷ್ಠಿ ಉತ್ತರಾಭಾದ್ರಪಥದಲ್ಲಿ ವಿಮಲಜಿನರಿಗೆ ನವಲಬ್ಧಿಯುಂ ॥ ೧೩ ॥

ಚೈತ್ರಮಾಸದಮವಾಸ್ಯೆಯ ರೇವತಿಯಲ್ಲಿ ಅನನ್ತಜಿನರಿಗೆ ಅನನ್ತಜ್ಞಾನಲಬ್ಧಿಯುಂ॥೧೪॥

ಪುಷ್ಯಪೌರ್ಣಮಿ ಪೂರ್ವಾತಾರೆಯಲ್ಲಿ ಧರ್ಮಜಿನರಿಗೆ ನಿರ್ಮಲಬೋಧವುಂ ॥ ೧೫ ॥

ಪುಷ್ಯ ಶುದ್ಧ ದಶಮಿ ಭರಣಿಯಲ್ಲಿ ಶಾನ್ತಿಜಿನರಿಗೆ ಅಚಿನ್ತ್ಯಜ್ಞಾನೋತ್ಪತ್ತಿಯುಂ ॥ ೧೬ ॥

ಚೈತ್ರಶುದ್ಧ ತದಿಗೆ ಕೃತ್ತಿಕೆಯಲ್ಲಿ ಕುಂಥುಜಿನರಿಗೆ ಕ್ಷಾಯಿಕಜ್ಞಾನವುಂ ॥ ೧೭ ॥

ಕಾರ್ತಿಕ ಶುದ್ಧ ದ್ವಾದಶಿ ರೇವತಿಯಲ್ಲಿ ಅರಭಟ್ಟಾರಕರಿಗೆ ಪರಮಾರ್ಹಂತ್ಯವುಂ ॥ ೧೮ ॥

ಪುಷ್ಯ ಬಹುಳ ಬಿದಿಗೆ ಪುನರ್ವಸುವಿನಲ್ಲಿ ಮಲ್ಲಿಜಿನರಿಗೆ ಕೈವಲ್ಯವುಂ ॥ ೧೯ ॥

ವೈಶಾಖ ಬಹುಳ ೯ ಶ್ರವಣನಕ್ಷತ್ರದಲ್ಲಿ ಮುನಿಸುವ್ರತಜಿನನಾಥರಿಗೆ ವಿನೂತಬೋಧೋತ್ಪತ್ತಿಯುಂ ॥ ೨೦ ॥

ಮಾರ್ಗಶಿರ ಶುದ್ಧ ಏಕಾದಶಿ ಅಶ್ವಿನಿಯಲ್ಲಿ ನಮಿಜಿನರಿಗೆ ನವಕ್ಷಾಯಿಕಲಬ್ಧಿಯುಂ ॥ ೨೧ ॥

ಆಶ್ವೀಜ ಶುದ್ಧ ಪಾಡ್ಯದ ಚಿತ್ತೆಯಲ್ಲಿ ನೇಮಿತೀರ್ಥಕರಿಗೆ ಅಸಹಾಯಜ್ಞಾನೋತ್ಪತ್ತಿಯುಂ ॥ ೨೨ ॥

ಚೈತ್ರ ಬಹುಳ ಚವುತಿ ವಿಶಾಖಾನಕ್ಷತ್ರದಲ್ಲಿ ಪಾರ್ಶ್ವಜಿನರಿಗೆ ಅಕ್ಷಯಬೋಧವುಂ ॥ ೨೩ ॥

ವೈಶಾಖ ಶುದ್ಧ ೧೦ ಹಸ್ತದಲ್ಲಿ ವರ್ಧಮಾನರಿಗೆ ಶಾಶ್ವತಬೋಧೋತ್ಪತ್ತಿಯಾಯಿತು ॥ ೨೪ ॥

ಆದಿಜಿನರಿಗೂ, ಶ್ರೇಯಾಂಸ, ಮುನಿಸುವ್ರತ, ನೇಮಿ, ಪಾರ್ಶ್ವತೀರ್ಥಕರೆಂಬ ಇವರುಗಳಿಗೂ ಪೂರ್ವಾಹ್ಣಕಾಲದಲ್ಲಿ ಕೇವಲಜ್ಞಾನೋತ್ಪತ್ತಿಯುಂಟಾಯಿತು.

ಉಳಿದ ಹತ್ತೊಂಭತ್ತು (೧೯) ಜಿನರಿಗೆ ಅಪರಾಹ್ಣಕಾಲದಲ್ಲಿ ಚತುರ್ಥಕಲ್ಯಾಣವಾಯಿತು.

ಅಂತು ಕಾಲೋದಯವಾದ ಕೂಡಲೇ ನವಕ್ಷಾಯಿಕಲಬ್ಧಿಗಳು ಉದಯಿಸುವವು. ಆ ಲಬ್ಧಿಗಳು ಯಾವಕರ್ಮದ ಕ್ಷಯದಿಂದ ಹುಟ್ಟುತ್ತವೆಂದರೆ:—

ಜ್ಞಾನಾವರಣೀಯಂ, ದರ್ಶನಾವರಣೀಯಂ, ದರ್ಶನಮೋಹನೀಯಂ, ಚಾರಿತ್ರಮೋಹನೀಯಂ, ಎಂಬಿವರ ನಿರಶ್ಯಪಕ್ಷಯದಿಂ ಕ್ಷಾಯಿಕವಾದ ಜ್ಞಾನ, ದರ್ಶನ, ಸಮ್ಯಕ್ತ್ವ, ಚಾರಿತ್ರವೆಂಬಿವು, ದಾನಾಂತರಾಯಕರ್ಮಕ್ಷಯದಿಂದ ಅನಂತಾನಂತ ಪ್ರಾಣಿಸಮೂಹಗಳಿಗೆಲ್ಲಂ ನಿರ್ಮಲತತ್ವೋಪದೇಶರೂಪವಾದ ಅಭಯದಾನವಾಗುವದು.

ಲಾಭಾಂತರಾಯದ ಕ್ಷಯದಿಂ ಪರಿತ್ಯಕ್ತಕಬಳಾಹಾರಕ್ರಿಯೆಯನುಳ್ಳ ಕೇವಲಿಗಳಾವುದೊಂದರಿಂ ಶರೀರಬಲಾದಾನನ್ಯಮನುಜಾಸಾರರಣಂಗಳತ್ಯಂತ ಶುಭಂಗಳು ಸೂಕ್ಷ್ಮಗಳು, ಪ್ರತಿಸಮಯಮನಂತಪುದ್ಗಲಂಗಳು ಬಂಧಕ್ಕೆ ಬಪ್ಪವಿಂತೀಲಾಭವುಂ, ತ್ರೈಲೋಕ್ಯಸಾಮ್ರಾಜ್ಯಲಾಭವಾಗುವದು.

ಭೋಗಾಂತರಾಯದ ಕ್ಷಯದಿಂದ, ಅನಂತಭೋಗವುಂ, ಪುಷ್ಪವೃಷ್ಟಿಗಳೇ ಮೊದಲಾದ ಭೋಗಗಳುಂಟಾಗುವವು.

ಉಪಭೋಗಾಂತರಾಯದ ಕ್ಷಯದಿಂದ, ಅನಂತೋಪಭೋಗವುಂ ಸಿಂಹಾಸನ, ಛತ್ರತ್ರಯ ಚತುಷ್ಷಷ್ಟಿ (೬೪) ಚಾಮರಾದಿ ಪ್ರಾತಿಹಾರ್ಯ್ಯಪರಿಕರಸಮನ್ವಿತ ಸಮವಸರಣ ವಿಭೂತಿಯುಂ, ಮತ್ತು ವೀರ್ಯಾಂತರಾಯಕರ್ಮದ ನಾಶದಿಂದ ಅನಂತವೀರ್ಯವುಂ ಅನಂತ ಸುಖವುಂ, ಅನಂತಾವಗಾಹನವುಂ, ಅನಂತಾವಕಾಶವುಂ, ಅವ್ಯಾಬಾಧತ್ವವುಂ, ಎಂದಿವುಗಳು ಉಂಟಾಗುವವು. ಈ ಪ್ರಕಾರವಾಗಿ ಪರಮಾರ್ಹಂತ್ಯವೆಂಬ ನಾಲ್ಕನೆಯ ಕಲ್ಯಾಣವಾಗುವದು.

ಸ್ತವನ, ಆವಿರ್ಭೂತಾನನ್ತಜ್ಞಾನ, ದರ್ಶನ, ಸುಖ, ವೀರ್ಯ, ವಿರತಿ, ಕ್ಷಾಯಿಕ ಸಮ್ಯಕ್ತ್ವ, ದಾನ, ಲಾಭ, ಭೋಗೋಪಭೋಗಾದ್ಯನನ್ತಗುಣತ್ವಾದಿ ಹೈವಾತ್ಮಸಾತ್ಕೃತ ಸಿದ್ಧ ಸ್ವರೂಪಾಃ, ಸ್ಫಟಿಕಮಣಿಮದರ ಗರ್ಭೋದ್ಭೂತಾದಿತ್ಯಬಿಂಬವದ್ಧರ್ಯ ದೀಪ್ಯಮಾನಾ:, ಶರೀರಪರಿಮಾಣಾಪಿಜ್ಞಾನೇನ ವ್ಯಾಪ್ತಶುದ್ಧರೂಪಾ:, ಸ್ವಸ್ತಿತಾಶೇಷ ಪ್ರಮೇಯತ್ವತ:, ಪ್ರಾಪ್ತ ವಿಶ್ವರೂಪಾ:, ನಿರ್ಗತಾಶೇಷಮಯತ್ವತೋ ನಿರಾಮಯಾ:, ವಿಗತಾಶೇಷ ಪಾಪಾಂಜನ ಪುಂಜ ತ್ವನ ನಿರಂಜನಾ:, ದೋಷಕಲಾತೀತತ್ವತೋ ನಿಂಕಳಾಸ್ತೇಭ್ಯೋರ್ಹ ನಮಃ, ಈ ಪ್ರಕಾರ ವಾಗಿ ಸಯೋಗಿಕೇವಲಿ ಗುಣಸ್ಥಾನದ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ತೃತೀಯ ಶುಕ್ಲ ಧ್ಯಾನಾನನ್ತರ ಸಮಯದಲ್ಲಿ ಅಯೋಗಿಕೇವಲಿ ಗುಣಸ್ಥಾನಂ ಪಂಚಹ್ರಸ್ವೋಚ್ಚಾರಣ ಪ್ರಮಾ ಣಕಾಲದಲ್ಲಿ ನಿರಾಸ್ರವದ್ವಾರರುಂ, ಸಮಸ್ತಶೀಲಗುಣಮಣಿವಿಭೂಷಣಭೂಷಿತರುಂ ಆಗಿ, ಮೂಲೋತ್ತರ ಉತ್ತರೋತ್ತರ ಕರ್ಮಪ್ರಕೃತಿ ಸ್ಥಿತ್ಯನುಭಾಗಪ್ರದೇಶಬಂಧೋದಯೋದಿ ರಣ ಸತ್ವಗಳೆಲ್ಲವನ್ನೂ, ವ್ಯುಪರತ ಕ್ರಿಯಾನಿವೃತ್ತಿಯೆಂಬ, ಚತುರ್ಥ ಶುಕ್ಲಧ್ಯಾನದಿಂ ನಿರವ ಶೇಷಂ ಕೆಡಿಸಿ, ಸಿದ್ಧತ್ವವನ್ನು ಹೊಂದಿದ ದಿನಂಗಳೆಂತೆನೆ—

ಮಾಘ ಕೃಷ್ಣ ೧೪, ಪೂರ್ವಾಹ್ಣ ಉತ್ತರಾಷಾಢ ನಕ್ಷತ್ರದಲ್ಲಿ ಆದಿದೇವನು ಒಂದು ಸಾವಿರ ಮುನಿಗಳೊಡನೆ ಮೋಕ್ಷವನ್ನು ಹೊಂದಿದನು. ॥ ೧ ॥

ಚೈತ್ರ ಶುದ್ಧ ೫, ಪೂರ್ವಾಹ್ಣದಲ್ಲಿ ರೋಹಿಣಿ ನಕ್ಷತ್ರದಲ್ಲಿ ಅಜಿತಜಿನಂ ಸಿದ್ಧನಾದನು ॥ ೨ ॥

ಚೈತ್ರ ಶುದ್ಧ ೬, ಅಪರಾಹ್ಣ ಮೃಗಶಿರಾ ನಕ್ಷತ್ರದಲ್ಲಿ ಶಂಭವಂಗೆ ಮೋಕ್ಷವಾಯಿತು ॥ ೩ ॥

ವೈಶಾಖ ಶುದ್ಧ ೬, ಪೂರ್ವಾಹ್ಣ ಪುನರ್ವಸುವಿನಲ್ಲಿ ಅಭಿನಂದನಜಿನನು ಮುಕ್ತನಾದನು ೪

ಚೈತ್ರ ಶುಕ್ಲ ೧೧, ಅಪರಾಹ್ಣ ಮಘಾನಕ್ಷತ್ರದಲ್ಲಿ ಸುಮತಿ ಪರಮಾತ್ಮನಾದನು ॥ ೫ ॥

ಫಾಲ್ಗುಣ ಕೃಷ್ಣ ೪, ಅಪರಾಹ್ಣದ ಚಿತ್ತೆ ನಕ್ಷತ್ರದಲ್ಲಿ ಪದ್ಮಪ್ರಭಂ ಮುಂನೀರಿಪ್ಪತ್ತು ನಾಲ್ಕು ಅರಸುಗಳ್ವೆರಸು ನಿರ್ವಾಣಪದ ಪ್ರಾಪ್ತನಾದನು ॥ ೬ ॥

ಫಾಲ್ಗುಣ ಬಹಳ ೭, ಪೂರ್ವಾಹ್ಣ ಅನುರಾಧಾ ನಕ್ಷತ್ರದಲ್ಲಿ ಐನೂರು ತಪಸ್ವಿಗಳೊಡನೆ ಸುಪಾರಿಶ್ವನ. ಅಪವರ್ಗಪ್ರಾಪ್ತನಾದನು ॥ ೭ ॥

ಭಾದ್ರಪಥ ಶುದ್ಧ ೬, ಪೂರ್ವಾಹ್ಣದಲ್ಲಿ ಜ್ಯೇಷ್ಠಾ ನಕ್ಷತ್ರದಲ್ಲಿ ಚಂದ್ರಪ್ರಭಜಿನನು ಅಷ್ಟಮಭೂಮಿ ನಿವಿಷ್ಟನಾದನು ॥ ೮ ॥

ಭಾದ್ರಪಥ ಶುದ್ಧ ೮, ಅಷ್ಟಮಿ ಅಪರಾಹ್ಣದ ಮೂಲನಕ್ಷತ್ರದಲ್ಲಿ ಸುವಿಧಿ ಶಿವಗತಿ ನಿವಿ ಷ್ಟನಾದನು ॥ ೯ ॥

ಆಶ್ವೀಜ ಶುದ್ಧ ೭, ಸಪ್ತಮಿ ಪೂರ್ವಾಹ್ಣ ಪೂರ್ವಾಷಾಢ ನಕ್ಷತ್ರದಲ್ಲಿ ಶೀತಲನಾಥನು ಶಿತಾಪನಿಯೆಂಬ ಕ್ಷೇತ್ರನಾಥನಾದನು ॥ ೧೦ ॥

ಶ್ರಾವಣ ಶುದ್ಧ ಪೌರ್ಣಮಿ ಪೂರ್ವಾಹ್ಣ ಧನಿಷ್ಟ ನಕ್ಷತ್ರದಲ್ಲಿ ಶ್ರೇಯಾಂಸಂ ನಿಶ್ರೇಯ ಸಪದಗತನಾದನು ॥ ೧೧ ॥

ಭಾದ್ರಪಥ ಶುದ್ಧ ೧೪, ಅಪರಾಹ್ಣ ಶತವಿಶಾಖೆಯಲ್ಲಿ ಆರುನೂರೋರ್ವ (೬೦೧) ಸಂಯಮಿಗಳುವೆರಸು ವಾಸುಪೂಜ್ಯಂ ಸ್ವಾತ್ಮೋತ್ಥಸುಖಸಿದ್ಧನಾದನು ॥ ೧೨ ॥

ಆಷಾಢ ಬಹುಳ ಅಷ್ಟಮಿಯ ಅಪರಾಹ್ಣದ ಉತ್ತರಾಭಾದ್ರ ನಕ್ಷತ್ರದಲ್ಲಿ ಆರುನೂರು ಮುನಿಗಳ್ವೆರಸು ನಿರ್ವಾಣಲಕ್ಷ್ಮಿಯನ್ನು ಹೊಂದಿದನು || ೧೩ ||

ಚೈತ್ರ ಕೃಷ್ಣ ಅಮಾವಾದಶಿ ಅಪರಾಹ್ಣ ರೇವತಿ ನಕ್ಷತ್ರದಲ್ಲಿ ಏಳನೂರು (೭೦೦) ಮುನಿಗಳ್ವೆರಸು ಅಂತ್ಯಪದವಿಯನ್ನು ಹೊಂದಿದನು || ೧೪ ||

ಜ್ಯೇಷ್ಠ ಶುದ್ಧ ೪ ಪುಷ್ಯ ನಕ್ಷತ್ರದ ಪೂರ್ವಾಹ್ಣದಲ್ಲಿ ೮೦೬ ಮುನಿಗಳ್ವೆರಸು ಧರ್ಮ ಜಿನಂ ಕರ್ಮತ್ರಯ ನಿರ್ಮುಕ್ತನಾದನು || ೧೫ ||

ಜ್ಯೇಷ್ಠ ಬಹುಳ ೧೪ ಅಪರಾಹ್ಣದ ಭರಣಿಯಲ್ಲಿ ಶಾಂತೀಶಂ ನವಶತ (೯೦೦) ವರ್ತಿ ಗಳ್ವೆರಸು ಸಂಪೂರ್ಣ ಗುಣಧರನಾದನು || ೧೬ ||

ವೈಶಾಖ ಶುದ್ಧ ಪಾಡ್ಯ ಕೃತ್ತಿಕೆಯ ಅಪರಾಹ್ಣದಲ್ಲಿ ಸಾವಿರ ಮುನಿಗಳ್ವೆರಸು ಕುಂಥು ಜಿನಂ ಶಾಶ್ವತಪದಪ್ರಾಪ್ತನಾದನು || ೧೭ ||

ಚೈತ್ರದಮಾವಾದಶಿ ಅಪರಾಹ್ಣದ ರೇವತಿ ನಕ್ಷತ್ರದಲ್ಲಿ ೧೦೦೦ ಮುನಿಗಳೊಡನೆ ಅರ ಪರಮೇಶ್ವರಂ ಪರಮಪದಪ್ರಾಪ್ತನಾದನು || ೧೮ ||

ಫಾಲ್ಗುಣ ಬಹುಳ ೫ ಅಪರಾಹ್ಣ ರೇವತಿಯಲ್ಲಿ ೫೦೦ ಅನಗಾರರೊಡನೆ ಮಲ್ಲಿ ಜಿನಂ ಮುಕ್ತಿವಲ್ಲಭನಾದನು || ೧೯ ||

ಫಾಲ್ಗುಣ ಬಹುಳ ದ್ವಾದಶಿ ಅಪರಾಹ್ಣದ ಶ್ರವಣ ನಕ್ಷತ್ರದಲ್ಲಿ ಮುನಿಸುವ್ರತಂ ಸನಾತನ ಲಕ್ಷ್ಮೀಪತಿಯಾದನು || ೨೦ ||

ವೈಶಾಖ ಕೃಷ್ಣ ೧೪ ಪೂರ್ವಾಹ್ಣಕಾಲದ ಅಶ್ವಿನಿಯಲ್ಲಿ ನಮಿನಾಥನು ನಿತ್ಯಾನಂದ ಕಾಂತಪತಿಯಾದನು || ೨೧ ||

ಆಷಾಢ ಶುದ್ಧ ಸಪ್ತಮಿಯ ಅಪರಾಹ್ಣದ ಚಿತ್ತೆಯಲ್ಲಿ ನೇಮಿನಾಥನು ಆರುನೂರು ಮೂವತ್ತಾರು (೬೩೬) ಯತಿಗಳ್ಸಹಿತಂ ಪಂಚಕಲ್ಯಾಣ ಲಕ್ಷ್ಮೀಪತಿಯಾದನು || ೨೨ ||

ಶ್ರಾವಣ ಶುದ್ಧ ಸಪ್ತಮಿಯ ಅಪರಾಹ್ಣದ ವಿಶಾಖೆಯಲ್ಲಿ ಪಾರ್ಶ್ವಭಟ್ಟಾರಕಂ ಷಟ್‌ತ್ರಿಂಶ (೩೬) ಸಕಲ ವ್ರತಿಗಳೊಡನೆ ಸಕಲಸುಖನಿಲಯನಾದನು || ೨೩ ||

ಕಾರ್ತಿಕ ಕೃಷ್ಣ ಚತುರ್ದಶಿ ಪ್ರತ್ಯುಷತ್ಸಮಯದ ಸ್ವಾತೀನಕ್ಷತ್ರದಲ್ಲಿ ವೀರಜಿನನಾಥ ನೊರ್ವನೇ ನಿರ್ವಾಣಕ್ಕೆ ಸಂದನು || ೨೪ ||

ಶೇಷತ್ರಯೋದಶ (೧೩) ತೀರ್ಥಕರು ಪ್ರತ್ಯೇಕ ಸಹಸ್ರ ಅನಾಗಾರರ್ವೆರಸು ಶಿವಸುಖ ನಿರತರಾದರು.

ಗಾಹೆ || ಕಾಲವಸಾದೋಜೋಯದಿಬಾವಂಣಂಯ ದುಸ್ಸಮೇಕಾಲೇ ।
ಅವಿಣಿದ್ದುಂಮೇದಾವಿಯ ಅಸೂಯ ಕೋತಹಯಪಾಯೇಣ || ೩೪ ||
ಸತ್ತಭಯಡಯಮದಹಂ ಸಂಜುತ್ತೋಸಂ ಅಗಾರವಸಯೇಹಿ ।
ಕಲಹಪಿಯಾರಾಗಿತೋಕೂರೋಕೋಹಾಳುಪೋಲೋಹಿ || ೩೫ ||

## ಸೂತ್ರಂ ॥ ಘಾತಿಚತುಷ್ಟಯಾಷ್ಟಾದಶದೋಷರಹಿತಾಃ ॥ ೧೦ ॥

ಅರ್ಥ—ಜ್ಞಾನಾವರಣೀಯಂ, ದರ್ಶನಾವರಣೀಯಂ, ಮೋಹನೀಯಂ, ಅಂತರಾಯ ಮೆಂದಿವುಗಳು ಘಾತಿಚತುಷ್ಟಯುಗಳು. ಕ್ಷುಧೆಯುಂ, ತೃಷೆಯುಂ, ಭಯವುಂ, ದ್ವೇಷವುಂ, ರಾಗವುಂ, ಮೋಹವುಂ, ಚಿಂತೆಯುಂ, ಜರೆಯುಂ, ರುಜೆಯುಂ, ಮರಣವುಂ, ಸ್ವೇದವುಂ, ಖೇದ ವುಂ, ಮದವುಂ, ರತಿಯುಂ, ವಿಸ್ಮಯವುಂ, ಜನನವುಂ, ನಿದ್ರೆಯುಂ, ವಿಷಾದಮೆಂಬಿವು ಹದಿನೆಂಟು ದೋಷಗಳು. ಈ ಘಾತಿಚತುಷ್ಟಯಾಷ್ಟಾದಶದೋಷವರ್ಜಿತನು ಆಪ್ತನೆಂದು ತಿಳಿಯುವದು.

ಗಾಹೆ ॥ ಣಾರಯತಿರಿಯದುಥಾವರ ಥಾವದುಭಉಜೋಯೇ ಘಾತಿಯಿ ಅಉತಿಯಂ ॥
ಸಾಹರಣಂ ಚತಿಸಠ್ಠಿಪಯಡಿನಿಮುಕ್ಕೋ ಜಿಣೋಜಯವು ॥ ೩೬ ॥
ಛಹತಣಪಾಭಿರುರೋಸೋರಾಗೋ ಚಿಂತೋಜರಾರುಜಾಮಚ್ಚ ।
ಖೇದಂ ಸೇದಮದೋರಯಿಮೋಹಜಣುಬ್ಬೇಗರಿತ್ವಾವೋಣಿದ್ದಾ ॥ ೩೭ ॥

## ಸೂತ್ರಂ ॥ ಸಮವಸರಣ್ಯೈಕಾದಶಭೂಮಯಃ ॥ ೧೧ ॥

ಹನ್ನೊಂದು ಸಮವಸರಣಭೂಮಿಯೆಂತೆನೆ ಪೇಳ್ವೆಂ:—

ಕಂದ ॥ ಘನನಿಬಿಡಂ ದ್ವಾದಶ ಯೋ ।
ಜನ ವಿಸ್ತೃತಮಿಂದ್ರನೀಲಮಯಮತಿರುತ್ತಂ ॥
ಧನದ ಕೃತಂ ನೆಲಸಿರ್ದುದು ।
ಘನಪಥದೊಳ್ ಸಮವಸರಣಭೂಮಿವಿಭಾಗಂ ॥ ೧೨ ॥

ವಚನ ॥ ಆ ಮಹೀಮಂಡಲವು ಭೂಮಂಡಲದಿಂದ ಮೇಲೆ ಐದುಸಾವಿರ ( ೫೦೦೦ ) ಬಿಲ್ಲಿನಂತರದಲ್ಲಿ ತಾರಾಪಥದೊಳ್ ಸೂರ್ಯಮಂಡಲದಂತಿರುವುದು. ಅದರ ನಾಲ್ಕು ದಿಕ್ಕುಗಳಲ್ಲಿಯೂ ಪಾದಲೇಪೌಷದಿ ಸಮಾನಗಳಾದ ಮಣಿಮಯಗಳಾದ ಸೋಪಾನಂಗಳು ವಿಂಶತಿಸಹಸ್ರ ( ೨೦೦೦೦ ) ಗಳು ರಚಿಸಲ್ಪಟ್ಟಿರುವವು. ಅವುಗಳ ಅಗ್ರಭಾಗದಲ್ಲಿ ಪ್ರಾಸಾದಚೈತ್ಯಭೂಮಿಯುಂ, ಜಲಖಾತಿಕಾಕ್ಷಾತಲವುಂ, ವಲ್ಲೀವನಾವನಿಯುಂ, ಉಪವನಮೇಧಿನಿಯುಂ, ಧ್ವಜಮಾಲಾಕುವಲಯಮುಂ, ಕಲ್ಪಮಹೀರುಹಮಹೀತಲವುಂ, ಭವನಸಂದೋಹವಸುಂಧರೆಯುಂ, ದ್ವಾದಶಗಣಪರಿಷ್ಕೃತ ಪವಿತ್ರತರ ಕ್ಷೇತ್ರವುಂ, ಪ್ರಥಮಪೀಠವುಂ ದ್ವಿತೀಯಪೀಠವುಂ, ಸಿಂಹವಿಷ್ಟರನಿವಿಷ್ಟರ ತೃತೀಯಪೀಠವುಂ, ಯೆಂದಿವು ಏಕಾದಶ ಭೂಮಿಗಳಾಗುವವು. ಅಲ್ಲಿ ಹೇಮಮಯಂಗಳುಂ, ಮಣಿಮಯ ಸೋಪಾನಗಳುಂ, ಅಲಂಕೃತಗಳಾಗಿ ಜ್ಯೋತಿರಮರದೌವಾರಿಕ ರಮಣೀಯಂಗಳಾದ ನಾಲ್ಕು ಗೋಪುರದ್ವಾರಂಗಳಿಂದೊಪ್ಪಿ ತದ್ಭೂತ ಮಂಡಲವನ್ನು ಕುಂಡಲಾಕಾರದಿಂ ಸುತ್ತಿರ್ದ ಪಂಚರತ್ನಚೂರ್ಣಘಟಿತ ಸಾರಸರಾಸಮಾಪಮ ಪ್ರಾಕಾರಾಭ್ಯಂತರದಲ್ಲಿ ಮಹಾವೀಧಿಗಳ ನಡುವೆ ಚತುರ್ಗೋಪುರಾನ್ವಿತ ತ್ರಿಶಾಲಪರಿವೇಷ್ಟಿತ ಮಧ್ಯಗತ ತ್ರಿಪೀಠಪ್ರತಿಷ್ಠಾಪಿತ ಚತುಸ್ಸರೋವರರಂಜಿತ ದ್ವಿಚತ್ವಾರಿ

(೪೨) ಕುಂಡಮಂಡಿತಸುರಕುಮಾರಾಭಿಷಿಕ್ತ ಜಿನಬಿಂಬಚತುಷ್ಟಯಾಭಿಷ್ಟಿತ ಮಸ್ತಕ ದೇದೀಪ್ಯಮಾನಮಾನಸ್ತಂಭ ಚತುಷ್ಟಯಾಭಿರಾಮಮುಂ ಮಿಥ್ಯಾದೃಷ್ಟಿಗಳ ಮಾನಗರ್ವಮನೇನನಪ್ಪೊಡಂ ಮಾಗಲೀಯಂದ ಮಾನಸ್ತಂಭದಿಂ ಮಾನಸ್ತಂಭಂ ಬರಮೇಕೈಕಜಿನಾಲಯಾಂತರಿತ ವಾಪೀಕೂಪಸರೋವರಸಮನ್ವಿತ ವನಷಂಡಮಧ್ಯಗತ ಪಂಚಪಂಚಪ್ರಾಸಾದರಮಣೀಯಗವ್ಯೂತಿ ದ್ವಯವಿಷ್ಕಂಭಮುಮಪ್ಪ ಪ್ರಾಸಾದಚೈತ್ಯಭೂಮಿಯಕ್ಕುಂ.

ಅಲ್ಲಿಂದತ್ತ ರಜತಮಯಂಗಳುಂ ಮಣಿಮಯಸೋಪಾನಂಗಳಿಂದಲಂಕೃತಂಗಳುಂ ಜ್ಯೋತಿಷ್ಕ ದೌವಾರಿಕರಕ್ಷಿತಂಗಳಾದ ಗೋಪುರಚತುಷ್ಟಯದಿಂದೊಪ್ಪುವ ಹಾಟಕ (ಸುವರ್ಣ) ಮಯ ವೇದಿಕಾಭ್ಯಂತರದಲ್ಲಿ ನಾನಾಸೋಪಾನಶ್ರೇಣಿ ಜಲಜಜಲಚರವಿಹಂಗಮನಿನದ ಜಲಕ್ರೀಡಾನಿರತ ಸುರಖಚರಸಂದೋಹಸಂಸೇವ್ಯ ಸ್ವಚ್ಛಜಲಸಂಪೂರ್ಣವಾದ ದಶಯೋಜನಪ್ರಮಾಣ ವಿಸ್ತಾರದ ಜಲಖಾತಿಕಾ ಭೂಮಿಯಕ್ಕುಂ.

ಅಲ್ಲಿಂದತ್ತ ರೂಪ್ಯಮಯಂಗಳಿಂ ಮಣಿಮಯಸೋಪಾನಂಗಳುಂ ಜ್ಯೋತಿಷ್ಕದ್ವಾರಪಾಲಕ ಪರಿಪಾಲಿತಂಗಳುಮಿಂತೀ ನಾಲ್ಕುಬಾಗಿಲುವಾಡಗಳಿಂದೊಪ್ಪುವ ಕಾಂಚನಮಯ ವೇದಿಕೆಯಿಂದೊಳಗೆ ಗಂಧಲುಬ್ಧಮತ್ತಮಧುಕರಝುಂಕಾರಕೋಲಾಹಲ ಪುನ್ನಾಗತಿಲವಕುಳ ಮಾಧವೀಶತಪತ್ರಕಾದಿ ನಾನಾಲತಿಕಾಭಿರಾಮಮುಂ ಲತಾಭವನಸಂದೋಹಸಂಸೇವ್ಯಮುಂ ಕ್ರೀಡಾನಿರತಸುರಮಿಥುನ ಶತಸಮನ್ವಿತಮಪ್ಪೊಂದು ಯೋಜನಪ್ರಮಾಣ ವಿಸ್ತಾರದ ವಲ್ಲೀವನಾವನಿಯೆಸಗುಂ.

ಅಲ್ಲಿಂದತ್ತ ರಜತಮಯಂಗಳುಂ, ಮಣಿಮಯಸೋಪಾನಂಗಳಿಂದಲಂಕೃತಂಗಳುಂ, ಯಕ್ಷಕುಮಾರರಕ್ಷಿತಗಳಾದ ನಾಲ್ಕು ಗೋಪುರಗಳಿಂದೊಪ್ಪುವ ಸರಕ್ತತಪನೀಯಚ್ಛಾಯಾ ಪ್ರಾಕಾರದಿಂದೊಳಗೆ:—

ಕಂದ ॥ ತ್ರಿದಶಮಿಥುನ ಪ್ರಸಂಗದಿ ।
ಸುದಿತ ಮಹಾರಾಗ ವಿಹಂಗಕುಲನಿಸ್ವನದಿಂ ಪು- ।
ರಿದೆಸೆವಶೋಕ ಸಪ್ತ- ।
ಚ್ಛದಚಂಪಕ ಚೂತವನಚತುಷ್ಟಯಮಕ್ಕುಂ ॥ ೧೩ ॥

ಆ ವನಚತುಷ್ಟಯಮಧ್ಯದಲ್ಲಿ ಚತುರ್ಗೋಪುರಾನ್ವಿತ ತ್ರಿಸಾಲಪರಿವೇಷ್ಟಿತಂಗಳುಂ ತ್ರಿಪೀಠಂ ಪ್ರತಿಷ್ಠಾಪಿತಂಗಳುಂ ಪ್ರಾತಿಹಾರ್ಯ್ಯಸಮನ್ವಿತ ಪರ್ಯ್ಯಂಕಸ್ಥಿತಜಿನಬಿಂಬ ಚತುಷ್ಟಯವಿರಾಜಿತಂಗಳುಮಾಗಿ ಸೊಗಯಿಸುವ ಚೈತ್ಯವೃಕ್ಷಗಳಿಂದಂ ನಮೇರುಮಂದಾರಪಾರಿಜಾತ ತಾಳ ಹಿಂತಾಳ ತಮಾಳ ಜಂಬೂ ಜಂಬೀರಾದಿ ಬಹುಪ್ರಕಾರ ಭೂರುಹ ನದಿಪುಲಿನಸ್ಥಾನ ರಮಣೀಯವಾದ ಕೃತಕಗಿರಿಗಳಿಂದಂ ಲತಾಭವನಗಳಿಂದಂ ಮಂದಾನಿಲಾಂದೋಲಿತ ಧ್ವಜಗಳಿಂದಂ ಮತ್ತಂ ಮಹಾವೀಥಿಗಳಿಕ್ಕೆಲಂಗಳೊಳಂ ಶಶಧರಧವಲಂಗಳುಂ ಅತ್ಯುನ್ನತಂಗಳಾಗಿಯೊಂದೊಂದು ಮೂವತ್ತೆರಡು ನಾಟಕಗಳುಂ ಒಂದೊಂದು ನಾಟಕದಲ್ಲಿ ಮೂವತ್ತೀ

ರ್ವರು ನರ್ತಕಿಯರುಂ ಇರುವ ಮೂರುನೆಲೆ ಯೆರಡೆರಡು ನಾಟ್ಯಶಾಲೆಗಳಿಂ ನಾಟ್ಯಶಾಲೆಗಳ ಸಮೀಪದೊಳತಿ ಬಹಳ ದಹ್ಯಮಾನ ಕಾಳಾಗರುಧೂಪಧೂಮಂ ಗವ್ಯೂತಿಧೂಪಕುಂಭಗ ಳಿಂದಮೊಪ್ಪುವ ಉಪವನಭೂಮಿಯೊಂದುಯೋಜನ ವಿಸ್ತೀರ್ಣಮಾಗಿ ನೆಲಸಿರುವದು.

ಅಲ್ಲಿಂದತ್ತ ರಜತಮಯಂಗಳುಂ, ಮಣಿಮಯಸೋಪಾನಾಲಂಕೃತಂಗಳುಂ, ಯಕ್ಷೇಂದ್ರ ರಕ್ಷಿತಗಳಾದ ಗೋಪುರದ್ವಾರಚತುಷ್ಟಯವಿರಾಜಮಾನ ಕಾರ್ತಸ್ವರವೇದಿಕಾಭ್ಯಂತರದಲ್ಲಿ—

ಕಂದ॥ ಗಜಸಿಂಹವೃಷಭಗರುಡಾಂ।
ಬುಜಮಾಲಾಹಂಸಚಕ್ರಶಿಖಿವಸ್ತ್ರವ್ರೀಹ॥
ಧ್ವಜವುಂ ತತ್ಪರಿವಾರ।
ಧ್ವಜವುಂ ಧ್ವಜಭೂಮಿಯೊಳ್ ವಿರಾಜಿಸುತ್ತಿರ್ಕುಂ॥ ೧೪॥

ಅಲ್ಲಿಂದ ನಾಲ್ಕು ದಿಕ್ಕುಗಳಲ್ಲಿಯೂ ಪಂಚವಿಂಶತಿ (೨೫) ದಂಡೋತ್ತರಿತಾಷ್ಟಾಶೀತ್ಯಂಗ ಳುಂ, ಬಹಲ ಸುವರ್ಣಸ್ತಂಭಾಗ್ರದಲ್ಲಿ ಮಂದಮಾರುತಾಂದೋಲಿತಂಗಳಾಗಿ ಕಣ್ಣಿಗೂ ಮನಕ್ಕೂ ಶೋಭಿಸುವ ಮಹಾಧ್ವಜಗಳಲ್ಲಿ ವೊಂದೊಂದಕ್ಕೆ ನೂರೆಂಟಾಗಲು ಅಂತು ನಾಲ್ಕು ಸಾವಿರದ ಮುನ್ನೂರಿಪ್ಪತ್ತು (೪೩೨೦) ಆಗುವವು. ಮತ್ತೊಂದಕ್ಕೆ ನೂರೆಂಟಾಗಲು ಅಂತು ಕ್ಷುಲ್ಲಕ ಧ್ವಜಗಳು ನಾಲ್ಕುಲಕ್ಕೆಯುಮರುವತ್ತಾರುಸಾಸಿರದ್ಮೆನೂರರುವತ್ತು (೪೬೬೫೬೦) ಆಗುವವು, ಈ ಪ್ರಕಾರವಾದ ಧ್ವಜಭೂಮಿಯ ವಿಸ್ತಾರವು ಒಂದು ಯೋಜನವಿರುವದು.

ಅಲ್ಲಿಂದತ್ತ ರಜತಮಯಂಗಳುಂ ಮಣಿಮಯಸೋಪಾನಾಲಂಕೃತಂಗಳುಂ, ನಾಗೇಂದ್ರ ರಕ್ಷಿತಂಗಳಾದ ನಾಲ್ಕುಬಾಗಿಲುವಾಡಗಳಿಂದ ಪ್ರಕಾಶಿಸುವರ್ಜುನಮಯ ಪ್ರಾಕಾರದಿಂದೊಳಗೆ,

ಕಂದ॥ ದೇವೋತ್ತರಕುರುಗಳ ಕ-।
ಲ್ಪಾವನಿಜಾತಂಗಳೆಲ್ಲಮಿದಲಂತದ ಕ-॥
ಲ್ಪವನಿಜಕ್ಕೆಣೆಯಿಲ್ಲೆನೆ।
ದೇವರಕಲ್ಪಾವನೀತಲಂ ಸೊಗಯಿಸುಗುಂ॥ ೧೫॥

ಅಂತು ಸಂಕಲ್ಪಾತೀತಕಲ್ಪನೋಪೇತದಶವಿಧಕಲ್ಪಪಾದಪಪ್ರಕೀರ್ಣವುಂ, ನಾನಾಲತಾ ಮಧ್ಯಗತ ಚಾಮೀಕರಾಂದೋಲಿತಸಂದೋಹಸಂಸೇವ್ಯವುಂ, ಸುರಮಿಥುನಶತಕ್ರೀಡಾನಿಡವುಂ, ಪೂರ್ವೋಕ್ತಚೈತ್ಯವೃಕ್ಷವಿಧಾನಸಿದ್ಧವೃಕ್ಷರಮಣೀಯವುಂ, ಮಹಾವಿದ್ಯುಭಯ ಪಾರ್ಶ್ವಗತ ಪೂರ್ವಚಶಪ್ರಮಾಣನಾಟ್ಯಶಾಲಾಧೂಪಕುಂಭಸಂಭೃತವುಂ, ಏಕಯೋಜನವಿಷ್ಕಂಭವಾದ ಕಲ್ಪಮಹೀರುಹತಲವುಂ ಕಲ್ಪಾಧಿಪತಿಗೂ ಕೂಡ ಹೊಗಳಲಸಾಧ್ಯವೆನಿಸಿತು. ಅಲ್ಲಿಂದತ್ತ ರೂಪ್ಯಮಯಂಗಳುಂ ಮಣಿಮಯಸೋಪಾನಂಗಳಿಂ ಅಲಂಕೃತಗಳುಂ, ನಾಗದೌವ್ವಾರಿಕ ರಮಣೀಯಂಗಳಾದ ಗೋಪುರದ್ವಾರಚತುಷ್ಟಯಪ್ರಯುಕ್ತನಿರ್ಣಿಕ್ತ ಸ್ವರ್ಣವೇದಿಕಾಭ್ಯಂತರ ದಲ್ಲಿ ಸುರಮಿಥುನಶತಗೀತವಾದ್ಯನೃತ್ಯ ನಾನಾವಿನೋದ ಜಿನಾಭಿಷವಣ ಜಿನಪೂಜಾ ಜಿನ ಗುಣಸ್ತವನ ಪುರಾಣಕಥನ ಕಲಕಲರವರಮ್ಯಂ ಬಹುಭೇದಹರ್ಮ್ಯಗಳಿಂದಂ ಮತ್ತು ಆ ವೀಥಿಗಳ ನಡುವೆ ಮಾನಸ್ತಂಭೋನ್ನತಂಗಳುಂ, ಜಿನೇಂದ್ರಪ್ರತಿಮಾಪ್ರಕೀರ್ಣಕಂಗಳುಂ,

ರತ್ನತೋರಣಶತಾಂತರಿತಂಗಳುಂ, ದೇವಮಾನವದಾನವಾದಿಗಳಿಂದ ಅಭ್ಯರ್ಚನೀಯಂಗಳುಂ, ಪೂಜಾನೀಯಂಗಳುಂ, ಆದ ಪೊಂಭತ್ತೊಂಭತ್ತು ಸ್ತೂಪೆಗಳಿಂದ ಒಪ್ಪುವ ಕ್ರೋಶದ್ವಯ ವ್ಯಾಸಮಪ್ಪ ಭವನಭೂಮಿಭವನಲೋಕಮನದರೀಕೃತಂ ಮಾಡಿರ್ದುದನಂತೂ ॥

## ಸೂತ್ರಂ ॥ ದ್ವಾದಶಗಣಾಃ ॥ ೧೨ ॥

ಮತ್ತು ಅಲ್ಲಿಂದತ್ತಲಾಗೆ ಇಂದ್ರನೀಲಮಯ, ಮಾಣಿಕ್ಯಮಯಂಗಳುಂ, ಮಣಿಮಯ ಸೋಪಾನಾಲಂಕೃತಂಗಳುಂ, ಕಲ್ಪವಾಸಿ ತ್ರಿದಶಪರಿಪಾಲಿತಂಗಳಾದ ಚತುರ್ಗೋಪುರಗಳಿಂದ ಪ್ರಕಾಶಿಸುವ ಸ್ಫಟಿಕಮಯ ಷೋಡಶಭಿತ್ತಿಗಳಿಂದಂತರಿತಂಗಳಾಗಿರುವ ಹನ್ನೆರಡು ಕೋಷ್ಟ ಗಳಲ್ಲಿ ದ್ವಾದಶಗಣಂಗಳಿರುವರು. ಹ್ಯಾಗಂದರೆಃ—

ಸರ್ವಜ್ಞವೀತರಾಗಭಟ್ಟಾರಕನ ಬಲಭಾಗದಲ್ಲಿ ಕರಕಮಲಂಗಳಂ ಮುಗಿದು ೧ ಗಣಧರದೇವರುಂ, ೨ ಪೂರ್ವಧರರುಂ, ೩ ಕ್ರಿಯಾಋದ್ಧಿಪ್ರಾಪ್ತರುಂ, ೪ ಅವಧಿಜ್ಞಾನಿ ಗಳುಂ, ೫ ಮನಃಪರ್ಯಯಜ್ಞಾನಿಗಳುಂ, ೬ ವಾದಿಗಳುಂ, ೭ ಶಿಕ್ಷಕರುಮೆಂಬ ಸಪ್ತಭೇದದ ಋಷಿಸಮೂಹವಿರುವದು.

ಅಲ್ಲಿಂ ಕೆಲದೊಳು ಕಲ್ಪವಾಸಿಗದೇವಿಯರಿರುವರು, ಅಲ್ಲಿಂದ ಕೆಲದಲ್ಲಿ ಆರ್ಜಿಕಾ ಸಮೂಹವುಂ, ಶ್ರಾವಕಿನಿವಹಮುಂ ಇರುವದು. ಅಲ್ಲಿಂ ಕೆಲದಲ್ಲಿ ಮಹಾವೀಥಿಯಿರುವದು. ಅಲ್ಲಿಂ ಕೆಲದಲ್ಲಿ ಜ್ಯೋತಿಷ್ಕದೇವಿಯರಿರುವರು, ಅಲ್ಲಿಂ ಕೆಲದೊಳು ವಾನವ್ಯಂತರ ದೇವಿಯ ರಿರುವರು, ಅಲ್ಲಿಂ ಕೆಲದಲ್ಲಿ ಭವನವಾಸಿಗದೇವಿಯರಿರುವರು, ಅಲ್ಲಿಂ ಕೆಲದಲ್ಲಿ ಮಹಾವೀಥಿ ಯಿರುವದು, ಅಲ್ಲಿಂ ಕೆಲದಲ್ಲಿ ವ್ಯಂತರದೇವರಿರುವರು, ಅಲ್ಲಿಂ ಕೆಲದಲ್ಲಿ ಜ್ಯೋತಿಷ್ಕದೇವ ರಿರುವರು, ಅಲ್ಲಿಂ ಕೆಲದಲ್ಲಿ ಮಹಾವೀಥಿಯಿರುವದು, ಅಲ್ಲಿಂ ಕೆಲದಲ್ಲಿ ಕಲ್ಪವಾಸಿಗದೇವರಿ ರುವರು, ಅಲ್ಲಿಂ ಕೆಲದಲ್ಲಿ ಚಕ್ರವರ್ತಿ, ಮಂಡಲೀಕ, ಮಹಾಮಂಡಲೀಕ, ಮಕುಟಬದ್ಧಾದಿ ಭೂಚರ, ಖೇಚರರು ಇರುವರು, ಅಲ್ಲಿಂ ಕೆಲದಲ್ಲಿ ಸಿಂಹ, ವ್ಯಾಘ್ರ, ಸರ್ಪ, ಸರಿಸ್ಪೃಹ, ಕರಿ, ತುರಗ, ಮಹಿಷಿ, ಮೇಷ, ಮೂಷಕ, ಬಿಡಾಲ, ವಿವಿಧವಿಹಂಗಮ ಪ್ರಮುಖತಿರ್ಯ ಗ್ಯೋನಿಜಂಗಳು ಪರಸ್ಪರ ವಿರೋಧಗಳಿಲ್ಲದೆ ಉಪಶಾಂತಂಗಳಾಗಿ ನೆರೆದು ಒಂದೇ ಸ್ಥಳದಲ್ಲಿ ರುವವು. ಅಲ್ಲಿಂ ಕೆಲದಲ್ಲಿ ಮಹಾವೀಥಿಯಿರುವದು, ಮತ್ತು ಪ್ರದಕ್ಷಿಣವಾಗಿ ಪರಿವೇಷ್ಟಿಸಿ ಕೊಂಡಿರ್ದ ದ್ವಾದಶಗಣಂಗಳಿಂದೊಪ್ಪುವ ಒಂದು ಗಾವುದ ಅಗಲದ ಗಣಭೂಮಿಯಿರುವದು, ಆ ಗಣಭೂಮಿಯು ಹ್ಯಾಗಂದರೆಃ—

ಆರ್ಯೆ ॥ ಋಷಿಕಲ್ಪಜವನಿತಾರ್ಯ್ಯಾ । ಜ್ಯೋತಿರ್ವನಭವನಯುವತಿಭುವವನಜಾ ।
ಜ್ಯೋತಿಷ್ಕಕಲ್ಪದೇವಾ । ನರತಿರ್ಯಂಚೋ ವಸಂತಿವೇಷ್ವನುಪೂರ್ವಂ ॥

ಮತ್ತಮಲ್ಲಿಂದತ್ತಲು ಇಂದ್ರನೀಲಮಾಣಿಕ್ಯಮಯಂಗಳುಂ, ಮಣಿಮಯಸೋಪಾನಾ ಲಂಕೃತಂಗಳುಂ, ವೈಮಾನಿಕದೇವದ್ವಾರಪಾಲಕವಿರಾಜಿತಂಗಳಾದ ಚತುರ್ಗೋಪುರಸಮನ್ವಿತ ಸ್ಫಟಿಕಮಯವೇದಿಕಾನಭಾಗದೊಳು ಪೊಳೆವ—

ಕಂದ ॥ ಅನುಪಮವೈಡೂರ್ಯ ।
ಕನತ್ಕಲಶತ್ಸರ್ವರತ್ನಮಯಮಪ್ಪೆಂಟುಂ ॥
ಧನುಗಳುನಾಲ್ಕುಂ ಕ್ರಮದಿಂ- ।
ದ ನಾಲ್ಕುಮುತ್ಸೇದಮಪ್ಪ ಪೀಠತ್ರಯದೊಳ್ ॥ ೧೬ ॥

ಅಲ್ಲಿಂದತ್ತಲು ನಾಲ್ಕು ದೆಶೆಯೊಳಂ ಧರ್ಮಚಕ್ರಮಂ ಧರಿಸಿರ್ಪ ಯಕ್ಷೇಂದ್ರರಿಂ ನಾನಾವಿಧಾರ್ಚನೋಪಕರಣಂಗಳಿಂ ಬಹುವಿಧ ದಿವ್ಯಾರ್ಚನಾದ್ರವ್ಯಗಳಿಂ ಮನೋಜ್ಞನಾಗಿ ಪಂಚಾಶದಧಿಕ ಸಪ್ತಶತಶರಾಸನ ವಿಷ್ಕಂಭವಾದ ಪ್ರಥಮ ಪೀಠವಿರುವದು.

ಅಲ್ಲಿಂದ ಮೇಲೆ ಬಹುವಿಧ ಧ್ವಜಪ್ರಜೋರ್ಚನಾಲಂಕೃತವಾಗಿ ಪೂರ್ವಪೀಠಪ್ರಮಾಣ ವಿಸ್ತೀರ್ಣವಾದ ದ್ವಿತೀಯ ಪೀಠವಿರುವದು.

ಅಲ್ಲಿಂದ ಮೇಲೆ ಸಹಸ್ರಚಾಪ ವಿಸ್ತಾರವಾಗಿ ಸೂರ್ಯಬಿಂಬಾಕಾರವನ್ನು ಕೈಕೊಂಡು ಥಳಥಳಿಸ ಹೊಳೆಯುವ ಮೂರನೆಯ ಪೀಠದ ತಳದೊಳಾರುನೂರು (೬೦೦) ದಂಡದಗಲವುಂ ನೀಳಮುಮೊಂಬೈನೂರು (೬೦೦) ದಂಡೋತ್ಸೇದವಾದ ಗಂಧಕುಟಿಯು ಪರಮನ ಚರಮ ಶರೀರಂಗಳೊಳು ಕೂಡಿ ಸುಗಂಧಮಯವಾಗಿ ಸೊಗಯಿಸುವದು. ಅದು ತ್ರಿಭುವನಸ್ವಾಮಿಯ ನಿವಾಸವಾಗುವದು. ಅಲ್ಲಿ—

## ಸೂತ್ರಂ ॥ ಅಷ್ಟಮಹಾಪ್ರಾತಿಹಾರ್ಯಾಣಿ ॥ ೧೨ ॥

ಕಂದ ॥ ಶ್ರೀಮದಶೋಕಂ ಮುಕ್ಕೊಡೆ ।
ಪೂಮಳೆವರಭಾಷೆವಿಷ್ಟರಂ ಚಮರಿಜಂ ॥
ಭಾಮಂಡಲಂ ತ್ರಿಲೋಕ ।
ಸ್ವಾಮಿತ್ವದ ಲಾಂಛನಂಗಳಾನಕ ಸಹಿತಂ ॥ ೧೭ ॥

ಗಾಹೆ ॥ ಅಠರಸಮಹಾಭಾಸಾ ಖುಲ್ಲಯ ಭಾಸಾಸಯಾಯಿಸತ್ತಹಾ ।
ಅಕ್ಖರ ಅಂಣ ಖರಂಪಯ ಸಂಣಿ ಜೀವಾಣಸಯಳ ಭಾಸಾವೋ ॥ ೩೮ ॥
ಎದಾಣಿಭಾಸಾಣಿ ತಾಳವದತ್ತೋಠ್ಠಕಂಥವಾವಾರಂ ।
ಪರಿಹರಿಯ ಯಕ್ಕಕಾಳಂ ಭಬ್ಬಜಣೇದಿಂಬಚಾಸಿತ್ತಂ ॥ ೩೯ ॥
ಪಗಡಿಯೇ ಅಖ್ಖದಿವೋಸಝ್ಝುತ್ತಿದಯಂವಿಠ್ಠಣವಮುಹುತ್ತಾಣಿ ।
ಣಿಸ್ಸರದಿಣಿದುಪಮಾಣೋದಿಬ್ಬಝುಣಿಜಾಉಚೋಯಣಯಂ ॥ ೪೦ ॥
ಅವಸೇಣಕಾಳಸಮಯೇ ಗಣಹದೇವಿಚ್ಛಕ್ಕವಟ್ಟೀಣಂ ।
ಪಣ್ಹಾಣುರುವಮಥ್ಥಂ ದಿಬ್ಬಝುಣಿಸತ್ಥಭಗ್ಗಿಹಿಂ ॥ ೪೧ ॥
ಸಿಯಅಥ್ಥಿಣಥ್ಥಿ ಉಭಯಂ ಅವ್ವೇತವ್ವಂ ಪುಣೋವಿತತ್ತಿದಯಂ ।
ದಬ್ಬಂಹಿಸತ್ತಭಂಗಿ ಆದೇಸವಸೇಣಸಂಭದಿ ॥ ೪೨ ॥
ಛದ್ದಬ್ಬಪಂಚಅಥ್ಥಿ ಸತ್ತವಿತಚ್ಛಾಯಣವಪಯಥ್ಥಾಯ ।
ಣಯಣಿಖ್ಖೇಪಪಮಾಣಂ ದಿಬ್ಬಝುಣಿ ಭಣಯಿ ಭಂಬಾಣಂ ॥ ೪೩ ॥
ಜಿಣವಂದಣಾಪಯಟ್ಟಾ ಪಲ್ಲಾಸಂಖೇಜ್ಜಭಾಗಪರಿಮಾಣಾ ।
ಚಿತ್ತಂತಿವಿವಿಹಜೀವಾ ಯೆಕ್ಕೆಕ್ಕೆಸಮವಸರಣೇಸು ॥ ೪೪ ॥

ಈ ಯೇಳು ಗಾಥೆಗಳ ಅರ್ಥವು ಹ್ಯಾಗಂದರೆ—ಹದಿನೆಂಟು ಮಹಾಭಾಷೆಯುಂ, ಏಳು ನೂರು ಕ್ಷುಲ್ಲಕ ಭಾಷೆಯುಂ, ಅಕ್ಷರಾನಕ್ಷರಾತ್ಮವುಂ ಸಂಜ್ಞೀಜೀವಂಗಳೆಲ್ಲ ಭಾಷೆಯಯುಂ ಆ ಭಾಷೆಯು ತಾಲ್ವೋಷ್ಟಪುಟ ವ್ಯಾಪಾರರಹಿತವಾಗಿ ಯುಗಪದ್ಭವ್ಯಜೀವಂಗಳ್ಗೆ ನುಡಿವ ದಿವ್ಯ ಭಾಷೆಯುಂ ಸ್ವಭಾವದಿಂದ ಸ್ಖಲಿತವುಂ ಸಂಧ್ಯಾತ್ರಯದಲ್ಲಿ ನವಮುಹೂರ್ತಂ (೯) ಪೊರಮಡುವದು. ಉಪಮಾತೀತವೊಂದುಯೋಜನಪರ್ಯಂತ ಮೂರುಸಂಧ್ಯಾಕಾಲಗಳಲ್ಲಿ ಅಲ್ಲದೆ ಉಳಿದ ಸಮಯದಲ್ಲಿ ದೇವೇಂದ್ರ-ಚಕ್ರವರ್ತಿ-ಗಣಧರಪ್ರಶ್ನಾನುಸಾರದಿಂದ ದಿವ್ಯಧ್ವನಿಯು ಸಪ್ತಭಂಗಿಸಮಾಲಿಂಗಿತವಾಗಿ ನುಡಿಯುವದು. ೧ ಸ್ಯಾದಸ್ತಿ, ೨ ಸ್ಯಾನ್ನಾಸ್ತಿ, ೩ ಸ್ಯಾದಸ್ತಿನಾಸ್ತಿ, ೪ ಸ್ಯಾದವಕ್ತವ್ಯಂ, ೫ ಸ್ಯಾದಸ್ತ್ಯವಕ್ತವ್ಯಂ, ೬ ಸ್ಯಾನ್ನಾಸ್ತ್ಯವಕ್ತವ್ಯಂ, ಸ್ಯಾದಸ್ತಿನಾಸ್ತ್ಯವಕ್ತವ್ಯವೆನ್ನೊಂದು ಸಪ್ತಭಂಗ್ಯಾತ್ಮಕವುಂ, ಷಡ್ದ್ರವ್ಯ, ಪಂಚಾಸ್ತಿಕಾಯ, ಸಪ್ತತತ್ವ, ನವಪದಾರ್ಥಗಳನ್ನು ನಯನಿಕ್ಷೇಪಪ್ರಮಾಣಗಳಿಂದ ದಿವ್ಯಧ್ವನಿಯು ಭವ್ಯರಿಗೆ ಹೇಳುವದು. ಜೀವನಂದನಾಪ್ರವೃತ್ತರುಂ ಪಲ್ಯಾಸಂಖ್ಯಾತಭಾಗಮಾತ್ರಂ ನಾನಾಜೀವಂಗಳು ಸಮವಸರಣದಲ್ಲಿರುವವು. ಎನಿಸೀಯಷ್ಟಮಹಾಪ್ರಾತಿಹಾರ್ಯಂಗಳಿಂದ ಕೂಡಿ ತ್ರಿಭುವನೈಕವಲ್ಲಭನಿರುವನು, ಮತ್ತು ಪ್ರಾಕಾರಂಗಳ ವೇದಿಕೆಗಳುತ್ಸೇದ ಪರಮನಶರೀರಕ್ಕೆ ನಾಲ್ವಡಿಯಾಗುವವು. ತೋರಣಂಗಳುಮವಕ್ಕೆಮನಿತಾನುಮುದ್ದಮುಮಕ್ಕುಂ.

ಕಂದ ॥ ಮಿಳಿರ್ವಪತಾಕೆಯಿನೆಸೆವ- ।
ಟ್ಟಳೆಯಿಂದೆಸಮಾನಮಪ್ಪವಿಸ್ಕೃತವೇದಿ ॥
ಕುಳಮುಸಮಾನಂ ವಿಸ್ಕೃತ ।
ವಿಷಶಪ್ರಾಕಾರಮುಂ ನಿರಂತಮೆಸೆಗುಂ ॥ ೧೮ ॥

ವಚನ॥ ಮತ್ತಂ ಮಾನಸ್ತಂಭಗಳುಂ, ಪ್ರಾಸಾದಂಗಳುಂ, ಚೈತ್ಯಾಲಯಂಗಳುಂ, ಚೈತ್ಯವೃಕ್ಷಂಗಳುಂ, ಸಿದ್ಧವೃಕ್ಷಂಗಳುಂ, ಧ್ವಜದಂಡಂಗಳುಂ, ಗೋಪುರದ್ವಾರಂಗಳುಂ, ಕೃತಕಗಿರಿಗಳುಂ, ನವಸ್ತೂಪಂಗಳುಂ, ಲಕ್ಷ್ಮೀಮಂಟಪವುಮೆಂದಿವು ದ್ವಾದಶ ಗಣದೇಹಪ್ರಮಾಣಂಗಳು. ಮತ್ತಂ ಪೊಳಗಣ ಪೊರಗಣ ಜಗತಿಗಳೊಳಮೆಲ್ಲಾ ಗೋಪುರಂಗಳೊಳು ನವನಿಧಿಯುಂ, ವಿಲಸದುಚಿತಾಷ್ಟಮಂಗಳಕುಲಮುಂ, ಪ್ರತ್ಯೇಕದಷ್ಟಶತ (೧೦೮) ಮೆಸೆದಿಕ್ಕುಂ. ನೈಸರ್ಪಪದ್ಮ, ಪಿಂಗಳ, ಭಾಸುರಮಾಣವಕ, ಶಂಖ, ಪಾಂಡುಕ, ಕಾಳಶ್ರೀ, ಸರ್ವರತ್ನ ತೇಜೋದ್ಭಾಸಿ, ಮಹಾಕಾಳಮೆಂಬುವಿವು ನವನಿಧಿಗಳು.

ಗಾಹೆ ॥ ಛತ್ತೇಹಿಯ ಚಮರೇಹಿಯ । ದಪ್ಪಣಭಂಗಾರತಾಲವಟ್ಟೇಹಿಂ ॥
ಕಲಸೇಹಿ ಪುಪ್ಪವಡಿಲಿಯ । ಸುವಇತ್ಥಯದೀವಣಿವಹೇಹಿಂ ॥ ೪೫ ॥

ಛತ್ರ, ಚಾಮರ, ದರ್ಪಣ, ಭೃಂಗಾರ (ಜಾಗಟೆ), ತಾಲವೃಂತ (ಪಂಖ್ಯೆ), ಪುಷ್ಪಮಾಲಾವೃತಕಲಶ, ಸುಪ್ರತಿಷ್ಠಕ (ಸ್ವಸ್ತಿಕ) ದೀಪವೆಂಬಿವು ಅಷ್ಟಮಂಗಲದ್ರವ್ಯಗಳು. ಮತ್ತೂ ಧೂಳೀಪ್ರಾಕಾರದ ಪೊರಗೊಳಿಯೆ ನೂರೆಸೆವ ಮಕರತೋರಣಮೆಲ್ಲಾಸಾಲೆಗಳ ವೇದಿಗಳು ಮುಂದೊಳಿಯೆ ನೂರ್ನೂರು ರತ್ನತೋರಣಗಳಾಗುವವು. ಮತ್ತಂ ಅದರ ವಿಸ್ತಾ

ರಂ ಗವ್ಯೂತಿಪ್ರಮಾಣವಾಗುವದು. ಮಾವೀಥಿಗಳ ಇಕ್ಕೆಲಗಳಲ್ಲಿ ಧೂಳೀಪ್ರಾಕಾರದಿಂದ ಸರ್ವ ವ್ಯಂತರವೇದಿಕೆಗಳವರಿಗೂ ಸ್ಫಟಿಕಮಯ ಭಿತ್ತಿಗಳು ನಿಂತಿರುವವು. ಈ ರೀತಿಯಾದ ಅನೇಕ ಅತಿಶಯಗಳಿಂದ ಕೂಡಿದ ಸಮವಸರಣದಲ್ಲಿ—

ಶ್ಲೋಕ ॥ ತತ್ರ ಚ ಮೃತ್ಯುರ್ಜನ್ಮ ಚ ವಿದ್ವೇಷೋ ನೈವ ಮನ್ಮಥೋನ್ಮಾದಃ ॥
ರೋಗಾತಂಕಬುಭುಕ್ಷಾಃ ಪೀಡಾ ಚ ವ ವಿದ್ಯತೇ ಕಾಚಿತ್ ॥

ಅರ್ಥ:—ಮರಣ, ಜನ್ಮ, ಕೋಪ, ಕಾಮೋದ್ರೇಕ, ರೋಗ, ವ್ಯಸನ, ನಿದ್ರೆ, ಹಸಿವು, ನೀರಡಿಕೆ ಇವೇ ಮೊದಲಾದ ಪೀಡೆಗಳು ಯಾವೂ ಉಂಟಾಗುವದಿಲ್ಲ; ಮತ್ತು ಅಭವ್ಯರುಂ ಅಮನಸ್ಕರುಂ ಅಲ್ಲಿಗೆ ಹೋಗುವದಿಲ್ಲ; ಮಿಥ್ಯಾದೃಷ್ಟಿಗಳು ಸಮವಸರಣವನ್ನು ಪ್ರವೇಶಿಸಿದ ಕೂಡಲೇ ಸಮ್ಯಗ್ದೃಷ್ಟಿಗಳಾಗುವರು; ಮತ್ತು ಮೂಗರು ಮೃದುಮಧುರನಿನಾದದಿಂದ ಮಾತಾಡುವರು; ಕುರುಡರು ಚೆನ್ನಾಗಿ ನೋಡುವರು; ಕಿವುಡರು ಪರಿಸ್ಫುಟವಾಗಿ ಕೇಳುವರು; ಕುಂಟರು ಸಡಗರದಿಂದ ಕೂಡಿ ನಡೆಯುವರು; ಮರುಳರು ಜ್ಞಾನಹೊಂದುವರು; ತೊನ್ನರು ಕಲ್ಯಾಣಶರೀರಗಳನ್ನು ಹೊಂದುವರು; ವಿಷದ್ರಷ್ಟರು ನಿರ್ವಿಷರಾಗುವರು; ವ್ಯಾಧಿಪೀಡಿತರಿಗೆ ಸರ್ವವ್ಯಾಧಿ ನಾಶವಾಗುವದು; ವ್ರಣಶರೀರರು ವ್ರಣನಿರ್ಮುಕ್ತರಾಗುವರು; ಪರಸ್ಪರ ವೈರ ಕಲಹಕಲುಷಿತರು ಒಬ್ಬರನ್ನೊಬ್ಬರು ಓಡಿಸಿಕೊಂಡು ಬಂದು ಸಮವಸರಣವನ್ನು ಪ್ರವೇಶ ಮಾಡಿದ ಕೂಡಲೇ ಅನ್ಯೋನ್ಯ ವೈರಗಳನ್ನು ಬಿಟ್ಟು ಪರಮ ಮಿತ್ರರಾಗಿರುವರು; ಮತ್ತು ಹುಲಿಯುಂ ಮೊಲವುಂ, ಇಲಿಯುಂ, ಬೆಕ್ಕುಂ, ಕಪ್ಪೆಯುಂ ಸರ್ಪವುಂ, ಸಿಂಹವುಂ, ಮಾತಂಗ ವುಮೆಂದಿವು ಮೊದಲಾದ ಪ್ರಾಣಿಗಳು ತಂತಮ್ಮ ಮರಿಗಳನ್ನು ಕಂಡಂತೆ ಸ್ನೇಹವನ್ನು ಮಾಡಿ ಒಂದೇ ಸ್ಥಳದಲ್ಲಿರುವವು. ಮತ್ತು—

ಕಂದ॥ ನುತಧರ್ಮಕಥನಮಲ್ಲದೆ ।
ಹಿತಕರಸದ್ಧರ್ಮಕಾರ್ಯಮಲ್ಲದೆ ವಿಪುಲೋ ॥
ನ್ನತಧರ್ಮಚಿಂತೆಯಲ್ಲದೆ ।
ಶತವಿಬುಧಾಧಿಪನ ಸಭೆಯೊಳಿಲ್ಲುಳಿದೇನುಂ ॥ ೧೯ ॥

ಈ ರೀತಿಯಾದ ಸಮವಸರಣಕ್ಕೆ—

ಕಂದ॥ ಚಿತ್ರೋತ್ರೀತಪತ್ರದಿಂ ಶತ ।
ಪತ್ರವನಸ್ಥಳಿಯನಿಲಿಸೆಗಗನಂದೆಸೆಯುಂ ॥
ಚಿತ್ರಿಸೆ ತಿರೀಟ ಕಿರಣಂ ।
ದ್ವಾತ್ರಿಂಶತ್ತ್ರಿದಶಪತಿಗಳಂತೇಳ್ತಂದರ್ ॥ ೨೦ ॥
ವನಗಂಧಾಕ್ಷತಕುಸುಮದಿ ।
ನನುಪಮಚರುದೀಪಧೂಪಫಲಸಂಕುಲದಿಂ ॥
ಜಿನಪತಿಪೂಜೋತ್ಸವಂ ಕರ ।
ಮನದಿಂ ದ್ವಾತ್ರಿಂಶದಿಂದ್ರರಂತೇಳ್ತಂದರ್ ॥ ೨೧ ॥

ಈ ರೀತಿಯಾದ ಮಹಾತ್ಮ್ಯವನ್ನುಳ್ಳ ಸಮವಸರಣವು ಉಪಭೋಗಾಂತರಾಯಕರ್ಮ ಕ್ಷಯದಿಂದಾಗುವದು.

## ಸೂತ್ರಂ॥ ಅನನ್ತಚತುಷ್ಟಯಮಿತಿ ॥ ೧೪ ॥

ಅರ್ಥ—ಅನನ್ತಜ್ಞಾನ, ಅನಂತದರ್ಶನ, ಅನನ್ತಸುಖ, ಅನಂತವೀರ್ಯವೆಂದಿವುಗಳು ಅನಂತಚತುಷ್ಟಯಗಳಾಗುವವು ॥ ೪ ॥

ಯಾವ ಜ್ಞಾನಕ್ಕೆ ಕಡೆಯಿಲ್ಲ, ಕೇಡಿಲ್ಲ, ಅದು ಅನಂತಜ್ಞಾನವು. ಅತೀಂದ್ರಿಯಜ್ಞಾನವೆಂಬುವದು ವ್ಯವಹಾರನಯದಿಂದ ಲೋಕಾಲೋಕವೆಲ್ಲವನ್ನು ಪ್ರತ್ಯಕ್ಷಸ್ವರೂಪವಾಗಿ ತಿಳಿಸುವದು. ನಿಶ್ಚಯನಯದಿಂದ ತನ್ನ ಶುದ್ಧಾತ್ಮಸ್ವರೂಪವನ್ನು ತಿಳಿಸುವದು ॥ ೧ ॥

ಯಾವ ದರ್ಶನಕ್ಕೆ ಅಂತ್ಯವೂ ವಿನಾಶವೂ ಇಲ್ಲ ಮತ್ತು ಯಾವ ವ್ಯವಹಾರನಯದಿಂದ ಲೋಕಾಲೋಕವೆಲ್ಲವು ಪ್ರತ್ಯಕ್ಷಸ್ವರೂಪವಾಗಿ ತಿಳಿಯುವದೋ ಕಾಣುವದೋ ಮತ್ತು ಯಾವ ನಿಶ್ಚಯನಯದಿಂದ ತನ್ನ ಶುದ್ಧಾತ್ಮಸ್ವರೂಪವು ಕಾಣುವದೋ ಹಾಗು ಸೂಕ್ಷ್ಮಾಂತರಿತ ವಸ್ತುವು ಹಸ್ತಾಮಲಕದಂತೆ ತಿಳಿಯುವದೋ ಕಾಣುವದೋ ಅದು ಅನಂತದರ್ಶನವೆನಿಸುವದು ॥ ೨ ॥

ಯಾವ ಸುಖಕ್ಕೆ ಅಂತ್ಯವಿಲ್ಲ, ವಿನಾಶವಿಲ್ಲ ಅದು ಅನಂತಾನಂತಸುಖವೆನಿಸುವದು. ಅತೀಂದ್ರಿಯಸುಖವೆನಿಸುವದು ॥ ೩ ॥

ಯಾವ ವೀರ್ಯ್ಯಕ್ಕೆ ಅಂತ್ಯವಿಲ್ಲ, ವಿನಾಶವಿಲ್ಲ ಅದು ಅನನ್ತಾನನ್ತವೀರ್ಯ್ಯವೆನಿಸುವದು. ಅನನ್ತಬಲ, ಅನಂತಶಕ್ತಿಯೆನಿಸುವದು ॥ ೪ ॥

ಈ ರೀತಿಯಾಗಿ ಹೇಳಿದ ಚತುರ್ವಿಂಶತಿ ತೀರ್ಥಕರ ಪರಮದೇವರಶೇಷ, ಕರ್ಮನಿರ್ಮೂಲನಂ ಮಾಡಿ ಅನಂತಗುಣಪರಿಪೂರ್ಣರುಂ, ಸ್ವಶುದ್ಧಾತ್ಮಭಾವನಾಫಲಪ್ರಾಪ್ತರುಂ, ಸಿದ್ಧಸಾಧ್ಯರುಂ, ಬುದ್ಧಬೋಧ್ಯರುಂ, ಕೃತಕೃತ್ಯರುಮಾದ ಸಿದ್ಧಪರಮೇಷ್ಠಿಗಳಿಗೆ ನಮಸ್ಕಾರವು.

ಶ್ಲೋಕ ॥ ಶುದ್ಧಚೈತನ್ಯಪಿಂಡಾಯ । ಸಿದ್ಧಾಯ ಸುಖಸಂಪದೇ ॥
ವಿಮಲಾಗಮಸಾಧಾಯ । ನಮೋಸ್ತು ಪರಮೇಷ್ಠಿನೇ ॥

ಈ ಪ್ರಕಾರವಾಗಿ ಒಂಭತ್ತು ಸೂತ್ರಗಳಿಂದ ತೀರ್ಥಕರ ವಿಭೂತಿಯು ಹೇಳಲ್ಪಟ್ಟಿತು.

---

ಇನ್ನು ಐದು ಸೂತ್ರಗಳಿಂದ ಚಕ್ರವರ್ತಿಗಳ ವಿಭವವು ಹೇಳಲ್ಪಡುತ್ತದೆ.

## ಸೂತ್ರಂ॥ ದ್ವಾದಶಚಕ್ರವರ್ತಿನಃ ॥ ೧೫ ॥

೧ ಶ್ರೀಷೇಣ, ೨ ಪುಂಡರೀಕ, ೩ ವಜ್ರನಾಭಿ, ೪ ವಜ್ರದತ್ತ, ೫ ವಜ್ರಘೋಷ, ೬ ಚಾರುದತ್ತ, ೭ ಶ್ರೀದತ್ತ, ೮ ಸುವರ್ಣಭದ್ರ, ೯ ಭೂವಲ್ಲಭ, ೧೦ ಗುಣಪಾಲ, ೧೧ ಧರ್ಮಸೇನ, ೧೨ ಕೀರ್ತ್ಯೋಘರೆಂದಿವರು ಅತೀತಯುಗದ ದ್ವಾದಶ ಸಕಲಚಕ್ರವರ್ತಿಗಳಾಗುವರು ॥ ೧೨ ॥

೧ ಭರತ, ೨ ಸಗರ, ೩ ಮಘವ, ೪ ಸನತ್ಕುಮಾರ, ೫ ಶಾನ್ತಿ, ೬ ಕುಂಥು, ೭ ಅರ, ೮ ಸುಭೌಮ, ೯ ಮಹಾಪದ್ಮ, ೧೦ ಹರಿಷೇಣ, ೧೧ ಜಯಸೇನ, ೧೨ ಬ್ರಹ್ಮದತ್ತರೆಂದಿವರು ವರ್ತಮಾನ ದ್ವಾದಶ ಸಕಲಚಕ್ರವರ್ತಿಗಳಾಗುವರು ॥ ೧೨ ॥

೧ ಭರತ, ೨ ದೀರ್ಘದನ್ತ, ೩ ಮುಕ್ತದಂತ, ೪ ಗೂಢದನ್ತ, ೫ ಶ್ರೀಷೇಣ, ೬ ಶ್ರೀಭೂತಿ, ೭ ಶ್ರೀಕಾಂತ, ೮ ಪದ್ಮ, ೯ ಮಹಾಪದ್ಮ, ೧೦ ಚಿತ್ರವಾಹನ, ೧೧ ವಿಮಲವಾಹನ, ೧೨ ಅರಿಷ್ಟಸೇನರೆಂದಿವರು ಭಾವಿಕಾಲದ ದ್ವಾದಶ ಸಕಲಚಕ್ರವರ್ತಿಗಳು ॥ ೧೨ ॥

ಈ ವರ್ತಮಾನಕಾಲದ ಭರತಾದಿ ಚಕ್ರಿಗಳಲ್ಲಿ ಭರತನು ( ೫೦೦ ) ಐನೂರು ಬಿಲ್ಲುದ್ದನುಂ, ಎಂಭತ್ತುನಾಲ್ಕುಲಕ್ಷ ( ೮೪೦೦೦೦೦ ) ಪೂರ್ವಾಯುಷ್ಯವುಳ್ಳವನುಂ ॥ ೧ ॥

ಸಗರನಿಗೆ ನಾನೂರ್ಐವತ್ತು ( ೪೫೦ ) ಬಿಲ್ಲು ಪ್ರಮಾಣ ಶರೀರವುಂ, ಎಪ್ಪತ್ತೆರಡು ಲಕ್ಷ ( ೭೨೦೦೦೦೦ ) ಪೂರ್ವಾಯುಷ್ಯವುಂ ॥ ೨ ॥

ಮಘವನಿಗೆ ನಲವತ್ತೆರಡು ( ೪೨ ) ಚಾಪೋತ್ಸೇದತನುವುಂ, ಐದು ಲಕ್ಷ (೫೦೦೦೦೦) ಪೂರ್ವಾಯುಷ್ಯವುಂ ॥ ೩ ॥

ಸನತ್ಕುಮಾರನಿಗೆ ಏಕಚತ್ವಾರಿಂಶ ( ೪೧ ) ದಂಡೋನ್ನತ ಶರೀರವುಂ, ಮೂರುಲಕ್ಷ ( ೩೦೦೦೦೦ ) ಪೂರ್ವಾಯುಷ್ಯವುಂ ॥ ೪ ॥

ಶಾನ್ತಿಗೆ ನಲ್ವತ್ತು ( ೪೦ ) ಕೋದಂಡೋನ್ನತದೇಹವುಂ, ಒಂದುಲಕ್ಷ ( ೧೦೦೦೦೦ ) ವರ್ಷಾಯುಷ್ಯವುಂ ॥ ೫ ॥

ಕುಂಥುವಿಗೆ ಪಂಚತ್ರಿಂಶ ( ೩೫ ) ಕಾರ್ಮುಕೋನ್ನತಿಯುಂ, ತೊಂಭತ್ತೈದು ಸಾಸಿರ ( ೯೫೦೦೦ ) ವರ್ಷದಾಯುಷ್ಯವುಂ ॥ ೬ ॥

ಅರಜಿನಂಗೆ ಮೂವತ್ತು ( ೩೦ ) ಬಾಣಾಸನೋನ್ನತಿಯುಂ, ಚತುರಾಶೀತಿ ಸಹಸ್ರ ( ೮೪೦೦೦ ) ಸಂವತ್ಸರಮಾಯುಷ್ಯವುಂ ॥ ೭ ॥

ಸುಭೌಮನಿಗೆ ಅಷ್ಟವಿಂಶತಿ ( ೨೮ ) ಶಿಲೀಮುಖಾಸನೋನ್ನತಿಯುಂ, ಅರವತ್ತು ಸಾಸಿರಾಬ್ಧವುಂ ( ೬೦೦೦೦ ) ॥ ೮ ॥

ಮಹಾಪದ್ಮನಿಗೆ ದ್ವಾವಿಂಶತಿ ( ೨೨ ) ಶಿಲೀಮುಖಾಸನೋನ್ನತಿಯುಂ ತ್ರಿಂಶತ್ ಸಹಸ್ರ ( ೩೦೦೦೦ ) ವರ್ಷದಾಯುಷ್ಯವುಂ ॥ ೯ ॥

ಹರಿಷೇಣಂಗೆ ಇಪ್ಪತ್ತು ( ೨೦ ) ಚಾಪೋತ್ಸೇದವುಂ, ದಶಸಹಸ್ರ ( ೧೦೦೦೦ ) ಸಂವತ್ಸರಾಯುಷ್ಯವುಂ ॥ ೧೦ ॥

ಜಯಸೇನಂಗೆ ದಶ ( ೧೦ ) ಚಾಪೋನ್ನತಿಯುಂ, ತ್ರಿಸಹಸ್ರ ( ೩೦೦೦ ) ವರುಷಾಯುಷ್ಯವುಂ ॥ ೧೧ ॥

ಬ್ರಹ್ಮದತ್ತನಿಗೆ ( ೭ ) ಸಪ್ತಶರಾಸನೋನ್ನತಿಯುಂ, ಸಪ್ತಶತ ( ೭೦೦ ) ವರುಷದಾಯುಷ್ಯವುಂ ॥ ೧೨ ॥

ಚಕ್ರಿಗಳೆಲ್ಲರೂ ಸುವರ್ಣವರ್ಣ ಶರೀರರುಂ.

## ಸೂತ್ರಂ॥ ಸಪ್ತಾಂಗಾನಿ ॥೧೬॥

೧ ಅರಸಂ, ೨ ಪೆರ್ಗಡೆ, ೩ ಜನಪದ, ೪ ದುರ್ಗ, ೫ ಭಂಡಾರ, ೬ ಷಡಂಗಬಲ, ೭ ಮಿತ್ರರೆಂದಿವು ಸಪ್ತಾಂಗಗಳು.

ಷಡಂಗಬಲಗಳ್ಯಾವವೆಂದರೆಃ—ಚಕ್ರಿಯುಬಲವು ಚತುರಾಶೀತಿಲಕ್ಷ (೮೪೦೦೦೦೦) ೧ ಭದ್ರಹಸ್ತಿಯುಂ, ೨ ಅಷ್ಟೇ ರಥಗಳುಂ, ೩ ಅಷ್ಟಾದಶಕೋಟಿ (೧೮೦೦೦೦೦೦೦) ಜಾತ್ಯಶ್ವಗಳುಂ, ೪ ಎಂಭತ್ನಾಲ್ಕುಕೋಟಿ (೮೪೦೦೦೦೦೦೦) ವೀರಭಟರುಗಳುಂ, ೫ ಅನೇಕ ದೇವಬಲವುಂ, ೬ ಅನೇಕ ವಿದ್ಯಾಧರಬಲವುಂ, ಎಂದಿವುಗಳು ಷಡಂಗಬಲಗಳಾಗುವವು.

## ಸೂತ್ರಂ॥ ಚತುರ್ದಶರತ್ನಾನಿ ॥ ೧೩ ॥

೧ ಚಕ್ರರತ್ನ, ೨ ಛತ್ರರತ್ನ, ೩ ಅಸಿರತ್ನ, ೪ ದಂಡರತ್ನ, ೫ ಮಣಿರತ್ನ, ೬ ಕಾಕಿಣಿರತ್ನ, ೭ ಚರ್ಮರತ್ನ, ಎಂದಿವು ಏಳು ಅಜೀವರತ್ನಗಳು.

೧ ಗೃಹಪತಿರತ್ನ, ೨ ಸೇನಾಪತಿರತ್ನ, ೩ ಗಜಪತಿರತ್ನ, ೪ ಅಶ್ವರತ್ನ, ೫ ತಕ್ಷಕರತ್ನ, ೬ ಪುರೋಹಿತರತ್ನ, ೭ ಸ್ತ್ರೀರತ್ನ, ಎಂಬೀ ಏಳು ಜೀವರತ್ನಗಳು. ಈ ಹದಿನಾಲ್ಕು ಮಹಾರತ್ನಗಳನ್ನು ಪ್ರತ್ಯೇಕ ಸಹಸ್ರಯಕ್ಷರುಗಳು ರಕ್ಷಿಸುತ್ತಾರೆ. ಅವರ ಶಕ್ತಿಪ್ರಭಾವವನ್ನು ಹೇಳುತ್ತೇನೆ.

ಚಕ್ರವರ್ತಿಮುಳಿಯಲೊಡಮೆಂತಪ್ಪನ ತಲೆಯಂತರಲಾರ್ಪಚಕ್ರರತ್ನವುಂ ॥ ೧ ॥

ಕಟಕವೆಲ್ಲವಕ್ಕೆ ಮೇಗಣಬಾಧೆಯನ್ನು ನಿವಾರಿಸುವ ಛತ್ರರತ್ನವುಂ ॥ ೨ ॥

ಚಕ್ರವರ್ತಿಗೆ ಚಿತ್ತೋತ್ಸವವನ್ನು ಮಾಡುವ ಅಸಿರತ್ನವುಂ ॥ ೩ ॥

ನಲವತ್ತೆಂಟುಗಾವುದ ಪ್ರಮಾಣಗಳಿಂದ ಸಂಚರಿಸುವ ಕಟಕಗಳಿಗೆಲ್ಲಾ ಸಮತಲವನ್ನು ಮಾಡುವ ದಂಡರತ್ನವುಂ ॥ ೪ ॥

ಬಯಸಿದುದನ್ನು ತೀರಿಸುವ ಮಣಿರತ್ನವುಂ ॥ ೫ ॥

ಕತ್ತಲೆಯಾಗಿರುವ ಸ್ಥಳಗಳಲ್ಲಿ ಚಂದ್ರಾದಿತ್ಯರ ಆಕಾರವನ್ನು ಪಡೆದು ಎಡೆಬಿಡದೆ ಅವರಂತೆ ಬೆಳಕನ್ನುಂಟುಮಾಡುವ ಕಾಕಿಣೀರತ್ನವುಂ ॥ ೬ ॥

ನದೀನದಂಗಳ ಮೇಲೆ ಇಟ್ಟು ಕಟಕವನ್ನು ಹಾಯಿಸುವಕಾಲದಲ್ಲಿ ಮುಳುಗದೆ ಇರುವಂಥಾ ಚರ್ಮರತ್ನವುಂ ॥ ೭ ॥

ಅರಮನೆಯೊಳಗಣ ವ್ಯಾಪಾರವನ್ನು ನಡಿಸುವ ಗೃಹಪತಿರತ್ನವುಂ ॥ ೮ ॥

ಆರ್ಯ್ಯಾಖಂಡವನ್ನೂ, ಉತ್ತಮ ಮಧ್ಯಮ ಮ್ಲೇಚ್ಛಖಂಡಂ ಪೊರಗಾಗಿ ಉಳಿದ ದಿಗ್ವಿಷ್ಟರನ್ನು ಸಾಧಿಸುವ ಸೇನಾಪತಿರತ್ನವುಂ ॥ ೯ ॥

ಅರಿನೃಪರ ಗಜಘಟೆಯನ್ನು ವಿಘಟಂ ಮಾಡುವ ಗಜರತ್ನವುಂ ॥ ೧೦ ॥

ತಿಮಿಶ್ರಗುಹೆಯ ಕವಾಟಘಟವಿಘಟನವನ್ನು ಮಾಡುವ ಕಾಲದಲ್ಲಿ ದ್ವಾದಶಯೋಜನವನ್ನು ಲಂಘಿಸುವ ಅಶ್ವರತ್ನವುಂ ॥ ೧೧ ॥

ಮಾಟಕೂಟಪ್ರಾಸಾದಗಳನ್ನು ಚಕ್ರವರ್ತಿಯ ಆಲೋಚನೆಗೆ ಬಂದ ರೀತಿಯಿಂದ ಮಾಡುವ ತಕ್ಷಕರತ್ನವುಂ ॥ ೧೨ ॥

ಪೂರ್ವಯಾಮದಿಂತೊಡಗಿ ಪಶ್ಚಿಮಯಾಮದವರಿಗೂ ತೊಂಭತ್ತಾರುಸಾಸಿರ ಅಂತಃಪುರಕ್ಕೆ ( ೯೬೦೦೦ ) ನವ್ಮನವ್ಮಲ್ಲಿಗೆ ಅರಸ ಬಂದನೆಂದು ವಿಗುರ್ವಣೆಯಿಂದ ಕ್ರೀಡಿಸುತ್ತ ಮದಂಗದ ಕಾಮಸಂತಾಪನೆಯನ್ನು ಅಡಗಿಸುವ ಸ್ತ್ರೀರತ್ನವುಂ ॥ ೧೩ ॥

ಕಟಕವೆಲ್ಲವನ್ನೂ ಧರ್ಮಕರ್ಮಾನುಷ್ಠಾನಗಳಿಂದ ನಡೆಯಿಸುವ ಪುರೋಹಿತ ರತ್ನವುಂ ॥ ೧೪ ॥

ಮತ್ತಂ ಮೂರುವರೆಕೋಟಿ ಬಂಧುವರ್ಗಗಳನ್ನೂ, ಸಂಖ್ಯಾತಸಹಸ್ರ ಪುತ್ರಪುತ್ರಿಯರುಗಳನ್ನೂ, ಮುನ್ನೂರರುವತ್ತೊಂದು ( ೩೬೧ ) ಶರೀರವೈದ್ಯರುಂ, ಮುನ್ನೂರರುವತ್ತೊಂದು ( ೩೬೧ ) ಬಾಣಸಿಗರುಂ, ಓರೋರ್ವ ಬಾಣಸಿಗನು ಮುನ್ನೂರರವತ್ತುದಿವಸದವರಿಗೂ ಎರಡೂವರೆ ದ್ವೀಪಗಳಲ್ಲಿರುವ ದಿವ್ಯೌಷಧಿಗಳನ್ನು ದಿವ್ಯವಾಗಿ ತಂದು ಅನ್ನಪಾನಾದಿಗಳನ್ನು ಭಾವಿವೊಂದು ಕಬಳವನ್ನು ಕೊಂಡು ನಲವತ್ತೆಂಟುಗಾವುದ ಪರಿಪ್ರಮಾಣದ ಕಟಕಮುಣ್ಬಮಡುವಿನಲ್ಲಿ ಇಕ್ಕಿದೊಡಾನೀರನ್ನು ಕಟಕವೆಲ್ಲಮುಂಡಡಜೀರ್ಣಮಾದಡೆ ಬಾಣಸಿಗನು ರಸಘಟ್ಟಿಯಾಯ್ತೆಂದರಿದು ಚಕ್ರವರ್ತಿಗಳ್ಮೂವತ್ತೆರಡು ಕಬಳಗಳನ್ನು ಮಾಡಿ ಯೋಜಿಸುವನು. ಸ್ತ್ರೀರತ್ನಂ, ಗಜರತ್ನಂ, ಅಶ್ವರತ್ನಂ, ಎಂಬಿವುಗಳಿಗೊಂದೊಂದು ತುತ್ತನ್ನು ಕೊಡುವನು; ಮತ್ತು ಆತನ ಇಂದ್ರಿಯ ಶಕ್ತಿಯನ್ನು ಹೇಳುತ್ತೇನೆಃ—ದ್ವಾದಶಯೋಜನ ಪ್ರಮಾಣವನ್ನು ಕೇಳುವನು, ನಲವತ್ತೇಳುಸಾವಿರದಿನ್ನೂರರುವತ್ಮೂರುಯೋಜನಮುಂ ಸಾಧಿಕವಾಗಿ ಕಾಣುವನು. ( ೪೭೨೬೩ ) ಸಾಧಿಕವು $\frac{೨೧}{೨೦}$, ಘ್ರಾಣಸ್ಪರ್ಶನದಿಂದ ತೊಂಭತ್ತುಯೋಜನವನ್ನು ತಿಳಿಯುವನು. ಮತ್ತು ಮೂವತ್ತೆರಡು ಚಾಮರಂಗಳುಂ, ಇಪ್ಪತ್ತನಾಲ್ಕು ( ೨೪ ) ಬಲಮುರಿ ಶಂಖಗಳು, ಅಷ್ಟೇ ಭೇರಿಗಳುಂ, ಪಟಹಗಳುಂ ಪ್ರತ್ಯೇಕ ದ್ವಾದಶಶಂಬೆಯುನ್ನುಳ್ಳವು, ಇಂತಿವೆಲ್ಲಂ ದ್ವಾದಶ ಯೋಜನ ಪರಿಯಂತಂ ಧ್ವನಿಯನುಳ್ಳವು, ಷೋಡಶಸಹಸ್ರ ( ೧೬೦೦೦ ) ಮೈಗಾಪಿನ ಗಣಬದ್ಧದೇವರುಂ, ಮೂವತ್ತೆರಡುಸಾವಿರ ( ೩೨೦೦೦ ) ಮುಕುಟಬದ್ಧರುಂ, ಅಷ್ಟೇ ನಾಟ್ಯಶಾಲೆಗಳುಂ, ಅಷ್ಟೇ ಸಂಗೀತಶಾಲೆಗಳುಂ, ಅಷ್ಟೇ ದೇಶಗಳುಂ ವೃತ್ಯವೃತ್ತಂಗಳಾದ ತೊಂಭತ್ತಾರುಕೋಟಿ ( ೯೬,೦೦ ೦೦೦೦೦ ) ಗ್ರಾಮಗಳುಂ, ನಾಲ್ಕುದ್ವಾರ ಪ್ರಾಕಾರವನ್ನುಳ್ಳ ಯೆಪ್ಪತ್ತೈದು ಸಾವಿರ ( ೭೫೦೦೦ ) ನಗರಗಳುಂ, ನದ್ಯದ್ರಿವೇಷ್ಟಿತಂಗಳಾದ ಷೋಡಶಸಹಸ್ರ ( ೧೬೦೦೦ ) ಖೇಡಗಳುಂ, ಪರ್ವತವೇಷ್ಟಿತಂಗಳಾದ ಚತುರ್ವಿಂಶತಿಸಹಸ್ರ ( ೨೪೦೦೦ ) ಖರ್ವಡಂಗಳುಂ, ಪ್ರತ್ಯೇಕಮಯ್ನೂರು ಗ್ರಾಮಗಳಿಗೆ ( ೫೦೦ ) ಮುಖ್ಯವಾದ ಚತುಸ್ಸಹಸ್ರ ( ೪೦೦೦ ) ಮಡಂಬಗಳುಂ, ರತ್ನಯೋಗಿಯೆನಿಪ್ಪ ನಲವತ್ತೆಂಟುಸಾಸಿರ ( ೪೮೦೦೦ ) ಪಟ್ಟಣಗಳುಂ, ಸಮುದ್ರ ಖಾತಿಕೆಯಿಂ ಸುತ್ತಲ್ಪಟ್ಟ ತೊಂಭತ್ತೊಂಭತ್ತುಸಾವಿರ ( ೯೯೦೦೦ ) ದ್ರೋಣಾಮುಖಂಗಳುಂ, ಅದ್ರಿರೂಢವಾದ ಷೋಡಶಸಹಸ್ರ ( ೧೬೦೦೦ ) ಸಂವಾಹನಂಗಳುಂ, ಅಳವಿ ಸುತ್ತಲ್ಪಟ್ಟ ಇಪ್ಪತ್ತೆಂಟುಸಾವಿರ ( ೨೮೦೦೦ ) ದುರ್ಗಾಟವಿಗಳುಂ, ಐವತ್ತಾರು ( ೫೬ ) ಅಂತರ ದ್ವೀಪಗಳುಂ, ಆರುನೂರು ( ೬೦೦ ) ಪ್ರತ್ಯಂತರಕುಕ್ಷಿಗಳುಂ, ಏಳುನೂರು ( ೭೦೦ ) ಪ್ರತ್ಯಂತರ ಕುಕ್ಷಿ ನಿವಾಸವುಂ, ಎಂಟುನೂರು ( ೮೦೦ ) ಕಕ್ಷೆಯುಂ, ಮೂರುಕೋಟಿ ( ೩೦೦೦೦೦೦೦ )

ಗೋಮಂಡಲಗಳುಂ, ಒಂದುಕೋಟಿ ಸ್ಥಾಳಂಗಳುಂ, ಒಂದುಲಕ್ಷಕೋಟಿ ಹಳಂಗಳುಂ, ( ೧೦೦೦೦೦,೦೦೦೦೦೦೦ ), ಎಂಭತ್ತೆಂಟು ಸಹಸ್ರ ( ೮೮೦೦೦ ) ಮ್ಲೇಚ್ಛರಾಜರೆಂದಿವರುಗಳಿಂದ ಚಕ್ರವರ್ತಿ ಪ್ರಕಾಶಿಸುತ್ತಿರುವನು.

## ಸೂತ್ರಂ ॥ ನವನಿಧಯಃ ॥ ೧೮ ॥

ಪ್ರತ್ಯೇಕ ಸಹಸ್ರ ಯಕ್ಷರಕ್ಷಿತಂಗಳುಃ—ಮೂರು ಋತುಗಳಿಗೆ ಯೋಗ್ಯವಾದ ದ್ರವ್ಯಗಳನ್ನು ಕೊಡುವ ಕಾಲನಿಧಿಯುಂ ॥ ೧ ॥

ನಾನಾವಿಧ ಭಾಜನ ವಿಶೇಷಂಗಳನ್ನು ಕೊಡುವ ಮಹಾಕಾಲನಿಧಿಯುಂ ॥ ೨ ॥

ವ್ರೀಹ್ಯಾದಿ ಸಮಸ್ತ ಧಾನ್ಯಗಳನ್ನು ಕೊಡುವ ಪಾಂಡುಕನಿಧಿಯುಂ ॥ ೩ ॥

ಅಸಿ, ಮುಸಲಂ ಮೊದಲಾದ ನಾನಾವಿಧಾಯುಧಗಳನ್ನು ಕೊಡುವ ಮಾಣವಕನಿಧಿಯುಂ ॥ ೪ ॥

ತತ, ವಿತತ, ಘನ, ಸುಷಿರ ಭೇದದ ತೂರ್ಯಗಳನ್ನು ಕೊಡುವ ಶಂಖನಿಧಿಯುಂ ॥ ೫ ॥

ಬಹುಪ್ರಕಾರದ ಹರ್ಮ್ಯಂಗಳನ್ನು ಕೊಡುವ ನೈಸರ್ಪನಿಧಿಯುಂ ॥ ೬ ॥

ದೇವಾಂಗದುಕೂಲಾದಿ ವಸ್ತ್ರವಿಶೇಷಗಳನ್ನು ಕೊಡುವ ಪದ್ಮನಿಧಿಯುಂ ॥ ೭ ॥

ಸ್ತ್ರೀಪುರುಷರುಗಳಿಗೆ ಯೋಗ್ಯವಾದ ನಾನಾವಿಧಾಭರಣಗಳನ್ನು ಕೊಡುವ ಪಿಂಗಳನಿಧಿಯುಂ ॥ ೮ ॥

ವಜ್ರ, ವೈಡೂರ್ಯ, ಮರಕತ, ಕರ್ಕೇತನ, ಪದ್ಮರಾಗ, ಪುಷ್ಯರಾಗಾದಿ ನಾನಾರತ್ನಗಳನ್ನು ಕೊಡುವ ಸರ್ವರತ್ನನಿಧಿಯುಂ ॥ ೯ ॥

ಎಂದಿವು ನವನಿಧಿಗಳು. ಚಕ್ರವರ್ತಿಯ ಆಜ್ಞೆಯಿಂದ ಯಾರು ಎಷ್ಟು ತೆಗೆದುಕೊಂಡರೂ ಇವು ಮುಗಿಯುವವುಗಳಲ್ಲವು.

## ಸೂತ್ರಂ॥ ದಶಾಂಗಭೋಗಾನಿ ॥ ೧೯ ॥

೧ ದಿವ್ಯಪುರವುಂ, ೨ ಭಾಜನವುಂ, ೩ ದಿವ್ಯಭೋಜನವುಂ, ೪ ದಿವ್ಯಶಯ್ಯವುಂ, ೫ ದಿವ್ಯಾಸನವುಂ, ೬ ದಿವ್ಯನಾಟ್ಯವುಂ, ೭ ದಿವ್ಯರತ್ನವುಂ, ೮ ದಿವ್ಯನಿಧಿಯುಂ, ೯ ದಿವ್ಯಸೇನೆಯುಂ, ೧೦ ದಿವ್ಯವಾಹನವುಂ ಯೆಂದೀ ದಶಾಂಗಭೋಗವನ್ನುಳ್ಳದ್ದು ಚಕ್ರವರ್ತಿಯ ಸಂಪತ್ತಾಗುವದು. ಈ ಪ್ರಕಾರವಾಗಿ ಐದು ಸೂತ್ರಗಳಿಂದ ಚಕ್ರವರ್ತಿಯ ವಿಭವವು ಹೇಳಲ್ಪಟ್ಟಿತು.

---

## ಸೂತ್ರಂ॥ ನವಬಲದೇವಾಃ ॥ ೨೦ ॥

೧ ಶ್ರೀಕಾಂತ, ೨ ಶಾಂತಚಿತ್ತ, ೩ ವರಬುದ್ಧಿ, ೪ ಮನೋರಥ, ೫ ದಯಾಮೂರ್ತಿ, ೬ ವಿಪುಲಕೀರ್ತಿ, ೭ ಪ್ರಭಾಕರ, ೮ ಸಂಜಯಂತ, ೯ ಜಯಂತರೆಂದಿವರೇ ಮೊದಲಾದವರತೀತಯುಗದ ಬಲದೇವರಾಗುವರು.

೧ ವಿಜಯ, ೨ ಅಚಲ, ೩ ಸುಧರ್ಮ, ೪ ಸುಪ್ರಭ, ೫ ಸುದರ್ಶನ, ೬ ನಂದಿ, ೭ ನಂದಿಮಿತ್ರ, ೮ ರಾಮ, ೯ ಪದ್ಮ ಎಂದಿವರು ವರ್ತಮಾನಕಾಲದ ಬಲದೇವರುಗಳು.

೧ ಚಂದ್ರ, ೨ ಮಹಾಚಂದ್ರ, ೩ ಚಂದ್ರಧರ, ೪ ಹರಿಶ್ಚಂದ್ರ, ೫ ಸಿಂಹಚಂದ್ರ, ೬ ಭೂಚಂದ್ರ, ೭ ಪೂರ್ಣಚಂದ್ರ, ೮ ಸುಚಂದ್ರ, ೯ ಶ್ರೀಚಂದ್ರರೆಂಬಿವರು ಭಾವಿಕಾಲದ ನವಬಲದೇವರಾಗುವರು.

ಈ ವರ್ತಮಾನದ ಬಲದೇವರ ಆಯುಷ್ಯವೆಂತೆನೆ—

ಗಾಹೆ ॥ ಸಗಸಿದಿದುಸುದಸೂಣಂ ಸಗತಿಸಸ್ಸತ್ತರಸಮಾಲಹಿ ।
ಸಹಪಣ್ಣತಿಸಸಂತರಸಹಸ್ಸ ಚಾರಸ್ಸಯವಾವುಬಳೆ ॥ ೪೬ ॥

ಅರ್ಥ—ವಿಜಯನಿಗೆ (೮೭೦೦೦೦೦), ಅಚಲನಿಗೆ (೭೭೦೦೦೦೦), ಸುಧರ್ಮನಿಗೆ (೬೭೦೦೦೦೦), ಸುಪ್ರಭನಿಗೆ (೩೭೦೦೦೦೦), ಸುದರ್ಶನನಿಗೆ (೧೭೦೦೦೦೦), ನಂದಿಗೆ (೬೭೦೦೦), ನಂದಿಮಿತ್ರನಿಗೆ (೩೭೦೦೦), ರಾಮನಿಗೆ (೧೨೦೦೦), ಪದ್ಮನಿಗೆ (೧೨೦೦೦), ವರುಷಗಳಾಯುಷ್ಯಂಗಳಾಗುವವು.

## ಸೂತ್ರಂ ॥ ವಾಸುದೇವಪ್ರತಿವಾಸುದೇವನಾರದಾಶ್ಚೇತಿ ॥ ೨೧ ॥

೧ ಕಾಕುಸ್ಥ, ೨ ವರಭದ್ರ, ೩ ಸುಭದ್ರ, ೪ ಸಂಶ್ಲಿಷ್ಟ, ೫ ವರವೀರ, ೬ ಶತ್ರುಂಜಯ, ೭ ದಮಿತಾರಿ, ೮ ಪ್ರಿಯದತ್ತ, ೯ ವಿಮಲವಾಹನರೆಂದಿವರತೀತಯುಗದ ನವವಾಸುದೇವರುಗಳಾಗುವರು.

೧ ನಿಶುಂಭ, ೨ ವಿದ್ಯುತ್ಪ್ರಭ, ೩ ಧರಣಶಿಖ, ೪ ಮನೋವೇಗ, ೫ ಚಿತ್ರವೇಗ, ೬ ದೃಢರಥ, ೭ ವಜ್ರಜಂಘ, ೮ ವಿದ್ಯುದಂಗ, ೯ ಪ್ರಹ್ಲಾದರೆಂದಿವರು ಅತೀತಯುಗದ ಪ್ರತಿವಾಸುದೇವರ್ಕಳಾಗುವರು.

೧ ತ್ರಿಪಿಷ್ಟ, ೨ ದ್ವಿಪಿಷ್ಟ, ೩ ಸ್ವಯಂಭು, ೪ ಪುರುಷೋತ್ತಮ, ೫ ಪುರುಷಸಿಂಹ, ೬ ಪುರುಷವರ, ೭ ಪುಂಡರೀಕ, ೮ ದತ್ತನಾರಾಯಣ, ೯ ಕೃಷ್ಣರೆಂದಿವರು ವರ್ತಮಾನದ ನವವಾಸುದೇವರ್ಕಳುಗಳು.

೧ ಅಶ್ವಗ್ರೀವ, ೨ ತಾರಕ, ೩ ಮೇರಕ, ೪ ನಿಶುಂಭ, ೫ ಮಧುಕೈಟಭ, ೬ ಬಲಿ, ೭ ಪ್ರಹರಣ, ೮ ರಾವಣ, ೯ ಜರಾಸಂಧಭೂಚರರೆಂದಿವರು ವರ್ತಮಾನದ ಪ್ರತಿವಾಸುದೇವರ್ಕಳು.

೧ ನಂದಿ, ೨ ನಂದಿಮಿತ್ರ, ೩ ನಂದನ, ೪ ನಂದಿಭೂತಿ, ೫ ಬಲ, ೬ ಮಹಾಬಲ, ೭ ಅತಿಬಲ, ೮ ತ್ರಿಪಿಷ್ಟ, ೯ ದ್ವಿಪಿಷ್ಟರೆಂದಿವರು ಭಾವಿಯುಗದ ನವವಾಸುದೇವರ್ಕಳು.

೧ ಶ್ರೀಕಂಠ, ೨ ಹರಿಕಂಠ, ೩ ನೀಲಕಂಠ, ೪ ಅಶ್ವಕಂಠ, ಸುಕಂಠ, ೬ ಶಿಖಿಕಂಠ, ೭ ಅಶ್ವಗ್ರೀವ, ೮ ಹಯಗ್ರೀವ, ೯ ಮಯೂರಗ್ರೀವರೆಂದಿವರು ಭಾವಿಕಾಲದ ಪ್ರತಿವಾಸುದೇವರ್ಕಳಾಗುವರು.

೧ ಭೀಮ, ೨ ಮಹಾಭೀಮ, ೩ ರುದ್ರ, ೪ ಮಹಾರುದ್ರ, ೫ ಕಾಳ, ೬ ಮಹಾಕಾಳ, ೭ ದುರ್ಮುಖ, ೮ ನರಕರೋರು, ೯ ಅಧೋಮುಖರೆಂದಿವರು ನವನಾರದರುಗಳು.

ಗಾಹೆ ॥ ಸೇಯಾದಿಪಣಸುಹರಿಪಣಛತ್ತರದುಗವಿರಹಮತ್ತಿದುಗಮುಝ್ಝೀ ॥
ದತ್ತಾ ಅತ್ಥಮಸುವಿಯ ದುಗವಿರಹಿಣೇಮಿಕಾಲಜೋಕಣ್ಹೋ ॥ ॥
ಸಮಯಚುಳಸಿದಿನಿಹತ್ತರಿ ಸಠ್ಠಿತಿಸದಸಲಖ್ಖಪಣಸಠ್ಠಿ ॥
ಬತ್ತಿಸವ್ವಾರೇಕಂ ಸಹಸ್ಸಮಾವುಸ್ಸಮದ್ದಚಕ್ಕೀಣಂ ॥ ॥

ಅರ್ಧಚಕ್ರಿಗಳ ಆಯುಷ್ಯವೆಂತೆನೆ:—೮೪೦೦೦೦೦, ೭೨೦೦೦೦೦, ೬೦೦೦೦೦೦, ೩೦೦೦೦೦೦, ೧೦೦೦೦೦೦, ೬೫೦೦೦, ೩೨೦೦೦, ೧೨೦೦೦ ವರ್ಷ. ಬಲದೇವಾದಿಗಳ ಉತ್ಸೇದವು ಹ್ಯಾಗೆಂದರೆ:—

ಗಾಹೆ ॥ ಸಿಡಿಸತ್ತರಿಸಠ್ಠಿ ಪಣಾಪಣದಾಳವೂಣತಿಸಾಣಿ ।
ಬಾವಿಸಸೋಳದಸದಣುಕೆ ಸಿತ್ತದಯಮ್ಮಿ ಉಸ್ಸೇಹೋ ॥ ೪೭ ॥

ಅರ್ಥ—೮೦, ೭೦, ೬೦, ೫೦, ೪೫, ೨೯, ೨೨, ೧೬, ೧೦.

ಗಾಹೆ ॥ ಯೇದೇಣವಪಡಿಸತ್ತೂಣ ರಾಣಹತ್ತೇಹಿ ವಾಸುದೇವಾಣಂ ।
ಣಿಯಚ್ಚಂಕೇಹಿರಣೀಸುಸ್ಸಮಾಹದಾ ಜತ್ತಿಣಿರಯಖಿದಿಂ ॥ ೪೮ ॥

ಶ್ಲೋಕ ॥ ಊರ್ಧ್ವಂಗಾಂಬಲದೇವಸ್ಯ । ನಿರ್ಣಿದಾನಾಭವಾಂತರಿ ॥
ಅಧೋಗಸ್ಸವಿದಾವಾಸು । ಕೇಶವಾ: ಪ್ರತಿಶತ್ರವ: ॥

ಗಾಹೆ ॥ ಪಢಮೇಸತ್ತಮಿವಂಣೇ । ಪಣಛಟ್ಟಂ ಪಚ್ಚವಿಗದೋದತ್ತೋ ।
ನಾರಾಯಣೋ ಚವುಥ್ಥಿ । ಕಸಿಣೋ ತದಿಯಗ್ಗರುವಪಾಪಾ ॥ ೪೯ ॥

ಅರ್ಥ—ಬಲದೇವರುಗಳಲ್ಲಿ ಎಂಟುಜನಗಳು ಮೋಕ್ಷಗಾಮಿಗಳು, ಕಡೆಯ ಬಲದೇವನು, ಬ್ರಹ್ಮಕಲ್ಪದಿಂದ ಬಂದು ಕೃಷ್ಣನು ತೀರ್ಥಂಕರನಾದಾಗ ಅಲ್ಲಿ ಗಣಧರನಾಗಿ ಮುಕ್ತಿಗೆ ಸಲ್ಲುವನು.

ಗಾಹೆ ॥ ಕಲಹಪ್ಪಿಯಾಕದಾಯಿಂ । ಧಮ್ಮರರಾವಾಸುದೇವಸಮಕಾಲಾ ॥
ಭಬ್ಬಾಣಿರಯಗದಿತ್ತೇಹಿಂ । ಸಾದೇಸೇಣಗಚ್ಛತ್ತಿ ॥ ೫೦ ॥

ಇಂತೆರಡು ಸೂತ್ರದಿಂ ಬಲದೇವಾದಿಗಳು ಹೇಳಲ್ಪಟ್ಟರು.

## ಸೂತ್ರಂ ॥ ಏಕಾದಶರುದ್ರ: ॥ ೨೨ ॥

ಅರ್ಥ—೧ ಭೀಮಾವಳಿ, ೨ ಜಿತಶತ್ರು, ೩ ರುದ್ರ, ೪ ವಿಶಾಲ, ೫ ಸುಪ್ರತಿಷ್ಟ, ೬ ಅಚಲ, ೭ ಪುಂಡರೀಕ, ೮ ಅಜಿತಂಧರ, ೯ ಅಜಿತನಾಭಿ, ೧೦ ಸಾತ್ವಿಕೇಯ, ೧೧ ಪೀಠರೆಂದಿವರು ಏಕಾದಶರುದ್ರರುಗಳು.

ಗಾಹೆ ॥ ಉಸಹದಕಾವೇ ಪಢಮದುಸತ್ತಣ್ಣೆ ಸತ್ತಸುವಿದಿಪಣುದಿಸು ।
ಪಿಡೋಸಂತಿಜಿಣಂದೇ ವಿರೇಸಚ್ಚಇಸುದೋ ಜಾದೋ ॥ ೫೧ ॥

ಗಾಹೆ ॥ ಪಣಸಯುಪಂಣೂಣಸಯಂ ಪಚ್ಛಸುದಸಹಿಣಮಂ ರಚಉವೀಸಂ ॥
ತಕ್ಕಾಯದಣುಸ್ಸೇಹೇ ಸಚ್ಚಯೇತಣಯಸ್ಸಸತ್ತಕರಾ ॥ ೫೨ ॥

ಈ ರುದ್ರರುತ್ಸೇದಧನುಗಳು ೫೦೦, ೪೫೦, ೧೦೦, ೯೦, ೮೦, ೭೦, ೬೦, ೫೦, ೨೮, ೨೪. ಸಾತ್ವಿಕೇಯಂಗೇಳು (೭) ವೊಳನುದ್ದವು.

ಗಾಹೆ ॥ ತೇಸಿದಿಗಿಹತ್ತರಿಬಗಿಲಬ್ಬೋ ಪುಬ್ಬಾಣಿವಾಲಸಖ್ಖಾಊ ॥
ಮಳಸಿದಿಸಿಠ್ಠಿದುಸದಸಹಿಣದಳಿಗಿವಸ್ಸಣವಸಠ್ಠಿ ॥ ೫೩ ॥

ಈ ರುದ್ರರುಗಳ ಆಯುಷ್ಯವನ್ನು ಕ್ರಮದಿಂದ ಹೇಳುತ್ತೇನೆ. ಎಂಭತ್ತೂರುಲಕ್ಷ (೮೩೦೦೦೦೦) ಪೂರ್ವಾಯುಷ್ಯವು ॥ ೧ ॥ ಎಪ್ಪತ್ತೊಂದುಲಕ್ಷ (೭೧೦೦೦೦೦) ಪೂರ್ವಂ; ಎರಡುಲಕ್ಷ (೨೦೦೦೦೦) ಪೂರ್ವಂ; ವೊಂದುಲಕ್ಷ (೧೦೦೦೦೦) ಪೂರ್ವಂ; ಯೆಂಭತ್ನಾಲ್ಕು ಲಕ್ಷ (೮೪೦೦೦೦೦) ವರುಷಂ; ಅರವತ್ತುಲಕ್ಷ (೬೦೦೦೦೦೦) ವರುಷಂ; ಐವ್ವತ್ತುಲಕ್ಷ (೫೦೦೦೦೦೦) ವರುಷಂ; ನಾಲ್ವತ್ತುಲಕ್ಷ (೪೦೦೦೦೦೦) ವರುಷಂ; ಎರಡುಲಕ್ಷ (೨೦೦೦೦೦) ವರುಷಂ; ವೊಂದುಲಕ್ಷ (೧೦೦೦೦೦) ವರುಷಂ; ಅರವತ್ತೊಂಭತ್ತು (೬೯) ವರುಷಂ.

ಗಾಹೆ ॥ ಎಜ್ಜಾಣಪಾದಪಢಣೇ ದಿಠ್ಠಪಣಠ್ಠಸಂಜಮಾಭಬ್ಬೋ ॥
ಕದಿಚಿಭವೇಸಿಝ್ಝಿತಿ ಹುಗಯಿದುಖ್ಖಮಸಂಮಮಹಿಮಾದೋ ॥ ೫೪ ॥
ಪಢವಾಮಾಘವಿಮಂಣೇ ಪಣಮುಘವೀಅಠ್ಠಮೋದುರಿಠ್ಠಮಹೇಂ- ॥
ದೋಅಂಜಣಂಪವಂಣೋ ಮೇಘಸ್ಸುಚ್ಛಯಿಜೋಚೋದೊ ॥ ೫೫ ॥

೧ ಪ್ರಮದ, ೨ ಸರ್ಮದ, ೩ ಪ್ರಕಾಮ, ೪ ಕಾಮದ, ೫ ಭವದೂರ, ೬ ಮನೋಭವ, ೭ ಮಾರ, ೮ ಕಾಮ, ೯ ರುದ್ರ, ಅಂಗಜರೆಂದಿವರು ಭಾವಿಯುಗದ ಏಕಾದಶರುದ್ರರುಗಳು.

ಗಾಹೆ ॥ ಕಾಳೇಸುಜಿಣವರಾಣಂ ಚಉವಿಸಾಣಂ ಹವಂತಿ ಚಉವೀಸಾ ॥
ತೇಬಾಹುಬಲಿಪ್ಪಮುಹಾ ಕದ್ದಂ ಪಾಣಿರುಪಮಾಯಾರೋ ॥ ೫೬ ॥
ತಿಥ್ಥಯರಾತಪ್ಪಿಯರಾ ಕೇಸಿಬಲಚಕ್ಕಿರುದ್ದಣಾರಂದಾ ॥
ಕುಲಕರಅಂಗಜಪುರಿಸಾ ಭಬ್ಬಾಸಿಝ್ಝಿತ್ತಿಣಿಯಮೇಣ ॥ ೫೭ ॥

ಈ ಪ್ರಕಾರವಾಗಿ ಹೇಳಿದ ಕಾರಣಪುರುಷರಲ್ಲಿ ತೀರ್ಥಕರೆಲ್ಲರೂ ಮೋಕ್ಷಗಾಮಿಗಳು.

ತೀರ್ಥಕರ ಮಾತಾಪಿತೃಗಳುಂ, ಕುಲಂಕರರುಂ, ಕಾಮದೇವರುಂ, ಬಲದೇವರಿವರೆಲ್ಲಂ ಊರ್ಧ್ವಗಾಮಿಗಳು.

ವಾಸುದೇವ, ಪ್ರತಿವಾಸುದೇವ, ನಾರದ, ರುದ್ರರೆಲ್ಲರೂ ಅಧೋಗಾಮಿಗಳು.

ಚಕ್ರಿಗಳಲ್ಲಿ ಕೆಲವರು ಊರ್ಧ್ವಗಾಮಿಗಳು, ಕೆಲವರು ಅಧೋಗಾಮಿಗಳು.

ಭೇದಾಭೇದರತ್ನತ್ರಯಾತ್ಮಕ ಧರ್ಮಮಂ ಕೈಕೊಂಡ ಭವದಿಂ ತೊಟ್ಟು, ಸ್ವರ್ಗವನ್ನು ಹೊಂದುವವರಿಗೂ ಹೇಳಿದ ಕಥೆಗಳು ಅರ್ಥಾಖ್ಯಾನಂ.

ನಿರ್ವಾಣದವರಿಗೆ ಹೇಳಿದ್ದು ಚರಿತಂ.

ತೀರ್ಥಕರಪರಮದೇವರ, ಸಕಲಚಕ್ರವರ್ತಿಗಳ ಕಥಾಪ್ರಕಥನಂಗಳು ಪುರಾಣವೆನಿಸುವವು.

ಪಂಚಮಂದರಗಳ ಪೂರ್ವಾಪರ ವಿದೇಹಕ್ಷೇತ್ರಂಗಳಲ್ಲಿ, ಅಂತಾ ತೀರ್ಥಂಕರರುಂ, ಚಕ್ರವರ್ತಿ, ಬಲದೇವ, ವಾಸುದೇವ, ಪ್ರಭೃತಿಗಳೆಲ್ಲಾ ಕಾಲದಲ್ಲಿಯೂ ಇರುವರು.

ಭರತೈರಾವತಗಳಲ್ಲಿ ಹದಿನೆಂಟುಕೋಟಾಕೋಟಿಸಾಗರೋಪಮಕಾಲಮಂತರಿಸಿ ದ್ವಿಗುಣ ತ್ರಿಷಷ್ಟಿ ಶಲಾಕಾಪುರುಷರುಂ, ಎರಡುಕೋಟಾಕೋಟಿಸಾಗರೋಪಮಕಾಲದೊಳಗೆ ಹುಟ್ಟುವರೆಂಬುದು ತಾತ್ಪರ್ಯವು.

ಗಾಹೆ ॥ ಜಿಣಸಮುಕೊತ್ತ್ಥವಿದಾ ಸಮುಕಾಳೇಸುಂಣಹೆತ್ಥಿ ಮೇರಚಿದಾ ॥
ಉಭಯಜಿಣತ್ತರಜಾದಾ ಸಂಣೇಯಾಚಕ್ಕಹರರುದ್ದಾ ॥ ೪೮ ॥

ಪಂಣರಜಿಣಖದುತಿಜೇಣಾ ಸುಂಣದುಜ್ಜೇಣಗಗಣಜುಗಳಜೇಣಖದುಗಂ ॥
ಜೇಣಕಜ್ಜೇಣಖದುಜೇಣಾ ಕೆಡ್ಡಿಜೋಕಿಸ್ಸಾಲಯಾಣೇಯಾ ॥ ೪೯ ॥
ಚಕ್ಕಿದುಗಮಥ್ಥಸುಂಣಂ ಹರಿಪಣಛಚ್ಚಕ್ಕಿಕೇಸಿಣಭಕೇಸಿ ॥
ಚಡ್ಡಿಣಭಚಕ್ಕಿಹರಿಣಭ ಚಕ್ಕಿಹರಿಚಕ್ಕಿಸುಣ್ಣದುಗಂ ॥ ೬೦ ॥
ರುದ್ದದುಗಛ್ಛಸುಂಣಾ ಸತ್ತಹರಾಗಗಣಜುಗಣಮಿಸಾಣೋ ॥
ಪಂಣದಣಭಾಣಿತತ್ತೋ ಸಛ್ಛಯಿತಣವೋ ಮಹಾವೀರೇ ॥ ೬೧ ॥

ಜಿನಾಂತರದ ಗಾಹೆಗಳಿವು.

ಇತಿ ಶ್ರೀಮಾಘನಂದ್ಯಾಚಾರ್ಯವಿರಚಿತೇ ಶಾಸ್ತ್ರಸಾರಸಮುಚ್ಚಯೇ
ಪ್ರಥಮಾನುಯೋಗವರ್ಣನಂ ನಾಮ ಪ್ರಥಮಃ ಪರಿಚ್ಛೇದಃ ।

ಇಂತು ಶ್ರೀಮಾಘನಂದ್ಯಾಚಾರ್ಯರು ವಿರಚಿಸಿದ ಶಾಸ್ತ್ರಸಾರಸಮುಚ್ಚಯದೊಳ್
ಪ್ರಥಮಾನುಯೋಗವೆಂಬ ಮೊದಲನೆಯಾಧ್ಯಾಯಂ ।



॥ ಶ್ರೀ ವೀತರಾಗಾಯ ನಮಃ ॥

# ಕರಣಾನುಯೋಗಂ.



ಪರಮ ಶ್ರೀಜಿನಪತಿಯಂ । ಸ್ಮರಿಯಿಸಿ ಭವ್ಯರ್ಗೆ ಪೇಳ್ವೆನಾಂ ಕನ್ನಡದಿಂ ॥
ಕರಣಾನುಯೋಗಮಂ ಭುವ- । ನತ್ರಯೈಕಹಿತಮಂ ನುತಮಂ ॥

ಶ್ರೀಪರಮಾತ್ಮಸುಖೋದ್ಭೂತಮುಂ । ಲೋಕಾಲೋಕವಿಭಾಗಮುಮನರಿಪುನೆರಡನೆಯ ಕರಣಾನುಯೋಗಮೆಂತೆನೆ ॥ ಪೇಳ್ವೆಂ ॥

## ಸೂತ್ರಂ ॥ ಅಥಃ ತ್ರಿವಿಧೋ ಲೋಕಃ ॥ ೧ ॥

ಅರ್ಥ—ಅಧೋಲೋಕಂ, ಮಧ್ಯಮಲೋಕಂ, ಊರ್ಧ್ವಲೋಕಂ ಎಂಬವಾಗಿ ಲೋಕವು ಮೂರುಭೇದವಾಗುವದು. ಅದು ಹ್ಯಾಗಂದರೆ—ಎತ್ತೆತ್ತಲಾಗಿ ನೋಡಿದರೂ ಅನನ್ತಾನನ್ತವಾದ ಆಕಾಶದ ನಟ್ಟನಡುವೆ ಅನಾದ್ಯನಿಧನವುಂ, ಅಕೃತ್ರಿಮವುಂ, ಸ್ವಾಭಾವಿಕವುಂ, ನಿತ್ಯವುಂ, ಸಮಸ್ತಾಕಾಶದವಯುವವುಂ, ಜೀವಾಜೀವಾದಿ ದ್ರವ್ಯಭರಿತವುಂ, ವೇತ್ರಾಸನ ( ಕುರ್ಚಿ ), ಝಲ್ಲರಿ ( ಜರಡಿ, ವಂದರಿ ), ಮೃದಂಗ ಸಮಾನವುಂ, ಪೂರ್ವಾಪರಗತ ಸಪ್ತೈಕ ಪಂಚೈಕರಜ್ಜುವಿಸ್ತಾರವುಂ, ದಕ್ಷಿಣೋತ್ತರಗತ ಸಪ್ತರಜ್ಜ್ವಾಯಾಮವುಂ, ಚತುರ್ದಶ ( ೧೪ ) ರಜ್ಜೋತ್ಸೇದವುಂ, ಘನೋದಧಿ, ಘನಾನಿಲ, ತನುವಾತವೆಂಬ ವಾತವಲಯತ್ರಯ ವೇಷ್ಟಿತವು ಆಗಿರುವದು. ಪುನಃ ಭವನವಾಸಿಗರಿಗೂ, ನಾರಕರಿಗೂ ಆಧಾರವಾದ, ಸಪ್ತರಜ್ಜೋಯದ ಅಧೋಲೋಕವುಂ, ದ್ವೀಪಸಮುದ್ರಂಗಳಾಧಾರವುಂ, ಮಹಾಮಂದರದ ಮೊದಲಿಂ ತೊಟ್ಟು ಅಗ್ರಭಾಗದವರಿಗೂ ಒಂದುಲಕ್ಷಯೋಜನೋತ್ಸೇದ ಉದ್ದವನ್ನುಳ್ಳ ಮಧ್ಯಮಲೋಕವುಂ, ಸ್ವರ್ಗಾದಿಗಳಿಗಾಧಾರವಾದ ಮಂದರಚೂಳಿಕಾ ಮೂಲದಿಂ ತೊಟ್ಟು ಕಿಂಚಿನ್ನ್ಯೂನ ಸಪ್ತರಜ್ಜೋತ್ಸೇದದೂರ್ಧ್ವಲೋಕಂ ಎಂಬ ಮೂರುಲೋಕಗಳ ನಡುವೆ ಏಕರಜ್ಜುವಿಸ್ತಾರವುಂ, ಚತುರ್ದಶರಜ್ಜೋತ್ಸೇದವುಂ, ಸಮಚತುರಸ್ರವಾದ ತ್ರಸನಾಳವಿರುವದು. ॥ ಅಲ್ಲಿ ॥

## ಸೂತ್ರಂ ॥ ಸಪ್ತನರಕಃ ॥ ೨ ॥

ಟಾ:—೧ ರತ್ನಪ್ರಭೆ, ೨ ಶರ್ಕರಾಪ್ರಭೆ, ೩ ವಾಲುಕಾಪ್ರಭೆ, ೪ ಪಂಕಪ್ರಭೆ, ೫ ಧೂಮಪ್ರಭೆ, ೬ ತಮಪ್ರಭೆ, ೭ ಮಹಾತಮಪ್ರಭೆ ಎಂದೇಳು ನರಕಗಳು. ಅದು ಹ್ಯಾಗಂದರೆ—ಘನಾಂಬುವಾತಾಕಾಶ ಪ್ರತಿಷ್ಟಿತಗಳುಂ, ಏಕೈಕರಜ್ಜ್ವಂತರಿತಗಳಾಗಿ, ಲೋಕಾಂತರದವರಿಗೂ ವಿಸ್ತರಿಸಿರುವ ಮಹಾಭೂಮಿಗಳ ಬಾಹುಲ್ಯವು ಹ್ಯಾಗಂದರೆ—

ಗಾಹೆ ॥ ರಯಣಪ್ಪಹಾತಿಹಾ ಖರಭಾಗಾ ಪಂಕಾಪ ಬಹುಳಭಾಗೊತ್ತಿ ।
ಸೋಳಸ ಚವುರಾಸಿದಿ ಸಿದಿಚೋಯಣ ಸಹಸ್ಸ ಬಾಹಲ್ಲಾ ॥ ೧ ॥

ಅರ್ಥ—ಖರಭಾಗವು ಷೋಡಶಸಹಸ್ರ ( ೧೬೦೦೦ ) ಯೋಜನವು. ಪಂಕಭಾಗವು ಎಂಭತ್ತನಾಲ್ಕು ಸಹಸ್ರ ( ೮೪೦೦೦ ) ಯೋಜನವು. ಅಬ್ಬಹುಳಭಾಗವು ಎಂಭತ್ತು ಸಹಸ್ರ ( ೮೦೦೦೦ ) ಯೋಜನಬಾಹುಲ್ಯವು. ಅಂತು ಲಕ್ಷದ ಮೇಲೆ ಎಂಭತ್ತು ಸಹಸ್ರ ( ೧೮೦೦೦೦ ) ಯೋಜನಮಂದದ ರತ್ನಪ್ರಭೆಯುಂ.

ಕೆಳಗಣಾರುಂ ಪೃಥ್ವಿಗಳು ಕ್ರಮದಿಂದ ದ್ವಾತ್ರಿಂಶತ್ಸಹಸ್ರಂ ( ೩೨೦೦೦ ), ಅಷ್ಟಾವಿಂಶತಿಸಹಸ್ರಂ ( ೨೮೦೦೦ ), ಚತುರ್ವಿಂಶತ್ಸಹಸ್ರಂ ( ೨೪೦೦೦ ), ವಿಂಶತಿಸಹಸ್ರಂ ( ೨೦೦೦೦ ), ಷೋಡಶಸಹಸ್ರಂ ( ೧೬೦೦೦ ) ಅಷ್ಟಸಹಸ್ರಂ ( ೮೦೦೦ ) ಬಾಹುಲ್ಯಗಳಾಗುವವು. ಸಪ್ತಮನರಕದ್ವಯದೊಳುಳಿದವರ ಕೆಳಗೆ ಮೇಲೆ ಸಹಸ್ರಯೋಜನ ಪ್ರಮಾಣವನ್ನು ಬಿಟ್ಟು, ಪ್ರಸ್ತರಕ್ರಮದಿಂದ ಬಿಲಗಳಿರುವವು.

## ಸೂತ್ರಂ॥ ಏಕೋನಪಂಚಾಶತ್ಪಟಲಾನಿ ॥ ೩ ॥

ತಾ—ಏಳುನರಕಗಳಲ್ಲಿಯೂ ಸೇರಿ ೪೯ ಪಟಲಗಳು ಹ್ಯಾಗಂದರೆ:—೧ ಸೀಮಂತ ೨ ನಿರಯ, ೩ ರೌರವ, ೪ ಭ್ರಾಂತ, ೫ ಉದ್ಭ್ರಾಂತ, ೬ ಸಂಭ್ರಾಂತ, ೭ ಅಸಭ್ರಾಂತ, ೮ ವಿಭ್ರಾಂತ, ೯ ತ್ರಸ್ತ, ೧೦ ತ್ರಸಿತ, ೧೧ ವಕ್ರಾಂತವೆಂದು ಘರ್ಮೆಯೆಂಬ ಮೊದಲ ನರಕದಲ್ಲಿ ಹದಿಮೂರು ಇಂದ್ರಕಗಳಿರುವವು. ॥ ೧ ॥

ತತಕ, ಸ್ತನಕ, ವನಕ, ಮನಕ, ಖಡಾ, ಖಡೀಕಾ, ಜಿಹ್ವೆ, ಜಿಹ್ವಿಕೆ, ಲೋಲ, ಲೋಲುಕ, ಲೋಲವತ್ಸ, ಸ್ತನಲೋಲುಪವೆಂದು ವಂಶೆಯೆಂಬ ೨ನೇ ಭೂಮಿಯಲ್ಲಿ ಹನ್ನೆರಡು ಇಂದ್ರಕಗಳಿರುವವು. ॥ ೨ ॥

ತಪ್ತಃ, ತಪಿತಃ, ತಪನಃ, ತಾಪನ, ನಿದಾಘ, ಉಜ್ವಲಿತಃ, ಪ್ರಜ್ವಲಿತಃ, ಸಂಜ್ವಲಿತಃ, ಸಂಪ್ರಸಂಜ್ವಲಿತವೆಂದು ಮೇಘೆಯೆಂಬ ಮೂರನೆಯ ನರಕದಲ್ಲಿ ಒಂಭತ್ತು ಇಂದ್ರಕಗಳಿರುವವು. ॥ ೩ ॥

ಆರ, ಮಾರ, ತಾರ, ವರ್ಚಸ್ಕ, ತಮ, ಘಡಾ, ಘಡಾಯವೆಂದಂಜನೆಯೆಂಬ ನಾಲ್ಕನೆಯ ನರಕದಲ್ಲಿ ಏಳು ಇಂದ್ರಕಗಳಿರುವವು ॥ ೪ ॥

ತದುಕ, ಭ್ರಮುಕ, ಝುಷಕ, ಅಂಧ, ತಮಿಶ್ರವೆಂದು ಐದಿಂದ್ರಿಕಗಳು ಅರಿಷ್ಟೆಯೆಂಬ ಯ್ದನೆಯ ನರಕದಲ್ಲಿರುವವು. ॥ ೫ ॥

ಹಿಮ, ವಾರ್ಧವಿ, ಲಲ್ಲಕ್ಯಃ ಎಂದು ಮೂರಿಂದ್ರಕಗಳು ಮಘವಿಯೆಂಬ ಆರನೆಯ ನರಕದಲ್ಲಿರುವವು. ॥ ೬ ॥

ಅವಧಿಸ್ಥಾನವೆಂಬೊಂದಿಂದ್ರಕವು ಮಾಘವಿಯೆಂಬೇಳನೆಯ ಪೃಥ್ವಿಯಲ್ಲಿರುವದು. ॥ ೭ ॥

ಪಟಲಮಧ್ಯದಲ್ಲಿಂದ್ರಕಗಳಿರುವವು. ಅವುಗಳ ಎಂಟು ದಿಕ್ಕುಗಳಲ್ಲಿಯೂ ತರತರದಿಂ ಶ್ರೇಢಿಬದ್ಧಗಳಿರುವವು. ಅವುಗಳ ಎಡೆ ಎಡೆಯಲ್ಲಿ ಪೂವಲಿಗೆದರಿದಂದದಿಂ ನಾನಾಪ್ರಕಾರವಾದ ಪ್ರಕೀರ್ಣಕಂಗಳಿರುವವು. ॥ ೮ ॥

ಗಾಹೆ ॥ ತೇರಾದಿದುಹಿಣಿದ್ದಯ ಸೇಢಿಬದ್ಧಾದಿಸಾಸುರಿದಿಸಾಸು ।
ಉಣವಂಣದದಾಳಾದಿ ಎಕ್ಕೆಕ್ಕೆಣೂಣಯಾಕಮಸೋ ॥ ೨ ॥

## ಸೂತ್ರಂ॥ ಚತುರುತ್ತರಷಟ್ಶತನವಸಹಸ್ರಶ್ರೇಢಿಬದ್ಧಾನಿ ॥೪॥

ರತ್ನಪ್ರಭೆಯ ಹದಿಮೂರು ಪಟಲಗಳಲ್ಲಿ ನಾಲ್ಕುಸಾಸಿರ ನಾನೂರಿಪ್ಪತ್ತು ( ೪೪೨೦ ) ಶ್ರೇಢಿಬದ್ಧಗಳಿರುವವು.

ವಂಶೆಯ ಹನ್ನೊಂದು ಪಟಲಗಳಲ್ಲಿ, ಎರಡುಸಾವಿರ ಆರುನೂರೆಂಭತ್ನಾಲ್ಕು ( ೨೬೮೪ ) ಶ್ರೇಢಿಬದ್ಧಗಳಿರುವವು.

ಮೇಘೆಯ ವೊಂಭತ್ತು ಪಟಲಗಳಲ್ಲಿ ಸಾಸಿರನಾನೂರೆಪ್ಪತ್ತಾರು ( ೧೪೭೬ ) ಶ್ರೇಢಿಬದ್ಧಗಳಿರುವವು.

ಅಂಜನೆಯ ಏಳು ಪಟಲಗಳಲ್ಲಿ ಏಳುನೂರು ( ೭೦೦ ) ಶ್ರೇಢಿಬದ್ಧಗಳಿರುವವು.

ಅರಿಷ್ಟೆಯ ಐಯ್ದು ಪಟಲಗಳಲ್ಲಿ ಇನ್ನೂರರವತ್ತು ( ೨೬೦ ) ಶ್ರೇಢಿಬದ್ಧಗಳಿರುವವು.

ಮಘವಿಯ ಮೂರು ಪಟಲಗಳಲ್ಲಿ ಅರುವತ್ತು ( ೬೦ ) ಶ್ರೇಢಿಬದ್ಧಗಳಿರುವವು.

ಮಹಾತಮಪ್ರಭೆಯಂಬೊಂದು ಪಟಲದಲ್ಲಿ ನಾಲ್ಕು ( ೪ ) ಶ್ರೇಢಿಬದ್ಧಗಳಿರುವವು.

ಇವುಗಳ ಹೆಸರು ಪೂರ್ವಾದಿ ದಿಕ್ಕಿನಲ್ಲಿ ಕಾಳ, ರೌರವ, ಮಹಾಕಾಳ, ಮಹಾರೌರವ ಗಳೆಂದಾಗುವವು. ಇವುಗಳೆಲ್ಲಾ ಶೇರಿ ೯೬೦೪ ಶ್ರೇಢಿಬದ್ಧಗಳಾಗುವವು.

## ಸೂತ್ರಂ॥ ತ್ರ್ಯಶೀತಿಲಕ್ಷನವತಿಸಹಸ್ರತ್ರಿಶತತ್ರ್ಯೂನ ಪಂಚಾಸಪ್ರಕೀರ್ಣಕಾನಿ ॥ ೫ ॥

ಇಂದ್ರಕ ಶ್ರೇಢಿಬದ್ಧರಹತಬಿಲಂಗಳು ಪ್ರಕೀರ್ಣಕಂಗಳಾಗುವವು ಅವು ಹ್ಯಾಗಂದರೆ— ಘರ್ಮೆಯಲ್ಲಿ ಇಪ್ಪತ್ತೊಂಭತ್ತುಲಕ್ಷ ತೊಂಭತ್ತೈದುಸಾವಿರ ಐನೂರರವತ್ತೆರಡು (೨೯೯೫೫೬೨) ಪ್ರಕೀರ್ಣಕಂಗಳಿರುವವು.

ವಂಶೆಯಲ್ಲಿ ಇಪ್ಪತ್ನಾಲ್ಕುಲಕ್ಷ ತೊಂಭತ್ತೇಳುಸಾವಿರ ಮೂನ್ನೂರೈದು ( ೨೪೯೭೩೦೫ ) ಪ್ರಕೀರ್ಣಕಂಗಳು ಇರುವವು.

ಮೇಘೆಯಲ್ಲಿ ಹದಿನಾಲ್ಕುಲಕ್ಷ ತೊಂಭತ್ತೆಂಟುಸಾವಿರ್ರೈನೂರಹದಿನೈದು ( ೧೪೯೮೫೧೫ ) ಪ್ರಕೀರ್ಣಕಂಗಳು ಇರುವವು.

ಅಂಜನೆಯಲ್ಲಿ ಒಂಭತ್ತುಲಕ್ಷ ತೊಂಭತ್ತುಸಾವಿರದಿನ್ನೂರು ತೊಂಭತ್ಮೂರು ( ೯೯೯೨೯೩ ) ಪ್ರಕೀರ್ಣಕಂಗಳಿರುವವು.

ಅರಿಷ್ಟೆಯಲ್ಲಿ ಎರಡುಲಕ್ಷ ತೊಂಭತ್ತೊಂಭತ್ತುಸಾವಿರಯೇಳನೂರು ಮೂವತ್ತೈದು (೨೯೯೭೩೫) ಪ್ರಕೀರ್ಣಕಂಗಳಿರುವವು.

ಮಘವಿಯಲ್ಲಿ ತೊಂಭತ್ತೊಂಭತ್ತುಸಾಸಿರದೊಂಭೈನೂರುಮೂವತ್ತೆರಡು (೯೯೯೩೨) ಪ್ರಕೀರ್ಣಕಗಳು ಇರುವವು.

ಮಾಘವಿಯಲ್ಲಿ ಐದು ಬಿಲಗಳಿರುವವು.

ಪ್ರಕೀರ್ಣಕಗಳೆಲ್ಲಾ ಕೂಡಿ ಎಂಭತ್ತೊರುಲಕ್ಷ ತೊಂಭತ್ತುಸಾವಿರ ಮುನ್ನೂರು ನಲವತ್ತೇಳು (೮೩೯೦೩೪೭) ಪ್ರಕೀರ್ಣಕಂಗಳಿರುವವು.

ಸೂತ್ರಂ ॥ ಚತುರಶೀತಿಲಕ್ಷಬಿಲಾನಿ ॥ ೬ ॥

ತಾ.—ಘರ್ಮೆಯಲ್ಲಿ ತ್ರಿಂಶತ್‌ಲಕ್ಷ (೩೦೦೦೦೦೦) ಬಿಲಗಳಿರುವವು.

ವಂಶೆಯಲ್ಲಿ ಪಂಚವಿಂಶತಿಲಕ್ಷ (೨೫೦೦೦೦೦) ಬಿಲಗಳಿರುವವು.

ಮೇಘೆಯಲ್ಲಿ ಪಂಚದಶಲಕ್ಷ (೧೫೦೦೦೦೦) ಬಿಲಗಳಿರುವವು.

ಅಂಜನೆಯಲ್ಲಿ ದಶಲಕ್ಷ (೧೦೦೦೦೦೦) ಬಿಲಗಳಿರುವವು.

ಅರಿಷ್ಟೆಯ:ಲ್ಲಿ ಮೂರುಲಕ್ಷ (೩೦೦೦೦೦) ಬಿಲಗಳಿರುವವು.

ಮಘವಿಯಲ್ಲಿ ಐದುಗುಂದಿದವೊಂದು ಲಕ್ಷ (೯೯೯೯೫) ಬಿಲಗಳಿರುವವು.

ಮಾಘವಿಯಲ್ಲಿ ಐದು (೫) ಬಿಲಗಳಿರುವವು.

ಕಂದ ॥ ಮೂವತ್ತಿಪ್ಪತ್ತೈವ- ।
ತ್ತಾವಗಪದಿನೈದು ಪತ್ತು ಮೂರಯ್ದೂನಂ ॥
ಭಾವಿಖೊಡಿವುಲಕ್ಷೆಗಳೇ ।
ಪೇಳ್ವುದು ಬಳಿಕಮಯ್ದುನರಕಬಿಲಂಗಳ್ ॥

ಇಂತಿವೆಲ್ಲಾ ಕೂಡಿ ಚತುರಶೀತಿಲಕ್ಷ (೮೪೦೦೦೦೦) ಬಿಲಗಳಾಗುವವು.

ಮತ್ತಂ ಇಂದ್ರಕಗಳು ಸಂಖ್ಯಾತಯೋಜನಂಗಳು, ಶ್ರೇಥಿಬದ್ಧಂಗಳು ಅಸಂಖ್ಯಾತಯೋಜನ ವಿಸ್ತಾರಗಳಾಗುವವು.

ಪ್ರಕೀರ್ಣಕಂಗಳ್ಕೆಲವು ಅಸಂಖ್ಯಾತಯೋಜನ ವಿಸ್ತಾರಗಳನ್ನುಳ್ಳವುಗಳು.

ಸೂತ್ರಂ ॥ ಚತುರ್ವಿಧದುಃಖಮಿತಿ ॥ ೭ ॥

ತಾ.—ಸಹಜ, ಶಾರೀರ, ಮಾನಸ, ಆಗಂತುಕವೆಂದು ದುಃಖವು ನಾಲ್ಕು ಭೇದವಾಗುವದು.

ಶ್ಲೋಕ—ಶಾರೀರಾಜ್ವರಕುಷ್ಟಾದ್ಯಾ ಕ್ರೋಧಾದ್ಯಾ ಮಾನಸಾಸ್ಮೃತಾ ॥
ಆಗಂತವೋಭಿಘಾತೋತ್ಥಾ ಸಹಜಾ ಕ್ಷುತ್ತೃಷಾದಯಃ ॥

ಅಥವಾ ಕ್ಷೇತ್ರಜಮ್, ಅಸಾತೋದಯ ಶಾರೀರವುಂ, ಮಾನಸವುಂ, ಪರಸ್ಪರೋದಿತ ವುಂ, ದನುಜೋದೀರಿತವುಂ ಎಂಬ ಅನೇಕ ತೆರದ ದು:ಖಗಳಿಂದ ಹಗಲೂ ರಾತ್ರಿಯೂ ನರಳುವರು. ರೆಪ್ಪೆಹೊಡೆಯುವಷ್ಟು ಹೊತ್ತಾದರೂ ಕೂಡಾ, ಸಮ್ಯಕ್ತ್ವಗ್ರಹಣಕಾಲ ಹೊರ ಗಾಗಿ ಸುಖವೆನ್ನುವದಿಲ್ಲ. ಮೂರನೆಯ ನರಕದಿಂದತ್ತಲಸುರಕೃತವಾದ ದುಃಖವಿಲ್ಲ. ಯಾಕಂದರೆ, ದೇವರ್ಕಳತ್ತಸಲವಿಲ್ಲಪ್ಪುದರಿಂ ಮತ್ತುಂ ರತ್ನಪ್ರಭೆಯಿಂದ ಧೂಮಪ್ರಭೆಯ ತ್ರಿಚರಣಭಾಗದವರಿಗೂ ಇರುವ ಎಂಭತ್ತೆರಡುಲಕ್ಷದ ಇಪ್ಪತ್ತೈದುಸಾವಿರ (೮೨೨೫೦೦೦) ಬಿಲಂಗಳಲ್ಲಿ, ಮಂದರಮಹೀಧರಪ್ರಮಾಣದಾಲಿಗೊಡುವ ಲೋಹಪಿಂಡವನ್ನು ಎತ್ತಲಾನುಂ ತೆಗೆದುಕೊಂಡು ಹಾಕಿದರೆ ಆ ಕ್ಷಣದಲ್ಲಿಯೇ ಕರಗಿಸಿಬಿಡುವಂಥಾ ಘರ್ಮವು ಬಂದುಕಾಲ ದಲ್ಲಿಯೂ ಕೆಡದೆ ಧಗಧಗಿಸುತ್ತಲಿರುವದು.

ಮತ್ತು ಅಲ್ಲಿಂದ ಕೆಳಗುಳಿದ ಒಂದುಲಕ್ಷದೆಪ್ಪತ್ತೈದುಸಾವಿರ (೧೭೫೦೦೦) ಬಿಲಂಗಳ ತಿಶೀತಲಗಳಾಗಿರುವವು. ಅದು ಹ್ಯಾಗಂದರೆ—ತದ್ಗಿರೀಂದ್ರಸಮಾನವಾದ ಚೆನ್ನಾಗಿ ಕಾದು ಕೆಂಪಾಗಿರುವ ಲೋಹದ ಪಿಂಡವನ್ನು ತೆಗದುಕೊಂಡು ಹೋಗಿ ಎಲ್ಲಿಯಾದರೂ ಹಾಕಿದರೆ, ಆ ಕ್ಷಣದಲ್ಲಿಯೇ ನೆಲವನ್ನು ಹೊಂದದೆ ಇರುವದಕ್ಕಿಂತ ಮುಂಚೆಯೇ ಅಲ್ಲಾಡಿಸಲಸಾಧ್ಯ ವಾದ ಹಿಮವು ಎಂದಿಗೂ ಕುಂದದೆ ಅತ್ಯದ್ಭುತವಾಗಿರುವದು.

ಪುನ: ಅನಿತು ಬಿಲಗಳಲ್ಲೆಲ್ಲಾ ಅವರ ಮೇಗಣಟ್ಟುಗಳಲ್ಲಿ, ವಿಭತ್ಸುಕುತ್ಸಿತಾಕಾರಂಗ ಳಾದ ಯೋನಿಸ್ಥಾನಂಗಳಲ್ಲಿ, ಜಿನಧರ್ಮದಲ್ಲಿ ಶಿಟ್ಟುಮಾಡುವವರೂ, ಸಾಧುಸಂದೋಹಕ್ಕೆ ಸಂಕ್ಲೇಶಗಳನ್ನು ಮಾಡುವವರೂ, ಮಿಥ್ಯಾವಾದಗಳನ್ನು ಬಿಡದೆ ವಾದಮಾಡುವವರೂ, ಮದ್ಯ ಮಾಂಸ, ಮಧು ಸೇವೆಗಳನ್ನೂ, ಕುಲದೇವತಾರಾಧನೆಯನ್ನೂ ಮಾಡಿದವರೂ ಕೊಲೆ ಮೊದ ಲಾದ ಅವ್ರತಸೇವೆಗಳನ್ನು ಮಾಡಿದವರೂ, ದುರ್ಧ್ಯಾನದುರ್ಲೇಶ್ಯಾಪರಿಣಾಮಯುಕ್ತರಾಗಿ, ತಂತಮ್ಮ ನೆರಪಿದ ಪಾಪಾನುರೂಪದಿಂದ ಸತ್ತು, ಮೊದಲನರಕದಿಂದ ಏಳನೇ ನರಕದವ ರಿಗೂ, ಆ ಯೋನಿಗಳಲ್ಲಿ ಹುಟ್ಟಿದ ಅಂತರ್ಮುಹೂರ್ತದಲ್ಲಿ ಷಟ್‌ಪರ್ಯಾಪ್ತಿಗಳ್ನೆರದು ರೋಮರೋಮಂಗಳು ತಪ್ಪದೆ ಸರ್ವಾಂಗವನ್ನು ಸಹಸ್ರ ಚೇಳುಗಳು ಒಂದಾಗಿ ಚುಚ್ಚಿದರೆ ಎಷ್ಟು ವೇದನೆಯಾಗುತ್ತದೊ, ಅಂಥಾ ವೇದನೆಗೆ ಅನಂತಗುಣವೆನಿಸುವ ವ್ಯಾಧಿಯನ್ನು ಉಂಟುಮಾಡುವಂಥಾ ಹಾಲಾಹಲಸಮಾನ ತೀವ್ರಸುಗಂಧದೋರಿತ ಭಾಗದಿಂದ ಬೀಳುವ ಹಾಗೆ ಕೆಳಗೆ ಬಿದ್ದು, ಗಗನಾಗ್ರದಿಂದ ಶಿಲಾತಲದಲ್ಲಿ ಬಿದ್ದ ಲೋಹದ ಗುಂಡಿನ ಹಾಗೆ ಪುಟನೆಗೆದೆದ್ದು, ಹಲಸಿನ ಹಣ್ಣಿಗೆ ಸಮಾನವಾಗಿರುವ, ಮೊನೆದುರುಗಲ ವಜ್ರದ ಶಿಲೆಯಲ್ಲಿ ಅಪ್ಪಳಿಸಿ, ಪುನ: ಬಿದ್ದು ಜರ್ಜರಿತ ಗಾತ್ರರಾಗಿ, ಬಾಯ್ಬಿಟ್ಟು ಕಿರಿಚಿ ಹೊರಳುತ್ತ, ಎದ್ದು ನಿಂದಿ ರ್ದ್ದುದೆಶೆಗಳನ್ನು ನೋಡುವಕಾಲದಲ್ಲಿ, ಕಡೆಗಾಲದ ಸಿಡಿಲ ಹಾಗೆ, ಘುಡುಘುಡನೆ ಕಣ್ಕಿಡಿಯುಂ ಕೆಂಡಗಳನ್ನುಗುಳುತ್ತಾ, ಶಿಟ್ಟಿನಿಂದ ಬರುವಂಥಾ ಪುರಾಣನಾರಕರನ್ನು ಕಂಡು ಭಯಸ್ಥನಾ ಗಲು, ಅಂತು ತಮಗೂ ಪೆರರಿಗೂ, ದುರಂತಸನ್ತಾಪವನ್ನು ವಿಭಂಗಜ್ಞಾನದಿಂದ ನರಕ ಲೋಕ ವೃತ್ತಾಂತವನ್ನೆಲ್ಲಾ ತಿಳಿದು—

ವೃತ್ತ॥ ಜಿನಧರ್ಮಕ್ಕೆ ದಯಾರಸಾಬ್ಧಿಗೆ ವೃಥಾವಿದ್ವೇಷಮಂ ಮಾಳ್ಪ ಮುಂ- ।
ನಿನದುರ್ಭಾವದಿನಾದ ಪಾಪದಫಲಂ ನಿಷ್ಕಾರಣದ್ವೇಷದು- ॥
ರ್ದಿನಮಂ ನಾರಕಕೋಟಿಯೊಳ್ಪಡೆವುದುಂ ನಾಯಿನಾಯಿಗಳೊಳ್ ಪೋರ್ವವೋಲ್ ।
ಮುನಿದೋರ್ವರನೋರ್ವರೆಯ್ದಿ ಕ್ಕಡಿಖಂಡಂ ಮಾಡುತಂ ದಂಡಿಪರ್ ॥ ೧ ॥

ಮತ್ತಂ ಉರಿವಗ್ನಿಗೆ ಘೃತಾಸಾರಂ ದೊರೆಕೊಂಡಂತೆ, ಸುರಾಸುರರುಂ ಪೂರ್ವವೈರಮ ನೆಚ್ಚರಿಸಿಯುಂ, ವಿಭಂಗಜ್ಞಾನದಿನವರವರ ಪೂರ್ವಭವದದೋಷಾವಿಳಮಪ್ಪ ಚೇಷ್ಟೆಗಳನರಿ ಯುತಂ, ತಮ್ಮದೋಷಮಂ ತಾವೆಣಿಸದೆ ಕಳಕಳರಂ, ಪಾಣ್ಬರ್ಪಾಣ್ಬರಂ ಮುನಿದು ಮೂದ ಲಿಸುವನ್ತೆ ಮೂದಲಿಸುತ್ತಂ ॥ ೨ ॥

ಕಂದ॥ ಯಿವರಿಂದಿವು ಸವಿಯುನುತಂ ।
ಸವಿನೋಳ್ಸೈ ಪಲವುತೆರದ ಮೃಗದಡಗವಿಪಾವುವು ॥
ಸವಿಪೇಳೆನುತವನವ- ।
ಯವಂಗಳಂ ಕೊಯ್ದು ಇಡುವರವನಾನನದೊಳ್ ॥ ೧ ॥
ಮೋರೆಯುಳಿವ ಮದ್ಯಪಾನವ ।
ನೆರೆನೆಂದುಂ ಮಧುವನಟ್ಟ ತಲೆಯೊಳ್ ತಳಿಯಿ- ॥
ಪ್ಪರಗುಲಿಗಳ ತಲೆಯಿಂದಿಳಿ ।
ಎರವಳ್ಳಳ್ತಳಿಸಿ ಕುದಿವಲೋಹದ್ರವಮಂ ॥ ೨ ॥
ಯೆಲೆಯೆಲವೊ ಸಿನಗಲ್ಲದೆ ।
ನಿಲಲಾರದೀಪಾಣ್ಯೆ ಬಂದಳಿಯಿರ್ದಳಬಾ- ॥
ನಲಿದು ನೆರೆಯೆಂದು ಕಡುಗಾ- ।
ಯ್ದ ಲೋಹಪುತ್ರಿಕೆಯನಾಗ್ರಹದಿನಪ್ಪಿಸುವರ್ ॥ ೩ ॥

ವಚನ ॥ ಅನ್ತಪ್ಪಿಸುವುದು ಮೆಯಿಬೇವುದುಂ ಮೂರ್ಛೆವೋಗಿಕಿರಿದು ಬೇಗದಿನೆಚ್ಚತ್ತು ಸನ್ತಾ ಪದಿಂ ನೀರಡಿಸಿ ನಿಲಲಾರದೆ ದೆಸೆಗಳಂ ನೋಳ್ಪಾಗಳು ನಂಜಿನ ನದಿಗಳು ಪರಿಗುಮ ದಲ್ಲದೆಯುಂ ಕುತ್ಸಿತವಿಷಯಸೇವೆಯಿಂ ಮಧ್ಯಮಲೋಕವರ್ತಿಗಳ ಚೈತನ್ಯದೊ ಳಾದ ನಾನಾವರ್ಣದ ಕುಷ್ಟರೋಗಂಗಳೆನಿಸುವತ್ಯಶುಭಂಗಳಪ್ಪ ವೀರಬೀಭತ್ಸ ಹಾಸ್ಯರೌದ್ರ ಭಯಾನಕಾದ್ಭುತರಸಂಗಳಂ ಜಾರಾಂಗನಾಸಂಭೋಗ ವಿಪ್ರಲಂಭ ಶೃಂಗಾರದ ರಸಂಗಳುಮತ್ಯುತ್ಕಟಂಗಳಾಗಿ ಪೊರಪೊಣ್ಮಿ ಪೊನಲ್ವರಿದು ನೀಚಗತಿ ಪರಿಣತಂಗಳಾಗಿ ನರಕಭೂಮಿಗವತರಿಸಿ ಕಾಳ್ಪರಂ ಮಸಗಿದಂತಿರ್ದ ವೈತರ ಣಿಯಂ ಕಂಡು ನೀರ್ಗುಡಿಯಲೆಂದು ಪೋಗಿ, ಪುಗಲೊಡಮಲ್ಲಿಯ ಮಕರಾದಿಗಳು ಗಿಬಗಿಮಾತ್ಕುಮಾಸೆಯಿಂ ವಿಷಜಲಮಂ ಮೊಗೆದು ಕುಡಿಯಲೊಡಮೆರ್ದೆಕರಗುಗು ಮರಿದಾಯ್ತೆಂದು ನಾರಕರ್ಪೇಳರುವಿನಂ ॥ ಮತ್ತಮಾನದಿಯ ತಡಿವಿಡಿದಿರ್ದಸಿಪತ್ರ ವನಮಂ ಪೊರ್ದಲೊಡಂ—

ಕಂದ॥ ನನೆಗಳೆ ನಡುಗುಂ ಕಾಮಿಗ- ।
ಳನೆಂಬಮಾತಿಲ್ಲಿಪುಸಿ ಪರಸ್ತ್ರೀರತರಂ ॥
ನನೆಯಮೊನೆಯಂ ಬುಮಲರಲ- ।
ಗಿನಂಬುಮಾವನದೊಳುರ್ಬಿನೋಯಿಪುದುದಿಟಂ ॥ ೪ ॥

ಅದಲ್ಲದೆಯುಂ—

ವೊಳಗೊಳಗೆಕಳ್ವರಂ ಪುಸಿ ।
ಗೆಳೆಯಿಂದೊಳಗೊಳಗೆಸುಳಿದು ಪರವನಿತಾ ಸಂ- ॥
ಕುಳದೊಳು ನೆರೆದವರಘ ।
ವೊಳಗೊಳಗಿರಿಗುಂ ವಿಚಿತ್ರರೋಗಚ್ಛಲದಿಂ ॥ ೫ ॥

ವೃತ್ತ ॥ ಜ್ವರದಾಹಶ್ವಾಸಕಾಸವ್ರಣಪಿಟಕ ಶಿರೋರೋಗಸರ್ವಾಂಗಶೂಲಾ- ।
ದಿರುಜಾಸಂದೋಹ ಜಡಾಭರದಿಂ ನೊಳರುತಂ ಸುತ್ತಲುಂ ಬೇನೆಯಿಂದಂ ॥
ಬಿರಿಯುತ್ತಂ ನಾರಕರ್ಕಳ್ಬಿರಿಕೆನೆಡೆಗಳಂ ಶಸ್ತ್ರದಿಂ ಸೀಳ್ದುದುಂಗೊ- ।
ಳ್ಗರೆಯುತ್ತಂ ಕೂಗಿಡುತ್ತಂ ಮೊರೆಯಿಡುತ್ತಮ್ಮತಿಕ್ಲೇಶದಿಂ ಬರ್ದುಂತಿಪ್ಪರ್ ॥ ೩ ॥

ಕರ್ಮಜವೆಂದು ರೋಗಜಮುಮೆಂದೆರಡುಂ ತೆರದಿಂ ಶರೀರಿಯಂ ನೆವ್ಮಿದ ಕುತ್ತಲೊತ್ತಿ ದಡೆ ಘೂಳಿಗರಂ ನೆಲಮುಕ್ಕುಜಕ್ಕಿಯಬ್ಬೊಂಮೆಯನೆಂದು ಜೀವವಧೆಗೆಯ್ದಡೆ ಮುನ್ನಿನ ದುಃಖದಿಂದೆಸಾಸಿರ್ಮಡಿ ದುಃಖಮಂ ಪಡೆವನಾರಕದುಃಖಮನೆಯ್ದಿರ್ಪರ್ ॥ ೪ ॥

ಮತ್ತಮಾನಾರಕನಿಕಾಯಕ್ಕೆ—

ಕಂದ॥ ಧಾರುಣಿಯನೆಯ್ದೆನುಂಗುವ ।
ವಾರಾಸಿಯನೆಯ್ದೆಪೀರ್ವತವಕದಪಸಿವುಂ ॥
ನೀರಳ್ಕೆಯುಮೆಂದುಂ ಕಿಡ ।
ಲೋರೊರ್ಮೆಯುಮನ್ನಪಾನಲವಮಂ ಪಡೆಯರ್ ॥ ೬ ॥

ಪಸಿದುಲವಲವಿಸಿ ಬಸಿರಂ ।
ಪೊಸೆಯುತ್ತಂ ಬಿರ್ದುನೆಲನಮಣ್ಣಂ ಕಾರ್ವ- ॥
ಬ್ಬಸಮಳಿಯುತಿರ್ಪರರವರಾ ।
ರ್ಜಿಸಿದುತ್ಕಟಮಪ್ಪಪಾಪಮೆನೆನಿವಿರಿದೋ ॥ ೭ ॥

ಆ ವಿಷಮೃತ್ತಿಕೆಯಂ ತಂ- ।
ದೀವಸುಧೆಯೊಳೆತ್ತಲಾನು ಮಿಕ್ಕಿದೊಡಳಿಗುಂ ॥
ಗಾವುದರೊಳಗಿರ್ದನಿತುಂ ।
ಸ್ಥಾವರ ಜಂಗಮಮೆನಿಪ್ಪಜೀವನಿಕಾಯುಂ ॥ ೮ ॥

ಮತ್ತಮಾದುಃಖಿಜೀವಿಗಳು—

ಉದಧಿಗೆಣೆಯೆನಿಸಿದಾಯು- ।
ಷ್ಯದ ಕಡೆವರಮೆಯ್ದೆಪಟ್ಟೆಗಾಳೆಗದವರಂ ॥

ದದಿದಶುಭಕರ್ಮದಾವೇ- ।
ಶದಿನೋರ್ವರನೋರ್ವರಿರಿದು ನಮೆಯುತ್ತಿರ್ಪರ್ ॥ ೯ ॥

ಅಂತುಮಲ್ಲದೆಯುಂ—

ನರಕದ ವಿಚಿತ್ರದು:ಖೋ- ।
ತ್ಕರಮಂ ತಾವುಣತಮಿದಿರುಮಂ ಬಾಧಿಪವ- ॥
ರ್ಪೊರೆದದಾವಾಗ್ನಿಯೆನಡವಿಯ ।
ಮರಂಗಳುರಿಯುತ್ತಮೊಂದನೊಂದುರಿಪುವವೋಲ್ ॥ ೧೦ ॥

ಸೆರೆಗಳು ಪರ್ವಿತೆತುರಿಯಂ ।
ಕೆರಕುಂ ದುಷ್ಟಬ್ರಣಂಗಳುಂ ಕುಂದದವಂ- ॥
ದಿರತನುಗಳು ಪಾಪದಫಲ- ।
ದರಾಶಿಗಳಬರ್ಚಿಸಿರ್ದತೆರದಿಂದಿಕ್ಕುಂ ॥ ೧೧ ॥

ಮಿಡಿಯದ ಕೊಳೆವಂಣಂ- ।
ದಿಳಿಯದವರ್ಚ್ಛಿಚರಮುವಜ್ಞೆಯಿಂ ನೋಡದೆ ॥
ಮಾಡಿದರೂಪಿನಂತೆ ನೇರ್ಪಿಲ್ಲದ ।
ವಿಕಟಾಕೃತಿಯಹುಂಡಸಂಸ್ಥಾನಂಗಳ್ ॥ ೧೨ ॥

ವೊಳಗಣದುರ್ಗಂಧಮುದ- ।
ಗ್ಗಳಿಸಿರೆಮೆಯಿತಾನಪೇಸಿಬಹುವುಖದಿಂದಾ- ॥
ಗಳು ಮುಗುಳ್ವಮಾಳ್ಕೆಯಿಂ ಪುಂ- ।
ಙ್ಗಳ ಬಾರಿಯಿಂ ಪಡುಕೆನಾರ್ಪರಸುಗೆಗಳೊಸಗುರ್ಗಂ ॥ ೧೩ ॥

ಗರಿಕಿತ್ತ ಬಾವಲ ।
ತೆರದಿಂವಿಭತ್ಸುವರ್ಪೊಡಲ್ಗೆ ಕೆಲರ್ವೆ- ॥
ಸರುವೃತ್ತಂ ನೆನೆವರ್ಮನ್ನಂ ।
ಪೆರರಂಗನೆಯರ್ಗೆಮೆರೆವ ಚೆನ್ನಿಗತನಮಂ ॥ ೧೪ ॥

ಸೀರುಡುವಿನ ಕರಡಿಯ ।
ಮಾರ್ಜ್ಜಾಲದ ನಾಯಸಧ್ವನಿಗಮತಿಕಷ್ಟಂಗಳ್ ॥
ನಾರಕರ ದು:ಸ್ವರಂಗಳು ।
ಘೋರಂಗಳು ಕರ್ನಶೂಲೆಯಂ ಪುಟ್ಟಿಸುಗುಂ ॥ ೧೫ ॥

ನೆನೆದು ಕೆಲವರ್ಮರುಗುವರೊಡೆ- ।
ದ ನಿಜಧ್ವನಿಭಿನ್ನಕಂಠಗರ್ಧಭಖರಭ ॥
ಧ್ವನಿಗಂ ಕರ್ಕಶವಾಗಿರೆ ।
ವನಮೃಗಮಂಗೊರಿಗೊಳಿಗೊಳಿಪ ಮುನ್ನಿನಧ್ವನಿಯಂ ॥ ೧೬ ॥

ಅದಲ್ಲದೆಯುಂ—

ದಾವಾಗ್ನಿಯನೆಚ್ಚರಿಪಮ- ।
ಹಾವಾಯುವಿನಂತೆ ತಮ್ಮಮನದಳಿಪಂ ನಾ- ॥
ನಾವಿಧದುರಾಗಮೋಕ್ತಿಗ- ।
ಳಾವಗಮೆಚ್ಚರಿಸೆಪೂರ್ವಜನ್ಮಾಂತರದೊಳ್ ॥ ೧೭ ॥

ವ॥ ಮೆಚ್ಚಿದಂತಾಡಿದ ದುರಾಚಾರಂಗಳಂ ಪೆಸರ್ಗೊಂಡು ಮೂದಲಿಸಿನಾರಕರ್ದಂಡಿಸುತ ಮಿರೆ ಮುನ್ನಮೋರೋರ್ವರ್ ವಿನೋದದಿಂ ಕೇಳ್ದ ಜೈನಾಗಮೋಕ್ತಿಗಳಂ ನೆನೆದು—

ಕಂದ॥ ಅಮುಮಜಿನಮತಮೆ ಸಕಲಾ- ।
ಗಮತಿಲಕಮೋ ಜೀವಹಿಂಸೆಯಿಂ ದುರ್ಗತಿಯಕ್ಕು- ॥
ಮಮೋಘಮೆಂಬ ನಿಜವಾಕ್ಯ ದಿ- ।
ಟಮೆಂದೀಗಳರಿದೆವೆಂಬರ್ಕೆಲಬರ್ ॥ ೧೮ ॥

ಮರುಭವಮುಳ್ಳುದುದಿಟಮೆಂ- ।
ದರಿವಡಮಿೂ ತೆರದವಸ್ಥೆಗಳ್ ನರಕದೊಳೆಂ- ॥
ದರಿವೊಡಮಾಮೃಗಾಗಣಮುಂ- ।
ತರಿವೆನೆ ಜೈನಾಗಮೋಕ್ತಿಯಂ ಮಿೂರುವನೇ ॥ ೧೯ ॥

ಕೊಲೆಯುಂ ಪುಸಿಯುಂ ಕಳವುಂ ।
ಕುಲಟಾರತಿಯುಂ ವಿಮೋಹಮುಂ ಪಾತಕಮೆಂ- ॥
ದಲಸದೆ ತಿಳಿಪುವ ಮುನಿಸಂ- ।
ಕುಲಕ್ಕೆ ಕಡುಮುಳಿವ ಪಾಪಿಗೆನಗಿದುಪಿರಿದೇ ॥ ೨೦ ॥

ಅಂದುಜಿನಮತದೊಳೆಸ- ।
ಗಿದೊಡಿಂದೆನಗೀ ದುಃಖಮಾಗಲರಿಯುದು ಹಿಂಸಾ- ॥
ನಂದಕಡಿವಮೃಗಾನಂದ- ।
ದ ದುರ್ಮತದೊಳೆಸಗಿ ನರಕಕ್ಕಿಳಿದೆಂ ॥ ೨೧ ॥

ಯೆಂದೋರ್ವರನೋರ್ವರೀತೆರ- ।
ದಿಂದಂ ನೆನೆದುಂ ಗತಿಸ್ವಭಾವದಿಮತ್ತಂ ॥
ಕುಂದದೊಳೀವಶುಭಲೇಶ್ಯಗ- ।
ಳಿಂದಂ ಕಡುಮುಳಿದು ತಮ್ಮೊಳಿರಿಯುತ್ತಿರ್ಪರ್ ॥ ೨೨ ॥

ವಚನ ॥ ಅಂತೋರ್ವರನೋರ್ವರು ಕಿಚ್ಚಿನಿಂ ಸುಳ್ದ, ಕರಗಸದಿಂ ಸೀಳ್ವ, ಕತ್ತಿಗೆಯಿಂದಿರಿವ, ಕಾವಲಿಯೊಳಿಕ್ಕಿಕರಿವ, ತಿದಿಯುಗಿವ, ಬಸುರಿಂಬಗಿವ, ಕರುಳನುಚ್ಚುವ, ಬೆರಳೊಳು ಚೂಜಿಯಂ ಬೆಟ್ಟುವ, ಪಲ್ಲುಗಳಂ ಕಳಲ್ಗುಟ್ಟುವ, ಗಾಣದೊಳಿಕ್ಕಿ ಪಿಳಿವ, ಕೀಸಿ ಸಾಸವಿಯಂ ಬಳಿವ, ಸತತವಿರಿವ, ತತ್ತರಿದರಿವ, ಪಲತೆರದ ದಂಡಣೆಗಳಂ ನರಕಭೂತಳ ಸ್ವಭಾವದತ್ಯದ್ಭುತಂಗಳೆನಿಪ ಮಹಾ ಶೀತೋಷ್ಣಂಗಳುಂ, ಸ್ಪರ್ಶನೇಂದ್ರಿಯಮನಹರ್ನಿಸಂ ಮಿಡುಮಿಡಂ ಮಿಡುಕಿ ಸುತ್ತಿರಿಯುಂ ಕೋಪದಿಂ ಕಿಡಿಕಿಡಿವೊ

ಗುತ್ತ ನೋರ್ವರನೋರ್ವರ್ಪಿಡಿದು ಖಡಿಖಂಡಂಗೊಯ್ದು ಬಾಯೊಳ್ಗಿಡಿದು ನಿಗ್ರಹಿಪ ನಾರಕರಾಗ್ರಹದಿಂ ಸಮನಿಸುವ ವಿಷಸದೃಶ ನಿಜಶರೀರ ಮಾಂಸಭಕ್ಷಣಮುಂ, ಲೋಹದ್ರವಕ್ಷಾರವಾರಿಪಾನಮುಂ, ರಸನೇಂದ್ರಿಯಮನಾಗಲುಂ ಮಲುಮಲಂ ಮರುಗಿಸುತ್ತಿರೆಯುಂ, ದೆಸೆಗಳೆಲ್ಲಮುಂ, ಪಡುಕೆಯಿನಿಡಿದು ತೀವಿದಂತಿರ್ದ ನಾರಕರ ಮೈಯ್ಯ ಪೂತಿಗಂಧಂಗಳುಂ, ಕ್ಷೇತ್ರದುರ್ಗಂಧಗಳುಮುಸಿರಬಳಿವಿಡಿದೊಳಪುಗುತಂ, ಘ್ರಾಣೇಂದ್ರಿಯಮನಡಿಗಡಿಗೆ ಬಿಕ್ಕನೆ ಬಿರಿಯಿಸುತ್ತಿರೆಯುಂ, ನುಳಿದಿರಿಯಲೆಂದು ಬರ್ಪ ನಾರಕರ ಬಿಂಕಕ್ಕೆ ಕಾರಂಗಳುಂ ಮೇಲೆ ಬೀಳ್ವ ಸಿಡಿಲಂತೆ ಬಂದೆಯ್ದುವ ದುರ್ನಿರೀಕ್ಷತೀಕ್ಷ್ಣಾಯುಧಂಗಳ ಪೊಳೆಪುಗಳು ಚಕ್ಷುರಿಂದ್ರಿಯಕ್ಕಂ ಮಾಣದೆ ಗೂಡುಗೊಳಿಸುತ್ತಿರೆಯುಂ ॥ ೪ ॥

ಗಜರುವ ಘರ್ಜಿಸುವ ಬೈಯ್ಯುವ ಮೊದಲಿಸುವ ನಿರಯಜನಿವಹನಿಸ್ಸಾರನಿಷ್ಠುರಾಲಾಪಂಗಳುಂ ಕಿಡಿವಿಡಿ ಪಳಂಚುವ ಕಯ್ದುಗಳ ಝುಣತ್ಕೃತಂಗಳುಂ ಶ್ರೋತ್ರೇಂದ್ರಿಯಮನನವರತ ಮುಗಿಬಗಿಮಾಡುತ್ತಿರೆಯುಂ ॥ ೫ ॥

ಮೇಗೆನೆಗೆವಂತೊಡನೆ ಸಂದಣಿಸಿ ಪೊರಪೊಣ್ಮುವ ತೀವ್ರರುಜಾಕೋಟಿಗಳುಂ ಪೇಳಲುಂ ಕೇಳಲುಂ ಅರಿಯವಪ್ಪತಿಬಲ ಕ್ಷುತ್ಪಿಪಾಸೆಗಳುಂ ಪೊರಗಣ ಪರಸ್ಪರೋದೀರಿತಕ್ಕೆ ನೆರವಾಗಿ ಸರ್ವಾಂಗಮನೊಳಗೊಳಗೆ ಬಿಡದಟ್ಟರಿದು ಕುಳ್ಳಿಸುತ್ತಿರೆಯುಂ ॥ ೬ ॥

ಮತ್ತಮೋರ್ವರನೋರ್ವರ್ಕೋಸದಿ ನಟ್ಟುತಂ, ಭಯದಿಂ ನೋಡುತ್ತಂ ದೇಹವ್ಯಥೆಗಳಿಂದಮೊಳರುತ್ತಂ, ಪುಯ್ಯಲಿಡುತಂ ದೆಶೆದೆಶೆ ಬಾಯ್ಬಿಡುತಂ ಬಸಮುಳಿದು ಬೀಳುತಂ ಬಿಡದೆ ನರಳುತಂ ಪುಡಿಯೊಳ್ಪೊರಳುತ್ತಮಿರ್ಪರಿಂತು ॥ ೭ ॥

ವೃತ್ತ ॥ ಉರಿಯುಂ ಕಾರುತಂ ಮುಯಿಕಲಂ ಕೆದರುತಂ ತದ್ಭೂಮಿಗಳ್ಪೀಡಿಸು- ।
ತ್ತಿರೆಯುಂ ಕ್ರೋಧದಿನಾಗಳುಂ ಮುರುಗುತಂ ಪ್ರಾಣಂಗಳಾವರ್ತಿಸು- ॥
ತ್ತಿರೆಯುಂ ನಾರಶತ್ರ ಮುಚ್ಚುತ್ತಿರೆಯುಂ ಕ್ಷುತ್ತೃಷೀಮಹಾವ್ಯಾಥಿತ- ।
ಳ್ತಿರೆಯುಂ ಕುತ್ತದಮೊತ್ತಮೊತ್ತುತ್ತಿರೆಯುಂ ಮತ್ತಂ ಚಿರಂಜೀವಿಗಳ್ ॥ ೮ ॥

ಕಂದ ॥ ಚಲದಿಂದನೇಕ ಜೀವಾ- ।
ವಳಿಯಂ ಮುಂಬಾಳಿವಾಳಿ ಘಾತಿಸುತಂ ॥
ಮಲುಮಲ ಮರುಗಿಸಿದಘಬೀಜದ ।
ಫಲದಿಂ ಚಿರಕಾಲಮೇಕೆ ನಮೆಯದೆ ಮಾಣ್ಬರ್ ॥ ೩೩ ॥

ನರತಿರ್ಯಗ್ಯೋನಿಯ ಜೀ- ।
ವರಾಸಿಗಳತೀರ್ವದುಃಖಮೆನಿತೊಳವನಿತುಂ ॥
ನೆರದೊಡೆಮೇಂ ನರಕದೊಳೋ- ।
ರ್ವರ ನಿಮಿಷದ ದುಃಖಲವಮುಮಂ ಪೋಲ್ತಪುವೇ ॥ ೩೪ ॥

ವೃತ್ತ ॥ ನಲಿನಲಿದಾಡಿ ಪಾಪಮನುಪಾರ್ಜಿಸಿ ತತ್ಪರಿಪಾಕದಿಂದಿಕೋ- ।
ಟಲೆಗೊಳಗಾಗಿ ಬಾಯ್ಬಿಡುವ ಮೂಢಜನಂಗಳಕೆಯಮರ್ಥಿಯಿಂ ಜಲ- ॥
ಜ್ವಲಿಪಗ್ನಿಯಿಂ ಪಿಡಿದು ಬೆಂದಬಳಿಕ್ಕೆ ಕನಲ್ದೊನಲ್ದುಮಂ- ।
ಮಲಮರುಗುತ್ತ ಬಾಯಳಿವ ಬಾಳಕ ಬಾಳಕದಂದಮಲ್ಲದೆ ॥ ೯ ॥

ಮತ್ತಂ ನಾರಕರಾಯುಷ್ಯಂಗಳುಂ, ಶರೀರೋತ್ಸೇಧಂಗಳುಂ, ಅವಧಿಕ್ಷೇತ್ರಂಗಳುಂ, ಲೇಶ್ಯಂಗಳುಂ ಮೊದಲಾದವುಗಳಂ ಪೇಳ್ವಂ—

ಸೀಮಂತದಲ್ಲಿ ಜಘನ್ಯಂ ದಶಸಹಸ್ರ ( ೧೦೦೦೦ ) ವರ್ಷಾಯುಷ್ಯಂ, ಉತ್ಕೃಷ್ಟದಿಂ ನವತಿಸಹಸ್ರಂ ( ೯೦೦೦೦ ) ವರುಷಾಯುಷ್ಯವಾಗುವದು. ಮತ್ತಂ ದ್ವಿತೀಯಾದಿ ಪಟಲಕ್ರಮದಿಂ ಪೆಚ್ಚುತ್ತಂ ಪೋಗೆಪೋಗೆ ತಮ್ಮ ತಮ್ಮ ಕಡೆಯ ಇಂದ್ರಕದೊಳು ಮೊದಲಿಂತೊಟ್ಟು ಏಳುಂ ನರಕದೊಳಾಯುಸ್ಥಿತಿಗಳೊಂದು ಮೂರಿಪ್ಪತ್ತುಂ ಪದಿನೇಳುಮಿಪ್ಪತ್ತೆರಡುಂ ತುದಿಯೊಳ್ಮೂವತ್ತಮೂರುಮಬ್ಧುಪಮಂ (ಸಾಗರೋಪಮಂ) ಗಳು. ಇವರ ಉತ್ಕೃಷ್ಟಂಗಳುಂ ಜಘನ್ಯಂಗಳುಂ ಮೆನಿತೆಂದೊಡೆ—ಮೇಲಣ ಉತ್ಕೃಷ್ಟದಲ್ಲಿ ಸಮಯಮನಧಿಕಮಂ ಮಾಡಿದೊಡೆ ಕೆಳಗಣವರ ಜಘನ್ಯಮಾಗುವದು. ಮತ್ತವರ ಶರೀರೋತ್ಸೇಧಂ ಸೀಮಂತದೊಳ್ಮೂರುವೊಳಂ, ಅತ್ತಲು ಪೆಚ್ಚುತ್ತಂ ಪೋಗೆ ತಂತಮ್ಮ ಕಡೆಯಿಂದ್ರಕದೊಳು ಮೊದಲವರ ಶರೀರೋದಯಂ ಏಳುಬಿಲ್ ಮೂರುಹಸ್ತಮಾರಂಗುಲಮಂತದರಿಂ ದ್ವಿಗುಣಕ್ರಮಮಪ್ಪುದು. ಕಡೇವರಮಲ್ಲಿಪಂಚಶತಧನುವಾಗುವದು. ಮತ್ತಮಲ್ಲಿಗೆ ॥ ಪ್ರಸ್ತುತ ಗಾಥೆ ॥

ಗಾಥೆ ॥ ಪಢಮಿಢ್ಢದಶಣೌಜೀವಾಸಸಹಸ್ಸಾ ಉಗಜಹಂಣಿದರೇ ॥
ತೇಣವುದಿಲಖ್ಖಜೆಠ್ಠಾ ಅಸಖ್ಖಪುಬ್ಬಾಣಕೋಡೀಯೇ ॥ ೩ ॥
ಸಾಯರದಸವುತ್ತಿರಿಯ ಸಗಸಗಚರಿಮಿದ್ದಯಮ್ಹಿ ಇಗಿತಿಂಣಿ ।
ಸತ್ತದಸವ್ವವಹಿಬಾವೀಸತ್ತೆತ್ತೀಸಂ ॥ ೪ ॥
ಅದಿಅಂಥವಿಸೇಸಿರೂವೂಣವಾಹಿದಮ್ಹಿ ಹಾಣಿಚಯಂ ।
ಉವರಿಮಜೆಠ್ಠಾಸಮುಯೇಣಹೀಯಂ ಹೇಠಿಮಜಹಣ್ಣಂತು ॥ ೫ ॥
ಪಢಮುಸತ್ತತಿಚ್ಛಕ್ಕಂ ವುದಯದ್ಧಣುರಯಣಿ ಅಗ್ಗುಳಂಸೇಸೆ ।
ದುಗುಣಕಮುಂಪಡಮಿಂದೀರಯಣತಿಯಂಜ್ಞಾಣ ಹಾಣಿಚಯ ॥ ೬ ॥

ಅನ್ತಾ ನಾರಕರ ಅವಧಿಕ್ಷೇತ್ರ ಪ್ರಮಾಣಮೆಂತೆಂದೊಡೆ ಪೇಳ್ವಂ—

ಕಂದ॥ ಕ್ರೋಶಚತುಷ್ಕಂ ಮೊದಲೊಳ್ ।
ಕ್ರೋಶಾರ್ಧಂಗೆಯ್ದುಕುಂದುಗುಂಬಳಿಕತ್ತಲ್ ॥
ಕ್ರೋಶೈಕಮಪ್ಪಿನಂ ಸಂ- ।
ಕ್ಲೇಶಂ ಪೆಚ್ಚಲು ಕುಂದುಗಂ ತದ್ಬೋಧಂ ॥ ೨೫ ॥

ಲೇಶ್ಯಂಗಳಂ ಪೇಳ್ದಪರದೆಂತೆಂದೊಡೆ ಪ್ರಥಮ ದ್ವಿತೀಯ ತೃತೀಯ ನರಕಂಗಳೊಳು ಕ್ರಮದಿಂ ಕಾಪೋತಲೇಶ್ಯ ಜಘನ್ಯಮುಂ, ಮಧ್ಯಮಮುಂ, ಉತ್ಕೃಷ್ಟಮುಂ ಆಗುವದು. ವಂತು ತ್ರಿಃಚತುಃಪಂಚಮ ನರಕಂಗಳೊಳು ನೀಲಲೇಶ್ಯೆಯ ಜಘನ್ಯಮುಂ, ಮಧ್ಯಮಮುಂ, ಉತ್ಕೃಷ್ಟಮುಂ ಆಗುವದು.

ಪಂಚಮಷಷ್ಟಮಸಪ್ತಮ ನರಕಂಗಳಲ್ಲಿ ಕ್ರಮದಿಂ ಕೃಷ್ಣಲೇಶ್ಯೆಯ ಜಘನ್ಯವುಂ, ಮಧ್ಯಮವುಂ, ಉತ್ಕೃಷ್ಟವುಂ ಆಗುವದು. ಇಂತು ಪ್ರಸ್ತುತ ಗಾಥೆ ॥

ಗಾಹೆ॥ ಅಮಣಸರಿಸಿಪವಿಹಗ್ಗಮಫಣಸಿ ಹಿಥ್ಥಿಣಮಚ್ಛಯಮಣುವಾಣಂ ।
ಪಥಮಾದಿ ಸರಪ್ಪತಿ ಅಡವಾರಾದೊದುದೊಂಣವಾರೊತ್ತಿ ॥ ೭ ॥

ವಚನ ॥ ಮತ್ತು ಆ ನರಕಗಳಲ್ಲಿ ನಿರಂತರದಲ್ಲಿ ಎಷ್ಟುಸಾರಿ ಹುಟ್ಟುತ್ತಾರೆಂದರೆ—ಪ್ರಥಮ ನರಕದಲ್ಲಿ ಎಂಟುಸಾರಿ ಹುಟ್ಟುವರು. ಅದರಿಂದ ಅತ್ತಲಾಗೆ ಒಂದೊಂದು ಕುಂದಲು ಮಹಾತಮಪ್ರಭೆಯಲ್ಲಿ ಎರಡುಸಾರಿ ಹುಟ್ಟುವರು. ಅಂತು ಪುಟ್ಟಿ ಬರ್ಕಿದ ನಾರಕರ್ಗಳು ನಾರಕರಾಗಿಯೂ ದೇವರಾಗಿಯೂ ಹುಟ್ಟುವರಲ್ಲವು, ಕರ್ಮಭೂಮಿಯಲ್ಲಿ ಗರ್ಭಜಂಗಳಾದ ಮನುಷ್ಯರಾಗಿ ಮೋಕ್ಷಾಸಂಜ್ಞಿಗಳುಂ ಪರ್ಯಾಪ್ತರುಂ, ಗರ್ಭಜಂಗಳಾದ ತಿರ್ಯಂಚಗಳಾಗಿಯೂ ಹುಟ್ಟುವರು. ಮಹಾತಮಪ್ರಭೆಯ ಗುಣಪ್ರತಿಪನ್ನರಿಗೆ ಮರಣವಿಲ್ಲ. ಮೃತಿಯಾಗುವ ಕಾಲದಲ್ಲಿ ಮಿಥ್ಯಾತ್ವಕ್ಕೆ ಸಲ್ಲುವರು. ಆ ನರಕದಿಂದ ಬಂದ ಜೀವಂಗಳು ಮಿಥ್ಯಾತ್ವಕ್ಕೆ ಹೋಗುವರು. ಆ ನರಕದಿಂದ ಬಂದ ಜೀವಂಗಳು ಮನುಷ್ಯಗತಿಯನ್ನು ಪಡೆಯರು, ತಿರ್ಯಂಚಗತಿಯಲ್ಲಿ ಹುಟ್ಟಿ ಎಲ್ಲಿಯಾದರೂ ಸಮ್ಯಕ್ತ್ವದೊರೆಕೊಂಡರೆ ಅಣುವ್ರತಕ್ಕೆ ಬಾರರು. (ಅಂದರೆ ಅಣುವ್ರತ ಧರಿಸಲಿಕ್ಕೆ ಯೋಗ್ಯರಾಗುವದಿಲ್ಲ.)

ಷಷ್ಟನು ನರಕದಿಂದ ಬಂದವರು ಅಣುವ್ರತವನ್ನು ಕೈಕೊಂಡರೂ ಕೈಕೊಳ್ಳುವರು; ಮಹಾವ್ರತವನ್ನು ಧರಿಸಲಿಕ್ಕೆ ಯೋಗ್ಯರಾಗುವದಿಲ್ಲ. ಪಂಚಮನರಕದಿಂದ ಬಂದವರಿಗೆ ಮಹಾವ್ರತವು ಸಂಭವಿಸುವದು, ಚರಮದೇಹವಾಗ್ಗುವದಿಲ್ಲ, (ಅಂದರೆ ಅದೇ ಶರೀರದಲ್ಲಿ ಮುಕ್ತಿ ಹೊಂದುವದಿಲ್ಲ.) ನಾಲ್ಕನೆಯ ನರಕದಿಂದ ಬಂದವರಿಗೆ ಚರಮದೇಹವು ಪ್ರಾಪ್ತಿಯಾದರೂ ಆಗ ಬಹುದು; ತೀರ್ಥಕರತ್ವವುಂಟಾಗುವದಿಲ್ಲ. ಇತ್ತಲಾಗೆ ಮೂರು, ಎರಡು, ಒಂದು ಈ ಮೂರು ನರಕಗಳಲ್ಲಿ ತೀರ್ಥಕರತ್ವವು ಸಂಭವಿಸುವದು. ಅದು ಹ್ಯಾಗಂದರೆ—ಪೂರ್ವದಲ್ಲಿ ಮನುಷ್ಯ ಭವದಲ್ಲಿ ಹುಟ್ಟಿ ಮುಂಚೆ ಕಟ್ಟಿದ ಕರ್ಮದ ಫಲವನ್ನು ಮೊದಲು ಭೋಗಿಸಿ ಕಳೆದು ಅನಂತರ ಕಟ್ಟಿದ ಕರ್ಮಫಲವನ್ನು ಅಲ್ಲಿಂದ ಬರುತ್ತಲೇ ತೀರ್ಥಕರರಾಗಿ ಬಳಿಕ ಅನುಭವಿಸುವರು. ಆ ಪುಣ್ಯಪ್ರಕೃತಿಗೆ ಸಮ್ಯಕ್ತ್ವವೇ ಮುಖ್ಯ ಕಾರಣವಾಗುವದರಿಂದ ಚಾರಿತ್ರವಿದ್ದರೂ, ಇಲ್ಲದಿದ್ದರೂ ಆಗುವದು. ಮತ್ತು ಆ ನರಕದಿಂದ ಬಂದವರಿಗೆ ವಾಸುದೇವತ್ವವುಂ, ಪ್ರತಿವಾಸುದೇವತ್ವವುಂ, ಬಲದೇವತ್ವವುಂ, ಸಕಲಚಕ್ರವರ್ತಿತ್ವವುಂ ಉಂಟಾಗುವದಿಲ್ಲ. ಯಾಕೆಂದರೆ—ತತ್ಪದವಿಗಳಿಗೆ ಚಾರಿತ್ರವೇ ಮುಖ್ಯ ಕಾರಣವಾದದ್ದರಿಂದ ದುರ್ಧರವಾದ ತಪಸ್ಸಿನಿಂದ ವೈಮಾನಿಕದೇವರಾಗಿ ಹುಟ್ಟಿ ಬಂದು ತತ್ಪದವಿಗಳನ್ನು ಹೊಂದುವರು.

ಗಾಹೆ ॥ ಣಿರಯ ಚರೋಣಥ್ಥಿಹರಿ ಬಲಚಕ್ಕಿತುರಿಯಪರದಿಣಿಸ್ಸಪ್ಪಿ ।
ತಿಥ್ಥರ ಮಗ್ಗ ಸಂಜದುದೆ ಸಜಮೋಣದ್ದಿಣಿಯಮೇಣ ॥ ೭ ॥

ವಚನ ॥ ಯೊಂದು ಮತ್ತುಂ ಆ ಸಪ್ತಮ ಪೃಥ್ವಿಯ ಕೆಳಗೆ ಒಂದೊಂದು ರಜ್ಜು ಪ್ರಮಾಣ ಲೋಕಾಕಾಶವಿರುವದು. ಅಲ್ಲಿಯೂ ಲೋಕಗಳಿಲ್ಲದಿರುವ ಸ್ಥಳಗಳಲ್ಲಿ ಪಂಚಸ್ಥಾವರಗಳು ಸಚ್ಛನ್ನವಾಗಿರುವವು. ಪುನಃ ಆ ರೀತಿಯಾಗಿರುವ ಅಧೋಲೋಕದಲ್ಲಿ—

ಕಂದ ॥ ಮೊದಲಿಂ ಘರ್ಮೆಯ ಖರಭಾ- ।
ಗದೊಳಂ ತನುಮಹಿಯ ಮಧ್ಯಭಾಗದ ಪಂಕಾ- ॥
ಬ್ಯದೊಳಂ ಕುಮಾರರೇಣ್ಬ ।
ತ್ರಿದಶರಭವನಂಗಳಪ್ಪುವತಿ ವಿಪುಲಂಗಳ್ ॥

ಈ ರೀತಿಯಾಗಿ ಏಳು ಸೂತ್ರಗಳಿಂದ ಅಧೋಲೋಕವ್ಯಾಪ್ತಿಯು ಹೇಳಲ್ಪಟ್ಟಿತು.

---

# ಮಧ್ಯಮಲೋಕದ ಸ್ವರೂಪವು.

## ಸೂತ್ರಂ॥ ಜಂಬೂದ್ವೀಪಲವಣಸಮುದ್ರಾದ್ಯಸಂಖ್ಯಾತದ್ವೀಪ-ಸಮುದ್ರಾಃ ॥ ೧ ॥

ಆ ಮಧ್ಯಮಲೋಕದ ಸ್ವರೂಪವು ಹ್ಯಾಗಂದರೆ—

ವಚನ ॥ ಯಾವ ಲೋಕದಲ್ಲಿ ಅಸಂಖ್ಯಾತ ದ್ವೀಪಸಮುದ್ರಗಳು, ವ್ಯಂತರಾವಾಸಂಗಳು, ಜ್ಯೋತಿಷ್ಕವಿಮಾನಗಳು ಮೊದಲಾದವುಗಳಿರುವವೋ ಅದು ಮಧ್ಯಮಲೋಕ ವಾಗುವದು.

ಆ ಮಧ್ಯಮಲೋಕದ ನಟ್ಟನಡುವೆ ನಾಭಿಯ ಹಾಗೆ ಇರುವ ಮಹಾಮೇರುಮಂದರವೇ ತನಗೆ ನಡುವಾಗಿರುವ ಒಂದುಲಕ್ಷಯೋಜನವಿಸ್ತಾರದ ೧ ಜಂಬೂದ್ವೀಪವೂಂ, ತದ್ವಿಗುಣ ವಲಯದವಿಸ್ತಾರವನ್ನುಳ್ಳ ಲವಣಸಮುದ್ರವೂಂ, ೨ ಧಾತಕೀಷಂಡದ್ವೀಪವೂಂ, ಕಾಳೋದಕ ಸಮುದ್ರವೂಂ, ೩ ಪುಷ್ಕರವರದ್ವೀಪವೂಂ, ಪುಷ್ಕರವರಸಮುದ್ರವೂಂ, ಇಲ್ಲಿಂದ ಮೇಲೆ ಹೇಳುವಸಮುದ್ರಗಳೆಲ್ಲವೂ ದ್ವೀಪದ ಹೆಸರುಗಳಾಗುವವು. ೪ ವಾರುಣೀವರದ್ವೀಪವೂಂ, ೫ ಕ್ಷೀರವರದ್ವೀಪವೂಂ, ೬ ಘೃತವರದ್ವೀಪವೂಂ, ೭ ಕ್ಷೌದ್ರವರದ್ವೀಪವೂಂ, ೮ ನಂದೀಶ್ವರದ್ವೀಪವೂಂ, ೯ ಅರುಣವರದ್ವೀಪವೂಂ, ೧೦ ಅರುಣಾಭಾಸದ್ವೀಪವೂಂ, ೧೧ ಕುಂಡಲವರದ್ವೀಪವೂಂ, ೧೨ ಶಂಖವರ ದ್ವೀಪವೂಂ, ೧೩ ರುಚಕವರದ್ವೀಪವೂಂ, ೧೪ ಭುಜಗವರದ್ವೀಪವೂಂ, ೧೫ ಕುಶಗವರದ್ವೀಪವೂಂ, ೧೬ ಕ್ರೌಂಚವರದ್ವೀಪವೂಂ, ಈ ಹದಿನಾರು ದ್ವೀಪಸಮುದ್ರಗಳೊಳಗಣಭಾಗದವು. ಅಲ್ಲಿಂದತ್ತಲಾಗಿ ಅಸಂಖ್ಯಾತದ್ವೀಪಸಮುದ್ರಗಳು ಪೋಗಲು ಕ್ರಮದಿಂದ ಕಡೆಯ ಹದಿನಾರು ದ್ವೀಪಸಮುದ್ರಗಳ ಹೆಸರನ್ನು ಹೇಳುವೆನು.

೧ ಮಣಿಚ್ಛಿಲಾದ್ವೀಪವೂಂ, ಮಣಿಚ್ಛಿಲಾಸಮುದ್ರವೂಂ, ೨ ಹರಿತಾಲದ್ವೀಪವೂಂ, ಹರಿತಾಲ ಸಮುದ್ರವೂಂ, ೩ ಸಿಂಧೂರವರದ್ವೀಪವೂಂ, ೪ ಶ್ಯಾಮುಕವರದ್ವೀಪವೂಂ, ೫ ಅಂಜನವರದ್ವೀಪವೂಂ, ೬ ಹಿಂಗುಲಿಕವರದ್ವೀಪವೂಂ, ೭ ರೂಪ್ಯವರದ್ವೀಪವೂಂ, ೮ ಸುವರ್ಣವರದ್ವೀಪವೂಂ, ೯ ವಜ್ರವರದ್ವೀಪವೂಂ, ೧೦ ವೈಡೂರ್ಯವರದ್ವೀಪವೂಂ, ೧೧ ನಾಗವರದ್ವೀಪವೂಂ, ೧೨ ಭೂತವರದ್ವೀಪವೂಂ, ೧೩ ಯಕ್ಷವರದ್ವೀಪವೂಂ, ೧೪ ದೇವವರದ್ವೀಪವೂಂ, ೧೫ ಅಹಿಂದ್ರವರದ್ವೀಪವೂಂ,

೧೬ ಸ್ವಯಂಭೂರಮಣದ್ವೀಪವೂಂ, ಸ್ವಯಂಭೂರಮಣಸಮುದ್ರವೂಂ, ಅಂತೆಲ್ಲಾ ದ್ವೀಪದ ಕಡೆಗಳಲ್ಲಿ ಚತುರ್ಗೋಪುರಾನ್ವಿತಂಗಳುಂ, ಅಷ್ಟಯೋಜನೋತ್ಸೇದವೂಂ, ದ್ವಾದಶಯೋಜನವಿಸ್ತಾರಂಗಳುಂ, ಯೋಜನಚತುಷ್ಕಮುಖವಿಸ್ತಾರವುಳ್ಳ ವಜ್ರವೇದಿಕೆಗಳು ದ್ವೀಪಕ್ಕೊಂದು, ಸಮುದ್ರಕ್ಕೊಂದು ಆಗುವವು. ಆ ವೇದಿಕೆಮೇಲ್ಯೆನೂರು ( ೫೦೦ ) ಬಿಲ್ಲಗಲವೂಂ, ಎರಡು ಕ್ರೋಶೋನ್ನತವಾದ ಪದ್ಮವೇದಿಕೆಗಳಿಂದೊಪ್ಪುವವು. ಆ ರೀತಿಯಾದ ದ್ವೀಪಸಮುದ್ರಂಗಳೆಲ್ಲಾ ಸೇರಿ ಲೆಕ್ಕದಿಂದ ಎಷ್ಟಾಗುವುವೆಂದರೆ—ಏಪ್ಪತ್ತೈದು ಕೋಟಾಕೋಟಿ ಉದ್ಧಾರಪಲ್ಯೋಪಮದ ರೋಮಪ್ರಮಾಣಗಳೆನಿತನಿತೆಯಪ್ಪವು.

ಮತ್ತು ಈ ಜಂಬೂದ್ವೀಪಕ್ಕೆಂಟನೆಯ ನಂದೀಶ್ವರದ್ವೀಪದ ವಲಯವಿಸ್ತಾರವು ನೂರರುವತ್ಮೂರುಕೋಟಿಯೂ ಎಂಭತ್ತುನಾಲ್ಕುಲಕ್ಷಯೋಜನ ( ೧೬೩೮೪೦೦೦೦೦ ) ಪ್ರಮಾಣವಾಗುವದು ಅದರ ನಾಲ್ಕು ದಿಕ್ಕಿನ ಮಧ್ಯಪ್ರದೇಶದಲ್ಲಿ, ಎಂಭತ್ನಾಲ್ಕುಸಾವಿರ ( ೮೪೦೦೦ ) ಯೋಜನೋತ್ಸೇದವೂಂ ಅಷ್ಟೇ ಅಗಲವೂಂ ಉಳ್ಳ ಅಂಜನಪರ್ವತವೂಂ, ಅದರ ನಾಲ್ಕು ದಿಕ್ಕುಗಳ್ಲಲ್ಲಿಯೂ ಲಕ್ಷಯೋಜನ ಸಮಚತುರಸ್ರವೂಂ, ಸಹಸ್ರಯೋಜನದಗುಣ್ಪುಂ. ಜಲಚರರಹಿತಂ, ಜಲಪೂರ್ಣಂ, ತಂತಮ್ಮ ನಾಲ್ಕು ದಿಕ್ಕಿನಲ್ಲಿಯೂ, ಲಕ್ಷಯೋಜನನೀಳವೂಂ, ಎಪ್ಪತ್ತು ಸಹಸ್ರಯೋಜನದಗಲವುಳ್ಳ ಅಶೋಕ ಸಪ್ತಚ್ಛದ ಚಂಪಕ ಚೂತವನಚತುಷ್ಟಯ ವಿರಾಜಿತಗಳಾದ, ನಂದಿ ನಂದವತಿ ನಂದೋತ್ತರೆ ನಂದಿಷೇಣೆಯೆಂಬ ನಾಲ್ಕು ಸರೋವರಗಳು, ಪೂರ್ವಾಂಜನ ಪರ್ವತದ ಚತುರ್ದಿಕ್ಕಿನವುಗಳು ‖ ೧ ‖

ಅರಜೆ, ವಿರಜೆ, ಅಶೋಕೆ, ವೀತಶೋಕೆ ಯೆಂಬೀ ನಾಲ್ಕು ಸರೋವರಗಳು ದಕ್ಷಿಣಾಂಜನ ಪರ್ವತದ ಚತುರ್ದಿಕ್ಕಿನವುಗಳು. ‖ ೨ ‖

ವಿಜಯ, ವೈಜಯಂತಿ, ಜಯಂತಿ, ಅಪರಾಜಿತೆಯೆಂಬ ನಾಲ್ಕು ಸರೋವರಗಳು ಪಶ್ಚಿಮಾಂಜನಪರ್ವತದ ಚತುರ್ದಿಕ್ಕಿನಲ್ಲಿರುವವು. ‖ ೩ ‖

ರಮ್ಯೆ, ರಮಣೀಯೆ, ಸುಪ್ರಭೆ, ಸರ್ವತೋಭದ್ರೆ ಎಂಬೀ ನಾಲ್ಕು ಸರೋವರಗಳು ಉತ್ತರಾಂಜನಪರ್ವತದ ಚತುರ್ದಿಕ್ಕಿನಲ್ಲಿರುವವು. ‖ ೪ ‖

ಈ ಷೋಡಶ ( ೧೬ ) ಸರೋವರಗಳ ಮಧ್ಯಪ್ರದೇಶದಲ್ಲಿ ದಶಸಹಸ್ರ ಉತ್ಸೇದವೂಂ, ಅಗಲವೂಂ ಉಳ್ಳ ದಧಿವರ್ಣ ದಧಿಮುಖಪರ್ವತಗಳಿರುವವು. ಆ ಸರೋವರಗಳ ಬಾಹ್ಯಕೋಣದ್ವಯದಲ್ಲಿ ಸಾಸಿರಯೋಜನಗಲಮುದ್ದವುಳ್ಳ ಕಾಂಚನವರ್ಣದ ದ್ವಾತ್ರಿಂಶ ( ೩೨ ) ರತಿಕರಪರ್ವತಗಳಿರುವವು. ಈ ಐವತ್ತೆರಡು ಅದ್ರಿಗಳ ಶಿಖರದಲ್ಲಿ ಚತುರ್ಗೋಪುರಾನ್ವಿತಗಳುಂ, ಶ್ರೀತಾಲಪರಿಷ್ಕೃತಂಗಳುಂ, ಧ್ವಜಮಾಲಾವಿಲಸಿತಂಗಳುಂ, ಅಭಿಷೇಕಕ್ರೀಡನಸಂಗೀತನಾಟಕಾಲೋಕನಾದಿಮಂಟಪಮಂಡಿತಂಗಳುಂ ವಿಕಸಿತಜಲರುಹಕುಸುಮೋಲ್ಲಸಿತ ದೀರ್ಘಿಕಾವಾಪಿ ಪುಷ್ಕರಣಿವ್ಯಪೇತಂಗಳುಂ, ಚತುರ್ದಿಕ್ಕಿನಲ್ಲು ಚತುರ್ದಶ ಮಹಾವೀಥ್ಯಭ್ಯುಗತ ಮಾನಸ್ತಂಭ ನವಸ್ತಂಭಾಭಿರಾಮಂಗಳುಂ, ಧೂಪಕುಂಭಾಷ್ಟಮಂಗಲಾಲಂಕೃತ ಪ್ರಾಂಗಣಗಳುಂ, ದಿನಕರಕೋಟಿಪ್ರಭಾರತ್ನಮಯಪ್ರಾತಿಹಾರ್ಯಸಮನ್ವಿತ ಪಂಚಶತಶರಾಸನೋತ್ತುಂಗ ಮ

ಣಿಕನಕಮುತ್ತುಪ್ಪರಜತಮಯ ಜಿನಪ್ರಕೃತಿಪ್ರಕೀರ್ಣಂಗಳಾದ ಪಂಚರತ್ನಮಯ ಜಿನಭವನಂಗಳುಂ ಪ್ರತ್ಯೇಕ ಒಂದೊಂದಿರುವವು. ಅಲ್ಲಿ ಸೌಧರ್ಮೇಂದ್ರಪ್ರಮುಖಸುರಾಸುರಸಮಿತಿ ವರ್ಷಂಪ್ರತಿ ಮೂರು ಜಾತ್ರೆಯ ಅಷ್ಟಾಹ್ನಿಕವೆಂಬ ಮಹಾಮಹಿಮೆಯನ್ನುಳ್ಳ ಪೂಜೋತ್ಸವಗಳನ್ನು ಮಾಡುವರು, ಮತ್ತು ಪಂಚಸಪ್ತತಿಸಹಸ್ರ ( ೭೫೦೦೦ ) ಯೋಜನೋತ್ಸೇದವುಂ, ಹತ್ತುಸಾವಿರಿನ್ನೂರಿಪ್ಪತ್ತು ( ೧೦೨೨೦ ) ಯೋಜನ ಭೂವ್ಯಾಸವುಂ, ನಾಲ್ಕುಸಾಸಿರಿನ್ನೂರ್ನಾಲ್ವತ್ತು ( ೪೨೪೦ ) ಯೋಜನ ಮುಖವ್ಯಾಸವುಂ, ಕನಕನಿಭವಾದ ಕುಂಡಲಗಿರಿಯ ಮಹಾದಿಕ್ಕಿನಲ್ಲಿ ಏಕೈಕ ಜಿನಗೃಹವುಂ, ನಾಲ್ಕು ನಾಲ್ಕು ವ್ಯಂತರಕೂಟಗಳಿರುವವು.

ಕಂದ॥ ಕುಂಡಲವರ ಪರ್ವತಮದು- ।
ಕುಂಡಲಸದ್ವೀಪದರ್ಧದೊಳ್ ಬಳಸಿರ್ಕುಂ ॥
ಕುಂಡಲದವೋಲದರೊಳ್ ಗುಣ- ।
ಮಂಡನನ ಗೃಹಾಳಿ ನಾಲ್ಕೆ ನಾಲ್ಕುಂ ದೆಶೆಯೊಳ್ ॥

ಚತುರಾಶೀತಿಸಹಸ್ರ ( ೮೪೦೦೦ ) ಯೋಜನದ ಉತ್ಸೇದವುಂ ವಿಸ್ತಾರವುಮಾದ ಹೇಮವರ್ಣದ ರುಚಕಾದ್ರಿಯ ಬಾಹ್ಯತಟದಲ್ಲಿ ಮೂವತ್ತೆರಡು ಕೂಟಗಳುಂ ಅಭ್ಯಂತರದಲ್ಲಿ ನಾಲ್ಕು ಜಿನಗೃಹಗಳಿರುವವು.

ಕಂದ ॥ ವರರುಚಕಮೆಂಬ ಗಿರಿಯೊಳ್ ।
ನಿರುತಂ ರುಚಕಾರ್ಧಮಲ್ಲಿ ವಲಯಾಕೃತಿಯಿಂ ॥
ಪರಿವೇಷ್ಟಿಸಿರ್ದುದದರೊಳ್- ।
ಮುರುಜಿನಭವನಾಳಿ ನಾಲ್ಕೆ ನಾಲ್ಕುಂ ದೆಶೆಯೊಳ್ ॥ ೨೭ ॥

ಮತ್ತಮಾ ಸ್ವಯಂಭೂರಮಣದ್ವೀಪಾರ್ಧವನ್ನು ಮಾನುಷೋತ್ತರಪರ್ವತದಂತೆ ಸ್ವಯಂಪ್ರಭಾಚಲವು ಸುತ್ತಿರುವದು. ಆ ಮಾನುಷೋತ್ತರಾಚಲದ ಸ್ವಯಂಪ್ರಭನಗೇಂದ್ರದಂತರದಸಂಖ್ಯಾತ ದ್ವೀಪಸಮುದ್ರಗಳೆಲ್ಲವೂ, ಜಘನ್ಯತಿರ್ಯಗ್ಭೋಗಭೂಮಿಗಳಾಗುವವು. ಅಲ್ಲಿ ಜಲಚರ ಪ್ರಾಣಿಗಳಿಲ್ಲ, ಸ್ಥಲಚರಂಗಳು ಮಿಥುನಂಗಳಾಗಿ ಪುಟ್ಟಿ, ಪರಸ್ಪರ ವಿರೋಧಂಗಳಿಲ್ಲದೆ, ತೃಣ-ಪತ್ರ-ಪುಷ್ಪ-ಫಲಾದಿಗಳು ತಮಗಾಹಾರವಾಗಿ ಸುಖದಿಂದ ಒಂದು ಪಳಿತೋಪಮಕಾಲಂ ಬದುಕಿ ದೇವಗತಿಗೆ ಹೋಗುವವು. ಅಲ್ಲಿ ನಿಶ್ಶೀಲಾವ್ರತರು ದಾನದಾನಾನುಮೋದಂಗಳ ಫಲದಿಂದ ಹುಟ್ಟುವರು, ಮತ್ತು ಆ ಸ್ವಯಂಪ್ರಭಾಚಲದಿಂದ ಹೊರಗೆ ಸ್ವಯಂಭೂರಮಣಸಮುದ್ರದ ಕಡೆಯವರಿಗೂ ಕರ್ಮಭೂಮಿ ಪ್ರವೀಚಾರವಾಗುವದು. ಅಲ್ಲಿ ಮಳೆಯುಂ, ಛಳಿಯುಂ, ಬಿಸಿಲುಂ, ವೈಕಿಲು ಮೊದಲಾದವುಗಳೆಲ್ಲಾ ಇರುವವು. ಅಲ್ಲಿ ತಿರ್ಯಗ್ಯೋನಿಜಂಗಳುಂ, ಪಂಚಗುಣಸ್ಥಾನಿಕರುಂ, ತಂತಮ್ಮ ಪರಿಣಾಮಕ್ಕೆ ತಕ್ಕಹಾಗೆ ಆಯುಷ್ಯಮಂ ಕಟ್ಟಿ ಚತುರ್ಗತಿಗೆ ಸಲ್ಲುವರು.

ಮತ್ತಮಾ ಲವಣವಾರುಣಿಕ್ಷೀರಘೃತವರ ಸಮುದ್ರದ ನೀರುಗಳು ತಂತಮ್ಮ ರಸದ ಸವಿಯನ್ನುಳ್ಳವುಗಳಾಗುವವು; ಕಾಳೋದಕ, ಪುಷ್ಕರ, ಸ್ವಯಂಭೂರಮಣ ಸಮುದ್ರದ ನೀರುಗಳು ನೀರಿನರುಚಿಯುಳ್ಳವುಗಳು; ಉಳಿದ ಅಸಂಖ್ಯಾತಸಮುದ್ರಗಳೆಲ್ಲಾ ಇಕ್ಷುರಸಸ್ವಾದು

ಗಳು. ಆ ರೀತಿಯಾದ ಸಮುದ್ರಗಳಲ್ಲಿ ಜಲಚರಜೀವಗಳಿರುವುದಿಲ್ಲ. ಮತ್ತು ಎಲ್ಲಿರುವವು, ಎಲ್ಲಿಲ್ಲವೆಂದರೆ—ಲವಣಸಮುದ್ರದಲ್ಲಿಯೂ, ಕಾಲೋದಕಸಮುದ್ರದಲ್ಲಿಯೂ, ಕಡೆಯ ಸ್ವಯಂಭೂರಮಣ ಸಮುದ್ರಲ್ಲಿಯೂ, ಅಲ್ಲದೆ ಉಳಿದ ಸಮುದ್ರಗಳಲ್ಲಿ ಎಲ್ಲಿಯೂ ಇರುವದಿಲ್ಲ. ಲವಣಸಮುದ್ರದ ಮಧ್ಯದ ಮತ್ಸ್ಯಂಗಳ ನೀಳಹದಿನೆಂಟು ಯೋಜನವು. ಕಾಲೋದಕ ಸಮುದ್ರದ ನಡುವಣ ಮೀನುಗಳು ( ೩೬ ) ಮೂವತ್ತಾರುಯೋಜನ ನೀಳವು. ಕಡೆಯ ಸ್ವಯಂಭುರಮಣ ಸಮುದ್ರದ ಮೀನುಗಳು ಸಹಸ್ರಯೋಜನ ಪ್ರಮಾಣವಾಗಿರುವವು. ತಂತಮ್ಮ ತೊರೆಗಳ ಕಣ್ಣೊಗ್ಗಟದಳವಿಯ ಮೀನುಗಳು ತಂತಮ್ಮ ಸಮುದ್ರದ ಮೀನುಗಳರ್ಧನೀಳವಾಗುವವು. ಮತ್ತಮೇಕೇಂದ್ರಿಯಾದಿ ಜೀವಂಗಳ ಉತ್ಕೃಷ್ಟಾವಗಾಹನವನ್ನೂ, ಆಯುಷ್ಯವನ್ನೂ ಹೇಳುತ್ತೇನೆ—

ಏಕೇಂದ್ರಿಯ ಜಾತಿಯೊಳು ತಾವರೆ ಕ್ರೋಶಾದಿಕ ಏಕಸಹಸ್ರಯೋಜನವು ( ೧೦೦೦ ) ಕ್ರೋಶವಿಕಸಿತಪದ್ಮಂ. ದ್ವೀಂದ್ರಿಯ ಜಾತಿಯೊಳು ಶಂಖಂ ದ್ವಾದಶ ( ೧೨ ) ಯೋಜನವು. ತ್ರೀಂದ್ರಿಯ ಜಾತಿಯೊಳು ತೇಳು ( ವೃಶ್ಚಿಕ ) ಮೂಗಾವುದನೀಳವು. ಚತುರಿಂದ್ರಿಯ ಜಾತಿಯಲ್ಲಿ ತುಂಬಿ ನಾಲ್ಕುಗಾವುದ ನೀಳವು. ಪಂಚೇಂದ್ರಿಯ ಜಾತಿಯಲ್ಲಿ ಮತ್ಸ್ಯಂಗಳ ನೀಳವು ಸಾವಿರ ( ೧೦೦೦ ) ಯೋಜನವು; ಅಗಲಮುನ್ನೂರು ( ೫೦೦ ) ಯೋಜನವು; ಉತ್ಸೇದಮಿನ್ನೂರೈವತ್ತು ( ೨೫೦ ) ಯೋಜನವು. ಇಂತಿವುಗಳೆಲ್ಲಾ ಉತ್ಕೃಷ್ಟ ಅವಗಾಹನೆ, ಜಘನ್ಯಘನಾಂಗುಳಾಸಂಖ್ಯೇಯಭಾಗಾವಗಾಹನೆಯಾಗುವವು. ಇವುಗಳೆಲ್ಲವೂ ಅಂತರ್ದ್ವೀಪಾರ್ಧಗಳಲ್ಲಿಯೂ, ಸಮುದ್ರಗಳಲ್ಲಿಯೂ ಇರುವವು.

ಇನ್ನಾಯುಷ್ಯವು—ಶುದ್ಧಪೃಥ್ವಿಗೆ ದ್ವಾದಶಸಹಸ್ರ ( ೧೨೦೦೦ ) ವರ್ಷವು, ಖರಪೃಥ್ವಿಗೆ ದ್ವಾವಿಂಶತಿಸಹಸ್ರ ( ೨೨೦೦೦ ) ವರ್ಷಂಗಳು, ಅಪ್ಪುಕಾಯಿಕಗಳಿಗೆ ಸಪ್ತಸಹಸ್ರ ( ೭೦೦೦ ) ವರ್ಷಗಳು, ತೇಜಕಾಯಿಕಕ್ಕೆ ಮೂರುದಿವಸ, ವಾತಕಾಯಿಕಕ್ಕೆ ಮೂರುಸಾವಿರ ( ೩೦೦೦ ) ವರ್ಷಗಳು, ವನಸ್ಪತಿಕಾಯಿಕಗಳಿಗೆ ದಶಸಹಸ್ರ ( ೧೦೦೦೦ ) ವರ್ಷವು, ದ್ವೀಂದ್ರಿಯಗಳಿಗೆ ದ್ವಾದಶ ( ೧೨ ) ವರ್ಷವು, ತ್ರೀಂದ್ರಿಯಗಳಿಗೆ ನಾಲ್ವತ್ತೊಂಭತ್ತು ( ೪೯ ) ದಿವಸವು, ಚತುರಿಂದ್ರಿಯ ತುಂಬಿ ಮೊದಲಾದವುಗಳಿಗೆ ಆರುತಿಂಗಳಾಯುಷ್ಯವು, ಪಂಚೇಂದ್ರಿಯ ನರತಿರ್ಯಂಚಾದಿಗಳಿಗೆ, ಮಹಾಮತ್ಸ್ಯಾದಿಗಳಿಗೆ ಪೂರ್ವಕೋಟಿ ವರ್ಷಾಯುಷ್ಯವು, ಉಡುವೋತಿ ಸರಿಸೃಪಂಗಳಿಗೆ ವೊಂಭತ್ತು ಪೂರ್ವಾಂಗವು, ಪಕ್ಷಿಗಳಿಗೆ ಯೆಪ್ಪತ್ತೆರ್ಡಾಸಿರ ( ೭೨೦೦೦ ) ವರ್ಷವು, ಸರ್ಪಂಗಳಿಗೆ ದ್ವಿಚತ್ವಾರಿಂಶಸಹಸ್ರ ( ೪೨೦೦೦ ) ವರ್ಷವು. ಇಂತಿವು ಮೊದಲಾದವುಗಳಾದ ತಿರ್ಯಗ್ ಜೀವಗಳೆಲ್ಲವೂ ಜಘನ್ಯಸ್ಥಿತಿಯಂತರ್ಮುಹೂರ್ತವಾಗುವವು. ನಾರಕರುಂ, ಏಕೇಂದ್ರಿಯ, ವಿಕಲೇಂದ್ರಿಯಗಳುಂ, ಸಮ್ಮೂರ್ಛನ ಪಂಚೇಂದ್ರಿಯಗಳುಂ, ನಪುಂಸಕವೇದಿಗಳಾಗುವವು. ಗರ್ಭಜಂಗಳಾದ ನರತಿರ್ಯಂಚರುಂ ಸ್ತ್ರೀಪುನ್ನಪುಂಸಕವೇದಿಗಳಾಗುವರು. ಭೋಗಭೂಮಿಜರುಂ, ದೇವತೆಗಳುಂ, ಸ್ತ್ರೀಪುರುಷವೇದಿಗಳಾಗುವರು.

ಗಾಹೆ॥ ಣಿರಯಗಿವಿಗಳಾಸಂಮುಚ್ಛಣ ಪಚ್ಛಖ್ಖಾಚುಹೊಂತಿಸಡ್ಢಾಹೂ ।
ಭೋಗಸುರಾಸಥ್ಥೀಣಾ ತಿವೇದಗಾಗಬ್ಭಣರತಿರಯಾ ॥ ೮ ॥

ಮತ್ತಮಾ ತಿರ್ಯಗ್ಲೋಕದ ಪ್ರಮಾಣವೆಷ್ಟೆಂದರೆ—ಮೊದಲಿಂತೊಟ್ಟು ಈ ಮಂದರ ದುದಯಂಬರಮಪ್ಪುದೊಂದು ಬಾಹುಲ್ಯದೊಳಂತ್ಯದ ಜಲಧಿಯ ಕಡೆವರಮೆಯ್ದಿದಗಲದಲ್ಲಿ ನಿಂದು ತಿರ್ಯಗ್ಲೋಕಂ ||

ಸೂತ್ರಂ|| ತತಾರ್ಧದ್ವಿತಯದ್ವೀಪಸಮುದ್ರೌ

ಮನುಷ್ಯಕ್ಷೇತ್ರಂ || ೨ ||

ತಾ—ಆಯರ್ಧಸಂಖ್ಯಾತ ದ್ವೀಪಸಮುದ್ರಗಳಲ್ಲಿ ಮೊದಲೊಂದುಲಕ್ಷಯೋಜನ ವಿಸ್ತೀರ್ಣವುಳ್ಳ ಜಂಬೂದ್ವೀಪವುಂ, ತದ್ವಿಗುಣವಿಸ್ತಾರದ ಲವಣಸಮುದ್ರವುಂ, ತದ್ವಿಗುಣವಿಸ್ತಾರದ ವಲಯವನ್ನುಳ್ಳ ಧಾತಕೀಷಂಡದ್ವೀಪವುಂ, ತದ್ವಿಗುಣವಲಯವಿಸ್ತಾರವನ್ನುಳ್ಳ ಕಾಲೋದಕಸಮುದ್ರವುಂ, ತತ್ರಮಾಣಾಷ್ಟಯೋಜನ ಲಕ್ಷವಲಯವಿಸ್ತಾರದ ಪುಷ್ಕರಾರ್ಧದ್ವೀಪವುಂ, ಎಂದೀ ನಾಲ್ವತ್ತೈದುಲಕ್ಷ (೪೫೦೦೦೦೦) ಯೋಜನವಿಸ್ತಾರವನ್ನುಳ್ಳದ್ದು ಮನುಷ್ಯಕ್ಷೇತ್ರವು. ಇನ್ನೀವೆರಡೂವರೆದ್ವೀಪವುಂ, ಎರಡುಸಮುದ್ರವುಂ, ಮಾನುಷೋತ್ತರಪರ್ವತಪರ್ಯಂತರವಾಗುವದು. ಅಂತಾಸೂಚಿಸಿದ ಮಾನುಷೋತ್ತರದುತ್ಸೇದಂ ಸಾವಿರದೇಳನೂರಿಪ್ಪತ್ತೊಂದು (೧೭೨೧) ಯೋಜನಮುಂ, ಸಾವಿರದಿಪ್ಪತ್ತೆರಡು (೧೦೨೨) ಯೋಜನ ತಳದಗಲವುಂ, ನಾನೂರಿಪ್ಪತ್ತನಾಲ್ಕು (೪೨೪) ಯೋಜನ ಮೇಗಣದಗಲವುಂ, ಸುವರ್ಣವರ್ಣವನ್ನುಳ್ಳಾ ಪರ್ವತದಮೇಲೆ, ನೈರುತ್ಯ ವಾಯುವ್ಯದಿಕ್ಕುಗಳ ಹೊರತಾಗಿ ಉಳಿದ ಆರುದಿಕ್ಕುಗಳಲ್ಲಿ ಮೂರು ಮೂರು ಕೂಟಗಳಿರುವವು; ಅವುಗಳಭ್ಯಂತರ ಮಹಾದಿಕ್ಕಿನ ನಾಲ್ಕು ಕೂಟಗಳಲ್ಲಿ ಜಿನಭವನಗಳಿರುವವು; ಅಂಥಾ ಪರ್ವತದವರಿಗೆ ಮನುಷ್ಯರಿರುವರು. ಅದನ್ನು ದಾಟುವ ಶಕ್ತಿಯು ಮನುಷ್ಯರಿಗೆ ಇಲ್ಲವಾದದ್ದರಿಂದ ಅಂಥ ಮನುಷ್ಯರು ಆರ್ಯರೆಂದುಂ, ಮ್ಲೇಚ್ಛರೆಂದುಂ, ಭೋಗಭೂಮಿಜರೆಂದುಂ, ಕುಭೋಗಭೂಮಿಜರೆಂದುಂ, ನಾಲ್ಕುವಿಧವಾದ ಅವರಲ್ಲಿ ಆರ್ಯಖಂಡದಲ್ಲಿ ಹುಟ್ಟಿದ ಮನುಷ್ಯರು ಆರ್ಯರೆಂಬುವರು, ಅವರಲ್ಲಿ ಪರ್ಯಾಪ್ತಕರೆಂದುಂ, ಅಪರ್ಯಾಪ್ತಕರೆಂದುಂ ಎರಡುವಿಧವು; ಅಲ್ಲಿ ಪರ್ಯಾಪ್ತಕರ ಆಯುಷ್ಯಪ್ರಮಾಣವು ಜಘನ್ಯದಿಂದ ಅಂತರ್ಮುಹೂರ್ತವುಂ, ಉತ್ಕೃಷ್ಟದಿಂದ ಪೂರ್ವಕೋಟಿಯಾಗುವದು, ಅಪರ್ಯಾಪ್ತಮನುಷ್ಯರಿಗೆ ಅಂತರ್ಮುಹೂರ್ತವೇಯಾಗುವದು; ಅಲ್ಲಿಂ ಲಬ್ಧ್ಯಪರ್ಯಾಪ್ತಕರು ಒಂದು ಉಚ್ಛ್ವಾಸಕಾಲದಲ್ಲಿ ಹದಿನೆಂಟುಸಾರಿ ಸಾಯುವರು ಹುಟ್ಟುವರು. ಮ್ಲೇಚ್ಛರಿಗೆ ಜಘನ್ಯದಿನನ್ತಮುಹೂರ್ತವುಂ, ಉತ್ಕೃಷ್ಟದಿಂ ಪೂರ್ವಕೋಟಿಯಾಗುವದು. ಭೋಗಭೂಮಿಜರಿಗೆ ಸ್ಥಿರಭೋಗದಲ್ಲಿ ಒಂದುಂ, ಎರಡು, ಮೂರು, ಪಳಿತೋಪಮಗಳಾಗುವವು. ಅಸ್ಥಿರಭೋಗಭೂಮಿಗಳಲ್ಲಿ ಜಘನ್ಯಸಮಯಾದಿಕ ಪೂರ್ವಕೋಟಿ ಪ್ರಮಾಣಕಾಲವಾಗುವದು. ಉತ್ಕೃಷ್ಟಂ ಮೂರು ಪಳಿತೋಪಮಂ, ಕುಭೋಗಭೂಮಿಜರ್ಗೆ ಒಂದು ಪಳಿತೋಪಮವಾಗುವದು

ಸೂತ್ರಂ|| ಪಂಚದಶಕರ್ಮಭೂಮಯಃ || ೩ ||

ಅವಸ್ಥಿತಿಕರ್ಮಭೂಮಿಯೆನಿಸುವ ಐದು ಭರತೈರಾವತಂಗಳುಂ, ನಿತ್ಯಕರ್ಮಭೂಮಿಯೆನಿಸುವ ಐದು ವಿದೇಹಗಳುಂ ಇವು ಕರ್ಮಭೂಮಿಗಳು. ಮತ್ತಂ ಈ ಭರತದಗಲಂ

ಜಂಬೂದ್ವೀಪದ ನೂರತೊಂಭತ್ತುಭಾಗವಾಗುವದು. ಅದು ಹ್ಯಾಗೆಂದರೆ—ಐನೂರಿಪ್ಪತ್ತಾರು ( ೫೨೬ ) ಯೋಜನವನ್ನು ಒಂದುಯೋಜನಂ ಹತ್ತೊಂಭತ್ತು ಭಾಗವಮಾಡಿದಲ್ಲಿ ಆರುಭಾಗ ವಾಗುವದು. ಹಿಮವದಾದಿಗಳಿರ್ಮಡಿಯಿರ್ಮಡಿಗಳಾಗುವವು, ವಿದೇಹಪರ್ಯಂತಂ ಐರಾವತ ದತ್ತಣಿಂ ವಿದೇಹಪರ್ಯಂತಂ ಇಮ್ಮಡಿಗಳಾಗುವವು. ಭರತೈರಾವತಂಗಳು ಮ್ಲೇಚ್ಛಖಂಡ ದಲ್ಲಿ ಪ್ರತ್ಯೇಕ ವೈದೈದಾಗಲು ಐವತ್ತಾಗುವವು. ವಿದೇಹಕ್ಷೇತ್ರಂಗಳೊಳಗಣನಾಡುಗಳಲ್ಲಿ ಪ್ರತ್ಯೇಕವೈದೈದಾಗಲು ಎಂಟುನೂರಾಗಿ ಅವುಗಳೆಲ್ಲಾ ಕೂಡಿ ಎಂಟುನೂರೈವತ್ತು ( ೮೫೦ ) ಮ್ಲೇಚ್ಛಖಂಡಗಳಾಗುವವು. ನೂರೆಪ್ಪತ್ತು ( ೧೭೦ ) ಆರ್ಯಖಂಡಗಳಾಗುವವು. ಇವು ಹೊರತು ವಿದೇಹಂಗಳು ಕರ್ಮಭೂಮಿಗಳಾಗುವವು.

## ಸೂತ್ರಂ॥ ತ್ರಿಂಶದ್ಭೋಗಭೂಮಯಃ ॥ ४ ॥

ಎರಡುಸಾವಿರ ಬಿಲ್ಲುದಯವುಂ, ಒಂದು ಪಳಿತೋಪಮ ಆಯುಷ್ಯವನ್ನುಳ್ಳ ಜಘನ್ಯ ಭೋಗಭೂಮಿಯೆನಿಸುವ ಐದೈದು ಹೈಮವತ ಹೈರಣ್ಯವತಕ್ಷೇತ್ರಂಗಳುಂ, ನಾಲ್ಕುಸಾಸಿರ ದಂಡೋತ್ಸೇಧವುಂ, ಎರಡು ಪಳಿತೋಪಮಾಯುಷ್ಯವನ್ನುಳ್ಳ ಮಧ್ಯಮಭೋಗಭೂಮಿಯೆನಿ ಸುವೈದೈದು ಹರಿವರ್ಷರಮ್ಯಕಕ್ಷೇತ್ರಗಳುಂ, ಷಟ್ಸಹಸ್ರ ( ೬೦೦೦ ) ಚಾಪೋನ್ನತಿಯನ್ನುಳ್ಳ ಮೂರು ಪಳಿತೋಪಮಾಯುಷ್ಯವನ್ನುಳ್ಳ ಉತ್ತಮ ಭೋಗಭೂಮಿಯೆನಿತಪ್ಪೈದಯ್ದು ದೇವೋ ತ್ತರ ಕುರುಗಳುಮೆಂದಿವು ಮೂವತ್ತು ಭೋಗಭೂಮಿಗಳಾಗುವವು.

## ಸೂತ್ರಂ॥ ಷಣ್ಣವತಿಕುಭೋಗಭೂಮಯಃ ॥ ೫ ॥

ತಾ:—ಲವಣಸಮುದ್ರ, ಕಾಳೋದಕ ಸಮುದ್ರದ ಪೊರಗಣ ತಟಂಗಳಲ್ಲಿರುವ ಇಪ್ಪ ತ್ತನಾಲ್ಕಿಪ್ಪತ್ತನಾಲ್ಕಾಗಂತುತೊಂಭತ್ತಾರು ಕುಭೋಗಭೂಮಿಗಳಾಗುವವು. ಹ್ಯಾಗಂದರೆ—

ಗಾಹೆ॥ ದಹಗುಣಪಂಣಂಪಂಣಂಪಂಣಪಣವಂಣಂಸಠ್ಠಿಮುವಹಿ ।
ಮಹಿಗಂಮುಸ್ಸಯಸಯಪಣವಂಣಂಪಂಣಂಪಣವೀಸಾವಿಥ್ಥಡಾಕಮಸೋ ॥ ೯ ॥

ವಜ್ರವೇದಿಕೆಯೊಳಗಣಿಂದಯ್ನೂರು ( ೫೦೦ ) ಯೋಜನಂಬೋದಲ್ಲಿ ನೂರುಯೋಜನ ದಗಲವನ್ನುಳ್ಳ ನಾಲ್ಕುಂ ದಿಕ್ಕಿನ ದ್ವೀಪಗಳಲ್ಲಿ, ಪೊಂದೇ ತೊಡೆಯುವರುಂ, ಬಾಲದವರುಂ, ಕೋಡಿನವರುಂ, ಮೂಗರುಮಿರ್ಪ್ಪರು. ಪಂಚಶತಯೊಜನಂಬೋದಲ್ಲಿ ( ೫೦೦ ) ಅಯ್ವತ್ತೈದು ( ೫೫ ) ಯೋಜನಂ ವಿಸ್ತಾರದ ವಿದಿಕ್ಕಿನ ದ್ವೀಪಗಳಲ್ಲಿ, ಚಕ್ಕುಲಿಗಂಣರುಂ, ಕರ್ಣಪ್ರಾವರ ಣರುಂ, ಲಂಬಕರ್ಣರುಂ, ಶಶಕರ್ಣರುಂ, ಎಂದಿವರಿರುವರು. ಅಯ್ನೂರೈವತ್ತುಯೋಜನಂ ( ೫೫೦ ) ಪೋದಲ್ಲಿ ಐವತ್ತು ( ೫೦ ) ಯೋಜನದ ಅಗಲವನ್ನುಳ್ಳ ಅಂತರದ್ವೀಪಗಳಲ್ಲಿ ಸಿಂಹ ಮುಖರುಂ, ಅಶ್ವಮುಖರುಂ, ಶ್ವಾನಮುಖರುಂ, ಮಹಿಷಮುಖರುಂ, ವರಾಹಮುಖರುಂ, ವ್ಯಾಘ್ರಮುಖರುಂ, ಘೂಕಮುಖರುಂ, ಕಪಿಮುಖರುಂ, ಎಂದಿವರಿರುವರು. ಆರುನೂರು ( ೬೦೦ ) ಯೋಜನಂ ಪೊಳಪೊಕ್ಕಲ್ಲಿ ಪಂಚವಿಂಶತಿ ( ೨೫ ) ಯೋಜನವಿಸ್ತಾರವನ್ನುಳ್ಳ ದ್ವೀಪದಲ್ಲಿ ಮತ್ಸ್ಯಮುಖರುಂ, ಕೃಷ್ಣಮುಖರುಂ, ಹಿಮವಂತಪರ್ವತದಸದೃಶದ ಪೂರ್ವಾಪರ

ದಲ್ಲಿರುವವರು. ಮೇಘಮುಖರುಂ, ಗೋಮುಖರುಂ, ಭರತವಿಜಯಾರ್ಧಪರ್ವತದ ಸದೃಶಪ ರ್ವತದ ಪೂರ್ವಾಪರದಲ್ಲಿರುವವರು. ಮೇಷಮುಖರುಂ, ವಿದ್ಯುನ್ಮುಖರುಂ, ಶಿಖರಿಪರ್ವತದ ಸದೃ ಶದ ಪೂರ್ವಾಪರದಲ್ಲಿರುವವರು. ದರ್ಪಣಮುಖರುಂ, ಗಜಮುಖರುಂ, ಐರಾವತಕ್ಷೇತ್ರದ ವಿಜ ಯಾರ್ಧಗಿರಿಯ ಸದೃಶದ ಪೂರ್ವಾಪರದಲ್ಲಿರುವವರು. ಇಂತಿವರೆಲ್ಲರಿಗೂ ಎರಡುಸಾಸಿರ ಧನುರುತ್ಸೇದವೂ, ವೊಂದುಪಳಿತೋಪಮ ಆಯುಷ್ಯವಾಗುವದು. ಈ ಇಪ್ಪತ್ನಾಲ್ಕು ( ೨೪ ) ಹೆಸರುಗಳೇ ಮುಂದಲ ಮೂರುಸ್ಥಳಗಳಲ್ಲಿಯಾಗುವವು. ಇವರ ಷಣ್ಣವತಿ ( ೯೬ ) ಪರ್ವ ತಗಳಗೂ ಈ ಹೆಸರೇ ಆಗುವದು. ಅಲ್ಲಿಯೇ ರೋರುಗಪರ್ವತಗಳ ವಿಶಾಲವಾದ ಗುಹೆ ಗಳೊಳಗಿದ್ದು ನಾನಾಪಕ್ವಾನ್ನದ ರುಚಿಯನ್ನುಳ್ಳ ಪಾಷಾಣಂಗಳನ್ನೂ, ಶರ್ಕರಾಸಮಾನವಾದ ಮಳಲನ್ನೂ ಎಳೆಬಾಳೆತೆಂಗುನಾರಂಗಾದಿ ಮೊದಲಾದ ನಾನಾವೃಕ್ಷದ ಪಕ್ವಫಲಗಳನ್ನೂ, ವಾಪೀಕೂಪಸರೋವರ ದೀರ್ಘಿಕಾದಿಭರಿತ ಕ್ಷೀರಘೃತೇಕ್ಷುರಸಗಳನ್ನೂ ಕುಡಿದು ಬಾಳುವರು- ಮೆಂದುವರಮೆಂದೊಡೆ ಒಂದು ಪಳಿತೋಪಮಕಾಲದವರಿಗೂ ಜೀವಿಸುವರು.

ಮತ್ತು ಅಲ್ಲಿ ಹುಟ್ಟುವರ್ಯ್ಯಾರ್ಯ್ಯಾರೆಂದರೆ—ಕುಪಾತ್ರಗಳಿಗೆ ದಾನಕೊಡುವವರುಂ, ದಾನ ವನ್ನು ಕೊಟ್ಟಳಲುವವರುಂ, ಅಳಲಿನುಡಿದುಂ ಬಡಿದುಂ ಬೈದುಂ ಪರಿಭವಿಸಿಯುಂ ದಾನಕೊಡು ವವರುಂ, ಕರ್ದುಮಳರ್ದುದಾನಕೊಡುವವರುಂ, ಅನ್ಯಾಯಾರ್ಜಿತವಾದ ದ್ರವ್ಯಗಳಿಂದಂ, ಬೆರಗುಂ, ವ್ಯಸನವುಂ, ಮದ್ದುಂ, ಮಂತ್ರಕಾರ್ಯಗಳಾಗುವವೆಂದು ದಾನಕೊಡುವವರುಂ, ಭಾವಶುದ್ಧಿಯಿಲ್ಲದೆಯುಂ, ಸೂತಕಪಾತಕಾದಿಗಳನ್ನು ವಂಚಿಸಿಯುಂ, ಮುಟ್ಟಲೆಗಳ ಮರಯಿ ಸಿಯುಂ, ಕುಲಂಗಳಮರಸಿಯುಂ, ಜಾತಿಸಂಕರಂ ಮೊದಲಾದ ದೋಷಗಳಿಂದ ಕೂಡಿ ಸತ್ಪಾ ತ್ರಕ್ಕೆ ದಾನಕೊಡುವವರುಂ, ಕುತ್ಸಿತವೇಷಧಾರಿಗಳುಂ, ಮಾಯಾವಿಗಳಾದ ಜಿನಲಿಂಗಧಾರಿ ಗಳುಂ, ಜ್ಯೋತಿಷ್ಕ, ಮಂತ್ರವಾದ, ದಾತುರ್ವಾದ, ಕನ್ಯಾವಾದ, ವೈದ್ಯಾದಿಗಳಿಂದ ಜೀವಿಸು ವವರುಂ, ಸಂಘವನ್ನು ಬಿಟ್ಟು ಏಕಾಕಿಯಾಗಿರುವ ದುರಾಚಾರರುಂ, ಕಷಾಯೋದ್ರೇಕದಿಂದ ಸಂಘಸಂಘದಲ್ಲಿ ಕಲಹವನ್ನು ಮಾಡುವವರುಂ, ವಿವಾಹಕ್ಕೆ ತೆತ್ತಿಗರಾಗುವವರುಂ, ಅರ್ಹದಾ ದಿಗಳಿಗೆ ನಿರ್ಭರ ಭಕ್ತಿಯನ್ನು ಮಾಡದೆ ಇರುವವರುಂ, ಮೌನವನ್ನು ಬಿಟ್ಟು ಊಟಮಾಡು ವವರುಂ, ಮೊದಲಾದವರು ಕುಮಾನುಷ್ಯತ್ವದಿಂದ ಕುಭೋಗಗಳನ್ನು ಅನುಭವಿಸಿ ಸ್ವಭಾ ವದಿಂ ಮಂದಕಷಾಯಿಗಳಾದುದರಿಂದ ಆ ಮಿಥುನಂಗಳು ದೇವಗತಿಗೆ ಸಲ್ಲುವವು. ಅಲ್ಲಿಂದ ಮಿಥ್ಯಾದೃಷ್ಟಿಗಳು ಭವನತ್ರಿಕದಲ್ಲಿಯೂ ಸಮ್ಯಗ್ದೃಷ್ಟಿಗಳು ಸೌಧರ್ಮ, ಈಶಾನಗಳ ಲ್ಲಿಯೂ ಹುಟ್ಟುವರು.

## ಸೂತ್ರಂ ॥ ಪಂಚಮಂದರಗಿರಯಃ ॥ ೬ ॥

ತಾ:—ಜಂಬೂದ್ವೀಪದಲ್ಲಿ ಒಂದು, ಧಾತಕೀಷಂಡದ್ವೀಪದ ಪೂರ್ವಾಪರದಲ್ಲೊಂದೊಂದು, ಪುಷ್ಕರಾರ್ಧ ಪೂರ್ವಾಪರಗಳಲ್ಲಿ ಒಂದೊಂದು, ಹೀಗೆ ಐದು ಮಂದರಗಿರಿಗಳಾಗುವವು. ಅಸಂಖ್ಯಾತದ್ವೀಪಸಮುದ್ರಗಳ ನಟ್ಟನಡುವಣ ಜಂಬೂದ್ರುಮೋಲಕ್ಷಿತ ಜಂಬೂದ್ವೀಪದ ಮಧ್ಯಭಾಗದಲ್ಲಿ ಕಳಕ್ಕೆ ಮೇಟಿಯನ್ನು ನೆಟ್ಟಂತೆ ( ಪದ್ಮದ ಕರ್ಣಿಕೆಯಂತೆ ) ಸುದರ್ಶನಮಂದ ರಪರ್ವತವಿರುವದು. ಅದರ ಪ್ರಮಾಣಮೆಂತೆಂದೊಡೆ—

ಕಂದ॥ ನವನವತಿದಶೈಕೈಕಮು ।
ನವಯುವದಿಂಮಡ್ಡಿಪಂಚಶತಯೋಜನದಿಂ- ॥
ದವ ನಿರಿದೊಡಿಳ್ಗಿಮೂಲಾ- ।
ಗ್ರವಿಭಾಗಂ ವ್ಯಾಸಮಾಳ್ಕೆತದ್ಗಿರಿವರದಾ ॥

ತಾ:—ತೊಂಭತ್ತೊಂಭತ್ತುಸಾವಿರ ( ೯೯೦೦೦ ) ಯೋಜನ ಉತ್ಸೇದವುಂ, ಮೂಲ ವಿಸ್ತಾರ ದಶಸಹಸ್ರ ( ೧೦೦೦೦ ) ಯೋಜನವುಂ, ಅಗ್ರವ್ಯಾಸವು ಸಹಸ್ರ ( ೧೦೦೦ ) ಯೋಜನವುಂ, ಚಿತ್ರೆಯೆಂಬ ಭೂಮಿಯಲ್ಲಿ ಸಹಸ್ರ ( ೧೦೦೦ ) ಯೋಜನವು ನೆಟ್ಟಿರುವದು.

ಗಾಹೆ॥ ಮೇರುವಿದೇಹಮಜ್ಝೇಣವಣ ಉದಿದಹಿಕ್ಕಜೋಯಣಸಹಸ್ಸಾ ।
ಊದಯಭೂವುಹವಾಸ ಉವರುವರಿಗಣಚಉಕ್ಕಜುದಾ ॥ ೧೦ ॥

ವಚನ ॥ ಮತ್ತಮಾ ನಗೇಂದ್ರಮುತ್ತಪ್ತ ಜಂಬೂನದ ವೈಡೂರ್ಯಮಯವುಂ, ಪ್ರತ್ಯೇಕ ಜಿನಭವನಚತುಷ್ಟಯಶತಾನ್ವಿತ ಭದ್ರಸಾಲ, ನಂದನ, ಸೌಮನಸ, ಪಾಂಡುಕವನ ವಿರಾಜಿತ ಮೇಖಲಾಲಂಕೃತವುಂ, ಈಶಾನಾದಿ ವಿದಿಗ್ವಿಭಾಗ ಪ್ರತಿಷ್ಠಿತಂಗಳುಂ, ಪೂರ್ವಾಪರದಕ್ಷಿಣೋತ್ತರಾಯತಂಗಳುಂ, ಅರ್ಧೇಂದುಸಮಸಂಸ್ಥಾನಗಳುಂ, ಕಾಂಚನರೂಪ್ಯತಪನೀಯರುಧಿರಪ್ರಭಂಗಳುಂ, ಶತ ( ೧೦೦ ) ಯೋಜನಾಯಾಮವುಂ ತದರ್ಧಯೋಜನ ವಿಷ್ಕಂಭವನ್ನುಳ್ಳ, ಅಷ್ಟಯೋಜನಮುತ್ಸೇದಂಗಳುಂ, ಜಿನಾರ್ಭಕ ಸೌಧರ್ಮಮಿಶಾನಪ್ರತಿಬದ್ಧಪೂರ್ವಾಭಿಮುಖ ಪೀಠತ್ರಯರಮಣೀಯಂಗಳುಂ, ಭರತ ಅಪರವಿದೇಹ ಐರಾವತ ಪೂರ್ವವಿದೇಹ ಭಗವಜ್ಜನ್ಮಾಭಿಷೇಕ ಪಯಃಪಯೋದಿಜಲಪವಿತ್ರಂಗಳಾದ ಪಾಂಡುಕ, ಪಾಂಡುಕಂಬಳ, ರಕ್ತಕಂಬಳ, ಅತಿರಕ್ತಕಂಬಳ ಶಿಲಾತಲಚತುಷ್ಟಯಾಭಿರಾಮವುಂ, ದೇವದಂಪತಿ ಶತಕ್ರೀಡಾನಿಡಮುಂ, ಲೋಕಪಾಲಾಭಿಯೋಗ್ಯದೇವವಿಹಾರಸಂದೋಹಸಂಸೇವ್ಯಮುಮಾಗಿನಿಂದುದು ಮಂದರಮಹೀದರದಾ ॥

ಕಂದ॥ ಕೆಳಗಿರ್ದುದಧೋಲೋಕಂ ।
ಬಳಸಿರ್ದುದು ಮಧ್ಯಲೋಕಮಿರ್ದುದು ತುದಿಯೋಳ್ ॥
ತೊಳಪೂರ್ಧ್ವಲೋಕಮೆನೆ ಭೂ- ।
ವಳಯದೊಳಾಮಧ್ಯಗಿರಿಗೆ ಗಿರಿಸಮನೊಳವೇ ॥ ೨೭ ॥

ಅನ್ತು ಭದ್ರಶಾಲಾದಿ ವನಂಗಳಂತರಂಗಳುಮೆನಿತೆಂದೊಡೆ—

ವಚನ॥ ಪರ್ವತದ ಮೊದಲೊಳಿರುವ ದ್ವಾವಿಂಶತಿಸಹಸ್ರ ( ೨೨೦೦೦ ) ಯೋಜನವಿಸ್ತಾರದಿಂ ಭೂಮಿಯಲ್ಲಿ ಭದ್ರಶಾಲ ವನವಿರುವದು. ಅಲ್ಲಿಂ ಕ್ಷೈನೂರು ( ೫೦೦ ) ಯೋಜನಂತರದಲ್ಲಿ, ಅನಿತೆಯೋಜನಂ ( ೫೦೦ ) ವಿಸ್ತಾರದಿಂ ಬಳಸಿರ್ದ ದ್ವಿತೀಯ ಮೇಖಲೆಯಲ್ಲಿ ನಂದನವನವು ಶೋಭಿಸುವದು. ಅದರಿಂದ ಮೇಲೆ ಅರವತ್ತಿಬ್ಬಾಸಿರದೈನೂರು ( ೬೨೫೦೦ ) ಯೋಜನದಂತರದಲ್ಲಿ, ಪಂಚಶತ( ೫೦೦ ) ಯೋಜನ ವಿಸ್ತಾ

ರದಿಂದ ಸುತ್ತಿ ತೃತೀಯ ಮೇಖಲೆಯಲ್ಲಿ ಸೌಮನಸವನವೆಸೆದಿರುವದು. ಅದರಿಂದ ಮೇಲೆ ಷಟ್‌ತ್ರಿಂಶತ್‌ಸಹಸ್ರ ( ೩೬೦೦೦ ) ಯೋಜನಾಂತರದಲ್ಲಿ ಪಾಂಡುಕವನವು ಉಪರಿಮ ಮೇಖಲೆಯಲ್ಲಿ ನಾನೂರತೊಂಭತ್ತನಾಲ್ಕು ( ೪೯೪ ) ಯೋಜನ ವಿಸ್ತಾರ ದಿಂದ ಮಂದರಚೂಳಿಕೆಯನ್ನು ಪರಿವೇಷ್ಟಿಸಿರ್ದುದನ್ತಾಮಂದರದಿಂ ತೆಂಕಣ ಲವ ಣಸಮುದ್ರದ ವಜ್ರವೇದಿಕೆಯಿಂ ಬಡಗಲು ಪೂರ್ವಾಪರ ಜಲಧಿಪರ್ಯಂತಂ ನೀಳ್ದ, ೧ ಭರತ, ೨ ಹೈಮವತ, ೩ ಹರಿವರ್ಷ, ೪ ವಿದೇಹ, ೫ ರಮ್ಯಕ, ೬ ಹೈರಣ್ಯವತ, ೭ಐರಾವತವೆಂಬೇಳು ಕ್ಷೇತ್ರಂಗಳಿರುವವು. ಮತ್ತುಳಿದ ನಾಲ್ಕು ಮಂದರಂಗಳು ಚತುರಾಶೀತಿಸಹಸ್ರ ( ೮೪೦೦೦ ) ಯೋಜನೋತ್ಸೇದವನ್ನುಳ್ಳವುಗಳು. ಅವುಗಳಿಗೆ ಕ್ಷುಲ್ಲಕಮಂದರಗಳೆಂದು ಹೆಸರಾಗುವದು. ಮುಂಚೆ ಹೇಳಿದ ಭದ್ರಶಾಲಾದಿ ವನಗಳು ಅವುಗಳಲ್ಲಿಯೂ ಇರುವವು.

## ಸೂತ್ರಂ॥ ಜಂಬೂವೃಕ್ಷಾಶ್ಚ ॥ ೭ ॥

ತಾ:—ನೀಲಪರ್ವತದ ಸಮೀಪದ ಶಿಲೆಯ ಪೂರ್ವತಟಮಂ ಮಂದರದಿಶಾವದುತ್ತರ ಕುರುವದೊಳು ಜಂಬೂವೃಕ್ಷದ ಸ್ಥಳಿಯೈನೂರು ( ೫೦೦ ) ಯೋಜನವಿಸ್ತಾರಮದರಕಡೆ ಯೊಳು ಅರ್ಧಯೋಜನ ಬಾಹುಲ್ಯಮಧ್ಯಮಷ್ಟಯೋಜನ ಬಾಹುಲ್ಯಮುಂ, ವೃತ್ತಮುಂ ಹೇಮಮಯವುಂ ಅದರ ಮೇಲೆ ದ್ವಾದಶಯೋಜನತಳದಗಲವುಂ ಎಂಟುಯೋಜನೋತ್ಸೇದದ ಪೀಠಮಾಜಂಬೂವೃಕ್ಷಕ್ಕಿರುವುದು, ಆ ಸ್ಥಳಿಯ ಮೇಲೆ ವಲಯಾಕಾರ ದ್ವಾದಶ ( ೧೨) ಪದ್ಮವೇ ದಿಕೆಗಳು, ಚತುರ್ಗೋಪುರಸಮನ್ವಿತಮದರ ಪೊರಗಣವಲಯದಿಂ ಮೊದಲ್ಗೊಂಡು ಪ್ರಥಮ ದ್ವಿತೀಯದಲ್ಲೇನುಮಿಲ್ಲ, ತೃತೀಯದೊಳೆಂಟು ದೆಶೆಗಳಲ್ಲಿಯೂ ನೂರೆಂಟು ಪಡಿಹಾರದೇವರ ವೃಕ್ಷಗಳಿರುವವು. ಚತುರ್ಥವಲಯದ ಪೂರ್ವದಿಕ್ಕಿನಲ್ಲಿ ದೇವಿಯರ ನಾಲ್ಕು ವೃಕ್ಷಂ, ಪಂಚ ಮದಲ್ಲಿ ವಾಪೀಕೂಪಸರೋವರಾದಿ ವಿರಾಜಿತವಾದ ವನವಿರುವದು. ಷಷ್ಟಮದಲ್ಲೇನುಂ ಇಲ್ಲ; ಸಪ್ತಮದ( ೭ ) ನಾಲ್ಕುದೆಶೆಯಲ್ಲಿ ಅಂಗರಕ್ಷಕರ ಷೋಡಶಸಹಸ್ರ(೧೬೦೦೦ )ವೃಕ್ಷಗಳಿರುವವು. ಅಷ್ಟಮದೀಶಾನೋತ್ತರ ವಾಯುವ್ಯದಲ್ಲಿ ನಾಲ್ಕು ನಾಲ್ಕು ಸಹಸ್ರ ( ೪೦೦೦ ) ಸಾಮಾನಿಕರ ವೃಕ್ಷಗಳುಂ, ನವಮದಿಕ್ಕಿನ ಅಗ್ನಿಯ ಕೋಣಿನಲ್ಲಿ ಅಭ್ಯಂತರ ಪರಿಷತ್ತಿನ ದ್ವಾತ್ರಿಂಶತ್‌ಸಹಸ್ರ ( ೩೨೦೦೦ )ವೃಕ್ಷಗಳುಂ,ದಶಮದ ದಕ್ಷಿಣದಿಕ್ಕಿನಲ್ಲಿ ಮಧ್ಯಮಪರಿಷತ್ತಿನ ಚತ್ವಾರಿಂಶತ್ ಸಹಸ್ರ ( ೪೦೦೦ ) ವೃಕ್ಷಂಗಳುಂ, ಏಕಾದಶದ ನೈರುತ್ಯದ ಕೋಣಿನಲ್ಲಿ ಬಾಹ್ಯಪರಿಷತ್ತಿನ ಅಷ್ಟಚತ್ವಾ ರಿಂಶತ್ಸಹಸ್ರ ( ೪೮೦೦೦ ) ವೃಕ್ಷಗಳುಂ, ದ್ವಾದಶಮದ ಪಶ್ಚಿಮದಲ್ಲಿ ವಾಹನದೇವರೇಳು ವೃಕ್ಷಗಳಿರುವವು. ಮುಖ್ಯವೃಷ್ಟಸಹಿತಮಿಂತಿವೆಲ್ಲಾ ಕೂಡಿ ಒಂದು ಲಕ್ಷದ ನಲವತ್ತುಸಾವಿರ ದನೂರಿಪ್ಪತ್ತು ( ೧೪೦೧೨೦ ) ವೃಕ್ಷಗಳಾಗುವವು. ನಾನು ಮುಂದೆ ಹೇಳಿದ ಪೀಠದ ಮೇಲೆ ಅರ್ಧಯೋಜನದಗಲವುಂ, ನಡುಗಿಯುಮನುಳ್ಳ ಮರಕತಮಯವಾದ, ಎರಡುಯೋಜನ ಸುಸ್ಥಿರಸ್ಥಂದವನ್ನುಳ್ಳ, ವಜ್ರಮಯವಾದ ಎಂಟು ಯೋಜನನೀಳ, ಅರ್ಧಯೋಜನದಗಲವ ನ್ನುಳ್ಳ ನಾಲ್ಕು ಮಹಾಶಾಖೆಗಳುಂ, ಅನೇಕ ರತ್ನಮಯ ಶಾಖೆಗಳುಂ, ಮೇಲೆ ತಳಿರುಂ,

ಪುಷ್ಪಂಗಳುಂ, ಮೃದಂಗಾಕಾರದ ಫಲಗಳುಂ ಪೃಥ್ವಿಸಾರಮುಂ, ದಶಯೋಜನೋತ್ತುಂಗವುಂ, ಷಟ್ಯೋಜನ ಮಧ್ಯವಿಸ್ತಾರವುಂ,ಚತುರ್ಯೋಜನಾಗ್ರವಿಸ್ತಾರವನ್ನುಳ್ಳ ಉತ್ತರಕುಲಗಿರಿಯ ಸಮೀಪದ ಶಾಖೆಯಲ್ಲಿ ಕ್ರೋಶಾಯಾಮದ ಜಿನಗೃಹವಿರುವವು. ಉಳಿದ ಕೊಂಬಿನಲ್ಲಿ ಯಕ್ಷಕುಲದ, ಆದರ, ಅನಾದರ ಆವಾಸಗಳಿರುವವು; ಈ ಜಂಬೂವೃಕ್ಷದ ಪರಿವಾರವೃಕ್ಷಮರ್ಧಪ್ರಮಾಣಮುವೆಲ್ಲ ವಾದರರ ಪರಿವಾರಗಳಿರುವವು.

ಸೂತ್ರಂ ॥ ಶಾಲ್ಮಲಯೋಪಿ ॥ ೮ ॥

ಇದಕ್ಕೆ ರೂಪ್ಯಮಸ್ಥಲ ಅದರ ಮೇಲೆ ಮುಂಚೆಹೇಳಿದ ಜಂಬೂವೃಕ್ಷದ ಹಾಗೆ, ಇದು ಸೀತೋದಿಯ ಪಶ್ಚಿಮತೀರದ ನಿಷಧದ ಸಮೀಪದ ಮಂದರದ ನೈರುತ್ಯದಿಕ್ಕಿನ ದೇವಕುರುವಿನಲ್ಲಿರುವದು, ಅದರ ಪರಿವಾರಂಗಳುಂ ಗರುಡಕುಲದ ವೇಣುಧಾರಿಗಳ ಶಾಲ್ಮಲಿವೃಕ್ಷದ ಪರಿವಾರ ಸಂಖ್ಯೆಯು ಒಂದುಲಕ್ಷದ ನಲವತ್ತುಸಾವಿರದ ನೂರಹತ್ತೊಂಭತ್ತು ( ೧೪೦೧೧೯ ) ಮುಖ್ಯಶಾಲ್ಮಲಿಯ ದಕ್ಷಿಣಶಾಖೆಯಲ್ಲಿ ಜಿನಗೃಹವುಂ, ಶೇಷಶಾಖಾತ್ರಯದಲ್ಲಿ ವೇಣುವೇಣುಧಾರಿಗಳ ಆವಾಸವಿರುವವು.

ಕಂದ॥ ಹೇಮಾಚಳದೀಶಾನದೊ- ।
ಳಾಮಂದರಗಿರಿಯ ನೈರುತಿಯದೆಶೆಯೊಳ್ ಜಂ- ॥
ಬೂಮಹೀರುಹವು ಶಾಲ್ಮಲಿ ।
ಭೂಮಿಜಮುಂ ಕುರುಮಹೀತಳಂಗಳೊಳೆಸಗುಂ ॥ ೨೮ ॥

ಸೂತ್ರಂ॥ ಚತುಸ್ತ್ರಿಂಶದ್ವರ್ಷಧರಪರ್ವತಾಃ ॥ ೯ ॥

ತಾ:--ಮೂವತ್ನಾಲ್ಕು ಕುಲಗಿರಿಗಳು ಹ್ಯಾಗೆಂದರೆ—ಭರತಾದಿ ಕ್ಷೇತ್ರವಿಭಾಗದಲ್ಲಿ, ಹೇಮಾರ್ಜುನತಪನೀಯ ವೈಡೂರ್ಯರಜತಹೇಮಮಯಂಗಳುಂ, ಮಣಿವಿಚಿತ್ರಪಾರ್ಶ್ವಮೂಲೋಪರಿಮತಲಸಮಾನ ವಿಸ್ತಾರಂಗಳುಂ, ಸಿದ್ಧಾಯತನಾದಿ ಕೂಟೋಪಶೋಭಿತಗಳುಂ ಆಗಿ, ಪೂರ್ವಾಪರ ವಾರಾವಾರಂಗಳಂ ಪಳಂಚಿ ನೀಳ್ದುನಿಂದ ೧ ಹಿಮವಂತವುಂ, ೨ ಮಹಾಹಿಮವಂತವುಂ, ೩. ನಿಷಧವುಂ, ೪ ನೀಲವುಂ, ೫ ರುಗ್ಮಿಯುಂ. ೬ ಶಿಖರಿಯು ಮೆಂದಾರುಕುಲಗಿರಿಗಳು. ಅವುಗಳ ಉತ್ಸೇದಗಳು, ಹಿಮವದ್ಗಿರಿಯೋಜನಶತಮುಮರ್ಧಿರಲಾನಿಷಧಗಿರಿವರಿಗೂ ದ್ವಿಗುಣಂ, ತತ್ಸಮಮಾಲಾದ್ರಿದಳಾರ್ಧಕ್ರಮಂಗಳುತ್ಸೇದ ವಾದಮುಪಗಾಹಂಗಳು.

ಗಾಹೆ॥ ಹೇಮಜ್ಜುಣ ತಪನೀಯಾಕಮುಸೋವೇ ಳುಪರ್ಯರಜತಹೇಮಮಯಾ ।
ಇಗಿದುಗಚವುಚವುದುದಿಯಿಗಿಸಮತುಂಗಾ ಹೊಂತಿಹುಕಮೇಣ ॥ ೧೧ ॥

ತಾ:—ಈ ಹಿಮವದಾದಿಗಳಾದ ಆರು ಕುಲಗಿರಿಗಳನ್ನು ಪಂಚಗುಣಂ ಮಾಡಿದರೆ ಮೂವತ್ತು ( ೩೦ ) ಆಗುವವು. ಮತ್ತಂ ಕನಕವರ್ಣಂಗಳುಂ, ಚತುಶ್ಶತ ( ೪೦೦ ) ಯೋಜನೋನ್ನತಗಳುಂ, ಸಹಸ್ರ ( ೧೦೦೦ ) ಯೋಜನವಿಸ್ತಾರಗಳುಂ, ನಾಲ್ಕುಮೆಂಟುಲಕ್ಷಯೋಜನ ( ೪೦೦೦೦೦ ), ( ೮೦೦೦೦೦ ) ನೀಳವನ್ನುಳ್ಳ, ಧಾತಕೀಷಂಡವುಂ, ಪುಷ್ಕರಾರ್ಧಂಗಳ

ತೆಂಕಲುಂ ಬಡಗಲುಂ ಒಂದೊಂದು ಇಷುಕಾರಂಗಳುಂ, ಲವಣಕಾಳೋದಧಿಪರ್ಯಂತಂ ಕಾಳೋದಧಿ ಈ ಮಾನುಷೋತ್ತರ ಪರ್ವತಪರ್ಯಂತಂ ನೀಳ್ದು ನಿಂದೀನಾಲ್ಕು ಇಷುಕಾರಂಗಳುಂ, ಮೂವತ್ತು ಕುಲಗಿರಿಗಳುಂ ಕೂಡಿ ಮೂವತ್ನಾಲ್ಕು ( ೩೪ ) ವರ್ಷಧರಪರ್ವತಗಳಾಗುವವು.

## ಸೂತ್ರಂ ॥ ತ್ರಿಂಶತ್ಯುತ್ತರಶತಸರೋವರಾಃ ॥ ೧೦ ॥

ತಾಃ—ನೂರಮೂವತ್ತು ( ೧೩೦ ) ಸರೋವರಗಳು ಹ್ಯಾಗೆಂದರೆ—೧ ಪದ್ಮ, ೨ ಮಹಾಪದ್ಮ, ೩ ತಿಗಿಂಛ, ೪ ಕೇಸರಿ, ೫ ಮಹಾಪುಂಡರೀಕ, ೬ ಪುಂಡರೀಕವೆಂದೀ ಆರುಂ ಆ ಹಿಮವದಾದಿ ಗಿರಿಗಳ ಮೇಲಣ ಮೊದಲಪದ್ಮ ಸರೋವರದಾಯಾಮಂ ಸಹಸ್ರ ( ೧೦೦೦ ) ಯೋಜನವು, ವಿಷ್ಕಂಭವು ಪಂಚಶತ ( ೫೦೦ ) ಯೋಜನವು, ಪತ್ತು ( ೧೦ ) ಯೋಜನಗುಣ್ಪು, ತನ್ಮಧ್ಯಗತ ಪುಷ್ಕರವಿಷ್ಕಂಭಂ ಏಕಯೋಜನಂ, ಕರ್ನಿಕೆಕ್ರೋಶಪ್ರಮಾಣಂ, ಮತ್ತಂ ತಿಗಿಂಛೆವರಿಗೂ, ಹ್ರದಂಗಳುಂ ಪದ್ಮಂಗಳುಂ ದ್ವಿಗುಣಕ್ರಮಗಳಾಗುವವು, ಕೇಸರಿ, ತಿಗಿಂಛೆಯಲ್ಲಿ ಸಮಾನ, ಮತ್ತಲರ್ಧಕ್ರಮಂ ಆ ಪದ್ಮಕರ್ನಿಕಾಪ್ರತಿ ಪೀಠಂಗಳುಂ ಪಂಚರತ್ನಖಚಿತಂಗಳುಂ ಆದ ಏಕೈಕ ಪ್ರಾಸಾದಂಗಳೊಳಗೆ ತತ್ಪ್ರಾಸಾದನಿಮಸಿನಿಯಂಧುಂ, ಸಮಾನಿಕ ಪರಿಷದಾತ್ಮರಕ್ಷಕಾದಿ ಪರಿವಾರಪರಿವೃತೆಯರುಂ, ಸೌಧರ್ಮ ಈಶಾನೇಂದ್ರ ಪ್ರತಿಬದ್ಧ ವಿಳಾಸಿನಿಯರುಂ, ಜಿನಾಂಬಿಕಾ ಗರ್ಭಶೋಧನಕ್ರಿಯಾಪ್ರಧಾನೆಯರುಂ, ಪಲ್ಯೋಪಮಾಯುಃ ಪ್ರಮಾಣ್ಯೆಯರುಗಳಾದ ೧ ಶ್ರೀ, ೨ ಹ್ರೀ, ೩ ಧ್ರುತಿ, ೪ ಕೀರ್ತಿ, ೫ ಬುದ್ಧಿ, ೬ ಲಕ್ಷ್ಮಿಯರೆಂಬ ಆರುಜನ ದೇವಿಯರು ವಿಳಾಸದಿಂದಿರುವರು. ಮತ್ತಂ ಉತ್ತರಕುರು ಪೂರ್ವಭದ್ರಶಾಲವನದೊಳು ಸಮಾನನಾಮಂಗಳುಂ, ಶೀತಾನದಿಗಳುಂ, ಸಹಸ್ರ ( ೧೦೦೦ ) ಯೋಜನದಾಯಾಮಗಳುಂ, ಐನೂರು ( ೫೦೦ ) ಯೋಜನದಗಲವನ್ನುಳ್ಳ, ನೀಲೆಯುಂ, ಉತ್ತರಕುರುವುಂ, ಚಂದ್ರಿಕೆಯುಂ, ಐರಾವತೆಯುಂ, ಮಾಲ್ಯವಂತೆಯುಂ, ಎಂದಿವುಗಳನ್ನು ದ್ವಿಗುಣವನ್ನು ಮಾಡಲು ದಶ ( ೧೦ ) ದೇವಕುರುಗಳು. ಪಶ್ಚಿಮಭದ್ರಶಾಲವನದಲ್ಲಿ, ಸಮಾನನಾಮಂಗಳುಂ, ಶೀತೋದಾನದಿಗನುಗತಂಗಳಾಗಿ, ಮುಂಚೆ ಹೇಳಿದ ಆಯಾಮವಿಸ್ತಾರವುಳ್ಳ, ನಿಷಧೆಯುಂ, ದೇವಕುರುವೆಯುಂ, ಸೂರೆಯುಂ, ಸುಲಸೆಯುಂ, ವಿದ್ಯುತ್ತೆಯುಮೆಂದಿವೈದನ್ನು ದ್ವಿಗುಣಮಾಡಲು ( ೧೦ ) ಹತ್ತಾಗುವವು. ಅಂತಿಪ್ಪತ್ತು ಸರೋವರಂಗಳ ಪದ್ಮಪ್ರಾಸಾದಂಗಳಲ್ಲಿ ನಾಗಕುಮಾರಿಯರುಂ, ಅವರವರ ಪರಿವಾರಂಗಳುಂ, ಪದ್ಮಸರೋವರದಲ್ಲಿ ಮೊದಲು ಹೇಳಿದಂತೆ ಒಂದುಲಕ್ಷದ ನಲವತ್ತುಸಾವಿರದ ನೂರಹದಿನೈದು ( ೧೪೦೧೧೫ ) ಪರಿವಾರಪದ್ಮಂಗಳುಂ, ಮುನ್ನಿನಾರಂಗೂಡಿ ಆ ಸರೋವರಂಗಳನ್ನು ಪಂಚಗುಣಂ ಮಾಡಿದರೆ ನೂರಮೂವತ್ತು ( ೧೩೦ ) ಆಗುವವು.

## ಸೂತ್ರಂ ॥ ಸಪ್ತತಿರ್ಮಹಾನದ್ಯಃ ॥ ೧೧ ॥

ತಾಃ—ಯೆಪ್ಪತ್ತು ಮಹಾನದಿಗಳು ಹ್ಯಾಗೆಂದರೆ—ಹಿಂದೆ ಹೇಳಿದ ಪದ್ಮಾದಿಸರೋವರಂಗಳಲ್ಲಿ ಹುಟ್ಟಿ ಆ ಪರ್ವತಗಳ ಮೇಲೆ ಸ್ವಲ್ಪ ಯೋಜನಂ ಹೋಗಿ ಪ್ರಮಾಣಾಳಿಕೆಗಳಿಂ

ಪೊರಮಟ್ಟ ಕುಂಡಮಧ್ಯದ ಗಿರಿಯ ಮಸ್ತಕಸ್ಥಿತದೇವತೆಯಾಕೂಟದ ಮೇಗಣ ಜಿನ ಬಿಂಬದ ಮಸ್ತಕದ ಮೇಲೆ ಜನ್ಮಾಭಿಷೇಕಪೂರಮನನುಕರಿಸಿ ಪೊಯ್ದು ಪ್ರವಾಹರೂಪ ಧಾರಾ ಪಾತವಾಗಿ ಆ ಕುಂಡದಿಂ ಪೊರಮಟ್ಟ ಭರತಾದಿ ಕ್ಷೇತ್ರಗಳಲ್ಲಿ ಹರಿದ ಮಹಾನದಿಗಳ ಹೆಸರು ಯಾವವುಗಳೆಂದರೆ—

೧ ಗಂಗೆ, ೨ ಸಿಂಧು, ೩ ರೋಹಿತು, ೪ ರೋಹಿತಾಸ್ಯೆ, ೫ ಹರಿತು, ೬ ಹರಿಕಾಂತೆ, ೭ ಶೀತಾ, ೮ ಶೀತೋದಿ, ೯ ನಾರಿ, ೧೦ ನರಕಾಂತೆ, ೧೧ ಸುವರ್ಣಕೂಲೆ, ೧೨ ರೂಪ್ಯಕೂಲೆ, ೧೩ ರಕ್ತೆ, ೧೪ ರಕ್ತೋದೆ, ಎಂದಿವು ಚತುರ್ದಶ (೧೪) ನದಿಗಳು; ಇವುಗಳನ್ನು ಪಂಚಗು ಣವಮಾಡಿದರೆ ಎಪ್ಪತ್ತು (೭೦) ಮಹಾನದಿಗಳಾಗುವವು. ಮತ್ತಂ ಭರತೈರಾವತಂಗಳ ಗಂಗಾ, ಸಿಂಧು, ರಕ್ತೆ, ರಕ್ತೋದೆಗಳಂ ವಿದೇಹದೊಳು ಷಟ್ಖಂಡವಾಗಿ ಪರಿದೀಪೆಸರನುಳ್ಳ ನದಿಗಳ್ಗಂ ಪ್ರತ್ಯೇಕಂ ಹದಿನಾಲ್ಕು ಸಹಸ್ರ (೧೪೦೦೦) ಪರಿವಾರ ನದಿಗಳಾಗುವವು. ರೋಹಿತು, ರೋ ಹಿತಾಸ್ಯೆ, ಸುವರ್ಣಕೂಲೆ, ರೂಪ್ಯಕೂಲೆಗಳ್ಗಂ, ವಿದೇಹದ ವಿಭಂಗನದಿಗಳ್ಗಂ, ಪ್ರತ್ಯೇಕಮಿ ಪ್ಪತ್ತೆಂಟುಸಾವಿರ (೨೮೦೦೦) ಇಪ್ಪತ್ತೆಂಟುಸಾವಿರ (೨೮೦೦೦) ಪರಿವಾರನದಿಗಳಿರುವವು. ಹರಿತು, ಹರಿಕಾಂತೆ, ನಾರಿ, ನರಕಾಂತೆಗಳಿಗೆ ಪ್ರತ್ಯೇಕಮಯ್ವತ್ತಾರು ಸಹಸ್ರ (೫೬೦೦೦) ಪರಿವಾರನದಿಗಳಿರುವವು. ದೇವೋತ್ತರ ಕುರುಗಳು ಪ್ರತ್ಯೇಕಂ ಚತುರಾಶೀತಿಸಹಸ್ರ (೮೪೦೦೦) ಪರಿವಾರನದಿಗಳಿರುವವು. ಈ ರೀತಿ ಇವೆಲ್ಲಾ ಕೂಡಿ ಮುಖನದಿಗಳ್ವೆರಸು ಪಂಚಗುಣವನ್ನು ಮಾಡಿದರೆ ಎಂಭತ್ತೊಂಭತ್ತುಲಕ್ಷದ ಅರವತ್ತುಸಾವಿರದನೂರೈವತ್ತೆರಡುವರೆ (೮೯೬೦೧೫೨½) ದ್ವೀಪದೊಳುಂ.

ಸೂತ್ರಂ॥ ವಿಂಶತಿರ್ನಾಭಿನಗಾಃ ॥ ೧೨ ॥

ತಾ:—ಸ್ಥಿರಭೋಗಭೂಮಿಯೆನಿಸುವ ಜಘನ್ಯ, ಮಧ್ಯಮ, ಭೋಗಭೂಮಿಯ ಮಧ್ಯ ಸ್ಥಿತಂಗಳುಂ, ಸಹಸ್ರಯೋಜನ (೧೦೦೦) ಉತ್ಸೇದವುಂ, ಅಗಲವುಂ, ಮೂಲೋಪರಿಮತಳ ಸಮಾನಗಳಾದ, ೧ ಷಡ್ಜವಂತಮುಂ, ೨ ವಿಚಟವಂತಮುಂ, ೩ ಪದ್ಮವಂತಮುಂ, ೪ ಗಂಧ ಮುಂ, ಇವು ಶುಕ್ಲವರ್ಣಗಳುಂ, ಈ ಪರ್ವತಗಳ ಮೇಲೆ ದೇವೇಂದ್ರನುಚರರಪ್ಪಸ್ವಾ ಮಿಯುಂ, ಚಾರಣನುಂ, ಪದ್ಮನುಂ, ಪ್ರಭಾಸನುಮೆಂಬಿವರಿರುವರು. ಈಗ ಹೇಳಿದ ನಾಭಿ ಗಿರಿಗಳನ್ನು ಪಂಚಗುಣಂ ಮಾಡಿ ವಿಂಶತಿವೃತ್ತ ವಿಜಯಾರ್ಧಪರ್ವತಗಳಾಗುವವು ॥ ೨೦ ॥

ಸೂತ್ರಂ॥ ವಿಂಶತಿರ್ಯಮಕಗಿರಯಃ ॥ ೧೩ ॥

ಕಂದ॥ ವರನೀಲನಿಷಧ ಪಾರ್ಶ್ವದೊ- ।
ಳೆರಡುಂ ಕುಲನದಿಗಳಿಕ್ಕೆಲಂಗಳೊಳಂ ತಾ- ॥
ವೆರಡೆರಡೀಯಮುಕನಾಮಕ ।
ಗಿರಿಪತಿಗಳು ವ್ಯಂತರಾಮರಾವಾಸಂಗಳ್ ॥

ಎಮಕೆ, ಮೇಘೆ, ಚಿತ್ರ, ವಿಚಿತ್ರ, ಮೆಂಬಿವರುದ್ಧವುಂ, ತಳದಗಲವುಂ, ಸಹಸ್ರ (೧೦೦೦) ಯೋಜನ, ಮುಖದಗಲಮಯ್ನೂರು (೫೦೦) ಯೋಜನವು. ಅವುಗಳನ್ನು ಪಂಚ ಗುಣಮಾಡಲು (೨೦) ಇಪ್ಪತ್ತಾಗುವವು.

## ಸೂತ್ರಂ॥ ಸಹಸ್ರಕನಕಗಿರಯಃ ॥ ೧೪ ॥

ತಾ:—ಸಹಸ್ರಕನಕಗಿರಿಗಳು ಹ್ಯಾಗಾಗುತ್ತವೆಂದರೆ—

ಕಂದ॥ ಕುರುಭದ್ರಶಾಲಮಧ್ಯದೊ- ।
ಳೆರಡುಂ ಕುಲನದಿಗಳಯ್ದು ಗೆಯ್ದಾಗೆ ಸರೋ- ॥
ವರಮಿಪ್ಪತ್ತೈದೈದಾ ।
ಸರಂಗಳಿಕ್ಕೆಲದೊಳೆಸೆಯೆ ಕನಕಾದ್ರಿಗಳುಂ ॥

ವಚನ ॥ ಉತ್ತರಕುರುವಿನಲ್ಲಿಯೂ, ಪೂರ್ವಭದ್ರಶಾಲದಲ್ಲಿಯೂ, ದೇವಕುರುವಿನಲ್ಲಿಯೂ, ಪಶ್ಚಿಮಭದ್ರಶಾಲಗಳಲ್ಲಿಯೂ, ಅಯ್ದೈದು ಸರೋವರಂಗಳಿತ್ತಟದೊಳು ಯ್ದೈಯ್ದು ಪರ್ವತಂಗಳಾಗಲು ಇನ್ನೂರಾಗುವವು. ( ೨೦೦ ) ಅವುಗಳನ್ನು ಪಂಚಗುಣಂ ಮಾಡಲು ಅಯ್ದು ಮಂದರಗಳಿಗೂ, ಸಹಸ್ರ ( ೧೦೦೦ ) ಕನಕಗಿರಿಗಳಾಗುವವು. ಮತ್ತವುಗಳ ಉತ್ಸೇದಂಗಳುಂ, ತಳದಗಲವುಂ, ಶತ ( ೧೦೦ ) ಯೋಜನವು, ಮುಖದಗಲಮಯ್ವತ್ತು ( ೫೦ ) ಯೋಜನವು. ಅವುಗಳ ಶಿಖರದಲ್ಲಿ ಶುಕ್ಲವರ್ಣದ ವ್ಯಂತರದೇವರ್ಕಳಿರುವರು.

## ಸೂತ್ರಂ ॥ ಚತ್ವಾರಿಂಶದ್ದಿಗ್ಗಜಪರ್ವತಾಃ ॥ ೧೫ ॥

ತಾ:—ನಲವತ್ತು ದಿಗ್ಗಜಪರ್ವತಗಳು ಹ್ಯಾಗಾಗುವವೆಂದರೆ—

ಕಂದ॥ ಕುರುಭದ್ರಶಾಲಮಧ್ಯದೊ- ।
ಳೆರಡುಂ ಕುಲನದಿಗಳಿಕ್ಕೆಲಂಗಳೊಳಂ ದಿ- ॥
ಕ್ಕರಿಗಿರಿ ಯೆರಡೆರೆಡಪ್ಪವು ।
ನಿರತಿಶಯ ವ್ಯಂತರಾಶ್ರಿತಂಗಳ್ ॥

ಆ ದಿಗ್ಗಜಪರ್ವತಂಗಳ ಉದ್ದವುಂ, ತಳದಗಲವುಂ ಶತ ( ೧೦೦ ) ಯೋಜನಂ, ಮುಖದಗಲವು ಐವತ್ತು ( ೫೦ ) ಯೋಜನವನ್ನುಳ್ಳ ಪದ್ಮೋತ್ತರ ನೀಲ, ಸ್ವಸ್ತಿಕ, ಅಂಜನ, ಕುಮುದ, ಪಲಾಶ, ಅವತಂಶ ರೋಚನವೆಂದಿವೆಂಟು ದಿಗ್ಗಜಪರ್ವತಗಳಾಗುವವು. ಇವುಗಳನ್ನು ಪಂಚಗುಣವನ್ನು ಮಾಡಿದರೆ ನಲವತ್ತಾಗುವವು.

## ಸೂತ್ರಂ ॥ ಶತಂ ವಕ್ಷಾರಪರ್ವತಾಃ ॥ ೧೬ ॥

ತಾ:—ನೂರು ವಕ್ಷಾರಪರ್ವತಗಳು ಹ್ಯಾಗೆಂದರೆ—

ಮಂದರದೀಶಾನ್ಯದಿಂದ ಮೊದಲ್ಗೊಂಡು ಪಂಚಶತ ( ೫೦೦ ) ವಿಭಂಗನದಿಗಳು, ತಪ್ತಜಲ, ಮತ್ತಜಲ, ಉನ್ಮತ್ತಜಲ ಇವು ಮೂರು ನದಿಗಳು; ಕ್ಷಾರೋದಿ, ಶಿರೋದಿ, ಶ್ರೋತಾವಾಹಿನಿ ಇವು ಮೂರು ನದಿಗಳು; ಗಂಭೀರಮಾಲಿನಿ, ಫೇನಮಾಲಿನಿ, ಊರ್ಮಿಮಾಲಿನಿ ಇವೇ ಮೊದಲಾದ ಹನ್ನೆರಡು ನದಿಗಳನ್ನು ಪಂಚಗುಣಂ ಮಾಡಲು ( ೬೦ ) ಅರವತ್ತು ವಿಭಂಗನದಿಗಳಾಗುವವು.

ಯೋಜನದಗಲವನ್ನುಳ್ಳ ಮಾಲ್ಯವಂತವುಂ, ಮಹಾರ ಸೌಮನಸವುಂ, ವಿದ್ಯುತ್ಪ್ರಭೆಯುಂ, ಗಂಧಮಾಧನವುಂ ಇವು ನಾಲ್ಕು ಗಜದಂತಪರ್ವತಂಗಳುಂ· ಮಂದರದ ಮೂಡಣ ಭದ್ರಶಾಲ ವನವೇಧಿಕೆಯಿಂ ಮೂಡಲು ಶೀತಾನದಿಯ ಪಡಗಣಿಂ ತೊಡಗಿ ಚಿತ್ರಕೂಟ, ಪದ್ಮಕೂಟ, ನಳಿನಕೂಟ, ಏಕಶೈಲ, ಇಂತೀ ನಾಲ್ಕು ಎರಡುಸಾವಿರದ ಒಂಭೈನೂರಿಪ್ಪತ್ತೆರಡು ( ೨೯೨೨ ) ಯೋಜನ ವಿಸ್ತಾರದ ದೇವಾರಣ್ಯದಿಂ ಪಡುವಲು ಶೀತೆಯಿಂ ತೆಂಕಲು ಚಿತ್ರಕೂಟ, ವೈಶ್ರವಣ ಕೂಟ, ಅಂಜನಕೂಟ, ಆತ್ಮಾಂಜನಕೂಟ ಇವು ನಾಲ್ಕು ಮಂದರದ ಪಡುವಣ ಭದ್ರಶಾಲೆ ಯಿಂ ಪಡುವಲು, ಶೀತೋದಿಯಿಂ ತೆಂಕಲು, ಷಡ್ವವಂತ, ವಿಜಟವಂತ, ಆಸೀವಿಷ, ಸುಖಾವಹ ಇವು ನಾಲ್ಕು ಭೂತಾರಣ್ಯದ ಮೂಡಣ ದೆಶೆಯಲ್ಲಿ, ಶೀತೋದಿಂ ಬಡಗಲು, ಚಂದ್ರಮಾಳೆ, ಸೂರ್ಯಮಾಳೆ, ನಾಗಮಾಲೆ, ದೇವಮಾಲೆ ಎಂಬೀ ನಾಲ್ಕುಂ ವಕ್ಷಾರಮುಮಿಂತೀ ಗಜದಂತಾ ದಿ ವಿಂಶತಿಗಳು ಪಂಚಗುಣಮಾಗಲಂತಯ್ದು ಮಂದರಕ್ಕಂ ಶತ ( ೧೦೦ ) ವಕ್ಷಾರ ಪರ್ವ ತಗಳಾಗುವವು.

## ಸೂತ್ರಂ ॥ ಷಷ್ಟಿರ್ವಿಭಂಗನದ್ಯಾಃ ॥ ೧೭ ॥

ತಾಃ—ಅರವತ್ತು ವಿಭಂಗನದಿಗಳು ಹ್ಯಾಗಂದರೆ—

ಆ ಮುನ್ನಪೇಳ್ದ ವಕ್ಷಾರಂಗಳೆಡೆಯೆಡೆಯೊಳು ಹೇಳಲ್ಪಡುವದು. ನೂರಿಪ್ಪತ್ತೈದು (೧೨೫) ಯೋಜನಮಗಲಮನುಳ್ಳ ಗ್ರಾಹವತಿ, ದ್ರಹವತಿ, ಪಂಕವತಿ ಈ ಮೂರು ವಿಭಂಗನದಿಗಳು. ತಪ್ತಜಲ, ಮತ್ತಜಲ, ಉನ್ಮತ್ತಜಲ ಇವು ಮೂರು ನದಿಗಳು. ಕ್ಷಾರೋದಿ, ಶಿರೋದ್ಧಿ, ಶ್ರೋತಾ ವಾಹಿನಿ ಈ ಮೂರು ನದಿಗಳು. ಗಂಭೀರಮಾಲಿನಿ, ಫೇನಮಾಲಿನಿ, ಊರ್ಮಿಮಾಲಿನಿ ಇಂತೀ ಹನ್ನೆರಡು ( ೧೨ ) ನದಿಗಳನ್ನು ಪಂಚಗುಣಂ ಮಾಡಿದರೆ ಅರವತ್ತು ( ೬೦ ) ವಿಭಂಗ ನದಿ ಗಳಾಗುವವು.

## ಸೂತ್ರಂ ॥ ಷಟ್ಯುತ್ತರಶತಂ ವಿದೇಹ ಜನಪದಾ: ॥ ೧೮ ॥

ತಾಃ—ಐದು ವಿದೇಹದ ನಾಡುಗಳು ( ೧೬೦ ) ನೂರರವತ್ತಕ್ಕುಮೆಂತೆನೆ—೧ ಕಚ್ಛೆ, ೨ ಸುಕಚ್ಛೆ, ೩ ಮಹಾಕಚ್ಛೆ, ೪ ಕಚ್ಛಕಾವತಿ, ೫ ಆವಾರ್ತ, ೬ ಲಾಂಗಲಾವರ್ತ, ೭ ಪುಷ್ಕಳೆ, ೮ ಪುಷ್ಕಳಾವತಿ ಎಂಬೀ ಎಂಟು ಪೂರ್ವವಿದೇಹದ ಶೀತಾನದಿಯ ಬಡಗಣತಡಿಯ ನಾಡುಗಳು.

೧ ವತ್ಸೆ, ೨ ಸುವತ್ಸೆ, ೩ ಮಹಾವತ್ಸೆ, ೪ ವತ್ಸಕಾವತಿ, ೫ ರಮ್ಯೆ, ೬ ರಮ್ಯಕೆ, ೭ ರಮ ಣೀಯೆ, ೮ ಮಂಗಳಾವತಿ ಎಂಬೀ ಎಂಟು ಜನಪದಂಗಳು ಶೀತಾನದಿಯ ತೆಂಕಣತಡಿಯವು.

೧ ಪದ್ಮೆ, ೨ ಸುಪದ್ಮೆ, ೩ ಮಹಾಪದ್ಮೆ, ೪ ಪದ್ಮಕಾವತಿ, ೫ ಸಖ್ಯೆ, ೬ ನಳಿನೆ, ೭ ಕುಮು ದೆ, ೮ ಸರಿದೆ ಎಂಬೀ ಜನಪದಂಗಳು ಅಪರವಿದೇಹದ ಶೀತಾನದಿಯ ತೆಂಕಣತಡಿಯ ವಿಷ ಯಂಗಳು.

೧ ವಪ್ರೆ, ೨ ಸವಪ್ರೇ, ೩ ಮಹಾವಪ್ರೇ, ೪ ವಪ್ರಕಾವತಿ, ೫ ಗಂದಿ, ೬ ಸುಗಂದಿ, ೭ ಗಂದಿಳೆ, ೮ ಗಂದಮಾಳನಿ ಎಂಬೀ ಎಂಟು ಜನಪದಂಗಳು ಸೀತಾನದಿಯ ಬಡಗಣ ತಡಿಯ ವಿಷಯಂಗಳಿಂತಿಚ್ಛಾಸಿರದ ಇನ್ನೂರ ಹನ್ನೆರಡು ( ೨೨೧೨ )ಯೋಜನಮುಮೊಂದು ಯೋಜನ

ದ ಸಪ್ತಾಷ್ಟಮಭಾಗದಗಲವನ್ನುಳ್ಳ ನಾಡುಗಳು, ಪ್ರದಕ್ಷಿಣಾಕ್ರಮದಿಂ ಮಹಾನದೀತಟ ನಿಕಟವರ್ತಿಗಳು, ತನ್ಮಹೀವಿಳಾಸಿನಿ ಮಣಿದರ್ಪಣೋಪಮಾನಂಗಳುಂ, ಅತಿ ವಿಶಾಲಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪತ್ತನಾದಿಪರಿವೃತಂಗಳುಂ, ಅನೇಕ ನದ್ಯುದ್ಯಾನದೀರ್ಘಿಕಾತಟಾಕ ಸರೋಜಷಂಡಮಂಡಿತಂಗಳುಂ, ಅಖಿಳವಿನೇಯ ಜನಂಗಳಿಂ ಸಂಕೀರ್ಣಂಗಳುಂ, ಅತಿ ಶುಭಗಳಾದ ವಿನಿತಾಖಂಡಂಗಳೊಂದೊಂದು ಆಗುವವು. ಅವುಗಳ ಮಧ್ಯದಲ್ಲಿ ನಲವತ್ತು ಗಾವುದ ನೀಳ, ಮೂವತ್ತಾರು ಗಾವುದದಗಲದ ಪುರಂಗಳು, ಚಕ್ರವರ್ತಿಗಳ ರಾಜಧಾನಿಗಳಾದವರ ಹೆಸರುಗಳನ್ನು ಹೇಳುತ್ತೇನೆ–೧ ಕ್ಷೇಮೆ, ೨ ಕ್ಷೇಮಪುರಿ, ೩ ಅರಿಷ್ಟೆ, ೪ ಅರಿಷ್ಟಪುರಿ, ೫ ಖಡ್ಗಿ, ೬ ಮಂಜೂಷೆ, ೭ ವೋಷಪುರಿ, ೮ ಪುಂಡರೀಕಿಣಿ, ೯ ಸುಸಿಮೆ, ೧೦ ಕುಂಡಳೆ, ೧೧ ಅಪರಾಜಿತೆ, ೧೨ ಪ್ರಭಂಕರಿ, ೧೩ ಅಂಕೆ, ೧೪ ಪದ್ಮಾವತಿ, ೧೫ ಶುಭೆ, ೧೬ ರತ್ನಸಂಚಯಮೆಂಬ ಹದಿನಾರು ಪೂರ್ವವಿದೇಹದ ಕಚ್ಛಾದಿ ವಿಷಯದ ಪುರಂಗಳಾಗುವವು.

೧ ಅಶ್ವಪುರಿ, ೨ ಸಿಂಹಪುರಿ, ೩ ಮಹಾಪುರಿ, ೪ ವಿಜಯಪುರಿ, ೫ ಅರಜೆ, ೬ ವಿರಜೆ, ೭ ಅಶೋಕೆ, ೮ ವಿಶೋಕೆ, ೯ ವಿಜಯೆ, ೧೦ ವೈಜಯಂತಿ, ೧೧ ಜಯಂತಿ ೧೨ ಅಪರಾಜಿತೆ, ೧೩ ಚಕ್ರಪುರಿ, ೧೪ ಖಡ್ಗಪುರಿ, ೧೫ ಅವದ್ಯಪುರಿ ೧೬ ಅಯೋಧ್ಯಾಪುರಮೆಂಬೀ ಪದಿನಾರು (೧೬) ಅಪರವಿದೇಹದ ಪದ್ಮಾವತಿ ವಿಷಯದ ಸಂಬಂದಗಳಂತೆ ಮೂವತ್ತೆರಡು (೩೨) ಜನಪದಂಗಳುಮನಾಪಂಚಮಂದರಂಗಳ್ಗೆ ನಾಮಮೆಂಬುದು ಪಂಚಗುಣಂ ಮಾಡಲು ನೂರರವತ್ತು (೧೬೦) ನಾಡುಗಳುಂ, ಪಟ್ಟಣಗಳುಂ (೧೬೦) ನೂರರವತ್ತಾಗುವವು.

ಕಂದ ॥ ಚರಮೋತ್ತಮ ದೇಹದು- ।
ಧರ ತಪದಿಂದಂ ವಿದೇಹರಪ್ಪುದರಿಂದಾ ॥
ಧರಣಿಗೆ ವಿದೇಹಮೆಂದೊಂ- ।
ದಿರೆ ಸಂದೀನಾಮಮಂತದಕನ್ವರ್ಥಂ ॥ ೨೯ ॥

ಚರರಯ್ನೂರ್ಬಿಲ್ಲು ನಿಡಿಯರ್ ।
ಪರಮಸ್ಥಿತಿ ಪೂರ್ವಕೋಟಿ ಮತ್ತಾಮಹಿಯೋಳ್ ॥
ಪರಸಮಯಮಿಲ್ಲ ಧರ್ಮೇ- ।
ಶ್ವರರಿಂ ಜಿನಧರ್ಮಮೊಂದೆ ಬೆಳಗುತಿಕ್ಕುಂ ॥ ೩೦ ॥

ವಚನ ॥ ಆ ಯೆರಡುಮವಸ್ಥಿತ ಕರ್ಮಭೂಮಿಗಳಲ್ಲಿ ದುಃಷಮ ಸುಷಮಮೆಂಬ ಒಂದೇ ಕಾಲವು ಏಕಸ್ವರೂಪದಿಂದ ಪ್ರವರ್ತಿಸುವದು. ಮತ್ತಲ್ಲಿ–ಚತುರ್ದಶ ಗುಣಸ್ಥಾನಂಗಳುಂ, ಎರಡು ಜೀವಸಮಾಸೆಗಳುಂ, ದಶ (೧೦) ಸಪ್ತಪ್ರಾಣಂಗಳುಂ, ಪರ್ಯಾಪ್ತಿಗಳುಂ, ಚತುಸ್ಸಂಜ್ಞೆಗಳುಂ, ಮನುಷ್ಯಗತಿಯುಂ, ತ್ರಸಕಾಯಮುಂ, ತ್ರಯೋದಶ (೧೩) ಯೋಗವುಂ, ವೇದತ್ರಯವುಂ, ಚತುಃಕಷಾಯವುಂ, ಅಷ್ಟಜ್ಞಾನವುಂ, ಸಪ್ತಸಂಯಮವುಂ, ಚತುರ್ದರ್ಶನವುಂ, ಷಡ್ಲೇಶ್ಯೆಯುಂ, ಭವ್ಯಾಭವ್ಯದ್ವಯವುಂ, ಷಡ್ವಿಧ ಸಮ್ಯಕ್ತ್ವಮಾರ್ಗಣೆಯುಂ, ಸಂಜ್ಞತ್ವವುಂ, ಆಹಾರ ಅನಾಹಾರದ್ವಯವುಂ, ದ್ವಾದಶೋಪಯೋಗವುಮೆಂದಿವು ಸಾಮಾನ್ಯದಿಂದಾವಿದೇಹಮನುಷ್ಯರಿಗೆ ಆಗುವವು.

ಕಂದ॥ ಅಲ್ಲಿ ಪಸವಿಳ್ದಿಡಾಮರ- ।
ಮಲ್ಲಿ ಬರಂ ಮಾರಿಪೆರವುಮಾಕುಲಕಿಗಳಂ ॥
ತಲ್ಲಿ ಪೊರಗಿಳೆಯುನವನಿಪ- ।
ರಲ್ಲಿ ಷಡಂಶಮನೆಕೊಂಡು ಪರಿಪಾಳಿಸುವರ್ ॥ ೩೧ ॥

ವಚನ ॥ ಮತ್ತು ಆ ಕ್ಷೇತ್ರದಲ್ಲಿ ಕುಭೇರನಿಗಿಂತಲೂ ಧನಿಕರಾಗಿರುವ ವಣಿಗ್ವಂಶಜರುಂ, ಸರಸ್ವತಿಯಲ್ಲಿ ಸಮಾನವಾದ ಸಾಕ್ಷರಿಕರುಂ, ಕಾಮದೇವನಿಗೆ ಸಮಾನವಾದ ರೂಪುಳ್ಳ ದಿವ್ಯಪುರುಷರುಂ, ದೇವೇಂದ್ರನ ಹಾಗೆ ಧೊರೆಯೆನಿಸುವ ಮಹಾಭೋಗಿಗಳುಂ, ತೀರ್ಥಕರ ಜನನಿಯರಿಗೆ ಸಮಾನೆಯರಾದ ಶೀಲವತಿಯರುಂ, ರತಿಗಿಂತಲೂ ಅತಿಶಯವೆನಿಸುವ ಯುವತಿಯರುಂ, ದಾನದಲ್ಲಿ ಶ್ರೇಯಾಂಸ ಕುಮಾರನ ಹಾಗಿರುವ ಮಹಾದಾನಿಗಳುಂ, ಚಾರುದತ್ತನಿಗಿಂತಲೂ ಅಗ್ಗಳರಾದ ಮಹಾತ್ಯಾಗಿಗಳುಂ ಎಲ್ಲಾ ಕಾಲಗಳಲ್ಲಿಯೂ ಇರುವರು. ಮತ್ತಂ ಸಕಲಚಕ್ರವರ್ತಿಗಳುಂ, ಅರ್ಧಚಕ್ರವರ್ತಿಗಳುಂ, ಮಂಡಲೀಕ, ಮಹಾಮಂಡಲೀಕ, ಮುಕುಟಬದ್ಧರುಂ, ಯಾವಾಗಲೂ ಕಡಿಮೆಯಾಗುವದಿಲ್ಲ. ಮತ್ತು ಪರಮತೀರ್ಥಂಕರ ಪರಮದೇವರುಂ ಅನಗಾರಕೇವಲಿಗಳುಂ, ಶ್ರುತಕೇವಲಿಗಳುಂ, ಚಾರಣಮುನೀಂದ್ರರುಂ, ಋದ್ಧಿಪ್ರಾಪ್ತರುಂ, ಸರ್ವಾವಧಿಸಂಪನ್ನರುಂ, ಮನಃಪರ್ಯಯಜ್ಞಾನಿಗಳುಂ, ಪರಿಹಾರವಿಶುದ್ಧಿಸಂಯತರುಂ, ಆಹಾರಋದ್ಧಿಪ್ರಾಪ್ತರುಂ, ಅಷ್ಟಾಂಗಮಹಾನಿಮಿತ್ತಜ್ಞಾನರುಂ, ಪರಮಭಾವನಾನಿರಂಜನಸ್ವಶುದ್ಧಾತ್ಮಭಾವನಾನಿಷ್ಠರುಂ, ಭೇದಾಭೇದರತ್ನತ್ರಯಪ್ರಿಯರುಂ, ಎನಿಸುವ ಪರಮ ಯೋಗಿಜನಂಗಳಿಂದ ನಿರಂತರವೂ ಆ ವಿದೇಹವು ಬಹಳವಾಗಿ ಶೋಭಿಸುತ್ತಿರುವದು. ಈ ರೀತಿಯಾಗಿ ಅಲ್ಲಿ ಮೇಲೆ ಹೇಳಿದ ಸಮಸ್ತರುಗಳು ಕುಂದದೆ ತ್ರಿಕಾಲಗಳಲ್ಲಿಯೂ ಇರುವರು.

### ಸೂತ್ರಂ॥ ಸಪ್ತತ್ಯಧಿಕಶತವಿಜಯಾರ್ಧಪರ್ವತಾಃ ॥ ೧೯ ॥

ತಾ:—ನೂರೆಪ್ಪತ್ತು (೧೭೦) ವಿಜಯಾರ್ಧಪರ್ವತಗಳು ಹ್ಯಾಗೆಂದರೆ—ಭರತೈರಾವತ ವಿದೇಹಂಗಳ ಮಧ್ಯಂಗಳು ಪೂರ್ವಾಪರಾಯತಂಗಳಾಗಿ, ಪಂಚವಿಂಶತಿ (೨೫) ಯೋಜನೋತ್ಸೇದದೊಳಂ, ಮೂಲಮಧ್ಯವುಂ ಪರಿಮಿತಳದೊಳು ಕ್ರಮದಿಂದ ಐಯ್ವತ್ತು (೫೦) ಮೂವತ್ತು (೩೦) ಹತ್ತು (೧೦) ಯೋಜನ ವಿಸ್ತಾರದ ಮೇಖಲಾತ್ರಯದಲ್ಲಿ, ವಿದ್ಯಾಧರ ಶ್ರೇಣಿಗಳು, ಪ್ರಥಮಮೇಖಲೆಯಲ್ಲಿರುವವು. ಅಭಿಯೋಗ್ಯದೇವತಾತ್ರಯಂಗಳು, ದ್ವಿತೀಯ ಮೇಖಲೆಯಲ್ಲಿರುವವು. ಶಿಖರದಲ್ಲಿ ಸಿದ್ಧಾಯತನಾದಿ ಕೂಟಗಳಿರುವವು. ಮೊಪೇಳ್ದ ವಿಜಯಾರ್ಧಮನುರ್ಬಿಪೊಡೆರಡು ನದಿಗಳಿಂ ಷಟ್ಖಂಡಮಕ್ಕುಂ.

### ಸೂತ್ರಂ॥ ವೃಷಭಗಿರಯಶ್ಚೇತಿ ॥ ೨೦ ॥

ತಾಃ—ವಿದೇಹಭರತೈರಾವತ ಮಧ್ಯಮ ಮ್ಲೇಚ್ಛಾಖಂಡಗಳಲ್ಲಿ ನೂರೆಪ್ಪತ್ತು (೧೭೦) ವೃಷಭಗಿರಿಗಳಿರುವವು.

ಕಂದ॥ ಶತಯೋಜನಮುನ್ನತಿಯಿಂ- ।
ದತೀತ ಚಕ್ರಿಗಳ ಪೆಸರ್ಗ್ಗಳಿಂದಿಡಿಗಿರಿದೂ- ॥
ರ್ಜಿತವಾಗಿನಿಂದ ವೃಷಭ ।
ಕ್ಷಿತಿಧರಮುಖ್ಯಂಗಳೊಂದು ಗೆಯ್ದೆಸೆದಿಕ್ಕುಂ ॥ ೩೨ ॥

ಕುಲಗಿರಿ ಕುಲನದಿರಜತಾ- ।
ಚಲ ವಕ್ಷಾರಾದ್ರಿಕನಕಗಿರಿ ಜಂಬೂಶಾ- ॥
ಲ್ಮಲಿ ವಿಜೆಯ ವಿಭಂಗನದಿ ।
ಕುಲಮೆಂದಿವನೆಂದುಮದುವುದುಂಗೊಳಿಸಿಕ್ಕುಂ ॥ ೩೩ ॥

ವಚನ ॥ ಮೊದಲು ಪೇಳಿದ ಜಂಬೂದ್ವೀಪಮುಂ ಪ್ರಾಕಾರಾಕಾರದಿಂ ಸುತ್ತಿದ್ದ ವಜ್ರವೇದಿಕೆಯಂ ನೀರ್ಗಾಥಿಕೆಯಂದದಿಂ, ಎರಡುಲಕ್ಷ ( ೨೦೦೦೦೦ ) ಯೋಜನವಿಸ್ತಾರವಾದ ಲವಣಸಮುದ್ರಸುತ್ತಿರ್ದ ಸಮುದ್ರದ ನಟ್ಟನಡುವೊಂದುಲಕ್ಷ ( ೧೦೦೦೦೦ ) ಯೋಜನ ಗುಣ್ಪಂ, ಅನಿತೇ ಪ್ರಮಾಣದ ಮಧ್ಯವಿಸ್ತಾರವುಂ, ದಶಸಹಸ್ರ ( ೧೦೦೦೦ ) ಯೋಜನತಳದಗಲವುಂ, ತತ್ಪ್ರಮಾಣದ ಮುಖವಿಸ್ತಾರವುಂ ಆದ ಮಹಾಪಾತಾಳವುಂ, ನಾಲ್ಕುಂ ದಿಕ್ಕಿನೊಳಂ ನಾಲ್ಕಪ್ಪವು. ಅದಕ್ಕೆ ಪದಿರ್ಮಡಿ ಕಿರಿಯವಪ್ಪ ಕ್ಷುಲ್ಲಕ ಪಾತಾಳಂತರಾಕ್ಷದಿಕ್ಕಿನೊಳಂ ಪ್ರತ್ಯೇಕಂ ನೂರಿಪ್ಪತ್ತೈದಾಗಲಂತು ಸಮಸ್ತ ಪಾತಾಳಂಗಳು ಸಾಸಿರದೆಂಟು ( ೧೦೦೮ ) ಮುರವದಾಕಾರದವರ ತ್ರಿಭಾಗದ ಕೆಳಗಣೊಂದು ಭಾಗದೊಳು ಕೇವಲಂ ವಾಯುವೊಂದೇ ತುಂಬಿರುವದು. ಮೇಗಣೊಂದು ಭಾಗದಲ್ಲಿ ಜಲವೊಂದೇ ತುಂಬಿರುವದು. ನಡುವಣಭಾಗದಲ್ಲಿ ಜಲವುಂ, ವಾಯುವುಂ ಇರುವವು. ಅದೆಂತೆಂದೊಡೆ, ಕೃಷ್ಣಪಕ್ಷದಲ್ಲಿ ಕೆಳಗಣ ವಾಯು ಸಮುದ್ರಮನೊಳಗಣ್ಗೆಬಪ್ಪಿರೇ ಜಳಹಾನಿಯಕ್ಕುಂ ಶುಕ್ಲಪಕ್ಷದಲ್ಲಿ ವಾಯು ಮೇಗಣ್ಗೊತ್ತಿ ಬೀಸಲು ವಾತವೃದ್ಧಿಯಾಗುವದು. ಮತ್ತೆಯುಂ ಪೇಳಪಡುವದು.

ಗಾಹೆ॥ ಹೆಡ್ಡುವರಿಯತಿಯಭಾಗೆ ಣಿಯುದಬ್ಬಾವಜ್ಜಳಂತು ಮಝ್ಝುವ್ಹೀ ।
ಜಳವಾಂ ಜಳವಡ್ಡಿಕಿಣ್ಹೇ ಸುಕ್ಕೇಯಪಾದಸ್ಸಾ ॥ ೧೨ ॥

ಅದುಕಾರಣದಿಂದ ಚಂದ್ರನೊಡತೆ ಸಮುದ್ರಂ ಪೆರ್ಚುಗುಂ, ಕುಂದುಗುಮೆಂಬರೂ, ಅದರಿಂದಲೇ ಶುಕ್ಲಪಕ್ಷದಲ್ಲಿ ಸಮುದ್ರದಲ್ಲಿ ನೀರುವೃದ್ಧಿಯಾಗುವದು. ಕೃಷ್ಣಪಕ್ಷದಲ್ಲಿ ನೀರು ಕಡಿಮೆಯಾಗುವದೆಂದರ್ಥವು.

ಮತ್ತಂ ಧಾತಕೀಷಂಡದ ಪುಷ್ಕರಾರ್ಧದ ಸ್ವರೂಪಮೆಂತೆಂದೊಡೆ.

ಕಂದ॥ ವರಕ್ಷಾರಕುಲಾಚಲ ।
ಶರದಂಬುಜಷಂಡಕುಂಡಮೆಂಬನಿತರವಿ- ॥
ಸ್ತಾರವಿಞಂಮಡಿಗೆಯ್ದುಪ್ಪರ್ವು ।
ಸರಿಸಂಗುಣ್ಪಳ್ಗೆ ಪುಷ್ಕರಾರ್ಧಂ ವರೆಗಂ ॥ ೩೪ ॥

ಗಿರಿಮಾನುಷೋತ್ತರಂ ಪು- ।
ಷ್ಕರಾರ್ಧದೊಳ್ ನರರ್ಗೆವಜ್ರವೇದಿಕೆಯಿಪ್ಪಂ- ॥
ತಿರೆ ಸುತ್ತಿರ್ದತ್ತರೊಳ್ ।
ವರಜಿನಭವನಾಳಿ ನಾಲ್ಕೆ ನಾಲ್ಕುಂ ದೆಶೆಯೊಳ್ ॥ ೩೫ ॥

ಮಂದರಮಯ್ದರೊಳಂ ಜಿನ- ।
ಮಂದಿರಮೆಂಭತ್ತನೂರುವಕ್ಷಾರದೊಳಂ ॥
ಸಂದಿಪಕಾರ ಚತುಷ್ಕದೊ- ।
ಳಂದಿನಕೃತ್ರಿಭಕುಳಾದ್ರಿ ಮೂವತ್ತರೊಳಂ ॥ ೩೬ ॥

ಶತಯುತ ಸಪ್ತತಿರೂಪ್ಯ ।
ಕ್ಷಿತಿಧರದೊಳಮಯ್ದು ಶಾಲ್ಮಲಿಯೊಳಂ ಜಂಬೂ- ॥
ಕ್ಷಿತಿರುಹಪಂಚಕದೋಳ್ ಮು- ।
ನ್ನತಗೃಹಮೋರೊಂದಮೆಲ್ಲವಂ ವೊಂದಿಸುವೆಂ ॥ ೩೭ ॥

ಗಾಹೆ॥ ಲವಣಹರಲೋಯ ಜಿಣಪುರಚತ್ತಾರಿಸಯಾಣಿದೋವಿಹಿಣಾಣು ।
ಬಾವಣ್ಣ ಚಉಚಉಕೋಡಿಸರಕುಂಡಳಿರುಚಕೇ ॥ ೧೩ ॥

ಮಂದರಕುಳದಖ್ಖಾರಿಸುವಮಣುಸುತ್ತರ ರುಪ್ಪಜಂಬುಸಾಮಳಿಸು ।
ಸೀದಿತಿಸತ್ತುಸಯಂಚಉಚಉಸತ್ತರಿಸಯದುಪಣಂ ॥ ೧೪ ॥

ಇದು ಮನುಷ್ಯಲೋಕದ ಕಥನಂ, ಈ ರೀತಿಯಾಗಿ ಮಧ್ಯಮಲೋಕದ ಸ್ವರೂಪವು ನಿರೂಪವಾಯಿತು. ಇಲ್ಲಿಗೆ ವಿಂಶತಿ ( ೨೦ ) ಸೂತ್ರಂ ಸಂದವು.

॥ ಮಧ್ಯಮಲೋಕವರ್ಣನಂ ಸಂಪೂರ್ಣಂ ॥



# ಊರ್ಧ್ವಲೋಕದ ಸ್ವರೂಪವು.



## ಸೂತ್ರಂ ॥ ದೇವಾಶ್ಚತುರ್ನಿಕಾಯಾಃ ॥ ೧ ॥

ತಾ:—ಭವನವಾಸಿಗರುಂ, ವಾನವ್ಯಂತರಿಗರುಂ, ಜ್ಯೋತಿಷ್ಕರುಂ, ವೈಮಾನಿಕರು ಮೆಂದಿಂತು ದೇವರ್ಕಳು ಚತುರ್ಭೇದಮುಕ್ಕುಮೆಂತೆನೆ—ಭವನಜ, ವಾನವ್ಯಂತರಿಗ, ಜ್ಯೋತಿರ ಮರ, ವೈಮಾನಿಕರೆಂದಿಂತು ಚತುರ್ಭೇದಂ, ಸುರರಂತು ಸುಖಗಳ್ಗೆ ತಾವೇ ನೆಲೆಯಾಗಿಕ್ಕುಂ.

ಕಂದ॥ ವನಿತಾ ಬಿಂಬಾದರಚುಂ- ।
ಬನದಿಂ ರಸಂ ಸ್ವರೂಪಲಾವಣ್ಯವಿಲೋ- ॥
ಕನದಿಂ ಕಣ್ಣೂಪುರನಿ-
ಸ್ವನದಿಂ ಕಿವಿತನುಲಸತ್ಕುಚಸ್ಪರ್ಶನದಿಂ ॥ ೩೮ ॥
ನಗೆಮೊಗದಿಂದಂ ಪೊಣ್ಮುವ ।
ಸುಗಂಧದಿಂ ಘ್ರಾಣದಿಚ್ಛೆಯಿಂ ಸಲಿಸುವ ಪ- ॥
ತ್ತುಗೆವೆರಸಿ ಕೂಡಿಬೆರಸುವ ।
ನೆಗಳ್ತೆಯಿಂ ಮನಮನೂನ ಸುಖಮಂ ಪಡೆಗುಂ ॥ ೩೯ ॥

ಮತ್ತಂ—

ಕಂದ॥ ಬಗೆದಲ್ಲಿಗೆ ಬಗೆದಾಗಳೆ ।
ಬಗೆದಂದದ ವಾಹನಂಗಳಾಗಿ ವಿಳಾಸಂ ॥
ಬಗೆಗೊಳೆಸುರಪರನೋಯು- ।
ರ್ಬಗೆಯಿಂದಂ ಶೀಘ್ರಮಾಗಿ ವಾಹನದೇವರ್ ॥ ೪೦ ॥

## ಸೂತ್ರಂ ॥ ಭವನವಾಸಿನೋ ದಶವಿಧಾ: ॥ ೨ ॥

೧ ಅಸುರಕುಮಾರರರುಂ, ೨ ನಾಗಕುಮಾರರರುಂ, ೩ ಸುವರ್ಣಕುಮಾರರರುಂ, ೪ ಉದ ಧಿಕುಮಾರರರುಂ, ೫ ಸ್ತನಿತಕುಮಾರರರುಂ, ೬ ದಿಕ್ಕುಮಾರರರುಂ, ೭ ಅಗ್ನಿಕುಮಾರರರುಂ, ೮ ವಾಯುಕುಮಾರರರುಂ, ೯ ದೀಪಕುಮಾರರರುಂ, ೧೦ ವಿದ್ಯುತ್ಕುಮಾರರರುಮೆಂದಿಂತು ಹತ್ತು ಕುಲಭೇದಂಗಳು.

ಈ ಭವನವಾಸಿಗರಲ್ಲಿ ಅಸುರಕುಮಾರರಿಗೆ—ಚಮರನುಂ, ವೈರೋಚನನುಂ, ನಾಗ ಕುಮಾರರಿಗೆ—ಭೂತಾನಂದನುಂ, ಧರಣಾನಂದನುಂ ಸುವರ್ಣಕುಮಾರರ್ಗೆ—ವೇಣುವುಂ, ವೇಣುಧಾರಿಯುಂ ದೀಪಕುಮಾರರಿಗೆ—ಪೂರ್ಣನುಂ, ವಸಿಷ್ಟನುಂ ಉದಧಿಕುಮಾರರಿಗೆ— ಜಲಕಾಂತನುಂ, ಜಲಪ್ರಭನುಂ ವಿದ್ಯುತ್‌ಕುಮಾರರ್ಗೆ—ಹರಿಷೇಣನುಂ, ಹರಿಕಾಂತನುಂ ಸ್ತನಿತ ಕುಮಾರರ್ಗೆ—ಘೋಷನುಂ, ಮಹಾಘೋಷನುಂ ದಿಕ್ಕುಮಾರರ್ಗೆ—ಅಮಿತಗತಿಯುಂ, ಅಮಿತ ವಾಹನನುಂ ಅಗ್ನಿಕುಮಾರರ್ಗೆ—ಅಗ್ನಿಸಿಖನುಂ, ಅಗ್ನಿವಾಹನನುಂ ವಾತಕುಮಾರ್ಗೆ—ವೈಲಂಬ

ನುಂ, ಪ್ರಭಂಜನನುಂ ಎಂದೀ ವಿಂಶತಿ ( ೨೦ ) ಇಂದ್ರರುಂ ಇಪ್ಪತ್ತು ಪ್ರತೀಂದ್ರರುಂ ಕೂಡಿ ಭವನವಾಸಿಗರಲ್ಲಿ ಚತ್ವಾರಿಂಶ ( ೪೦ ) ಇಂದ್ರರಿರುವರು. ಇಂದ್ರ, ಪ್ರತೀಂದ್ರ, ಲೋಕಪಾಲ, ತ್ರಯತ್ರಿಂಶತ್, ಸಾಮಾನಿಕ, ಅಂಗರಕ್ಷಕ, ಪರಿಷತ್ರಯ, ಆನಿಕ, ಪ್ರಕೀರ್ಣಕ, ಆಭಿಯೋಗ್ಯ, ಕಿಲ್ವಿಷಮೆಂದಿವರು ಭವನವಾಸಿಗರಿಗೂ, ಕಲ್ಪಜರಿಗೂ, ಇರುವರು. ವ್ಯಂತರರಿಗೂ, ಜ್ಯೋತಿಷ್ಕರಿಗೂ, ತ್ರಾಯತ್ರಿಂಶರುಂ ಲೋಕಪಾಲರುಂ ಇರುವದಿಲ್ಲ. ಚಮರೇಂದ್ರನು—ಸೌಧರ್ಮೇಂದ್ರನೊಡನೆ, ವೈರೋಚನೇಂದ್ರನು—ಈಶಾನೇಂದ್ರನೊಡನೆ, ಭೂತಾನಂದನು—ವೇಣುವಿನೊಡನೆ, ಧರಣಾನಂದನು—ವೇಣುಧಾರಿಯೊಡನೆ ಸ್ವಭಾವದಿಂದಂ ಈರ್ಷೆಯನ್ನು ಮಾಡುವರು.

ಅಸುರಾದಿಗಳ ಮಕುಟದ ಚಿಹ್ನವು—೧ ಚೂಡಾಮಣಿ, ೨ ಫಣಿ, ೩ ಗರುಡ, ೪ ಗಜ, ೫ ಮಕರ, ೬ ವರ್ಧಮಾನ, ೭ ವಜ್ರ, ೮ ಸಿಂಹ, ೯ ಕಲಶ, ೧೦ ಅಶ್ವ ಎಂಬೀ ಹತ್ತು ಚಿಹ್ನಗಳಾಗುವವು. ಅಸುರಾದಿ ಧ್ವಜವುಂ, ಚೈತ್ಯವೃಕ್ಷಂಗಳುಂ ಬಂದೇಸಮಾನವು. ಹ್ಯಾಗಂದರೆ—ಅಶ್ವತ್ಥ, ಸಪ್ತಚ್ಛದ, ಶಾಲ್ಮಲಿ, ಜಂಬು, ಹಚ್ಚೆ, ಕಡವು, ನೆಳಲು, ಶಿರೀಸ, ಫಲಾಶ, ರಾಜದ್ರುಮಗಳಿಗೆ ತ್ರಿಶಾಲ, ತ್ರಿಪಿಷ್ಟ, ಚತುರ್ವೀಥಿಗೋಪುರ, ಮಾನಸ್ತಂಭ ನಾನಾರತ್ನತೋರಣೋಪಶೋಭಿತಂಗಳುಂ, ಜಂಬೂಸದೃಶವೃಕ್ಷಂಗಳುಂ, ಅವರ ಮೂಲದಲ್ಲಿ ಪಂಚಶತ ( ೫೦೦ ) ಶರಾಸನೋನ್ನತಂಗಳುಂ, ಪಲ್ಯಂಕಾಸನಂಗಳಾದ ಐದೈದು ಜಿನಬಿಂಬಗಳುಂ, ನಾಲ್ಕುಂ ದಿಕ್ಕಿನೊಳಂ ಸುರಾರ್ಚಿತಂಗಳಾಗಿರುವವು. ಚಮರನಿಗೆ—ಚತುಸ್ತ್ರಿಂಶಲಕ್ಷ ( ೩೪೦೦೦೦೦ ) ಭವನಂಗಳುಂ, ವೈರೋಚನನಿಗೆ—ತ್ರಿಂಶತ್‌ಲಕ್ಷ (೩೦೦೦೦೦೦) ಗಳುಂ, ಭೂತಾನಂದನನಿಗೆ—ಚತ್ವಾರಿಂಶತ್‌ಲಕ್ಷ ( ೪೦೦೦೦೦೦ ) ಗಳುಂ, ಜಲಪ್ರಭನಿಗೆ—ಮೂವತ್ತಾರುಲಕ್ಷ ( ೩೬೦೦೦೦೦ ) ಗಳುಂ, ಹರಿಷೇಣನಿಗೆ—ನಲವತ್ತುಲಕ್ಷ ( ೪೦೦೦೦೦೦ ) ಗಳುಂ, ಮಹಾಘೋಷನಿಗೆ—ಮೂವತ್ತಾರುಲಕ್ಷ ( ೩೬೦೦೦೦೦ ) ಗಳುಂ, ಅಮಿತಗತಿಗೆ—ನಲವತ್ತುಲಕ್ಷ ( ೪೦೦೦೦೦೦ ) ಭವನಂಗಳುಂ, ಅಮಿತವಾಹನನಿಗೆ—ಮೂವತ್ತಾರುಲಕ್ಷ ( ೩೬೦೦೦೦೦ ) ಗಳುಂ, ಅಗ್ನಿಸಿಖನಿಗೆ—ನಲವತ್ತುಲಕ್ಷ ( ೪೦೦೦೦೦೦ ) ಗಳುಂ, ಅಗ್ನಿವಾಹನನಿಗೆ—ಮೂವತ್ತಾರುಲಕ್ಷ ( ೩೬೦೦೦೦೦ ) ಗಳುಂ, ವೈಲಂಬನಿಗೆ—ಐವತ್ತುಲಕ್ಷ ( ೫೦೦೦೦೦೦ ) ಗಳುಂ, ಪ್ರಭಂಜನನಿಗೆ—ನಲವತ್ತಾರುಲಕ್ಷ ( ೪೬೦೦೦೦೦ ) ಭವನಂಗಳುಂ, ಇಂತಿವುಗಳೆಲ್ಲಾ ಕೂಡಿ ಏಳುಕೋಟ ಯೆಪ್ಪತ್ತೆರಡುಲಕ್ಷ ( ೭೭೨೦೦೦೦೦ ) ಗಳು, ಇವುಗಳೆಲ್ಲಾ ರತ್ನಮಯಂಗಳುಂ, ಇಂತಿವೆಲ್ಲಂ ಸಂಖ್ಯಾತಾಸಂಖ್ಯಾತಯೋಜನ ವಿಸ್ತೀರ್ಣಂಗಳುಂ, ತ್ರಿಶತಯೋಜನ ಬಾಹುಲ್ಯಗಳುಂ, ಚತುರಶ್ರಂಗಳುಂ, ವಿತಾನಾಕಾರಂಗಳುಂ, ಮಧ್ಯಪ್ರದೇಶದಲ್ಲಿ ನೂರುಯೋಜನೋತ್ಸೇದಂಗಳ ರತ್ನಪರ್ವತಂಗಳ ಮೇಲೆ, ಅಕೃತಿಮಚೈತ್ಯಾಲಯಂಗಳತಿರಮಣೀಯಂಗಳಾಗಿರುವವು. ಭೂಮಿಯೊಳು ಸಹಸ್ರಯೋಜನಂ ಪೋದಲ್ಲಿ ವ್ಯಂತರರುಂ, ಅಲ್ಪರ್ಧಿಕರುಂ, ದ್ವಿಸಹಸ್ರಯೋಜನದೊಳು ಮಹರ್ಧಿಕರು, ನಲವತ್ತೆರಡುಸಾವಿರ ( ೪೨೦೦೦ ) ಯೋಜನದಲ್ಲಿ ಮಧ್ಯಮಮಹರ್ಧಿಕರು, ಲಕ್ಷಯೋಜನ ಪರ್ಯಂತಂ, ಭವನವಾಸಿಗರಲ್ಲಿ, ಅಸುರರಿಗಂ, ವ್ಯಂತರಿಗರೊಳು—ರಾಕ್ಷಸರ್ಗಂ ಪಂಕಭಾಗದೊಳು, ಉಳಿದವರ್ಗೆಲ್ಲಂ ಖರಭಾಗೆಯೊಳುಂ ಭವನಗಳಿರುವವು, ರಾಜಸಮಾನಮಿಂದ್ರಂ, ಪ್ರತೀಂದ್ರಂ ಯುವರಾಜನೋಳ್ಸಮಾನಂ, ದಿಗಿಂದ್ರಂ ತಂತ್ರಪಾಳರೋಳ್ಸಮಾನಂ,

ತ್ರಯತ್ರಿಂಶತ್ಪುತ್ರರೊಳ್ಸಮಾನಂ, ವೈಮಾನಿಕದೇವರು ಕಳತ್ರದೊಳ್ಸಮಾನಂ, ತನುರಕ್ಷಕ ರಂಗರಕ್ಷಕರ ಸಮಾನಂ, ಪರಿಷತ್ರಯಂ–ಅಭ್ಯಂತರ ಮಧ್ಯಮಬಾಹ್ಯಪರಿವೇಶಕರಸಮಾನಂ, ಆನೀಕಂ ಸೇನೆಯೊಳ್ಸಮಾನಂ, ಪ್ರಕೀರ್ಣಕಂ ಪುರಜನಸಮಾನಂ, ಆಭಿಯೋಗ್ಯದೇವರು ಪರಿಜನಸಮಾನಂ, ಕಿಲ್ಬಿಷಿಕರು ಗಾಯಿಕರಸಮಾನಮಕ್ಕುಮೆಂತೆನೆ—ಇಂದ್ರನಸಮಾನಂ ಪ್ರತೀಂದ್ರಂ, ಸೋಮ, ಯಮ, ವರುಣ, ಕುಬೇರರೆಂದುಂ, ಪೂರ್ವಾದಿದಿಕ್ಕಿನ ನಾಲ್ವರುಂ ಲೋಕಪಾಲದೇವರಾಗುವರು. ತ್ರಯತ್ರಿಂಶದೇವರ್ಮೂವತ್ತಮೂವರೇ ಚಮರಾದಿ ತ್ರಯದವರಿಗೂ, ಶೇಷಕುಲದವರಿಗೂ, ಸಾಮಾನಿಕರ ಸಂಖ್ಯೆ ಅರವತ್ನಾಲ್ಕುಸಾವಿರ (೬೪೦೦೦), ಐವತ್ತಾರುಸಾವಿರ (೫೬೦೦೦) ಐವತ್ತುಸಾವಿರ (೫೦೦೦೦) ಗಳಾಗುವವು, ಅಂಗರಕ್ಷಕರು ಎರಡುಲಕ್ಷದ್ವೈವತ್ತಾರುಸಾವಿರ (೨೫೬೦೦೦) ಮುಂ, ೨೪೦೦೦೦, ೨೦೦೦೦೦, ೨೦೦೦೦೦, ಅಭ್ಯಂತರಪರಿಷತ್ ಪರಿಮಾಣಂ—೨೮೦೦೦, ೨೬೦೦೦, ೬೦೦೦, ೪೦೦೦, ಮಧ್ಯಮಪರಿಷತ್–೩೦೦೦೦, ೨೮೦೦೦, ೮೦೦೦೦, ಬಾಹ್ಯಪರಿಷತ್—೩೨೦೦೦, ೩೦೦೦೦, ೧೦೦೦೦, ೮೦೦೦೦.

ಗಾಹೆ॥ ಸತ್ತೇವಯ ಆಣಿಯಾ ಪತ್ತೇಯಂ ಸತ್ತಸತ್ತ ಖಕ್ಕಜುದಾ ।
ಪಡಮಸ್ಸಸಮಾಣಸಮತ್ತದ್ದುಗುಣಂ ಪರಿಮಖೋಕ್ಕೊಂತಿ ॥ ೧೫ ॥

ಸಪ್ತಾನಿಕದಲಾನಿಕ ಛತ್ತಮ್ಮಸಾಮಾನಿಕ ಸಂಖೇಯಕ್ಕುಂ ಪರಿವಾರಕಕ್ಷೆಯೊಳುಂ ಪ್ರತ್ಯೇಕಮಿರ್ಮಡಿ ಕಡೆಯ ಪರ್ಯಂತಮಕ್ಕುಂ ಆಸುರೇಂದ್ರಾನೀಕಂ, ಮಹಿಷ, ತುರಗ, ಗಜ, ರಥ, ಪದಾತಿ, ಗಂಧರ್ವ ನೃತ್ಯಾನಿಕಮಕ್ಕುಂ, ಶೇಷೇಂದ್ರರಿಗೆ, ನಾವೆ, ಗರುಡ, ಗಜ, ಮಕರ, ಒಂಟೆ, ಅಂಮಾವು, ಸಿಂಹ, ಶಿಬಿಗೆ, ಅಶ್ವಮಿವು ಪ್ರಥಮಾನಿಕಮಕ್ಕುಂ ॥ ಶೇಷಾನಿಕಂ ಮುನ್ನಿನಂತೆಯಕ್ಕುಂ ॥ ಆಭಿಯೋಗ್ಯರುಂ, ಕಿಲ್ಬಿಷರುಂ, ಯಥಾಯೋಗ್ಯ ಸಂಖ್ಯೆಯಕ್ಕುಂ ॥ ಅಸುರ ತ್ರಯದವರ್ಗಂ ಶೇಷರ್ಗಂ ಯಥಾಕ್ರಮದಿಂ ದೇವಿಯ ಸಂಖ್ಯೆ ಐವತ್ತಾರುಸಾವಿರ (೫೬೦೦೦), (೫೦೦೦೦) ಐಯ್ವತ್ತುಸಾವಿರ, ನಲವತ್ನಾಲ್ಕುಸಾವಿರ (೪೪೦೦೦), (೩೨೦೦೦) ಮೂವತ್ತೆರಡುಸಾವಿರಮಕ್ಕುಂ ॥ ವಲ್ಲಭೆಯರು ಷೋಡಶಸಹಸ್ರಂ (೧೬೦೦೦), ದಶಸಹಸ್ರಂ (೧೦೦೦೦), ಚತುಸ್ಸಹಸ್ರಂ (೪೦೦೦), ದ್ವಿಸಹಸ್ರಂ (೨೦೦೦) ಶೇಷದೇವಿಯರು ಬೇರೆ ಬೇರೆ ಆರುಸಹಸ್ರಮುಂ ಮಿಗುಲ್ವಿಸುವರು, ಎಂದೆಂಟು ಸಹಸ್ರ ಪೃಥುಗ್ವಿಕ್ರಿಯೆಯನ್ನುಳ್ಳಯ್ವರಯ್ವರು ಮಹಾದೇವಿಯರಕ್ಕುಂ ॥ ಇಂದ್ರಾದಿಪಂಚಕಕ್ಕಂ ಸಮಾನಮಕ್ಕು, ಅಂಗರಕ್ಷಕ ದೇವಿಯರುನೂರ್ವರು (೧೦೦) ಸೇನಾದೇವರ ದೇವಿಯರು ಐಯ್ವತ್ತು (೫೦) ಚಮರಪರಿಷತ್ರಯದ ದೇವಿಯರು ಇನ್ನೂರೈವತ್ತು (೨೫೦), ಮಧ್ಯಮರಿನ್ನೂರುಂ (೨೦೦), ಬಾಹ್ಯ ನೂರೈವತ್ತುಂ (೧೫೦) ವೈರೋಚನ ಅಭ್ಯಂತರ ಮೂನ್ನೂರುಂ (೩೦೦), ಮಧ್ಯಮ ಇನ್ನೂರೈವತ್ತುಂ (೨೫೦), ಬಾಹ್ಯಮಿನ್ನೂರುಂ (೨೦೦) ನಾಗನಭ್ಯಂತರ ಇನ್ನೂರುಂ (೨೦೦), ಮಧ್ಯಮನೂರರವತ್ತುಂ (೧೬೦), ಬಾಹ್ಯನೂರನಾಲ್ವತ್ತುಂ (೧೪೦), ಗರುಡರಭ್ಯಂತರಂ ನೂರರವತ್ತುಂ (೧೬೦), ಮಧ್ಯಮನೂರುನಲವತ್ತುಂ (೧೪೦), ಬಾಹ್ಯನೂರಿಪ್ಪತ್ತುಂ (೧೨೦), ಬಾಹ್ಯಪರಿಷತ್ರಿನ ದೇವಿಯರು ಶತಂ (೧೦೦), ಸರ್ವನಿಕ್ರುಷ್ಟಕಸುರಂಗಾಗೊಡಂ ಮೂವತ್ತೀರ್ವರ್‌ಗಳು (೩೨) ಸ್ತ್ರೀಯರಕ್ಕುಂ ॥

ನಾನಾವಿಗುರ್ವಣಾ ಶಕ್ತಿಯುಕ್ತೆಯರಾದ ದೇವಿಯರೊಳು ಕೂಡಿ ರಮ್ಯಹರ್ಮ್ಯಾದಿಪ್ರ ದೇಶದೊಳು ಕ್ರೀಡಿಸುವರಾಯುಷ್ಯಾವಸಾನಂಬರಂ, ಮತ್ತಂ ಮುಂಪೇಳ್ದ ವ್ಯಂತರರಿಗರ್ಗೆ ಭವ ನಂಗಳಂ ಪೇಳುವೆನು-ಖರಭಾಗದಲ್ಲಿ ಭೂತರಿಗೆ ಚತುರ್ದಶಸಹಸ್ರ (೧೪೦೦೦) ಭವನಗಳು, ಪಂಕಭಾಗದಲ್ಲಿ ರಾಕ್ಷಸರಿಗೆ ಷೋಡಶಸಹಸ್ರ (೧೬೦೦೦) ಭವನಗಳು, ಶೇಷವ್ಯಂತರರಿಗೆ ವಜ್ರೆಯಿಂದ ಮೇಲೆ ಲಕ್ಷಯೋಜನೋತ್ಸೇದದ ತಿರ್ಯಗ್ಲೋಕದ ವಿಸ್ತಾರದಲ್ಲಿ ಯಥಾಯೋಗ್ಯ ದಿಂದ ಭವನಪುರ ಆವಾಸಗಳಾಗುವವು. ಅವುಗಳಲ್ಲಿ ಉತ್ಕೃಷ್ಟಭವನಗಳು ದ್ವಾದಶಸಹಸ್ರ (೧೨೦೦೦) ಯೋಜನ ವಿಸ್ತಾರಗಳುಂ, ತ್ರಿಶತ (೩೦೦) ಯೋಜನೋತ್ಸೇದವುಂ, ಪಂಚ ವಿಂಶತಿಯೋಜನ ವಿಸ್ತಾರವುಂ, ಕೋಕತ್ರಯೋದಶೋತ್ಸೇದವುಂ ಆಗುವವು. ಪುರಗಳಲ್ಲಿ ಉತ್ಕೃಷ್ಟಪುರಂ ಲಕ್ಷ (೧೦೦೦೦೦) ಯೋಜನ ವಿಸ್ತಾರವಾಗಿರುವವು. ಜಘನ್ಯವೊಂದೇ ಯೋಜನ ವಿಸ್ತಾರವಾಗುವದು. ಆವಾಸಂಗಳಲ್ಲಿ ಜೇಷ್ಠಾವಾಸವಿಸ್ತಾರಂ ದ್ವಾದಶಸಹಸ್ರದಿ ನ್ನೂರು (೧೨೨೦೦) ಯೋಜನ ವಿಸ್ತಾರವುಂ, ಜಘನ್ಯಾವಾಸಂಗಳು ಮೂರುಕ್ರೋಶದಗಲವಿ ರುವವು. ಒಂದೊಂದು ಕುಲಕ್ಕೆ ಇಬ್ಬರಿಬ್ಬರು ಇಂದ್ರರು ಒಬ್ಬೊಬ್ಬ ಇಂದ್ರರಿಗೆ, ಇಬ್ಬರಿಬ್ಬರು ಮಹಾದೇವಿಯರುಂ, ದ್ವಿಸಹಸ್ರ (೨೦೦೦) ವಲ್ಲಭೆಯರುಂ, ಆಗುವರು. ವಿಚಿತ್ರ ವಿಕ್ರಿಯಾಶ ಕ್ತಿಯುಕ್ತೆಯರಾದ ತಂತಮ್ಮದೇವಿಯರ್ವೆರಸು, ಜಲಕ್ರೀಡೆಯುಂ ಸುರಭಿಸುಸ್ಪಶಪುಳಿನಸ್ಥಳ ದೊಳು, ಸ್ಥಳಕ್ರೀಡೆಯುಂ, ಭೂತಪಂಚಕಂ ಅಶೋಕ ಸಪ್ತಚ್ಛದಾದಿ ವನದೊಳು ಪುಷ್ಪಲ ತಾಮಂಟಪದಲ್ಲಿ ವನಕ್ರೀಡೆಯುಂ ರಜತಸುವರ್ಣರತ್ನಮಯ ಕ್ರೀಡಾಗೃಹಗಳಲ್ಲಿ ಅಚಳ ಕ್ರೀಡೆಯುಂ, ವಿಚಿತ್ರರತ್ನಖಚಿತ ಷೋಡಶವರ್ಣ ನಿರ್ಮಿತವಾದ ನೆಲೆಯ ಮಾಡಂಗಳಲ್ಲಿ ಸ್ಫಟ ಕಮಯ ಭಿತ್ತಿಘಟಿತಮಪ್ಪೋವರಿಗಳಲ್ಲಿ ಹಂಸತೂಲದ ಹಾಸಿಗೆಯ ಮೇಲೆ ನಾನಾವಿಧ ಸುರತ ಕ್ರೀಡೆಯುಂ, ವಿನೋದಮಂದಿರದಲ್ಲಿ ಗೀತವಾದ್ಯ ನೃತ್ಯಕ್ರೀಡೆಯುಂ, ಲೆತ್ತ ಚದುರಂಗಂ ಮೊದ ಲಾದ ದ್ಯೂತಕ್ರೀಡೆಯುಂ, ಶಸ್ತ್ರಾಂಗಾರದಲ್ಲಿ ಆಯುಧಕ್ರೀಡೆಯುಂ, ವೈಹಾಳಿ ಪ್ರದೇಶದಲ್ಲಿ ಅಶ್ವ ಗಜಾದಿ ವೈಹಾಳಿ ಕ್ರೀಡೆಯುಂ, ಸುಗಂಧ ಸುಸ್ವಾದು ದಿವ್ಯದ್ರವ್ಯಂಗಳಿಂದ ಅಕೃತ್ರಿಮಚೈತ್ಯಾಲ ಯಗಳಲ್ಲಿ ಅಭಿಷೇಕಾಷ್ಟವಿಧಾರ್ಚನಾದಿ ಕ್ರಿಯೆಗಳಿಂದ ತಮ್ಮ ಆಯುಷ್ಯಾವಸಾನದವರಿಗೂ ಸುಖವನ್ನು ಅನುಭವಿಸುವರು.

ಕಂದ॥ ವರಜಿನಭವನಂ ಭವನಾ-।
ಮರಲೋಕದೊಳೇಳುಕೋಟಿಯುಂ ಮೇಗೆಪ್ಪ-॥
ತ್ತೆರಡೆರಡುಲಕ್ಕೆಯು-।
ಕ್ಕರು ಮುದದಿಂ ವಿನೇಯವಿನತ ಮಸ್ತಕನಪ್ಪೆಂ ॥ ೩೯ ॥

ಗಾಹೆ॥ ಭವಣೇಸುಸತ್ತಕೋಟಿ ಬಾವತ್ತರಿಲಖ್ಖಹೊಂತಿಜಿಣಗೇಹಾ।
ಭವಣಾಮರಿಂತಮಹಿಯಾ ಭವಣಾಸಮಾತಾಣಿವಂದಾಮಿ ॥ ೧೬ ॥

## ಸೂತ್ರಂ॥ ಅಷ್ಟವಿಧವ್ಯಂತರಾಃ ॥ ೩ ॥

ತಾ:—೧ ಕಿನ್ನರರುಂ, ೨ ಕಿಂಪುರುಷರುಂ, ೩ ಮಹೋರಗರುಂ, ೪ ಗಂಧರ್ವರುಂ, ೫ ಯಕ್ಷರುಂ, ೬ ರಾಕ್ಷಸರುಂ, ೭ ಭೂತ, ೮ ಪಿಶಾಚರುಮೆಂದು ವ್ಯಂತರರಲ್ಲಿ ಎಂಟು ವಿಧವು.

೧ ಚೈತ್ಯವೃಕ್ಷಂಗಳುಂ, ೨ ಅಶೋಕೆಯುಂ, ೩ ಸಂಪಗೆಯುಂ, ೪ ಪುನ್ನಾಗವುಂ, ೫ ತುಂಬುರುಂ, ೬ ಆಲವುಂ, ೭ ಮುತ್ತಗವುಂ, ೮ ತುಳಸಿಯುಂ, ಕದಂಬವೆಂದಾ ವ್ಯಂತರರಿಗೆ ಯಥಾಕ್ರಮದಿಂದಾಗುವವು. ಪೃಥ್ವೀಸಾರಂಗಳುಂ, ಜಂಬೂವೃಕ್ಷಾರ್ಧ ಪ್ರಮಾಣಂಗಳವರ ಮೊದಲೊಳು ಪಲ್ಯಂಕಸ್ಥಿತಂಗಳುಂ, ಪ್ರಾತಿಹಾರ್ಯ ಸಮನ್ವಿತಂಗಳುಂ, ತೋರಣಚತುಷ್ಟಯಾಭಿರಾಮಂಗಳಾದ ಜಿನಪ್ರತಿಮೆಗಳು ಪ್ರತಿದಿಕ್ಕಿನಲ್ಲಿಯೂ ನಾಲ್ಕು ನಾಲ್ಕಿರುವವು.

ಮತ್ತಂ ೧ ಕಿಂಪುರುಷರುಂ, ೨ ಕಿನ್ನರರುಂ, ೩ ಹೃದಯಂಗಮರುಂ, ೪ ರೂಪಪಾಳಿಗಳುಂ, ೫ ಕಿನ್ನರಕಿಂಪುರುಷರುಂ, ೬ ಅನಿಂದಿತರುಂ, ೭ ಮನೋರಮರುಂ, ೮ ಕಿನ್ನರೋತ್ತಮರುಂ, ೯ ರತಿಪ್ರಿಯರು ೧೦ ಜೇಷ್ಟರುಮೆಂದು ಕಿನ್ನರರು ಹತ್ತು ಭೇದವಾಗಿರುವರು ॥೧೦॥

೧ ಪುರುಷರುಂ, ೨ ಪುರುಷೋತ್ತಮರುಂ, ೩ ಸತ್ಪುರುಷರುಂ, ೪ ಮಹಾಪುರುಷರುಂ, ೫ ಪುರುಷಪ್ರಭರುಂ, ೬ ಅತಿಪುರುಷರುಂ, ೭ ಅಮರರುಂ, ೮ ಮರುದ್ದೇವರುಂ, ೯ ಮರುತ್ಪಭರುಂ, ೧೦ ಯಶೋವಂತರುಂ, ಎಂದು ಕಿಂಪುರುಷರಲ್ಲಿ ದಶಭೇದವು ॥ ೧೦ ॥

೧ ಭುಜಗರುಂ, ೨ ಭುಜಂಗಶಾಲಿಗಳುಂ, ೩ ಮಹಾಕಾಯರುಂ, ೪ ಸ್ಕಂಧಶಾಲಿಗಳುಂ, ೫ ಮನೋಹರರುಂ, ೬ ಅತಿಕಾಯನುಂ, ೭ ಅಶನಿಜರುಂ, ೮ ಮಹೈಶ್ವರ್ಯರುಂ, ೯ ಗಂಭೀರರುಂ, ೧೦ ಪ್ರಿಯದರ್ಶನರುಂ, ಎಂದು ಮಹೋರಗರಲ್ಲಿ ದಶಭೇದವು ॥ ೧೦ ॥

೧ ಹಾಹಾನಾದರುಂ, ೨ ಹೂಹೂಸಂಜ್ಞರುಂ, ೩ ನಾರದರುಂ, ೪ ತುಂಬುರರುಂ, ೫ ವಾಸವರುಂ, ೬ ಗಂಧರ್ವರುಂ, ೭ ಮಹಾಸ್ವರರುಂ, ೮ ಗೀತರತಿಯುಂ, ೯ ಗೀತಯಶನುಂ, ೧೦ ದೈವತರುಮೆಂದು ಗಂಧರ್ವರಲ್ಲಿ ದಶಭೇದವು ॥ ೧೦ ॥

೧ ಮಾಣಿಭದ್ರನುಂ, ೨ ಪೂರ್ಣಭದ್ರನುಂ, ೩ ಶೈಲಭದ್ರನುಂ, ೪ ಮನೋಭದ್ರನುಂ, ೫ ಭದ್ರಕನುಂ, ೬ ಶುಭದ್ರನುಂ, ೭ ಸರ್ವಭದ್ರನುಂ, ೮ ಮಾನುಷನುಂ, ೯ ಧನಪಾಲನುಂ, ೧೦ ಸುರೂಪಯಕ್ಷನುಂ, ೧೧ ಯಕ್ಷೋತ್ತಮನುಂ, ೧೨ ಮನೋಹರನುಂ ಎಂಬದಾಗಿ ಯಕ್ಷರು ದ್ವಾದಶವಿಧವಾಗುವರು ॥ ೧೨ ॥

೧ ಭೀಮನುಂ, ೨ ಮಹಾಭೀಮನುಂ, ೩ ವಿಘ್ನನುಂ, ೪ ವಿನಾಯಕನುಂ, ೫ ಉದಕರಕ್ಷಕನುಂ, ೬ ರಾಕ್ಷಸರಾಕ್ಷಸನುಂ, ೭ ಬ್ರಹ್ಮರಾಕ್ಷಸರುಮೆಂದು ರಾಕ್ಷಸರಲ್ಲೇಳುವಿಧವು ॥ ೭ ॥

೧ ಸುರೂಪನುಂ, ೨ ಪ್ರತಿರೂಪನುಂ, ೩ ಭೂತೋತ್ತಮಃನುಂ, ೪ ಪ್ರತಿಭೂತನುಂ, ೫ ಮಹಾಭೂತನುಂ, ೬ ಪ್ರತಿಚ್ಛನ್ನನುಂ, ೭ ಆಕಾಶಭೂತನುಂ ಎಂದು ಭೂತರಲ್ಲೇಳುವಿಧವು ॥ ೭ ॥

೧ ಕೂಷ್ಮಾಂಡನುಂ, ೨ ಯಕ್ಷೇಶ್ವರನುಂ, ೩ ರಾಕ್ಷಸನುಂ, ೪ ಸಂಮೋಹನನುಂ, ೫ ತಾರಕನುಂ, ೬ ಅಶುಚಿಯುಂ, ೭ ಕಾಲನುಂ, ೮ ಮಹಾಕಾಲನುಂ, ೯ ಶುಚಿಯುಂ, ೧೦ ಸತಾಳಕನುಂ, ೧೧ ದೇಹನುಂ, ೧೨ ಮಹಾದೇವನುಂ, ೧೩ ತೂಷ್ಣೀಕನುಂ, ೧೪ ಪ್ರವಚನನುಮೆಂದು ಪಿಶಾಚಕುಲವು ಚತುರ್ದಶಭೇದವು ॥ ೧೪ ॥

ಕಿನ್ನರಕುಲಕ್ಕೆ—ಕಿನ್ನರನುಂ, ಕಿಂಪುರುಷನುಂ; ಕಿಂಪುರುಷರಿಗೆ—ಸತ್ಪುರುಷನುಂ, ಮಹಾಪುರುಷನುಂ; ಮಹೋರಗರಿಗೆ—ಅತಿಕಾಯನುಂ, ಮಹಾಕಾಯನುಂ; ಗಂಧರ್ವರಿಗೆ—ಗೀತರ

ತ್ರಿಯುಂ, ಗೀತಯಶಸುಂ; ಯಕ್ಷರಿಗೆ-ಮಾಣಿಭದ್ರನುಂ, ಪೂರ್ಣಭದ್ರನುಂ; ರಾಕ್ಷಸರಿಗೆ-ಭೀಮನುಂ, ಮಹಾಭೀಮನುಂ; ಭೂತರಿಗೆ-ಸುರೂಪನುಂ, ಪ್ರತಿರೂಪನುಂ; ಪಿಶಾಚರಿಗೆ-ಕಾಲನುಂ, ಮಹಾಕಾಲನುಂ ಎಂದು ವ್ಯಂತರರ ಕುಲದಲ್ಲಿ ಪ್ರತೀಂದ್ರರು ಸಹಿತಂ ಮೂವತ್ತೆರಡು ಇಂದ್ರರಾಗುವರು ॥ ೩೨ ॥ ಮೊದಲುಚ್ಚರಿಸಿದವರು ದಕ್ಷಿಣೇಂದ್ರರುಂ, ಬಳಿಕ ಉಚ್ಚರಿಸಿದವರು ಉತ್ತರೇಂದ್ರರು.

ಇವರ ಪೊಳಲುಗಳು—ಅಂಜನಕ, ವಜ್ರಧಾತುಕ, ಸುವರ್ಣ, ಮಣಿಶಿಲೆ, ವಜ್ರಿ, ರಜತೆ, ಇಂಗುಲಿಕ, ಹರಿತಾಲವೆಂದೆಂಟು ದ್ವೀಪಂಗಳ ದಕ್ಷಿಣೋತ್ತರ ದಿಗ್ಭಾಗದಲ್ಲಿಯೂ, ಮಧ್ಯಮಭಾಗದಲ್ಲಿಯೂ ಐದೈದು ಪಟ್ಟಣಗಳಿರುವವು; ಮತ್ತಂ ಆ ದ್ವೀಪದಲ್ಲಿಯೇ ವಲ್ಲಭೆಯರ ಪೊಳಲುಗಳು ಎಂಭತ್ತಾಲ್ಕುಸಾವಿರ (೮೪೦೦೦) ಯೋಜನ ವಿಸ್ತಾರವುಳ್ಳವುಗಳು. ಉಳಿದವಭ್ಯಂತರ ಪೊಳಲ್ಗಳಸಂಖ್ಯಾತ ದ್ವೀಪಂಗಳಲ್ಲಿಯೂ ಸಮುದ್ರದಲ್ಲಿಯೂ ಇರುವವು. ಮತ್ತಂ ಚಿತ್ರೆಯೆಂಬ ಭೂಮಿಯಿಂದ ಮೇಲೆ ಒಂದು ಮೊಳದಲ್ಲಿ ನೀಚೋಪಪಾದಕರುಂ, ಅಲ್ಲಿಂದ ಮೇಲೆ ಹತ್ತುಹತ್ತುಸಾವಿರ ಮೊಳ ಹೋದಲ್ಲಿ ದಿಗ್ವಾಸರುಂ, ಅಂತರನಿವಾಸಿಗಳುಂ, ಕೂಷ್ಮಾಂಡರುಂ, ಅಲ್ಲಿಂದ ಮೇಲೆ ಇಪ್ಪತ್ತಿಪ್ಪತ್ತು ಸಾವಿರ ಮೊಳ ಹೋದಲ್ಲಿ ಉತ್ಪನ್ನರುಂ, ಅನುತ್ಪನ್ನರುಂ, ಪ್ರಮಾಣರುಂ, ಗಂಧರರುಂ, ಮಹಾಗಂಧರರುಂ, ಭುಜಗರುಂ, ಪ್ರೀತಿಕರರುಂ, ಆಕಾಶೋಪಪನ್ನರುಂ, ಇವರಿಗೆ ಕ್ರಮದಿಂ ಮೇಲೆ ಮೇಲೆ ಹಸ್ತಂಗಳು, ೧೦೦೦೦, ೧೦೦೦೦, ೨೦೦೦೦, ೨೦೦೦೦, ೨೦೦೦೦, ೨೦೦೦೦, ೨೦೦೦೦, ೨೦೦೦೦, ೨೦೦೦೦, ೨೦೦೦೦; ಕ್ರಮದಿಂದವರಿಗೆ ಆಯುಷ್ಯಗಳನ್ನು ಹೇಳುತ್ತೇನೆ. ೧೦೦೦೦, ೨೦೦೦೦, ೩೦೦೦೦, ೪೦೦೦೦, ೫೦೦೦೦, ೬೦೦೦೦, ೭೦೦೦೦, ೮೦೦೦೦, ಪಲ್ಯಾಷ್ಟಮಭಾಗೆ ದ್ವಿಪಲ್ಯಚತುರ್ಭಾಗೆ, ತ್ರಿಪಲ್ಯಾರ್ಧ ಕ್ಕೆ ಯಥಾಕ್ರಮದಿಮಕ್ಕುಮಿಂತು—

ಕಂದ ॥ ತ್ರಿವಿಧಂ ವ್ಯಂತರನಿಲಯಂ ।
ಭವನಪುರಾವಾಸ ಭವನಭೇದದಿ ನಿಂಸಂ- ॥
ತವನುಕ್ರಮದಿಂದಂ ಸಂ-।
ದವು ಮದ್ಯಾರ್ಧದಿಶೆಗಧೋಭಾಗಕ್ಕುಂ ॥ ೪೦ ॥

ಮತ್ತಂ ಭವನವಾಸಿಗರೊಳಸುರಕುಮಾರಪೋರಗಾಗಿ ಶೇಷಕುಮಾರರೊಳು ಕೆಲವರಿಗೆ ಭವನಂಗಳು, ಭವನಪುರಂಗಳು, ಕೆಲವರಿಗೆ ಭವನಪುರಾವಾಸಂಗಳುಮೆಂದು ಮೂರುತೆರದ ನಿಲಯುಗಳಾಗುವವು. ಮತ್ತಮಾ ವ್ಯಂತರಾವಾಸಮುಮಸಂಖ್ಯಾತಮವರೊಳೊಂದೊಂದರೊಳೊಂದೊಂದಾಗೆ.

ಕಂದ ॥ ಶತಗುಣಿತಯೋಜನತ್ರಯ ।
ತ್ರಿತಿಹತಸಂಖ್ಯಾತ ರೂಪಭಾಜಿತಲೋಕ:- ॥
ಪ್ರತರ ಪ್ರಮಿತಂ ವ್ಯಂತರ- ।
ತತಿಯಜಿನಾಯತನಮಿಂತಸಂಖ್ಯಾತಂಗಳ್ ॥ ೪೧ ॥

ಗಾಹೆ ॥ ತಿಂಣಿಸಯಜೋಯಣಾಣಂ ಕದಿಹಿದಪದರಸ್ಸಸಂಖಭಾಗಮಿದಿ ।
ಭವಣ್ಣಾಣಂ ಜಿಣಗೇಹೇ ಗಣಣಾತಿದೇಣಮಸ್ಸಾಮಿ ॥ ೧೭ ॥

## ಸೂತ್ರಂ ॥ ಪಂಚವಿಧಜ್ಯೋತಿಷ್ಕಾಃ ॥ ೪ ॥

ತಾ:—ಚಂದ್ರಾದಿತ್ಯಗ್ರಹನಕ್ಷತ್ರ ಪ್ರಕೀರ್ಣಕತಾರಕಿಗಳೆಂದಿವರು ಐದು ಭೇದವಾಗುವರು. ಚಂದ್ರರನಿಬರೆನಿಬರೆ ಸೂರ್ಯರು. ಒಬ್ಬೊಬ್ಬ ಚಂದ್ರನ ಪ್ರತಿಬದ್ಧಗ್ರಹಂಗಳು ಶನೈಶ್ವರ ಪ್ರಭುತಿಗಳೆಂಭತ್ತೆಂಟು ( ೮೮ ), ಕೃತ್ತಿಕಾದಿ ನಕ್ಷತ್ರಗಳಿಪ್ಪತ್ತೆಂಟು ( ೨೮ ), ತಾರಕಾದಿ ವಿಮಾನಂಗಳ ಸಂಖ್ಯೆಯು ಆರುವತ್ತಾರುಸಾವಿರದೊಂಭೈನೂರೆಪ್ಪತ್ತೈದು ಕೋಟಾಕೋಟ (೬೬೯೭೫೦೦೦೦೦೦೦೦೦೦೦೦೦೦) ತಾರಕೆಗಳಾಗುವವು. ಚಿತ್ರೆಯೆಂಬ ಭೂಮಿಯಿಂದ ಮೇಲೇಳುನೂರು ತೊಂಭತ್ತು ಯೋಜನವು ( ೭೯೦ ) ಹೋದಲ್ಲಿ ಪ್ರಕೀರ್ಣಕತಾರಕೆಗಳ ವಿಮಾನಗಳಿರುವವು. ಅಲ್ಲಿಂದ ಮೇಲೆ ಹತ್ತುಯೋಜನದಲ್ಲಿ ಸೂರ್ಯವಿಮಾನಗಳಿರುವವು. ಅದರಿಂದ ೮೦ ಯೋಜನದ ಮೇಲೆ ಚಂದ್ರವಿಮಾನಗಳಿರುವವು. ಅದರಿಂದ ನಾಲ್ಕುಯೋಜನದೆತ್ತರದ ಮೇಲೆ ನಕ್ಷತ್ರಗಳಿರುವವು. ಅದರಿಂದ ನಾಲ್ಕು ಯೋಜನದ ಮೇಲೆ ಬುಧರ ವಿಮಾನಗಳಿರುವವು. ಅಲ್ಲಿಂ ಬಳಿಕ ಮೂರು ಮೂರು ಯೋಜನಗಳಮೇಲೆ ಶುಕ್ರನ ಬೃಹಸ್ಪತಿಯ ವಿಮಾನಂಗಳುಂ ಮಂಗಳ ಶನಿಯ ವಿಮಾನಗಳಿರುವವು. ಇಂತು ನೂರಹತ್ತು ಯೋಜನದ ಬಾಹುಲ್ಯದಿ ಏಕ ರಜ್ಜು ವಿಸ್ತಾರದಿಂದಿರ್ದು ಜ್ಯೋತಿರ್ಲೋಕದ ವಿಮಾನಗಳು ಲೋಕಾಂತ್ಯದ ಘನೋದಧಿಯೆಂಬ ವಾತವಲಯಮಂ ಮುಟ್ಟದಿರ್ದುವಂತಾ ವಿಮಾನಗಳೆಲ್ಲಂ ಗೋಳಕದಳ ಸದೃಶಂಗಳು ಅವುಗಳ ಮೇಲೆ ಜ್ಯೋತಿಷ್ಕರ ಪುರಗಳೊಂದೊಂದು ಶೋಭಿಸುವವು. ಅವುಗಳ ಮಧ್ಯದಲ್ಲಿ ಒಂದೊಂದು ಜಿನಭವನಗಳಿರುವವು. ಆ ವಿಮಾನಗಳ ಪ್ರಮಾಣವು ಹ್ಯಾಗಂದರೆ—

ಚಂದ್ರಸೂರ್ಯರ ವಿಮಾನಂಗಳು ಯೋಜನೈಕಷಷ್ಟಿಭಾಗದಲ್ಲಿ ಐವತ್ತಾರು ಭಾಗವುಂ $\frac{೫೬}{೬೧}$ ಯೋಜನದ ನಾಲ್ವತ್ತೆಂಟು $\frac{೪೮}{೬೧}$ ಭಾಗವಾಗುವವು. ಶುಕ್ರನ ಬಿಂಬವಿಸ್ತಾರಕ್ರೋಶಂ. ಬೃಹಸ್ಪತಿಯ ವಿಮಾನಂ ಕಿಂಚಿನ್ನ್ಯೂನವೊಂದುಕ್ರೋಶಂ. ( ೧ ) ಅಂಗಾರಕ, ಬುಧ, ಶನಿಗಳ ವಿಮಾನಂಗಳು ಕ್ರೋಶಾರ್ಧಂ ½. ನಕ್ಷತ್ರಂಗಳ ಬಿಂಬನೊಂದುಕ್ರೋಶಂ ( ೧ ). ತಾರಕೆಕಿರಿಯವು ಕ್ರೋಶ ಚತುರ್ಭಾಗ ¼. ಮಧ್ಯಂಗಳ್ಗೆ ಕ್ರೋಶಾರ್ಧಂ( ½ ). ಕ್ರೋಶತ್ರಿಭಾಗಂ (¾) ಪಿರಿಯವೊಂದುಕ್ರೋಶಂ ( ೧ ) ಮತ್ತುಂ ಆ ಚಂದ್ರನ ವಿಮಾನದ ಕೆಳಗೆ ಸಲ್ಲುವ ಪರ್ವರಾಹುವಿನ ವಿಮಾನಂ ಕಿಂಚಿನ್ನ್ಯೂನ ಯೋಜನಪ್ರಮಾಣವು. ಆ ವಿಮಾನವು ಚಂದ್ರನ ವಿಮಾನವನ್ನು ಪ್ರಚ್ಛಾದಿಸೆ ಷಣ್ಮಾಸಕ್ಕೊಮ್ಮೆ ಪೌರ್ಣಮಿಯ ಕಡೆಯಲ್ಲಿ ಸೋಮಗ್ರಹಣವಾಗುವದು. ಮತ್ತಂ ನಿತ್ಯರಾಹುವಿನ ವಿಶೇಷಂ ಮೇಣ್, ಸ್ವಭಾವದಿಂ ಮೇಣ್ ಚಂದ್ರನು ಕೃಷ್ಣಪಕ್ಷದ ಪಾಡ್ಯದಿಂದ ಅಮಾವಾದಶಿಯುವರಿಗೂ ದಿನಂಪ್ರತಿ ನಿಜಬಿಂಬದ ಷೋಡಶಭಾಗಮಾತ್ರಂ ಕೃಷ್ಣವರ್ಣನಾಗುವನು. ಇಂತು ಮತ್ತಂ ಸೂರ್ಯಬಿಂಬದಧೋಭಾಗದಲ್ಲಿ ಇರುವ ಅರಿಷ್ಟಯೆಂಬ ರಾಹುವಿನ ವಿಮಾನವು ದಶೋನ ಯೋಜನ ಪ್ರಮಾಣವು. ಸೂರ್ಯನ ವಿಮಾನವು ಪ್ರಚ್ಛಾದಿಸೆ ಆರುತಿಂಗಳಿಗೊಂದುಸಾರಿ ಅಮಾವಾದಸಿಯ ಕಡೆಯಲ್ಲಿ ಸೂರ್ಯಗ್ರಹಣವಾಗುವದು.

ಮತ್ತಮಿಂತೀ ಜ್ಯೋತಿರ್ವಿಮಾನಂಗಳು ಜಂಬೂದ್ವೀಪದ ಮಂದರವನ್ನು ಸಾಸಿರದನೂ ರಿಪ್ಪತ್ತೊಂದು ( ೧೧೨೧ ) ಯೋಜನಾಂತರಮಂ ಮುಟ್ಟದೆ ಪ್ರದಕ್ಷಿಣಕ್ರಮದಿಂ ಮನುಷ್ಯ ಲೋಕದೊಳಗೆ ಚರಿಯಿಸುತ್ತಿರುವವು. ಅಲ್ಲಿಂ ಪೊರಗಣ ವಿಮಾನಂಗಳು ಇದ್ದಲ್ಲಿಯೇ ಇದ್ದು ತೆರಳದೆ ಬೆಳಗುತ್ತಿರುವವು.

ಕಂದ॥ ಈರ್ವರ್ವೊದಲೊಳ್ ಬಳಿಕೀ- ।
ರೀರ್ವರು ಪನ್ನೀರ್ವರತ್ತರಲ್ಲಿಂ ನಾಲ್ವ- ॥
ತ್ತೀರ್ವರುಮತ್ತತ್ತೇಳ್ಪ- ।
ತ್ತೀರ್ವರ್ಪುಷ್ಕರದಳಂಬರಂ ಶಶಿಸೂರ್ಯರ್ ॥ ೪೨ ॥

ಗಾಹೆ॥ ದೊದ್ದೋವಗ್ಗಂ ಬಾರಸಚಾದಾಳ ಬಿಹತ್ತರಿಂದುಯಿಣಂಖಾ ।
ಪುಖ್ಖರದಳೊತ್ತಿಪರರೋ ಅವತ್ತಿಯಾಸಬ್ಬಜೋಯಿಗಣಾ ॥ ೧೭ ।

ಈ ಜಂಬೂದ್ವೀಪದಿಂದ ಪುಷ್ಕರಾರ್ಧದ್ವೀಪದವರಿಗೂ ಈಗ ಹೇಳಿದ ಚಂದ್ರಸೂರ್ಯ ಪ್ರಭೃತಿ ಜ್ಯೋತಿರ್ವಿಮಾನಂಗಳು ತಮ್ಮ ತಮ್ಮ ರಾಶಿಯರ್ಧಂ ದ್ವೀಪಸಮುದ್ರಂಗಳೊಳರ್ಧ ದಲ್ಲಿ ಪಂಥಿಕ್ರಮದಿಂದಿದ್ದು ಚರಿಸುತ್ತಿರುವವು.

ಉಕ್ತಂಚ ॥ ಸಗಸಗಜೋಯಿಗಣದ್ದಂ ಯೆಕ್ಕೇಭಾಗಮ್ಹಿದಿಉರಹಿಣಾಂ ॥
ಯೆಕ್ಕೇಭಾಗೇ ಅದ್ದಂ ಚರತ್ತಿಪತ್ತಿಕ್ಕಮೇಣೇವ ॥ ೧೮॥

ವಚನ ॥ ಎಂಬುದಿಂತೀ ವಿಮಾನಂಗಳಂ ಪೂರ್ವಾದಿ ಚತುರ್ದಿಕ್ಕಿನೊಳಮಿರ್ದಾತು ನಿಂದವು ॥ ವಾಹನದೇವರಪ್ಪರನಿಬರೆಂದರೆ—

ಕಂದ ॥ ಕರಿಂಪುಕ ಕರಿವೃಷಭಭಟಾ ।
ತುರಂಗಮಾಕಾರವಾಹನಾಮರರೇಣ್ಬ- ॥
ಸಿರಮಿರ್ಮಡಿಖರಕರಹಿಮ- ।
ಕರರೊಳಮರ್ಧಾರ್ಧಮಕ್ಕುಮಿತರತ್ರಿಕದೊಳ್ ॥ ॥

ಮತ್ತಮೆಲ್ಲಾ ನಕ್ಷತ್ರದಿಂ ಬಡಗಲು ಅಬಿಜೆ, ತೆಂಕಲು ಮೂಲನಕ್ಷತ್ರ ಮೂರ್ಧ್ವಾಧೋ ಮಧ್ಯಮಭಾಗದೊಳು ಸ್ವಾತಿಯುಂ, ಭರಣಿಯುಂ, ಕೃತ್ತಿಕೆಯುಂ ಇದ್ದು ಚರಿಸುವವು. ಚರಿ ಯಿಸದವಕ್ಕಮೀಕ್ರಮಮಿಂಯುಂಡಮೇ ॥ ಮತ್ತಂ ತಾರಕೆಗಳಂತರಂ ಕೆಲದೊಳೊಂದೊಂದಂ ಕರಮೆ ಸಮೀಪಕ್ಕೆ ಸಾರ್ದಿರ್ದುದಕ್ಕೆ ಕ್ರೋಶಸಪ್ತಮಭಾಗಂ $\frac{೧}{೭}$ ಆಗಲಿರ್ದುದಕಂತರಮ ಯ್ವತ್ತೈದು ( ೫೫ ) ಯೋಜನಂ, ಕರಮೇ ಪಿಂಗಿರ್ದುವಕ್ಕೆ ಸಹಸ್ರ ( ೧೦೦೦ ) ಯೋಜನಂ, ಮನುಷ್ಯಕ್ಷೇತ್ರದಿಂ ಹೊರಗಣ ಚಂದ್ರಾದಿತ್ಯರು ವಲಯಕ್ರಮದಿಂದಿರ್ದು ಬೆಳಗುವ ರೆಂತೆಂದೊಡೆ ॥ ಮಾನುಷೋತ್ತರದಿಂದ ( ಪ್ರಾರಂಭವಾಗಿ ) ದ್ವೀಪಸಮುದ್ರಗಳ ವೇದಿಕೆಗಳ ಮೂಲದಿಂ ತೊಟ್ಟು ಅಯ್ವತ್ತೈವತ್ತುಸಾವಿರ ( ೫೦೦೦೦, ೫೦೦೦೦ ) ಯೋಜನ ಅಂತರದಲ್ಲಿ

ವಲಯಗಳಿರುವವು. ಅಲ್ಲಿಂದತ್ತಲಾಗೆ ಒಂದೊಂದುಲಕ್ಷಯೋಜನ ಅಂತರದಲ್ಲಿರುವವು. ಎಂದು ಹೇಳಲ್ಪಟ್ಟಿತು.

ಗಾಹೆ॥ ಮಣುಸುತ್ತರಸೇಳಾದೋ ವೇದಿಯಮೂಳಾದದಿವ ಉವಹೀಣಂ ॥
ಪಂಣಾಸಸಹಂಸೆಹೀಯಲಂಭೆಲಂಭೇತದೋವಳಯಂ ॥ ೧೯ ॥

ಒಂದೊಂದು ವಲಯದಲ್ಲಿ ಎಷ್ಟು ಸೂರ್ಯರುಗಳು, ಎಷ್ಟು ಚಂದ್ರರುಗಳು ಇರುತ್ತಾರೆಂದು ಕೇಳಿದರೆ, ಪುಷ್ಕರವರದ್ವೀಪಾರ್ಧದ ಪ್ರಥಮವಲಯದಲ್ಲಿ ನೂರನಲವತ್ನಾಲ್ಕು (೧೪೪) ಚಂದ್ರರುಂ, ತತ್ಪ್ರಮಾಣವೇ ಸೂರ್ಯರುಂ ಇರುವರುಂ; ಅತ್ತಣತ್ತಣ ವಲಯಗಳಲ್ಲಿ ನಾಲ್ಕು, ನಾಲ್ಕು ವೃದ್ಧಿ ಆದಿಯತ್ತಣಿಂದಾದಿ ದ್ವಿಗುಣದ್ವಿಗುಣ ಕ್ರಮದಿಂದ ಆಗುವವು. ಈ ಕ್ರಮದಿಂದ ಸಂಖ್ಯಾತಸಂಖ್ಯಾತ ವಲಯಗಳಲ್ಲಿರುವ ಆದಿತ್ಯರ ಅಂತರವುಂ, ಚಂದ್ರರಂತರವುಂ, ಎಷ್ಟೆಂದು ಕೇಳಿದರೆ--

ಕಂದ॥ ಪರಿಧಿಗಳಿಂ ಪರಿಧಿಗೆ ಸಂ- ।
ದರವಿಂದುಗಳಿಂ ವಿಭಾಗಿಸಲುಂ ತಂತಂಮಂ- ॥
ತರಮಕ್ಕುಂ ಪುಷ್ಯದೊಳಂ- ।
ಬುರುಹ ಪ್ರಿಯರಿರ್ಪರಭಿಜೆಯೊಳ್ ಹರಿಣಾಂಕರ್ ॥ ೪೩ ॥

ವಚನ॥ ಮತ್ತ ಮನುಷ್ಯಕ್ಷೇತ್ರದೊಳಗಿರುವ ಆದಿತ್ಯರಂತರವು ಲವಣಸಮುದ್ರದಿಂದ ಪುಷ್ಕರಾರ್ಧದ್ವೀಪದವರಿಗೂ ತಮ್ಮ ತಮ್ಮ ಕ್ಷೇತ್ರದಲ್ಲಿ ಒಂದು ದೆಶೆಯ ಆದಿತ್ಯಬಿಂಬಗಳ ಕ್ಷೇತ್ರಮಂ ತಮ್ಮ ತಮ್ಮ ವಿಷ್ಕಂಭದೊಳು ಕಳೆದು ಉಳಿದುದನ್ನು ಆ ಬಿಂಬಗಳಿಂದಲೇ ಭಾಗಿಸಿದರೆ ಅಂತರವು ಬರುವದು. ತದರ್ಧಪ್ರಮಾಣಮಾಸಣ್ಣವೀದಿಯ ವೇದಿಕೆಯಂತರವು ಬರುವದು. ಮತ್ತಂ ಪುಷ್ಕರಾರ್ಧದವರಿಗೂ ಇಬ್ಬಿಬ್ಬರು ಚಂದ್ರಾದಿತ್ಯರು ಕುರಿತು ಒಂದೊಂದು ಚಾರಕ್ಷೇತ್ರವಿರುವದು, ಅದರ ಪ್ರಮಾಣ ಮೈನೂರಹತ್ತು ( ೫೧೦ ) ಯೋಜನಂ, ಸೂರ್ಯಬಿಂಬಾದಿಕಮಕ್ಕುಂ. ಜಂಬೂ ದ್ವೀಪದ ಆದಿತ್ಯರು ಚಂದ್ರರುಂ ದ್ವೀಪದೊಳಗೆ ನೂರೆಂಭತ್ತು ( ೧೮೦ ) ಯೋಜನವನ್ನು ಚರಿಸುವರು, ಉಳಿದ ಯೋಜನಗಳನ್ನು ಲವಣಸಮುದ್ರದೊಳು ಚರಿಯಿಸುವರು. ಮತ್ತು ಅತ್ತಣ ದಿನಕರ, ನಿಶಾಕರರು, ತಂತಮ್ಮ ಕ್ಷೇತ್ರಗಳಲ್ಲಿ ತೊಳಲುವರು.

ಕಂದ॥ ಪ್ರತಿದಿವಸಮೊಂದೇ ವೀಥಿಯೊ- ।
ಳ್ ತೊಳಲ್ವರಿಂನೆಂದುಗಳ್ತಮಾವಱಿಸಿರೆ ನೂರೆಂ- ॥
ಭತ ನಾಲ್ಕಕ್ಕುಂ ತಾರಾ- ।
ಪತಿಯೊಳ್ ಪದಿನೈದುವೀಥಿ ಜಿನಪತಿಮತದಿಂ ॥ ೪೪ ॥

ತಂತಮ್ಮ ವೀಥಿಯ ವಿಸ್ತಾರಪಿಂಡಮಂ ಚಾರಕ್ಷೇತ್ರದೊಳಗೆ ಕಳೆದೊಡೆ ರೂಪೋನಪದ ಭಂಜಿತಂ ಮಾಡಿದೊಡೆ ವೀಥಿಗಳ ಅಂತರವು ಬರುವದು. ಅವರಲ್ಲಿ ತಂತಮ್ಮ ಬಿಂಬಗಳನ್ನು ಕೂಡಿದೊಡೆ ದಿನಗತಿಗಳಕ್ಕುಂ.

ಕಂದ ॥ಬಿಂಬಾಧಿಕಯೋಜನಯುಗ- ।
ಮಂಬುಜಮಿತ್ರಂಗೆ ದಿವಸಗತಿದಿಶೋನಾ- ॥
ರ್ಧಂ ಬೆರಸಿದಮೂವತ್ತೈದುಂ ।
ಬಿಂಬಮುಮಿಂದುಂಗೀ ಅಂದವಿವೇಲಂಘನೆಗಳ್ ॥ ೪೫ ॥

ವಚನ ॥ ಸರ್ವಾಭ್ಯಂತರ ವೀಥಿಗಳೊಳಿರಿಸಿ ಮಂದರದಾದಿತ್ಯರನ್ತರಮನದರಿಂದರೊಳಂತಾ ದಿವಸಗತಿಯಂ ಕೂಡುತಂ ಪೋಗೆ ವೀಥಿಯೋಳಂತರವನರಿಯೇ ಪಡುಗು॥ ಮತ್ತಂ ಸರ್ವಾಭ್ಯಂತರ ವೀಥಿಯಪ್ರಮಾಣಮರಿದು ಅದರೊಳಗೆ ದಿವಸಗತಿಯ ಪರಿಧಿಯಂ ಗುಣಿಸಿ ತಂದು ಕೂಡುತಂ ಪೋಗೆ ವೀಥಿವೀಥಿಗಳ ಪರಿಧಿಯ ಪ್ರಮಾಣಮರಿಯಲಾಗು ವೆದು ॥ ಚಂದ್ರನಿಗೂ ಈ ಕ್ರಮುವೇ ॥ ಮತ್ತಮಾಪರಿಧಿಗಳು ವಿಷಮಂಗಳಾದೊಡಂ ಸೂರ್ಯಚಂದ್ರರ ಗತಿಯಂ ಕಾಲಂ ಸಮಾನಂಗಳಕ್ಕುಂ॥ಯಾಕೆಂದರೆ—ವೀಥಿಗಳಂ ತರಂ ಪೊರಮಡುತಿರೆ ಶೀಘ್ರಗತಿಪುಗುತಿರೆ ಮಂದಗತಿಯಪ್ಪುದರಿಂ ಗ್ರಹಂಗಳ ಪಲ ವೊಳವಿಂತೀ ಚಂದ್ರಾದಿತ್ಯಗ್ರಹಂಗಳನುಳುಪೆ ಉಳಿದ ನಕ್ಷತ್ರಂಗಳುಂ ತಾರಕಿಗಳುಂ ತಂತಮ್ಮೊಂದೇ ವೀಥಿಯೊಳು ಸಲ್ಲುವವು ॥ ಮತ್ತಮಾದಿತ್ಯನ ದೆಸೆಯಿಂದಲೇ ಹಗಲು, ರಾತ್ರಿಗಳೆಂಬುವವು ಉಂಟಾದವು. ಅವುಗಳ ಪ್ರಮಾಣವು ಕರ್ಕಟಕ ರಾಶಿಯೊಳು ಶ್ರಾವಣಮಾಸದ ಸರ್ವಾಭ್ಯಂತರ ವೀಥಿಯಲ್ಲಿ ಆದಿತ್ಯನಿರಲು ಆಗ ಹಗಲು ಹದಿನೆಂಟು। ರಾತ್ರಿಹನ್ನೆರಡು ಮುಹೂರ್ತವುಂ ಆಗುವದು॥ ಬಳಿಕ ದಿನಂಪ್ರತಿ ಮುಹೂರ್ತದ ಅರು ವತ್ತೊಂದು ಭಾಗದೊಳೆರಡು ಭಾಗವು ವೃದ್ಧಿಸಲೆ ರಾತ್ರಿಯು ಹೆಚ್ಚುವದು ॥ ಮಕರ ರಾಶಿಯಲ್ಲಿ ಮಾಘಮಾಸದೊಳು ಆದಿತ್ಯನು ಸರ್ವಬಾಹ್ಯ ವೀಥಿಯಲ್ಲಿರಲು । ಆಗ ಹಗ ಲು ಹನ್ನೆರಡು ಮುಹೂರ್ತವುಂ । ರಾತ್ರಿ ಹದಿನೆಂಟು ಮೂಹುರ್ತವುಂ ಆಗುವದು । ಬಳಿಕ ಕ್ರಮದಿಂದ ಮುಂದೆ ಹೇಳಿದ ವೃದ್ಧಿಯನಿತನಿತೇ ನಿತ್ಯವೂ ಹೆಚ್ಚುಹೆಚ್ಚಾಗುತ್ತ ಬರಲು ಹಗಲು ವೃದ್ಧಿಯಾಗುವದು ॥ ಮತ್ತಂ ಮಂದರದಭ್ಯಂತರ ಮಧ್ಯಮ ಬಾಹ್ಯ ವೀಥಿಗಳ ಷಷ್ಟಭಾಗದ ಗಿರಿಪರಿಧಿ ಮುನ್ನೂರು ಹದಿನಾರು ( ೩೧೬ ), ಅಭ್ಯಂತರ ಪರಿಧಿ ೩೧೫೦೮೯, ಮಧ್ಯಮಪರಿಧಿ ೩೧೬೧೦೨, ಬಾಹ್ಯಪರಿಧಿ ೩೧೮೩೧೪, ಜಲ ಷಷ್ಟಭಾಗಪರಿಧಿ ೫೨೭೦೪೬ ಅಂತಾ ಪರಿಧಿಗಳ ನಿಷ್ಟಿದಿತ್ಯರಿರ್ದ ಸಮಾನದ ಮುಹೂ ರ್ತದಿನಿರಿದರುವತ್ತರಿಂದೆತ್ತಿದ್ದೈದು ಪರಿಧಿಗಳಲ್ಲಿಯ ತಾಪತಮಂಗಳ ಪ್ರಮಾಣಂ ಬಕ್ಕುಂ ॥ ಅಂತಾ ಪರಿಧಿಗಳ ಕ್ಷೇತ್ರಪ್ರಮಾಣಮನರಿದು ಗಣಿತದಿಷ್ಟಿತದಿಂ ತಂದುಕೊಳ್ ॥

ಮತ್ತಂ ನಕ್ಷತ್ರಂಗಳ ಕ್ಷೇತ್ರಪ್ರಮಾಣವನ್ನು ಹೇಳುತ್ತೇನೆ—ಮೇರು ಮೂಲದಿಂದ ಹಿಡಿದು ಮಾನುಷೋತ್ತರದವರಿಗೂ ಸುತ್ತಿರುವ ಆಕಾಶಮನೊಂದುಲಕ್ಷೆಯು ಪೊಂಬೈಸಾವಿರ ದೆಂಟುನೂರು ಭಾಗಂ ಮಾಡಿ ಮೇರುಗೆ ಪ್ರದಕ್ಷಿಣ ಕ್ರಮದಿಂ ಸುತ್ತಿದ್ದೈವತ್ತಾರು ನಕ್ಷತ್ರ ಗಳಿಗೆ ಯಿವಕಿನಿತೆಂದು ಪಚ್ಚುಗುಡುವುದುಂ ಕುಡೆಪಟ್ಟವೆನಿತೆಂದೊಡೆ । ಅಭಿಜೆಯೆಂಬ ನಕ್ಷ ತ್ರಕ್ಕೆ ಗಗನಖಂಡನಂಗಳಾರುನೂರ ಮೂವತ್ತಾಗುವವು ॥ ೬೩೦ ॥ ಶತವಿಶಾಖೆ । ಭರಣಿ ।

ಆರಿದ್ರೆ । ಸ್ವಾತಿ । ಆಶ್ಲೇಷೆ । ಜೇಷ್ಟೆ । ಯೆಂಬಾರುಂ ಜಘನ್ಯನಕ್ಷತ್ರಗಳಿಗೆ ಪ್ರತ್ಯೇಕ ಪಂಚಾಧಿಕಸಹಸ್ರಂ(೧೦೦೫) ಅಶ್ವಿನಿ । ಕೃತ್ತಿಕೆ । ಮೃಗಶಿರೆ । ಪುಷ್ಯ । ಮಘೆ । ಪುನರ್ವಸು । ಹಸ್ತ, ಚಿತ್ತೆ । ಅನುರಾಧೆ । ಮೂಲಂ । ಪೂರ್ವಾಷಾಢ । ಶ್ರವಣ । ಧನಿಷ್ಠೆ । ಪೂರ್ವಾಭಾದ್ರಪದೆ । ರೇವತಿಯೆಂಬ ಹದಿನೈದು ( ೧೫ ) ॥ ಮಧ್ಯಮ ನಕ್ಷತ್ರಗಳಿಗೆ ದಶೋತ್ತರ ದ್ವಿಸಹಸ್ರ, ಗಗನ ಖಂಡ ( ೨೦೧೦ ) ನ ವಾಗುವದು ॥ ರೋಹಿಣಿ । ವಿಶಾಖೆ । ಪುನರ್ವಸು । ಉತ್ತರೆ । ಉತ್ತರಾ ಭಾದ್ರಪದೆ । ಉತ್ತರಾಷಾಢ । ಎಂಬ ಆರು ಉತ್ಕೃಷ್ಟ ನಕ್ಷತ್ರಗಳಿಗೆ ಪ್ರತ್ಯೇಕಂ ಪಂಚದಶಾಧಿಕ ತ್ರಿಸಹಸ್ರ ( ೩೦೧೫ ) ಮಿವೊಂದು ಭಾಗಂ ಗಗನಖಂಡನಂಗಳೊಂದೆಶೆಯ ಭಾಗದ ವುಮಂ ಕೂಡಿಗೊಡೆಂಒಂದುಲಕ್ಷದ ವೊಂಭತ್ತುಸಾವಿರದ ಎಂಟುನೂರು ( ೧೯೮೦೦ ) ಗಗನ ಖಂಡನಗಳಾಗುವವು । ಇಂತಿವುಗಳನ್ನು ತಮ್ಮ ಮುಹೂರ್ತಗತಿಯ ಗಗನಖಂಡನಂಗಳಿಂ ಭಾಗಂಗೊಂಡಡೆ ಪರಿಧಿಗೆ ಸಂದ ಮುಹೂರ್ತಂಗಳರಿಯಲ್ಪಡುವದು । ಅದು ಹ್ಯಾಗೆಂದರೆ— ಚಂದ್ರನು ಒಂದು ಮುಹೂರ್ತಕ್ಕೆ ಸಾವಿರದೇಳುನೂರರವತ್ತೆಂಟು ( ೧೭೬೮ ) ಗಗನಖಂಡನ ಮಂ ಸಲ್ಲುವನು । ಆದಿತ್ಯಂ ಸಾವಿರದೆಂಟುನೂರ್ಮೂವತ್ತು( ೧೮೩೦ ) ಗಗನಖಂಡನಮಂ ಸಲ್ಲು ವನು ॥ ನಕ್ಷತ್ರಗಳು ಸಾವಿರದೆಂಟುನೂರ್ಮೂವತ್ತೈದು ( ೧೮೩೫ ) ಗಗನಖಂಡಮಂ ಸಲ್ಲು ವವು ॥ ಯಿ ವೊಂದು ನಕ್ಷತ್ರಂಗಳುಂ ಚಂದ್ರನೊಂದು ಮುಹೂರ್ತಕ್ಕೆ ಅರುವತ್ತೇಳು (೬೭) । ಆದಿತ್ಯನಯ್ದುಂ ಮಿಗೆ ಸಲ್ಲುವವು ॥ ರಾಹುದ್ವಾದಶಭಾಗಾಧಿಕಮುಪ್ಪೈಯ್ದಾಕಾಶಭಾಗಂಗಳಂ ಸಲ್ಲುವವು । ಮಿಗೆ ಸಲ್ಲುವಭಾಗಂಗಳಿಂದ ಅಭಿಜಾದಿಗಳ ನಭೋಭಾಗಂಗಳಿಂ ಭಾಗಿಸಿ ಅಭಿ ಜಾದಿ . ನಕ್ಷತ್ರಂಗಳ ಚಂದ್ರಾದಿತ್ಯರಾಹುಗಳಿಪ್ಪ ಮುಹೂರ್ತಂಗಳಕ್ಕುಮವೆನಿತೆಂದೊಡೆ ॥ ಚಂದ್ರನು ಅಭಿಜೆಯೊಳಿಪ್ಪಕಾಲಂ ಮುಹೂರ್ತದರುವತ್ತೇಳು ಭಾಗದೊಳು ಹದಿನೇಳುಭಾಗ $\frac{೧೭}{೬೭}$ಮಧಿಕಮುಪ್ಪೊಂಭತ್ತು ಮುಹೂರ್ತಂ , ಜಘನ್ಯ ನಕ್ಷತ್ರದೊಳು ಹದಿನೈದು ಮುಹೂರ್ತಂ, ಮಧ್ಯಮಂಗಳು ಮೂವತ್ತು ಮುಹೂರ್ತಂ ಮೂರು. ॥ ಉತ್ಕೃಷ್ಟಂಗಳೊಳು ನಲವತ್ತೈದು ( ೪೫ ) ಆಗುವವು ॥ ಮತ್ತಮಾದಿತ್ಯನಿರುವ ಆ ಕಾಲದೊಳು ಅಭಿಜೆಯೊಳು ನಾಲ್ಕು ದಿವಸಮುಮಾರು ಮುಹೂರ್ತಂ ಜಘನ್ಯರಿಕ್ಷೆಗಳಿಪ್ಪತ್ತೊಂದು ಮುಹೂರ್ತಮಧಿಕಮಪ್ಪಾ ರುದಿವಸವು ॥ ಮಧ್ಯಮಗಳು ಹನ್ನೆರಡು ಮುಹೂರ್ತಮಧಿಕವಾದ ಹದಿಮೂರು ( ೧೩ ) ದಿವಸವು । ಉತ್ಕೃಷ್ಟಂಗಳೊಳು ಮೂರು ಮುಹೂರ್ತವಧಿಕವಾದ ಹತ್ತು ದಿವಸಂ । ಇಂತ ಭಿಜೆಯಾದಿಯಾಗಿ ನೂರೆಂಭತ್ಮೂರು ( ೧೮೩ ) ಆಗುವವು ॥ ಉತ್ತರಾಯಣದಿವಸಂಗಳಧಿಕ ದಿನಂಗಳು ಮೂರುಮಿಂತಿಣಂದಯನದ ಗತದಿನಂಗಳು । ದಕ್ಷಿಣಾಯನದ ದಿವಸಂಗಳು ಮನಿತೇ ಪ್ರಮಾಣಂಗಳುಮಂತೆರಡುಮಂ ಕೂಡಿದೊಂದೊಂದು ಸಂವತ್ಸರವು ॥ ಸಂವತ್ಸರ ಪಂಚಕಂ ಯುಗವಾಗುವದು ॥ ಶ್ರಾವಣಮಾಸದ ಕೃಷ್ಣಪಕ್ಷದ ಪಾಡ್ಯದ ಅಭಿಜೆ ನಕ್ಷತ್ರ ದೊಳು ಚಂದ್ರನಿರಲು ಅಂಥಾ ಯುಗವು ಪ್ರಾರಂಭವಾಗುವದು ॥ ಆಷಾಢದ ಪೌರ್ಣಿಮಿಯ ದಿವಸ ಯುಗವು ನಿರ್ವರ್ತನವಾಗುವದು ॥ ಮತ್ತು ನಕ್ಷತ್ರಂಗಳಿರುವ ಸ್ಥಾನಗಳನ್ನು ಹೇಳು ವೆನು ॥ ಅಭಿಜೆಯಾದಿಯಾಗಿ ವೊಂಭತ್ತು ಸ್ವಾತಿಯಾಡಿದು ಫಾಲ್ಗುನಿಯಂ ಚಂದ್ರನ ಪ್ರಥಮ ವೀಥಿಯಾಗುವದು ॥ ಮಘೆಯುಂ । ಪುನರ್ವಸುವುಂ ಮೂರನೆಯ ವೀಥಿಯಲ್ಲಿರುವವು ॥ ರೋಹಿಣಿಯುಂ, ಚಿತ್ತೆಯುಂ ಏಳನೆಯ ವೀಥಿಯಲ್ಲಿರುವವು ॥ ಆರನೆಯ । ಎಂಟನೆಯ । ಹತ್ತ

ನೆಯ ಹಂನೊಂದನೆಯ ವೀಥಿಯಲ್ಲಿ ಕೃತ್ತಿಕೆಯುಂ । ವಿಶಾಖೆಯುಂ । ಅನುರಾಧೆಯುಂ । ಜೇಷ್ಟೆಯುಂ ಯಥಾಕ್ರಮದಿಂದಿರುವವು ॥ ಉಳಿದೆಂಟು ನಕ್ಷತ್ರಂಗಳುಂ ಚಂದ್ರನ ಹದಿನೈದನೇ ವೀಥಿಯಲ್ಲಿರುವವು । ಇಂತೆಂಟು ವೀಥಿಯಲ್ಲಿಯೂ ನಕ್ಷತ್ರಗಳಿರುವವು ॥ಏಳರೊಳಿಲ್ಲ॥೩॥

ಕಂದ॥ಖರಬಾಣಹುತಾಶನ ಚಂ- ।
ದ್ರರಸಾಗ್ನಿಷಡಬ್ಧಿನಯನನಯಂ ಪಂಚಮುಮಂ ॥
ಹರಿಣಾಂಕಹಿಮಗುಗತಿರುತು ।
ಸುರನಿಧಿಜಳನಿಧಿಪಯೋಧಿಶಿಖಿಹುತವಹಮಂ ॥ ೪೬ ॥

ವ್ರತಮುಂ ರುದ್ರಸಮನ್ವಿತ ।
ಶತಮುಂ ಯುಗಯುಗಳಮುಂ ಚತುರ್ಗುಣವಸುವುಂ॥
ವೃತತತಿಯುಂ ಪುರಮುಂ ಮುನಿ- ।
ಹತಗತಿನಕ್ಷತ್ರಕೃತ್ತಿಕಾಖ್ಯಾಮೊದಲ್ಕಿಂ ॥ ೪೭ ॥

ಖರ ೬ । ಬಾಣ ೫ । ಹುತಾಶನ ೩ । ಚಂದ್ರ ೧ । ರಸ ೬ । ಅಗ್ನಿ ೩ । ಷಡಾಬ್ಧಿ ೬ । ನಯನ ೪ । ೨ ನಯಂ ೨ । ಪಂಚಕಮುಂ ೫ । ಹರಿಣಾಂಕ ೧ । ಹಿಮಗು ೧ । ಗತಿ ೪ । ಋತು ೬ । ಸುರ ೩ । ನಿಧಿ ೯ । ಜಲನಿಧಿ ೪ । ಪಯೋಧಿ ೪ । ಶಿಖಿಹುತ ೩ । ವಹಮಂ ೩ । ವ್ರತವುಂ ೫, ರುದ್ರಸಮನ್ವಿತಶತಮುಂ ೧೧೧, ಯುಗಂ ೨, ಯುಗಳಮುಂ ೨, ಚತುರ್ಗುಣವಸುವುಂ ೩೨, ವೃತತತಿಯುಂ ೫, ಪುರಮುಂ ೩, ಮುನಿಹತಗತನಕ್ಷತ್ರಗಣೆ ಕೃತ್ತಿಗೆ ಮೊದಲಿಂ॥

ಈ ಇಪ್ಪತ್ತೆಂಟು ಸ್ಥಾನದಿಂ ಬೀಸಣಿಗೆಯುಂ । ಸಕಟಾಕೃತಿಯುಂ । ಮೃಗದ ಶಿರಮುಂ । ದ್ವೀಪಮುಂ । ತೋರಣವುಂ । ಛತ್ರಮುಂ । ವಲ್ಮೀಕಮುಂ । ಗೋಮೂತ್ರವುಂ । ಶರಮುಂ । ಯುಗಮುಂ । ಹಸ್ತಮುಂ । ಉತ್ಪಲಮುಂ । ದೀಪಮುಂ । ಅಡಿಗರಣೆಯುಂ । ಹಾರಮುಂ । ವೀಣಾಶೃಂಗಮುಂ । ವೃಶ್ಚಿಕಮುಂ । ದುಃಕೃತವಾಪಿಯುಂ । ಹರಿಕುಂಭಮುಂ । ಗಜಕುಂಭವುಂ, ಮುರಜನುಂ, ಪಾರುತಿರ್ದಪಕ್ಷಿಯುಂ, ಸೇನೆಯುಂ, ಗಜಪೂರ್ವಗಾತ್ರಮುಂ, ಅಪರತ್ರಮುಂ, ನಾವೆಯುಂ, ಅಶ್ವಮುಖವುಂ, ಚುಲ್ಲಿಪಾಷಾಣವುಂ, ಯೆಂದಿನಂ ಪೋಲುವವು.

ಪಂಚವಿಧವಾದ ಜ್ಯೋತಿಷ್ಕರಾಯುಷ್ಯಪ್ರಮಾಣಗಳೆಷ್ಟಂದರೆ—ಚಂದ್ರರ್ಗೆ ಲಕ್ಷವರ್ಷಮಧಿಕವಾದ ಪಲ್ಯಂ ॥ ೧ ।' ಸೂರ್ಯರ್ಗೆ ಸಹಸ್ರಸಂವತ್ಸರಾದಿಕಪಲ್ಯಂ । ಶುಕ್ರರ್ಗೆ ಶತಾಧಿಕ ಪಲ್ಯಂ । ಬೃಹಸ್ಪತಿಗಳಿಗೆ ಪಲ್ಯವೊಂದೇ । ಬುಧಾಂಗಾರಕ ಶನೈಶ್ವರರಿಗೆ ಪಲ್ಯಾರ್ಧಂ $\frac{1}{2}$ । ತಾರೆಗಳಿಗೆ ಉತ್ಕೃಷ್ಟಪಲ್ಯೋಪಮದ ಚತುರ್ಥಭಾಗಂ $\frac{1}{4}$ । ಜಘನ್ಯಮಷ್ಟಮಭಾಗಂ $\frac{1}{8}$ ॥ ಇಂತೀ ಜ್ಯೋತಿರ್ನಿಕಾಯಾಮರರ ಆಯುಷ್ಯಪ್ರಮಾಣವು । ಮತ್ತು ದೇವಿಯರಾಯುಷ್ಯವು ತಂತಂಮ ದೇವರ ಅರ್ಧಪ್ರಮಾಣವು ॥

ದೇವಿಯರು ಎಷ್ಟೆಷ್ಟೆಂದರೆ—ಯಲ್ಲರಿಗಿಂತಲೂ ಕನಿಷ್ಟನಾದ ದೇವನಿಗೂ । ದೇವಿಯರು ೩೨ ಮೂವತ್ತೆರಡೇಯೆಂದೊಡೆ ಮಹರ್ಧಿಕರಿಗೆ ಹೇಳುವದು॥ ಇಂತೀ ಪಂಚವಿಧವಾದ ಜ್ಯೋತಿಷ್ಕ ದೇವರ ವಿಮಾನಂಗಳೆಲ್ಲಂ ಗಣನಾತೀತಂಗಳು । ಅವರೊಳೊಂದೊಂದು ಅದರೊಳೊದೊಂದಾದೆಸೆಯೇ ॥

ಕಂದ॥ ಶತಯುಗಷಟ್ಪಂಚಾಶ- ।
ತ್ಕೃತರಾಂಗುಲವರ್ಗಗುಣಿತಸಂಖ್ಯಾತ ॥
ಹೃತಪ್ರತರಪ್ರಮಿತಂಗಳು ।
ಗತರಂಗಳ ಜಿನಭವನಮಿವುಮಸಂಖ್ಯಾತಂಗಳ್ ॥ ೪೮ ॥

ಗಾಹೆ ॥ ಬೆಸದವಯಚ್ಛಪ್ಪಣ್ಣಂ ಗುಣಕದಿಹಿವಪದರಸಸಂಖಭಾಗಮಿದೆ ॥
ಜ್ಯೋಯಿಸಜಿಣಿಂದಗೇಹೆ ಗಣಣಾತಿದೇಣಮಸ್ಸಾವಿಮಾ ॥ ೨೦ ॥

ಮತ್ತಂ ಭವನವಾಸಿಗದೇವರ್ಮೊದಲಾದೆಲ್ಲಾ ದೇವರ್ಗಾಯುಷ್ಯ ಉತ್ಸೇದಗಳು ಹ್ಯಾಗೆಂದರೆ—

ಕಂದ॥ ಪರಮಾಯುಷ್ಯಂ ವ್ಯಂ- ।
ತರಸುರರ್ಗೆ ಪಲ್ಯೋಪಮಂ ಕು- ॥
ಮಾರರ್ಗೆದಶಗುಣ ।
ವರುಷಸಹಸ್ರಂ ಜಘನ್ಯಮಿಂತುತ್ಕೃಷ್ಟಂ ॥ ೪೯ ॥

ಭವನವಾಸಿಗರೊಳಸುರರ್ಗೆ ವೊಂದುಸಾಗರೋಪಮಂ । ನಾಗರ್ಗೆ ಪಲ್ಯೋಪಮಂಗಳ್ ಮೂರು ॥ ೩ ॥ ಗುರಡರ್ಗೆರಡೂವರೆ (೨½) । ದ್ವೀಪರ್ಗೆರಡು (೨) । ಉಳಿದ ಕುಮಾರರ್ಗೆಲ್ಲಂ ವೊಂದೂವರೆ (೧½) । ಪಳಿತೋಪಮಮುಕ್ಕುಂ ॥ ಉತ್ತರೇಂದ್ರರ್ಗೆ ಸಾಧಿಕ (೧೦೦ ಹೆಚ್ಚು) ಪಲ್ಯಂಗಳು । ಮತ್ತಂ ಇಂದ್ರಪ್ರತೀಂದ್ರಲೋಕಪಾಲತ್ರಾಯತ್ರಿಂಶತ್ಸಾಮಾನಿಕರೆಂಬೈವರುಂ ಸಮಾನಾಯುಷ್ಯರುಂ । ಮತ್ತಂ ದೇವಿಯರಾಯುಃಪ್ರಮಾಣಮೆನಿತೆಂದೊಡೆ ॥ ಚಮರನೊಳಸುರೇಂದ್ರನೊಳೆರಡೂವರೆ ಪಳಿತೋಪಮಂ । ವೈರೋಚನನೊಳು ಮೂರು ಪಳಿತೋಪಮವುಂ । ನಾಗೇಂದ್ರರೋಳ್ಪಲ್ಯಾಷ್ಟಮಭಾಗಂ । ಗರುಡರೋಳ್ಪೂರ್ವಕೋಟಿತ್ರಯಂ । ಶೇಷರೊಳು ವರುಷಕೋಟಿತ್ರಯಂ (೩೦೦೦೦೦೦೦) । ಮತ್ತಂ ಚಮರ, ವೈರೋಚನ, ಗರುಡರ ಶೇಷರ ಅಂತ ಮಧ್ಯ ಬಹಿರ್ಭೇದಮಪ್ಪ ಮೂರುಂ ತೆರದ ಪರಿಷದೇವರೊಳಗಣವರ್ಗೆ ಸಾರ್ಧಪಲ್ಯಂ । ತ್ರಿಪಲ್ಯ । ಪಲ್ಯಾಷ್ಟಮಭಾಗಂ । ಪೂರ್ವಕೋಟಿತ್ರಯಂ (೩) ಪ್ರಮಿತಾಯುಷ್ಯರಾಗುವರು ॥ ನಡುವಣವರು ದ್ವಿಪಲ್ಯಸಾರ್ಧ । ದ್ವಿಪಲ್ಯಷೋಡಶಭಾಗೆ । ಪೂರ್ವಕೋಟಿತ್ರಯ । ವರುಷಕೋಟಿದ್ವಯ (೨೦೦೦೦೦೦೦) ಜೀವಿಗಳು ॥ ಪೊರಗಣತಟ್ಟಿಯವರು ಸಾರ್ಧದ್ವಿಪಲ್ಯ । ಪಲ್ಯದ್ವಾತ್ರಿಂಶಮಭಾಗಪೂರ್ವಕೋಟಿ । ವರ್ಷಕೋಟಿ ಪ್ರಮಾಣಮಾಯುಷ್ಯಮನೊಡೆಯರು । ಮತ್ತಮಂಥಾ ಚಮರವೈರೋಚನರ । ನಾಗರ । ಗರುಡರ । ಶೇಷರ । ಸೇನಾನಾಯಕರುಂ । ಆತ್ಮರಕ್ಷಕರುಂ । ಪಲ್ಯಸಾರ್ಧಪಲ್ಯೋಪಮ, ಪೂರ್ವಕೋಟಿ, ವರ್ಷಕೋಟಿ, ಲಕ್ಷವರ್ಷಪ್ರಮಾಣಕಾಲ ಬಾಳುವರು ॥ ಮತ್ತಂ ಅವರ ಸೇನೆಯ ನಾಯಕರ ದೇವರ್ಗೆ ಆಯುಷ್ಯಪಲ್ಯಾರ್ಧಮುಂ । ಶತಾಧಿಕಪಲ್ಯಾರ್ಧಮುಂ । ವರುಷಂಗಳು ಕೋಟಿಗಳುಂ ಲಕ್ಷೆಯುಂ ಲಕ್ಷಾರ್ಧವುಂ ಆಗುವವು ॥

ಕಂದ॥ ಈರೈದೆಧನುಗಳ ಕು- ।
ಮಾರರ್ಗಂ ವ್ಯಂತರರ್ಗಮಾಜ್ಯೋತಿಷ್ಕ- ॥
ರ್ಗಾರಯ್ಯುಲುಕೇಳೆಸೆವ ।
ಶರೀರೋಚ್ಛ್ರುತಿಪಂಚವರ್ಗಮಸುರಾಮರರೊಳ್ ॥ ೫೦ ॥

ಆಹಾರೋಚ್ಛ್ವಾಸಮೆನಿತೆಂದೊಡೆ ||

ಕಂದ|| ಮನದೊಳ್ ಸಾಸಿರವರ್ಷ- |
ಕ್ಕನತಿಶಯಾಶನಮನೋರ್ಮೆನೆನೆವನ್ನುಯ್ವ- ||
ರ್ದಿನಪಂಚಪ್ಪುತ್ರಿತಯಕ್ಕೆ |
ಸುಖಮಂ ಪೊಗಳ್ವೆನೇನಸುರಾಮರರಾ || ೫೧ ||

ಮುಂದಲ ಮೂರೆಡೆಯ ಮಾಹಾರಕಾಲ ದಿನ ಹನ್ನೆರಡುವರೆಯುಂ | ಹನ್ನೆರಡುಂ | ಏಳುವರೆಯುಮಕ್ಕುಂ || ಉಚ್ಛ್ವಾಸಕಾಲಮುಹೂರ್ತಗಳು | ಹನ್ನೆರಡೂವರೆಯುಂ (೧೨½) ಏಳುವರೆಯುಂ ( ೭½ ) ಆಗುವವು || ವ್ಯಂತರರು ಐದುದಿನಕ್ಕೊಂದುಸಾರಿ ಆಹಾರವನ್ನು ನೆನೆಯುವರು | ಐದು ಮುಹೂರ್ತಗಳಿಗೆ ಒಂದುಸಾರಿ ಉಚ್ಛ್ವಾಸವನ್ನು ಬಿಡುವರು || ಈ ರೀತಿಯಾಗಿರುವ ಭವನವಾಸಿಗರ ಭವನಂಗಳೆಲ್ಲಿರುವವೆಂದೊಡೆ || ಭೂಮಿಯಿಂದ ಕೆಳಗೆ ಭೂತರೆಂಬ ವ್ಯಂತರಭವನಂಗಳು ಸಾವಿರಯೋಜನದವರಿಗೂ ಇರುವವು | ಭವನವಾಸಿಗರಲ್ಲಿ ಅಲ್ಪರ್ಧಿಕರ ಭವನಂಗಳು ಎರಡುಸಾವಿರ ( ೨೦೦೦ ) ಯೋಜನ ದೂರ ಹೋಗುವವರಿಗೂ | ಮಹರ್ಧಿಕರ ಭವನಂಗಳು ನಲವತ್ತೆರಡುಸಾವಿರ ( ೪೨೦೦೦ ) ಯೋಜನ ಹೋಗುವವರಿಗೂ | ಮಧ್ಯಮಮಹರ್ಧಿಕರ ಭವನಂಗಳು ಒಂದುಲಕ್ಷಯೋಜನ ದೂರ ಹೋಗುವವರಿಗೂ ಇರುವವು || ಅಂತವರೊಳು ಅಸುರಾಮರರ ಭವನಂಗಳು ರತ್ನಪ್ರಭೆಯ ಖರಭಾಗದಿಂ ಕೆಳಗಿರುವ ಪಂಕಭಾಗದೊಳಲ್ಲದಿಲ್ಲ | ಉಳಿದೊಂಭತ್ತು ಕುಮಾರರ ಭವನಂಗಳು ಖರಭಾಗಗಳಲ್ಲಿರುವವು || ಅಂಥಾ ಭವನಂಗಳ ಪ್ರಮಾಣಮೆನಿತೆಂದೊಡೆ—

ಕೆಲವಸಂಖ್ಯಾತಯೋಜನ ಪ್ರಮಾಣಂಗಳು ಅವುಗಳೆಲ್ಲಾ ಚತುರಸ್ರಂಗಳು | ನಾನಾರತ್ನರಚಿತಂಗಳು | ಯೋಜನ ಶತತ್ರಯಬಾಹುಲ್ಯಂಗಳು ಮಧ್ಯಗತ ಶತಯೋಜನೋತ್ತುಂಗೈಕೈಕಕೂಪೋಪಶೋಭಿತಂಗಳು | ಗಣನೆಯಿಂದೇಳುಕೋಟಿಯುಂ | ಎಪ್ಪತ್ತೆರಡುಲಕ್ಷಗಳಾಗುವವು | ಅಲ್ಲಿ ಮೂವತ್ನಾಲ್ಕುಂ | ನಲವತ್ನಾಲ್ಕುಂ | ಮೂವತ್ತೆಂಟುಂ | ಮೂರುಸ್ಥಾನದೊಳು ನಲವತ್ತುಂ | ಕಡೆಯೊಳಯ್ವತ್ತುಲಕ್ಷ ಭವನಂಗಳಾಗುವವು || ಆ ಭವನಂಗಳಿಗೆ ಚಮರ, ಭೂತಾನಂದ ಪ್ರಭೃತಿಗಳಾದ ದಕ್ಷಿಣೇಂದ್ರರು ಅಧಿಪತಿಗಳು. ಮತ್ತಂ ಮೂವತ್ತುಂ, ನಾಲ್ವತ್ತುಂ, ಮೂವತ್ನಾಲ್ಕುಂ, ಮೂರು ಸ್ಥಾನದೊಳು ಮೂವತ್ತಾರುಂ, ಕಡೆಯೊಳು ನಲವತ್ತಾರುಲಕ್ಷ ಭವನಂಗಳಿಗೆ ವೈರೋಚನ, ಧರಣಾನಂದ ಪ್ರಭೃತಿಗಳಾದ ಉತ್ತರೇಂದ್ರರು ಅಧಿಪತಿಗಳು.

ಗಾಹೆ|| ಚೊತ್ತೀಸಚ್ಚವುದಾಳಂ ಅಡತೀಸಂ ಛಸುವಿತಾಳಪಂಣಾಸಂ ||
ಚಉಚಉವಿಹೀಣತಾಣೆಯಯಿಂದಾಣಂ ಭವಣಲಖ್ಖಾಣಿ || ೨೧ ||

ಅಂಥಾ ಭವನಂಗಳೊಂದೊಂದರಲ್ಲಿ ಒಂದೊಂದು ಜಿನಭವನಂಗಳು ಶೋಭಿಸುತ್ತಿರುವವು.

ಕಂದ|| ವರಜಿನಭವನಂ ಭವನಾ- |
ಮರಲೋಕದೊಳೇಳು ಕೋಟಿಯುಮತ್ತೆಪ್ಪ- ||
ತ್ತೆರಡಕ್ಕುಂ ಲಕ್ಕೆಯುವ- |
ಕ್ಕುರುಮುದದಿಂ ವಿನಯವಿನತಮಸ್ತಕನಪ್ಪೆಂ || ೫೨ ||

ಮತ್ತು ಹಿಂದೆ ಹೇಳಿದ ಪಂಚವಿಧ ಜ್ಯೋತಿಷ್ಕರು ಮನುಷ್ಯಕ್ಷೇತ್ರದಲ್ಲಿ ಸುದರ್ಶನ ಮೇರುವನ್ನು ಪ್ರದಕ್ಷಿಣೆ ಮಾಡುವರು, ಅವರ ಗಮನವಿಶೇಷದಿಂದ ದಿನ, ವಾರ, ನಕ್ಷತ್ರ, ಯೋಗ, ಕರಣ, ಮುಹೂರ್ತಾದಿಗಳು ಶುಭಾಶುಭಸೂಚಕಗಳಾಗುವವು ಅದು ಹ್ಯಾಗೆಂದರೆ— ಆದಿತ್ಯ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿಗಳೆಂದಿವೇಳುಂ ವಾರಗಳು; ಪಾಡ್ಯ, ಬಿದಿಗೆ, ತದಿಗೆ, ಚವುತಿ, ಪಂಚಮಿ, ಷಷ್ಠಿ, ಸಪ್ತಮಿ, ಅಷ್ಟಮಿ, ನವಮಿ, ದಶಮಿ, ಏಕಾದಶಿ, ದ್ವಾದಶಿ, ತ್ರಯೋದಶಿ, ಚತುರ್ದಶಿ, ಪೌರ್ಣಮಿ, ಅಮಾವಾದಶಿ; ಯಕ್ಷ, ವೈಶ್ವಾನರ, ರಕ್ಷ, ನದ್ಯೃತ, ಪನ್ನಗ, ಅಸುರ, ಸುಕುಮಾರ, ಸಿತಾ, ವಿಶ್ವಮಾಲಿ, ಚಮರ, ವೈರೋಚನ, ಮಹಾ ವಿದ್ಯಾ, ಮಾರ, ವಿಶ್ವೇಶ್ವರ, ಪಿಂಡಾಶಿಯೆಂದು ತಿಥಿದೇವತಾಪಂಚದಶಮುಂ (೧೫); ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾ ಎಂದು ಪಾಡಿವವಾದಿಯಾಗಿ ತಿಥಿಪಂಚಕಂಗಳು ‖ ೫ ‖

ಶ್ಲೋ ‖ ನಂದಾ ಭದ್ರಾ ಜಯಾ ರಿಕ್ತಾ ಪೂರ್ಣಾ ಚ ತಿಥಯಕ್ರಮಾತ್ ‖
ದೇವಾಶ್ಚಂದ್ರಸೂರ್ಯೇಂದ್ರಾ ಆಕಾಶೋ ಧರ್ಮಯೇವಚ ‖ ‖

ಕೃತ್ತಿಕೆ, ರೋಹಿಣಿ, ಮೃಗಶಿರೆ, ಆರ್ದ್ರೆ, ಪುನರ್ವಸು, ಪುಷ್ಯೆ, ಆಶ್ಲೇಷೆ, ಮಘೆ, ಹುಬ್ಬೆ, ಉತ್ತರೆ, ಹಸ್ತ, ಚಿತ್ತೆ, ಸ್ವಾತಿ, ವಿಶಾಖೆ, ಅನುರಾಧೆ, ಜೇಷ್ಠೆ, ಮೂಲ, ಪೂರ್ವಾಷಾಢ, ಉತ್ತ ರಾಷಾಢ, ಅಭಿಜಿತ್, ಶ್ರವಣ, ಧನಿಷ್ಠೆ, ಶತವಿಶಾಖೆ, ಪೂರ್ವಾಭಾದ್ರಪದೇ, ಉತ್ತರಾಭಾದ್ರ ಪದೆ, ರೇವತಿ, ಅಶ್ವಿನಿ, ಭರಣಿ ಈ ಇಪ್ಪತ್ತೆಂಟು (೨೮) ನಕ್ಷತ್ರಂಗಳು.

ಶಿಖಿ, ಕಮಲಜಂ, ಶಿತಕರಂ, ರುದ್ರ, ಅವಿತಿ, ಜಿವ, ಉರಗ, ಪಿತೃ, ಭಗಂ, ಅಯ್ಯಮಂ, ದಿನಕರಂ, ತ್ವಷ್ಠ, ಸಮೀರ, ಇಂದ್ರಾಗ್ನಿ, ಮೈತ್ರಂ, ಯಿಂದ್ರಂ, ನಿಶೃತಿ, ಜಲಂ, ವಿಶ್ವದೇವ, ಅಜಂ, ವಿಷ್ಣುಂ, ವಸು, ವರುಣಂ, ಅಜಪಾದ, ಅಹಿರ್ಬುದ್ಮ, ಪೂಷಾ, ಅಶ್ವಿ, ಯಮ ಈ ಇಪ್ಪತ್ತೆಂಟು (೨೮) ತಾರೆಗಧಿಪರು.

ಮತ್ತವಾ ನಕ್ಷತ್ರಂಗಳಿಗೆ ನಾಲ್ಕು ನಾಲ್ಕು ಪಾದಗಳಾಗುವವು. ಆ ಪಾದಂಗಳಿಗೊಂ ದೊಂದಕ್ಕೆ ಅಕ್ಕರಮಂ ಪ್ರತಿಪಾದಗಳಿಗೂ ಹೇಳುವೆನು ಅದು ಹ್ಯಾಗೆಂದರೆ—ಚೂ ಚೇ ಚೋ ಲಾ ಅಶ್ವಿನ್ಯಾ: ೧, ಲಿ ಲೂ ಲೆ ಲೊ ಭರಣ್ಯಾ: ೨, ಅ ಇ ಉ ಎ ಕೃತ್ತಿಕಾಯಾ: ೩, ಒ ವಾ ವಿ ವೂ ರೋಹಿಣ್ಯಾ: ೪, ವೇ ವೊ ಕಾ ಕಿ ಮೃಗಶಿರಸ್ಯ ೫, ಕು ಘ ಙ ಚ ಆದ್ರಾರ್ಯಾ: ೬ ಕೆ ಕೊ ಹಾ ಹಿ ಪುನರ್ವಸೋ ೭, ಹೂ ಹೆ ಹೋ ಡಾ ಪುಷ್ಯಸ್ಯ ೮, ಡಿ ಡೂ ಡೆ ಡೊ ಆಶ್ಲೇಷಾಯಾ: ೯, ಮಾ ಮಿ ಮು ಮೆ ಮಘಾಯಾ: ೧೦, ಮೊ ಟಾ ಟ ಟೂ ಪೂರ್ವಾಯಾ: ೧೧, ಟೆ ಟೋ ಪಾ ಪಿ ಉತ್ತರಾಯಾಃ ೧೨, ಪು ಷ ಣ ಠಾ ಹಸ್ತಸ್ಯ ೧೩, ಪೆ ಪೊ ರಾ ರಿ ಚಿತ್ರಾಯಾಃ ೧೪, ರಿ ರೂ ರೆ ರೊ ಸ್ವಾತ್ಯಾಃ ೧೫, ತಿ ತೂ ತೆ ತೋ ವಿಶಾಖಾಯಾ: ೧೬, ನಾ ನಿ ನೂ ನೆ ಅನುರಾಧಾಯಾ: ೧೭, ನೊ ಯಾ ಯಿ ಯೂ ಜೇಷ್ಠಾಯಾ, ೧೮, ಯೆ ಯೊ ಬಾ ಬಿ ಮೂಲಸ್ಯ ೧೯, ಬು ದ ಪ ಡ ಪೂರ್ವಾಷಾಡಾಯಾ: ೨೦, ಭೆ ಭೋ ಜಾ ಜಿ ಉತ್ತ ರಾಷಾಡಾಯಾ: ೨೧, ಜೂ ಜೆ ಜೊ ಖಾ ಅಭಿಜಿತ: ೨೨, ಖಿ ಖು ಖೆ ಖೊ ಶ್ರವಣಸ್ಯ ೨೩, ಗಾ ಗಿ ಗೂ ಗೆ ಧನಿಷ್ಠಾಯಾ: ೨೪, ಸೇ ಸೊ ದಾ ದಿ ಪೂರ್ವಾಭಾದ್ರಪದಾಯಾ: ೨೫, ದು ಷ

ಝು ಥ ಉತ್ತರಾಭಾದ್ರಪದಾಯ: ೨೬, ದೆ ದೊ ಚಾ ಚಿ ರೇವತ್ಯಾ: ೨೭; ತತ್ರ ನವನವ ಪಾದಾನಾಮೇಕೋರಾಶಿ: ॥ ಅಶ್ವಿನಿಭರಣಿಕೃತ್ತಿಕೈಕ ಪಾದೇಷು ಮೇಷ: ॥ ೧ ॥ ಕೃತ್ತಿಕಾತ್ರಿಪಾದಾರೋಹಿಣಿಮೃಗಶಿರಾರ್ಧಂ ವೃಷಭ: ॥ ೨ ॥ ಮೃಗಶಿರದ್ವಿಪಾದ್ರಾಪುನರ್ವಸು ತ್ರಿಪಾದೇಷು ಮಿಥುನ: ॥ ೩ ॥ ಪುನರ್ವಸೇಕಪಾದಾ:ಪುಷ್ಯಾಶ್ಲೇಷಾಂತೇಷು ಕರ್ಕಾಟಕಃ ॥ ೪ ॥ ಮಘಾ ಪೂರ್ವೋತ್ತರೈಕ ಪಾದೇಷು ಸಿಂಹಃ ॥ ೫॥ ಉತ್ತರಾತ್ರಿಪಾದಹಸ್ತಚಿತ್ರಾರ್ಧೇಷು ಕನ್ಯಾ ॥ ೬॥ ಚಿತ್ರಾರ್ಧಸ್ವಾತಿವಿಶಾಖಾ ತ್ರಿಪಾದೇಷು ತುಲಾ ॥ ೭ ॥ ವಿಶಾಖೈಕಪಾದಾ ಅನುರಾಧಾಜ್ಯೇಷ್ಠಾಂತ್ಯಂ ವೃಶ್ಚಿಕಃ ॥ ೮ ॥ ಮೂಲಪೂರ್ವಾಷಾಢೋತ್ತರಾಷಾಢೈಕ ಪಾದೇಷು ಧನುಃ ॥ ೯ ॥ ಉತ್ತರಾಷಾಢತ್ರಿಪಾದ ಶ್ರವಣಧನಿಷ್ಠಾರ್ಧೇಷು ಮಕರ: ॥ ೧೦ ॥ ಧನಿಷ್ಟಾರ್ಧಶತವಿಶಾಖಾಪೂರ್ವಾಭಾದ್ರಪದತ್ರಿಪಾದೇಷು ಕುಂಭಃ ॥ ೧೧ ॥ ಪೂರ್ವಾಭಾದ್ರಪದೈಕೋತ್ತರಾ ಭಾದ್ರಪದರೇವತ್ಯಾಂತಂ ಮೀನಃ ॥ ೧೨ ॥ ಮೇಷಃ, ವೃಷಭ:, ಮಿಥುನ:, ಕರ್ಕಾಟಕ:, ಸಿಂಹಃ, ಕನ್ಯಾ, ತುಲಾ, ವೃಶ್ಚಿಕ:, ಧನುಃ, ಮಕರ:, ಕುಂಭ:, ಮೀನ:, ರಾಶಯೋದ್ವಾದಶ:, ತತ್ತದ್ರಾಭ್ಯುದಯ: ಸಯೇವಲಗ್ನ:, ಸ್ವಸ್ವಭ್ಯೋಮಖಂಡಸಮವಿಘಟಿಕಾಕಾಲೇ ತ್ರಯೋದಶವಿಘಟಿಕಾದೇಕೈಕೈಕ ಮುಹೂರ್ತಕಾಲೇನೋತ್ತರೋತ್ತರ ನಕ್ಷತ್ರಾಣಾಮುದಯಃ ॥ ಇತಿ ನಕ್ಷತ್ರ ಪ್ರಪಂಚ: ॥ ವಿಷ್ಕಂಭ, ಪ್ರೀತಿ, ಆಯುಷ್ಮಾನ್, ಸೌಭಾಗ್ಯ, ಶೋಭನ, ಅತಿಗಂಡ, ಸುಕರ್ಮ, ಧೃತಿ, ಶೂಲ, ಗಂಡ, ವೃದ್ಧಿ, ಧೃವ, ವ್ಯಾಘಾತ, ಹರುಷಣ, ವಜ್ರ, ಸಿದ್ಧಿ, ವ್ಯತೀಪಾತ, ವರಿಯಾನ್, ಪರಿಘ:, ಶಿವ, ಸಿದ್ಧ, ಸಾಧ್ಯ, ಶುಭ, ಶುಕ್ಲ, ಬ್ರಹ್ಮ, ಐಂದ್ರ, ವೈಧೃತಿ ॥ ೨೭ ॥ ಈ ಇಪ್ಪತ್ತೇಳು ಯೋಗಗಳು. ಬವ, ಬಾಲವ, ಕೌಲವ, ತೈತಿಲೆ, ಗರಜೆ, ವಣಿಜೆ, ಭದ್ರೆ ॥ ೭ ॥ ಈ ಯೇಳು ಕರಣಗಳು. ಇಂದ್ರ, ಬ್ರಹ್ಮ, ಮಿತ್ರ, ಅರ್ಹ, ಪದ್ಮ, ಅದಿತಿ, ಯಮ ॥ ೭ ॥ ಈ ಯೇಳು ಕರಣಾಧಿಪತಿಗಳು. ಶಕುನಿ, ಚತುಷ್ಪದ, ನಾಗ, ಕಿಂಸ್ತುಘ್ನವೆಂಬಿವು ಕೃಷ್ಣಚತುರ್ದಶಿಯ ಪರಭಾಗವೊದಲಾಗಿ ಶುದ್ಧ ಪಾಡ್ಯದ ಪ್ರಥಮಭಾಗೆ ಪರ್ಯಂತವಾಗುವವು. ಕವಿ, ಅಗ್ನಿ, ನಾಗ, ವಸು ಈ ನಾಲ್ಕು ಸ್ಥಿರಕರಣಾಧಿಪರು ॥ ೪ ॥

ಶ್ಲೋಕ॥ ಉಚ್ಛ್ವಾಸಾನಾಂ ಸಹಸ್ರಾಣಿ ತ್ರೀಣಿಸಪ್ತಶತಾನಿ ಚ ॥
ತ್ರಿಸಪ್ತತಿಪುನಸ್ತೇಷಾಂ ಮುಹೂರ್ತೋಕ್ತ್ರೈಕಯಿಷ್ಯತೇ ॥ ॥

ಮೂರುಸಾವಿರದೇಳುನೂರೆಪ್ಪತ್ಮೂರು (೩೭೭೩) ಉಚ್ಛ್ವಾಸಗಳಿಗೆ ಒಂದು ಮುಹೂರ್ತವು.

ನಿಮೇಷಾಣಾಂ ಸಹಸ್ರಾಣಿ ಪಂಚಭೂಯಃ ಶತಂ ತಥಾ ॥
ದಶೈತ್ಯೆವ ತದಾಪ್ರೋಕ್ತಾ ಮುಹೂರ್ತೋ ಬುಧೈಃ ॥
ಅಕ್ಷರಾಣಾಂ ದ್ವಿಷಷ್ಟ್ಯಶ್ಚ ಮುಹೂರ್ತಂ ಸಂಪ್ರಚಕ್ಷ್ಯತೇ ॥
ದಶೈವಸಹಸ್ರಾಣಿ ಚತ್ವಾರ್ಯೋವ ಶತಾನಿಚ ॥

ರೋದ್ರ, ಶ್ವೇತ, ಮೈತ್ರ, ಸಾರಭಟ, ದೈತ್ಯ, ವೈರೋಚನ, ವೈಶ್ವದೇವ, ಅಭಿಜಿತ್, ರೋಹಿಣಿ, ಬಳ, ವಿಜಯ, ನೈರುತ, ವಾರುಣ, ದಿಯಮ, ಭಾಗ್ಯ ಈ ಹದಿನೈದು ಮುಹೂ

ರ್ತಂಗಳು ಹಗಲಿನಲ್ಲಿ ವರ್ತಿಸುವವು ॥ ೧೫ ॥ ಸಾವಿತ್ರ, ಅಧ್ವರ್ಯ, ದಾತ್ರಿಕ, ಯಮ, ವಾಯು, ಹುತಾಶನ, ಭಾನು, ವೈಜಯಂತ, ಸಿದ್ಧಾರ್ಥ, ಸಿದ್ಧಸೇನ, ವಿಕ್ಷೇಪ, ಯೋಧ್ಯ, ಪುಷ್ಪದಂತ, ಸುಗಂಧರ್ವ, ವರುಣ ॥ ೧೫ ॥ ಈ ಹದಿನೈದು ಮುಹೂರ್ತಂಗಳು ರಾತ್ರಿಯಲ್ಲಿ ವರ್ತಿಸುವವು. ಶ್ರಾವಣಮಾಸದ ಸರ್ವಾಭ್ಯಂತರವೀಥಿಯೊಳು ಆದಿತ್ಯನಿರೆ ದಿನಂ ಹದಿನೆಂಟು ಮುಹೂರ್ತಂ, ರಾತ್ರಿ ಹನ್ನೆರಡು ಮುಹೂರ್ತಂ; ಮಾಘಮಾಸದೊಳಾದಿತ್ಯ ಸರ್ವ ಬಾಹ್ಯವೀಥಿಯೊಳಿರೆ ಹಗಲು ಮುಹೂರ್ತಂ ಹನ್ನೆರಡು, ರಾತ್ರಿ ಮುಹೂರ್ತಂ ಹದಿನೆಂಟು. ಇಂತು ಮೂವತ್ತು ಮುಹೂರ್ತದಿಂ ದಿವಸವು; ಹದಿನೈದು ದಿವಸಕ್ಕೆ ಒಂದು ಪಕ್ಷಂ, ಶುಕ್ಲ, ಕೃಷ್ಣಪಕ್ಷವೆಂದು ಎರಡು ವಿಧವು; ಎರಡು ಪಕ್ಷದಿಂದ ಒಂದು ಮಾಸವು; ಆ ಮಾಸಗಳು, ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವೀಜ, ಕಾರ್ತಿಕ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ ॥ ೧೨ ॥ ಈ ಹನ್ನೆರಡು ಮಾಸಗಳು; ಎರಡು ಮಾಸಗಳಿಗೆ ಒಂದು ಋತುವು ಹ್ಯಾಗಂದರೆ—ವಸಂತಋತು, ಗ್ರೀಷ್ಮಋತು, ವರ್ಷಋತು, ಶರದೃತು, ಹೇಮಂತಋತು, ಶಿಶಿರಋತುವೆಂದಾರು ಋತುಗಳು (೬); ಮೂರು ಋತುಗಳಿಗೊಂದು ಅಯನ; ದಕ್ಷಿಣಾಯನ, ಉತ್ತರಾಯನವೆಂದು ಎರಡು ಆಯನಗಳಿಗೆ ಒಂದು ಸಂವತ್ಸರವು; ಪ್ರಭವ, ವಿಭವ, ಶುಕ್ಲ, ಪ್ರಮೋಧೂತ, ಪ್ರಜಾಪತಿ, ಅಂಗಿರ, ಶ್ರೀಮುಖ, ಭಾವ, ಯುವ, ಧಾತು, ಈಶ್ವರ, ಬಹುಧಾನ್ಯ, ಪ್ರಮಾಥಿ, ವಿಕ್ರಮ, ವಿಷು, ಚಿತ್ರಭಾನು, ಸ್ವಭಾನು, ತಾರಣ, ಪಾರ್ಥಿವ, ವ್ಯಯ ಈ ಇಪ್ಪತ್ತು ಉತ್ತಮ ಸಂವತ್ಸರಗಳು; ಸರ್ವಜಿತ್, ಸರ್ವಧಾರಿ, ವಿರೋಧಿ, ವಿಕೃತಿ, ಖರ, ನಂದನ, ವಿಜಯ, ಜಯ, ಮನ್ಮಥ, ದುರ್ಮುಖಿ, ಹೇವಿಳಂಬಿ, ವಿಳಂಬಿ, ವಿಕಾರಿ, ಶಾರ್ವರಿ, ಪ್ಲವ, ಶುಭಕೃತು, ಶೋಭಕೃತು, ಕ್ರೋಧಿ, ವಿಶ್ವಾವಸು, ಪರಾಭವ ಈ ಇಪ್ಪತ್ತು ಮಧ್ಯಮ ಸಂವತ್ಸರಗಳು; ಪ್ಲವಂಗ, ಕೀಲಕ, ಸೌಮ್ಯ, ಸಾಧಾರಣ, ವಿರೋಧಿಕೃತ್, ಪರಿಧಾವಿ, ಪ್ರಮಾದೀಚ, ಆನಂದ, ರಾಕ್ಷಸ, ನಳ, ಪಿಂಗಳ, ಕಾಳಯುಕ್ತಿ, ಸಿದ್ಧಾರ್ಥಿ, ರೌದ್ರಿ, ದುರ್ಮತಿ, ದುಂದುಭಿ, ರುದಿರೋದ್ಗಾರಿ, ರಕ್ತಾಕ್ಷಿ, ಕ್ರೋಧನ, ಕ್ಷಯ ಈ ಇಪ್ಪತ್ತು ಜಘನ್ಯ ಸಂವತ್ಸರಗಳು; ಇಂತಿದು ಮೊದಲಾಗಿ ಪೂರ್ವಾದಿಯ ಪಲ್ಯೋಪಮಾದಿ ಕಾಲಭೇದಮಿಲ್ಲ, ಮನುಷ್ಯಕ್ಷೇತ್ರದೊಳು, ಜ್ಯೋತಿಷ್ಕರ ದೆಶೆಯಿಂದಾಗುವವು; ಇದನ್ನು ಆಗಮಾನುಸಾರದಿಂದ ತಿಳಿದುಕೊಳ್ಳತಕ್ಕದ್ದು.

---

### ವೈಮಾನಿಕರ ವರ್ಣನಂ.

ಸೂತ್ರಂ॥ ದ್ವಿವಿಧವೈಮಾನಿಕಾ: ॥ ೫ ॥

ತಾ:—ಕಲ್ಪಜರುಂ, ಕಲ್ಪಾತೀತರೆಂದು ವೈಮಾನಿಕರಲ್ಲಿ ಎರಡು ಭೇದಗಳಿರುವವು. ಇಂದ್ರ, ಪ್ರತೀಂದ್ರಾದಿ ವಿಕಲ್ಪವನ್ನುಳ್ಳವರು ೧ ಕಲ್ಪಜರುಂ, ಅಹಮಿಂದ್ರದೇವರು ಕಲ್ಪಾತೀತರುಗಳು ॥ ೨ ॥

ಸೂತ್ರಂ॥ ಷೋಡಶಸ್ವರ್ಗಾ: ॥ ೬ ॥

ತಾ:—ಕಲ್ಪಗಳ ಅಪೇಕ್ಷೆಯಿಂದ, ೧ ಸೌಧರ್ಮ, ೨ ಈಶಾನ, ೩ ಸನತ್ಕುಮಾರ, ೪ ಮಾಹೇಂದ್ರ, ೫ ಬ್ರಹ್ಮ, ೬ ಬ್ರಹ್ಮೋತ್ತರ, ೭ ಲಾಂತವ, ೮ ಕಾಪಿಷ್ಟ, ೯ ಶುಕ್ರ, ೧೦ ಮ

ಹಾಶುಕ್ರ, ೧೧ ಶತಾರ, ೧೨ ಸಹಸ್ರಾರ, ೧೩ ಆನತ, ೧೪ ಪ್ರಾಣತ, ೧೫ ಆರಣ, ಅಚ್ಯುತ ವೆಂದು ಹದಿನಾರಾಗುವವು ॥ ೧೬ ॥ ಇಂದ್ರರುಗಳ ಅಪೇಕ್ಷೆಯಿಂದ ( ೧೨ ) ಹನ್ನೆರಡಾಗು ವವು. ಅವು ಹ್ಯಾಗಂದರೆ—ಸೌಧರ್ಮಾದಿ ನಾಲ್ಕು ಕಲ್ಪಗಳಲ್ಲಿ ಸೌಧರ್ಮೇಂದ್ರನುಂ, ಈಶಾ ನೇಂದ್ರನುಂ, ಸನತ್ಕುಮಾರೇಂದ್ರನುಂ, ಮಾಹೇಂದ್ರನುಂ, ಎಂದಿಂತು ನಾಲ್ಕು ಇಂದ್ರರು ಗಳು ಮಧ್ಯದ ನಾಲ್ಕುಂ ಕಲ್ಪದ ಪೂರ್ವಾಪರಯುಗ್ಮದೊಳು ಬ್ರಹ್ಮೇಂದ್ರನುಂ, ಲಾಂತವೇಂದ್ರ ನುಂ, ಮಹಾಶುಕ್ರೇಂದ್ರನುಂ, ಸಹಸ್ರಾರೇಂದ್ರನುವೆಂದು ನಾಲ್ವರಿಂದ್ರರು ಆನತಾದಿ ಚತುಃ ಕಲ್ಪದೊಳು ಮಾನತೇಂದ್ರನುಂ, ಪ್ರಾಣತೇಂದ್ರನುಂ, ಆರಣೇಂದ್ರನುಂ, ಅಚ್ಯುತೇಂದ್ರನು ವೆಂದು ನಾಲ್ವರಿಂದ್ರರು. ಈ ರೀತಿಯಿಂದ ೧೬ ಕಲ್ಪಗಳಲ್ಲಿ ೧೨ ಇಂದ್ರರುಗಳಿರುವರು. ಪ್ರತೀಂ ದ್ರರು ಕೂಡಿ ಕಲ್ಪಜೇಂದ್ರರು ಚತುರ್ವಿಂಶತಿ ( ೨೪ ) ಯಾಗುವರು.

## ಸೂತ್ರಂ॥ ನವಗ್ರೈವೇಯಕಾಃ ॥ ೭ ॥

ತಾಃ—ಅಧೋಗ್ರೈವೇಯಕತ್ರಯವುಂ ॥ ೩ ॥ ಮಧ್ಯಮಗ್ರೈವೇಯಕತ್ರಯವುಂ ॥ ೩ ॥ ಉಪರಿಮಗ್ರೈವೇಯಕತ್ರಯವುಂ ॥ ೩ ॥ ಎಂದು ಗ್ರೈವೇಯಕಗಳು ಒಂಭತ್ತು ಭೇದಗಳಾ ಗುವವು ॥

## ಸೂತ್ರಂ॥ ನವಾನುದ್ದಿಶಾಃ ॥ ೮ ॥

ತಾಃ—೧ ಅರ್ಚಿ, ೨ ಅರ್ಚಿಮಾಲಿನಿ, ೩ ವೈರೆ, ೪ ವೈರೋಚನೆ, ಈ ನಾಲ್ಕು ಪೂರ್ವ ದಿಕ್ಕಿನ ಶ್ರೇಡಿಬದ್ಧಂಗಳು. ೧ ಸೋಮೆ, ೨ ಸೋಮರೂಪೆ, ೩ ಅಂಕೆ, ೪ ಸ್ಫಟಿಕೆ, ಎಂಬ ನಾಲ್ಕು ಆಗ್ನೇಯಾದಿ ವಿದಿಕ್ಕಿನ ಪ್ರಕೀರ್ಣಕಂಗಳು. ನಡುವಿರ್ದಾದಿತ್ಯೇಂದ್ರಕಂವೆರಸು ಅನುದ್ದಿ ಶೆಯ ವಿಮಾನಂಗಳು ಒಂಭತ್ತೇ ಆಗುವವು ॥

## ಸೂತ್ರಂ॥ ಪಂಚಾಣುತ್ತರಾಃ ॥ ೯ ॥

ತಾಃ—೧ ವಿಜಯ, ೨ ವೈಜಯಂತ, ೩ ಜಯಂತ, ೪ ಅಪರಾಜಿತವೆಂಬ ನಾಲ್ಕು ಶ್ರೇಡಿ ಬದ್ಧಗಳು ಪೂರ್ವದಿಕ್ಕಿನವು. ನಡುವಣ ಸರ್ವಾರ್ಥಸಿದ್ಧೀಂದ್ರಕಂವೆರಸು ಅನುತ್ತರೆಯಲ್ಲಿ ವಿಮಾನಗಳೈದಿರುವವು ॥

ಗಾಹೆ॥ ಮೇರುತಳಾದಿ ದಿವಡದ್ದಿ ವಡ್ಡದಳಳ ಛಕ್ಕಯುಕ್ಕಕರಜ್ಜುಮ್ಹಿ ।
ಕಪ್ಪಾಣ ಮಥ್ಥಜುಗಳಗ್ಗೆ ವೆಜ್ಜಾದಿಯ ಹೊಂತಿಕಮೇ ॥ ೨೨ ॥

ಅದು ಹ್ಯಾಗಂದರೆ—ಮಂದರದ ತಳದಿಂದ ವಂದೂವರೆ ರಜ್ಜುತ್ಸೇದವು ಸಂದಲ್ಲಿ ಸೌಧ ರ್ಮ, ಈಶಾನಕಲ್ಪಂ, ಅಲ್ಲಿಂದ ಮೇಲೆ ವಂದೂವರೆ ರಜ್ಜು ( ೧½ ) ಎತ್ತರದಲ್ಲಿ ವರಸನತ್ಕು ಮಾರ, ಮಾಹೇಂದ್ರಕಲ್ಪಗಳು. ಅಲ್ಲಿಂ ಮೇಲೆ ಆರಡೆಯೊಳು ಅರ್ಧರಜ್ಜುಸಂದಲ್ಲಿ ಮೇಗಣಾ ರುಂ ಯುಗಳಗಳಿರುವವು. ಅಲ್ಲಿಂ ಮೇಲೊಂದು ರುಜ್ಜುಸಂದಲ್ಲಿ ವರಂ ನವಗ್ರೈವೇಯಕಾದಿ ವಿಮಾನಗಳಿರುವವು. ಮತ್ತಂ ಕಲ್ಪಂಗಳ, ಕಲ್ಪಾತೀತಂಗಳ ಕ್ಷೇತ್ರಗಳಂತರ ಎಲ್ಲಿವರಿಗೆಂದರೆ— ತಂತಮ್ಮ ಕಡೆಯ ಇಂದ್ರಕದ ಧ್ವಜದಂಡಮೇ ಕಲ್ಪಾವನಿಗಳಂತಂ, ಕಲ್ಪಾತೀತಂಗಳಂತ್ಯಂ ಲೋಕದಂತವೇ ॥

## ಸೂತ್ರಂ॥ ತ್ರಿಷಷ್ಠಿಪಟಲಾನಿ ॥ ೧೧ ॥

ಋತು, ವಿಮಲ, ಚಂದ್ರ, ವಲ್ಗುವಿದ, ಅರುಣ, ನಂದನ, ನಳಿನ, ಕಾಂಚನ, ರೋಹಿತ, ಚರಿ, ಚತು, ಮರುತ್, ರುದ್ಧಿಶ, ವೈಡೂರ್ಯ, ರುಚಕ, ರುಚಿರ, ಅಂಕ, ಸ್ಫಟಿಕ, ತಪನೀಯ, ಮೇಘ, ಮಭ್ರ, ಹರಿದ್ರ, ಪದ್ಮ, ಲೋಹಿತ, ವಜ್ರ, ನಂದ್ಯಾವರ್ತ, ಪ್ರಭಂಕರ, ಪೃಷ್ಟಕ, ಗಜ, ಮಿತ್ರ, ಪ್ರಭಾಯೆಂಬೀ ಮೂವತ್ತೊಂದು ಸೌಧರ್ಮದ್ವಿಕದ ಪಟಲಗಳು ॥ ಅಂಜನ, ವನಮಾಲಿ, ನಾಗ, ಗರುಡ, ಲಾಂಗಲ, ಬಲಭದ್ರ, ಚಕ್ರ ಈ ಏಳು ಸನತ್ಕುಮಾರದ್ವಿಕದವುಗಳು ॥ ಅರಿಷ್ಟ, ಸುರಸಮಿತಿ, ಬ್ರಹ್ಮ, ಬ್ರಹ್ಮೋತ್ತರ, ಈ ನಾಲ್ಕುಂ ಬ್ರಹ್ಮದ್ವಿಕದವುಗಳು ॥ ಬ್ರಹ್ಮಹೃದಯ, ಲಾಂತವಮೆಂಯರಡುಂ ಲಾಂತವದ್ವಿಕದವುಗಳು ॥ ಶುಕ್ರವಿಮಾನವೊಂದುಂ, ಶುಕ್ರದ್ವಿಕಗಳಿಗೆ ॥ ಶತಾರವಿಮಾನವೊಂದು, ಶತಾರದ್ವಯಗಳಿಗೆ ॥ ಆನತ, ಪ್ರಾಣತ, ಪುಷ್ಪಕವೆಂಬೀ ಮೂರು ಆನತದ್ವಿಕದವುಗಳು ॥ ಶಾತಕ, ಆರಣ, ಅಚ್ಯುತ ಮೆಂಮೂರುಂ ವಿಮಾನಗಳು ಆರಣದ್ವಿಕದವು ॥ ಸುದರ್ಶನ, ಅಮೋಘ, ಸುಪ್ರಬುದ್ಧಮೆಂದೀ ಮೂರುಂ ಅಧೋಗ್ರೈವೇಯಕದವು ॥ ಯಶೋಧರ, ಶುಭದ್ರ, ವಿಶಾಲ, ಎಂಬೀ ಮೂರು ವಿಮಾನಗಳು ಮಧ್ಯಮಗ್ರೈವೇಯಕದವು ॥ ಸುಮನಸ, ಸೌಮನಸ, ಪ್ರೀತಿಂಕರ, ಇವು ಮೂರು ವಿಮಾನಂಗಳುಂ ಉಪರಿಮ ಗ್ರೈವೇಯಕದವು ॥ ಆದಿತ್ಯೇಂದ್ರಕವೊಂದು ನವಾಣುದ್ದಿಶೆಯದು ॥ ಸರ್ವಾರ್ಥಸಿದ್ಧೀಂದ್ರಕವೊಂದು ಪಂಚಾಣುತ್ತರೆಯದು ಇವುಗಳೆಲ್ಲಾ ಕೂಡಿ ಅರವತ್ಮೂರು ಇಂದ್ರಕಗಳಿರುವವು ॥ ಅದೆಂತೆನೆ—ನಲವತ್ತುಯೋಜನ (೪೦) ಉತ್ಸೇದದೊಳು ಹನ್ನೆರಡು (೧೨) ನಾಲ್ಕುಂ (೪) ಮಧ್ಯೋಪರಿಪರಿಮಿತಳವಿಸ್ತಾರದೊಳಂ ನೆರೆದು, ಮಂದರಮಹೀಧರವೆಂಬ ಮಹೀಪತಿಗೆ ಮಕುಟದಂತಿಟ್ಟ ವೈಡೂರ್ಯಮಯ ಚೂಳಿಕಾಗ್ರದೊಳು ಕುರುಭೂಮಿಜರ ವಾಲಾಗ್ರದನಿತಂತರಂ ಮುಟ್ಟದೇರಿ ವಿಮಾನಗಳಿರುವವು. ಅದು ಮನುಷ್ಯಕ್ಷೇತ್ರದ ಪ್ರಮಾಣಂ, ತತ್ಪ್ರಮಾಣವಾದ ಸಿದ್ಧಕ್ಷೇತ್ರದಿಂದ ಕೆಳಗೆ ದ್ವಾದಶಯೋಜನಾಂತರದೊಳು ಸರ್ವಾರ್ಥಸಿದ್ಧಿಯಿರುವದು. ಅದು ಜಂಬೂದ್ವೀಪದ ಪ್ರಮಾಣವು. ಆ ಎರಡುಮಂ ವಿಶೇಷಿಸಿರೂಪೋನೇಂದ್ರಕದಿಂ ಭಾಗಂಗೊಂಡು ಪಡೆದ ಲಬ್ಧಮಂ ಮೊದಲಂತೊಟ್ಟು ಕಳೆಯೆ, ಕಡೆಯಿಂತೊಟ್ಟು ಕೂಡಿಸಲು ಶೇಷೇಂದ್ರಕಂಗಳ ಪ್ರಮಾಣವು ಬರುವದು.

ಪ್ರಸ್ತುತ ಗಾಹೆ॥ ಣಾಭಿಗಿರಿ ಚೂಳಿಚೂಳಿ ಉವರಿಬ್ಬಾಳಗ್ಗಂತರಿಠಿಯೋಹು ।
ಉಡುಯಿದ್ದೋ ಸಿದ್ದಿದೋ ಜಾರಸಜೋಯಣಮಾಣವಿಠ್ಠಾ ॥ ೨೩ ॥
ಸಬ್ಬಟ್ಠಮಾಣಸಖೇತ್ತಪಮಾಣಂ ಉದುಸ್ಸಬದ್ದಂತು ಜಂಬುದಿವಸಮಂ ।
ಉಭಯ ವಿಶೇಷೇಮಾವೂಣಿದ್ದಯಭಜಿದೇದುಹಾಣಿಚಯಂ ॥ ೨೪ ॥

ಮತ್ತಮಾ ಯಿಂದ್ರಕಗಳು ನಡುವಾಗೆ ನಾಲ್ಕುಂ ದೆಶೆಯೊಳಂ ಪ್ರೋಳೀಕ್ರಮದಿಂದಮಿರ್ದವು. ಶ್ರೇಡಿಬದ್ಧಗಳುಮವೆಂತೆಂದೊಡೆ—ಮೊದಲಿಂದ್ರಕದ ಚತುರ್ದಿಶೆಯೊಳು ಅರವತ್ತೆರಡುಗೆಯ್ದಪ್ಪವು. ಇಲ್ಲಿಂ ಮೇಲೆಲ್ಲಾ ಪಟಲಂಗಳು ಆ ನಾಲ್ದೆಶೆಯೊಳೊಂದೊಂದು ಗೆಯ್ದುಕ್ಕುಂ, ಅಲ್ಲಿಂದಲು ನವಾನುದ್ದಿಶೆ ಪಂಚಾಣುತ್ತರೆಗಳ ದೆಶೆಗಳೊಂದೊಂದವನ್ನೇ ವರಮಕ್ಕುಮದೆಂತೆನೆ—

## ಸೂತ್ರಂ ॥ ಷೋಡಶೋತ್ತರಾಷ್ಟಶತ ಸಪ್ತಸಹಸ್ರ ಶ್ರೇಢಿಬದ್ಧಾನಿ ೧೧

ತಾ:—ಸೌಧರ್ಮಕಲ್ಪದಲ್ಲಿ ನಾಲ್ಕುಸಾವಿರದ ಮುನ್ನೂರೆಪ್ಪತ್ತೈದು (೪೩೭೫) ಶ್ರೇಢಿಬದ್ಧಗಳಿರುವವು. ಈಶಾನಕಲ್ಪದಲ್ಲಿ ಸಾವಿರದ ನಾನೂರೈವತ್ತೇಳು (೧೪೫೭) ಶ್ರೇಢಿಬದ್ಧಗಳಿರುವವು. ಸನತ್ಕುಮಾರಕಲ್ಪದೊಳು ಐನೂರೆಂಭತ್ತೆಂಟು (೫೯೮). ಮಾಹೇಂದ್ರದಲ್ಲಿ ನೂರ ತೊಂಭತ್ತಾರುಂ (೧೯೬). ಬ್ರಹ್ಮ, ಬ್ರಹ್ಮೋತ್ತರದಲ್ಲಿ ಮುನ್ನೂರರವತ್ತುಂ (೩೬೦). ಲಾಂತವದ್ವಯದಲ್ಲಿ ನೂರೈವತ್ತಾರುಂ (೧೫೬). ಶುಕ್ರದ್ವಯದಲ್ಲಿ ಎಪ್ಪತ್ತೆರಡುಂ (೭೨). ಶತಾರದ್ವಯದೊಳು ಅರುವತ್ತೆಂಟುಂ (೬೮). ಆನತಾದಿ ಚತುಷ್ಕದೊಳು ಮುನ್ನೂರಿಪ್ಪತ್ತನಾಲ್ಕುಂ (೩೨೪). ಅಧೋಗ್ರೈವೇಯಕತ್ರಯದಲ್ಲಿ ನೂರೆಂಟುಂ (೧೦೮). ಮಧ್ಯಮಗ್ರೈವೇಯಕತ್ರಯದೊಳು ಎಪ್ಪತ್ತೆರಡುಂ (೭೨) ಉಪರಿಮಗ್ರೈವೇಯಕತ್ರಯದಲ್ಲಿ ಷಟ್‌ತ್ರಿಂಶವುಂ (೩೬). ನವಾಣುದ್ದಿಶೆಯೊಳಂ ನಾಲ್ಕುಂ (೪) ಇಂತಿವೆಲ್ಲಂ ಕೂಡಿ ಏಳುಸಾವಿರದೆಂಟು ನೂರಹದಿನಾರು (೭೮೧೬) ಶ್ರೇಢಿಬದ್ಧಂಗಳು. ಇವುಗಳೆಲ್ಲಾ ಸಮಖ್ಯಾತಯೋಜನವಿಸ್ತಾರಗಳನ್ನುಳ್ಳವುಗಳು ॥ ॥

## ಸೂತ್ರಂ॥ ಚತುರಶೀತಿಲಕ್ಷೇಕೂನನವತಿಸಹಸ್ರೈಕಶತಚತುಶ್ಚತ್ವಾರಿಂಶತ್ಪ್ರಕೀರ್ಣಕಾನಿ ॥ ೧೨ ॥

ಇಂದ್ರಕ, ಶ್ರೇಢಿಬದ್ಧರಹಿತ ವಿಮಾನಂಗಳು ಪ್ರಕೀರ್ಣಕಂಗಳಕ್ಕುಮೆಂತೆನೆ—

ಗಾಹೆ ॥ ಸೇಢಿಣಂವಿಖ್ಖಾಳೆಪುಲ್ಲಪಯಿೊಂಣಯಯಿವತ್ತಿಯವಿಮಾಣಂ ॥
ಹೊಂತಿಪಯಿಂಣಯಣಾಂಮಾಸೆಡಿಂದಯಹೀಣರಾಸಿಸಮಾ ॥ ೨೫ ॥

ತಾ:—ಸೌಧರ್ಮಕಲ್ಪದಲ್ಲಿ ಮೂವತ್ತೊಂದುಲಕ್ಷದ ತೊಂಭತ್ತೈದುಸಾವಿರದೈನೂರು ತೊಂಭತ್ತೆಂಟು (೩೧೯೫೫೯೮), ಈಶಾನದಲ್ಲಿ ಇಪ್ಪತ್ತೇಳುಲಕ್ಷದತೊಂಭತ್ತೆಂಟುಸಾವಿರದೈನೂರುನಲವತ್ಮೂರು (೨೭೯೮೫೪೩), ಸನತ್ಕುಮಾರದಲ್ಲಿ ಹನ್ನೊಂದುಲಕ್ಷದತೊಂಭತ್ತೊಂಭತ್ತುಸಾವಿರದನಾನೂರೈದು (೧೧೯೯೪೦೫) ಮಾಹೇಂದ್ರದಲ್ಲಿ ಏಳುಲಕ್ಷದತೊಂಭತ್ತೊಂಭೈಸಾಸಿರದಯೆಂಟುನೂರನಾಲ್ಕು (೭೯೯೮೦೪), ಬ್ರಹ್ಮದ್ವಯದಲ್ಲಿ ಮೂರುಲಕ್ಷದತೊಂಭತ್ತೊಂಭೈಸಾಸಿರದಾರುನೂರಮೂವತ್ತಾರು (೩೯೯೬೩೬), ಲಾಂತವದ್ವಯದಲ್ಲಿ ನಾಲ್ವತ್ತೊಂಭೈಸಾಸಿರದೆಂಟುನೂರನಲವತ್ತೆರಡು (೪೯೮೪೨), ಶುಕ್ರದ್ವಯದೋಳ್ಮೂವತ್ತೊಂಭೈಸಾಸಿರದೊಂಭೈನೂರಿಪ್ಪತ್ತೇಳು (೩೯೯೨೭), ಶತಾರದ್ವಯದಲ್ಲಿ ಐದುಸಾವಿರದೊಂಭೈನೂರ್ಮೂವತ್ತೊಂದು (೫೯೩೧), ಆನತಾದಿಚತುಷ್ಕದಲ್ಲಿ ಮೂನ್ನೆರಪ್ಪತ್ತು (೩೭೦), ಅಧೋಗ್ರೈವೇಯಕತ್ರಯದಲ್ಲಿ ಪ್ರಕೀರ್ಣಕಂಗಳಿಲ್ಲ, ಮಧ್ಯಮಗ್ರೈವೇಯಕಗಳಲ್ಲಿ ಮೂವತ್ತೆರಡಿರುವವು (೩೨), ಉಪರಿಮಗ್ರೈವೇಯಕತ್ರಯಗಳಲ್ಲಿ ಐವತ್ತೆರಡು (೫೨), ನವಾಣುದ್ದಿಶೆಯಲ್ಲಿ ನಾಲ್ಕುಂ (೪) ಪಂಚಾಣುತ್ತರೆಯಲ್ಲಿ ಪ್ರಕೀರ್ಣಕಂಗಳಿಲ್ಲ. ಇಂತು ಪ್ರಕೀರ್ಣಕಗಳೆಲ್ಲಾ ಎಂಭತ್ತನಾಲ್ಕು ಲಕ್ಷೆಯುಮೆಂಭತ್ತೊಂಭೈಸಾಸಿರದ ನೂರನಲವತ್ನಾಲ್ಕು (೮೪೮೯೧೪೪) ಆಗುವವು.

ಸೂತ್ರ॥ ಚತುರಶೀತಿಲಕ್ಷ ಸಪ್ತನವತಿಸಹಸ್ರತ್ರ-
ಯೋವಿಂಶತಿ ವಿಮಾನಾನಿ ॥ ೧೩ ॥

ತಾ:-(೮೪೯೭೦೨೩) ಯೆಂಭತ್ತನಾಲ್ಕುಲಕ್ಷೆಯುಂ ತೊಂಭತ್ತೇಳುಸಾವಿರದ ಇಪ್ಪತ್ತಮೂರು ವಿಮಾನಗಳಾಗುವವು ಹ್ಯಾಗೆಂದರೆ--ಸೌಧರ್ಮಕಲ್ಪದಲ್ಲಿ ದ್ವಾತ್ರಿಂಶತ್‌ಲಕ್ಷ (೩೨೦೦೦೦೦) ವಿಮಾನಗಳು. ಈಶಾನಕಲ್ಪದಲ್ಲಿ ಅಷ್ಟವಿಂಶತಿಲಕ್ಷ (೨೮೦೦೦೦೦) ವಿಮಾನಗಳು. ಸನತ್ಕುಮಾರಕಲ್ಪದಲ್ಲಿ ದ್ವಾದಶಲಕ್ಷ ( ೧೨೦೦೦೦೦ ) ವಿಮಾನಂಗಳು. ಮಹೇಂದ್ರಕಲ್ಪದಲ್ಲಿ ಅಷ್ಟಲಕ್ಷ ( ೮೦೦೦೦೦ ) ವಿಮಾನಗಳು. ಬ್ರಹ್ಮದ್ವಯದಲ್ಲಿ ಚತುರ್ಲಕ್ಷ ( ೪೦೦೦೦೦ ) ವಿಮಾನಗಳು. ಲಾಂತವದ್ವಯದಲ್ಲಿ ಪಂಚಾಶತ್‌ಸಹಸ್ರ ( ೫೦೦೦೦ ) ವಿಮಾನಂ ಶುಕ್ರದ್ವಯಕ್ಕೆ ಚತ್ವಾರಿಂಶತ್‌ಸಹಸ್ರ ( ೪೦೦೦೦ ) ವಿಮಾನಂ, ಶತಾರದ್ವಯಕ್ಕೆ ಷಷ್ಟಿಸಹಸ್ರ ( ೬೦೦೦ ) ವಿಮಾನಂ, ಆನತಾದಿ ಚತುಷ್ಕದಲ್ಲಿ ಸಪ್ತಶತ ( ೭೦೦ ) ವಿಮಾನಂ, ಅಧೋಗ್ರೈವೇಯಕತ್ರಯದಲ್ಲಿ ನೂರುಹನ್ನೊಂದು (೧೧೧) ವಿಮಾನಂ, ಮಧ್ಯಮಗ್ರೈವೇಯಕದಲ್ಲಿ ಸಪ್ತೋತ್ತರಶತ (೧೦೭) ವಿಮಾನಂ, ಉಪರಿಮಗ್ರೈವೇಯಕತ್ರಯದಲ್ಲಿ ನವತ್ಯೇಕ ( ೯೧ ) ವಿಮಾನಂ, ನವಾಣುದ್ದಿಶೆಯಲ್ಲಿ ನವ ( ೯ ) ವಿಮಾನಂ, ಪಂಚಾಣುತ್ತರೆಯಲ್ಲಿ ಪಂಚ ( ೫ ) ವಿಮಾನಂ, ಪ್ರತ್ಯೇಕ ಚೈತ್ಯಾಲಯಗಳಿರುವವು.

ಮತ್ತು ಸೌಧರ್ಮಾದಿ ಇಂದ್ರರಿಗೆ ಮಹಾದೇವಿಯರೇಣ್ಬರೇಣ್ಬರಾಗುವರು. ಅಲ್ಲಿ ಓರೋರ್ವಮಹಾದೇವಿಯರ ಪ್ರತಿಬದ್ಧದ ಪರಿವಾರದೇವಿಯರುಂ, ಪ್ರಧಾನದೇವಿಯರುಂ, ಷೋಡಶಸಹಸ್ರಂ ( ೧೬೦೦೦ )ವಾಗಲು ಸೌಧರ್ಮ ಈಶಾನರ್ಗೆ ವೊಂದುಲಕ್ಷದಿಪ್ಪತ್ತೆಂಟುಸಾಸಿರ್ವರು ( ೧೨೮೦೦೦ ), ಮತ್ತೈದುಂ ಯುಗ್ಮದೊಳಂ ಶೇಷಕಲ್ಪದೊಳವರ್ಮರ್ಧಾರ್ಧಂ ಯಥಾಕ್ರಮದಿಂದರವತ್ನಾಲ್ಕುಸಾವಿರ ( ೬೪೦೦೦ ), ಸನತ್ಕುಮಾರದ್ವಯಕ್ಕೆ ಮೂವತ್ತೆರಡು ಸಾವಿರವುಂ ( ೩೨೦೦೦ ), ಮಹೇಂದ್ರನಿಗೆ ಷೋಡಶಸಹಸ್ರ ( ೧೬೦೦೦ )ರುಂ, ಲಾಂತವೇಂದ್ರನಿಗೂ, ಮಹಾಶುಕ್ರೇಂದ್ರನಿಗೂ, ಎಂಟುಸಾವಿರಂ ( ೮೦೦೦ ), ಸಹಸ್ರಾರೇಂದ್ರಂಗೆ ನಾಲ್ಕುಸಾವಿರ ( ೪೦೦೦ ), ಆನತಾದಿ ಚತುಷ್ಕೇಂದ್ರರಿಗೆ ಪ್ರತ್ಯೇಕಮೆರಡುಸಾವಿರ ( ೨೦೦೦ ) ಸ್ತ್ರೀಯರಾಗುವರು. ಮತ್ತಂ ವಲ್ಲಭೆಯರು ಸೌಧರ್ಮ, ಈಶಾನೇಂದ್ರರಿಗೆ ಮೂವತ್ತೆರಡುಸಾವಿರ (೩೨೦೦೦), ಸನತ್ಕುಮಾರ, ಮಾಹೇಂದ್ರರಿಗೆ ಅಷ್ಟಸಹಸ್ರಂ ( ೮೦೦೦ ), ಬ್ರಹ್ಮೇಂದ್ರರ್ಗೆರಡುಸಾವಿರ (೨೦೦೦), ಲಾಂತವೇಂದ್ರನಿಗೆ ಪಂಚಶತಂ ( ೫೦೦ ), ಮಹಾಶುಕ್ರೇಂದ್ರಂಗೆ ಇನ್ನೂರೈವತ್ತುಂ ( ೨೫೦ ), ಸಹಸ್ರಾರೇಂದ್ರಂಗೆ ನೂರಿಪ್ಪತ್ತೈದು ( ೧೨೫ ), ಆನತಾದಿಯ ನಾಲ್ವರ್ಗಂ ವಲ್ಲಭೆಯರು ತ್ರಿಷಷ್ಟಿ ( ೬೩ ), ದಕ್ಷಿಣೋತ್ತರ ಕಲ್ಪಂಗಳ ದೇವಿಯರ್ಗುತ್ಪತ್ತಿಸ್ಥಾನ ವಿಮಾನಂಗಳು ಸೌಧರ್ಮಕಲ್ಪದಲ್ಲಿ ( ೬೦೦೦೦೦ ) ಆರುಲಕ್ಷವುಂ, ಈಶಾನಕಲ್ಪದಲ್ಲಿ ನಾಲ್ಕುಲಕ್ಷವುಂ ( ೪೦೦೦೦೦ ), ಸನತ್ಕುಮಾರದೇವದಂಪತಿಗಳ ಕಾಮಸುಖಂಗಳನುಭವಣೆಯೆಂತೆಂದೊಡೆ—ಭವನವಾಸಿಗರಿಂದ ಈಶಾನಕಲ್ಪದವರಿಗೂ ಇರುವ ದೇವಿಯರುಗಳು ಕಾಯಪ್ರವೀಚಾರರು. ಮನುಷ್ಯರಹಾಗೆ ಅನುಭವಿಸದಿದ್ದರೆ ತೃಪ್ತಿಯಿಲ್ಲ. ಸನತ್ಕುಮಾರ, ಮಾಹೇಂದ್ರಕಲ್ಪದ ದೇವಿಯರು ಸ್ಪರ್ಶನಪ್ರವೀಚಾರರು. ಅನ್ಯೋನ್ಯಾಂಗಸ್ಪರ್ಶನಮಾತ್ರದೊಳೆ ಕಾಮಸುಖರಪ್ಪರ್,

ಅಲ್ಲಿಂ ಮೇಲಣ ನಾಲ್ಕುಂ ಕಲ್ಪದ ದೇವಿಯರು ರೂಪಪ್ರವೀಚಾರರು. ಶೃಂಗಾರರೂಪುಲಾವಣ್ಯ ಹಾವಭಾವವಿಳಾಸವಿಭ್ರಮಗಳನ್ನು ನೋಡಿ ಸುಖಮನೆಯ್ದುವರು.

ಶ್ಲೋಕ ॥ ಹಾವೋಮುಖವಿಕಾರಸ್ಸ್ಯಾದ್ಭಾವಶ್ಚಿಂತಂತು ಸಂಭವ: ॥
ವಿಲಾಸೋ ನೇತ್ರಜೋಜ್ಞೇಯೋ ವಿಭ್ರಮಾ ಭ್ರೂಯುಗಾಂತಯೋಃ ॥

ಅಲ್ಲಿಂ ಮೇಲಣ ನಾಲ್ಕುಕಲ್ಪದ ದೇವರ್ಕಳು ಶಬ್ದಪ್ರವೀಚಾರರುಂ. ಅನ್ಯೋನ್ಯ ಮೃದು ವಚನ ಮಧುರಗೀತಾಲಂಕಾರಕ್ಷಣಿತರವಂಗಳನ್ನು ಕೇಳಿ ಸಂತೋಷವನ್ನು ಹೊಂದುವರು. ಅಲ್ಲಿಂದ ಮೇಲಣ ನಾಲ್ಕು ಕಲ್ಪದ ದೇವರು ಮನಃಪ್ರವೀಚಾರರು. ಸ್ವಾಂಗನಾ ಸ್ಮರಣಮಾತ್ರದಿಂದಲೇ ಮನ್ಮಥಸುಖವನ್ನು ಹೊಂದುವರು. ಸ್ತ್ರೀಯರುಗಳೂ ಹಾಗೆಯೇ ಸುಖ ಹೊಂದುವರು. ಮತ್ತು ಅಲ್ಲಿಂದ ಮೇಲಣ ಅಹಮಿಂದ್ರರೆಲ್ಲರು ಅಪ್ರವೀಚಾರರು. ಆ ರೀತಿ ಯಾದ ದೇವರ್ಗೆ ಸುಖಮಿಲ್ಲೆನೆವೇಡಪ್ರವೀಚಾರರುಮೆಂಬುದುನಿದುವನಸೇವೆ ಅಂತದು ವೇದ ನೀಯ ಕರ್ಮದ ಉದೀರಣೆಯೊಳಾದ ದುಃಖವನ್ನು ಉಪಶಮಿಸಲ್ಕೆ ಪ್ರತೀಕಾರಮಂತಪ್ಪ ದುಃಖವು ಅಹಮಿಂದ್ರರಿಗಿಲ್ಲದಿರುವದರಿಂದ ಪ್ರವೀಚಾರಮಿಲ್ಲ. ಪಂಚವಿಧಾಂತರಾಯದ ಕ್ಷ ಯೋಪಶಮೋತ್ಕೃಷ್ಟ ಸಮುದ್ಭವಸಾತ ಶುಭಪಂಚಕದಿಂದವರ್ಗೆ ಸಪ್ರವೀಚಾರಾನನ್ತಗುಣ ನಿಃಪ್ರವೀಚಾರಸುಖಮುಂಟು. ಆ ಸುಖಮಂತುಟೆಂತುಟೆಂದಿಂತು ಉಪಮಿಸಲ್ಕೆ ಬಾರದು. ಅಂದರೆ ಆ ಸುಖಗಳಿಗೆ ಸಮಾನವಾದ ಸುಖವೇ ಇಲ್ಲವೆಂದರ್ಥವು

ಶ್ಲೋಕ ॥ ಹೃಷೀಕಜಮನಾತಂಕಂ ದೀರ್ಘಕಾಮೋಪಲಾಲಿತಂ ॥
ನಾಕೇನಾಕೌಸಾಂ ಸೌಖ್ಯಂ ನಾಕೇನಾಕೌಕಸಾಮಿವ ॥

ಮತ್ತು ಆ ವೈಮಾನಿಕರ್ಗಾಯುಷ್ಯಂಗಳುಂ, ಅಣಿಮಾದ್ಯೈಶ್ವರ್ಯಂಗಳುಂ, ಸುಖಂಗಳುಂ, ಕಾಂತಿಗಳುಂ, ಲೇಶ್ಯವಿಶುದ್ಧಿಗಳುಂ, ಇಂದ್ರಿಯವಿಷಯಂಗಳುಂ, ಅವಧಿವಿಷಯಂಗಳುಂ ಮೇಲೆ ಮೇಲೆ ಹೆಚ್ಚುವವು. ತೊಳಲುವ ಕ್ಷೇತ್ರಂಗಳುಂ, ಶರೀರಂಗಳುಂ, ಅಭಿಮಾನಂಗಳುಂ, ಪರಿಗ್ರ ಹಂಗಳುಂ ಕಡಿಮೆಯಾಗುವವು. ಲೇಶ್ಯಂಗಳು ಭವನವಾಸಿಗರಿಂದ ಹಿಡಿದು ಪ್ರಥಮ ಎರಡು ಕಲ್ಪದವರಿಗೂ ಪೀತಲೇಶ್ಯವಾಗುವದು. ದ್ವಿತೀಯ ಯುಗಲದಲ್ಲಿ ಪೀತ, ಪದ್ಮಲೇಶ್ಯಗಳಾಗುವವು. ತ್ರಿಚತು:ಪಂಚಮಗಳಲ್ಲಿ ಪದ್ಮಲೇಶ್ಯೆಯಾಗುವವು. ಷಷ್ಟಮದಲ್ಲಿ ಪದ್ಮ ಶುಕ್ಲ ಲೇಶ್ಯಗಳಾಗು ವವು. ಅಲ್ಲಿಂದ ಮೇಲೆಲ್ಲಾ ಶುಕ್ಲಲೇಶ್ಯೆಯೊಂದೇ ಆಗುವದು. ಭವನತ್ರಿಕರಿಗೆ ಅಪರ್ಯಾಪ್ತಿಕಾ ಲದೊಳು ಕೃಷ್ಣನೀಲಕಾಪೋತಗಳೆಂಬ ಅಶುಭ ಲೇಶ್ಯಗಳೇ ಆಗುವವು. ಮತ್ತಂವಿಗುರ್ವಣಾ ಶಕ್ತಿಗಳುಂ, ಅವಧಿವಿಷಯಂಗಳುಂ ಪ್ರಥಮದ್ವಿತೀಯ ಯುಗಳದವರಿಗೆ. ಪ್ರಥಮದ್ವಿತೀಯ ಪೃಥ್ವಿಯಕಡೆಯವರಿಗೂ. ಅಲ್ಲಿಂ ಮೇಗಣ ಮೇಗಣ ಮೂರೆಡೆಯ ನಾಲ್ಕುಂ ಕಲ್ಪಗಳ ದೇವ ರ್ಗೆ ತ್ರಿಚತು:ಪಂಚಮ ಪೃಥ್ವಿಪರ್ಯಂತದವರಿಗೂ ಆಗುವದು. ನವ ಗ್ರೈವೇಯಕದವರುಂ, ನವಾಣುದ್ದಿಶೆಯವರುಂ ಷಷ್ಟಮ ಸಪ್ತಮ ಪೃಥ್ವಿತಲದವರಿಗೂ ಅರಿಯುವರು. ವಿಗುರ್ವಿಸುವ ಶಕ್ತಿಯನ್ನುಳ್ಳವರುಂ. ಪಂಚಾಣುತ್ತರರಯ ಅಹಮಿಂದ್ರರುಂ, ಸಪ್ತಮಲೋಕ ನಾಳಿಯುಮಂ ಪ್ರತ್ಯಕ್ಷಮಾಗರಿವರು. ತಂತಂಮರಿವನಿತು ಕ್ಷೇತ್ರಮೆಲ್ಲಮಂ ನಿಜಶರೀರದಿಂದ ವ್ಯಾಪಿಸುವರುಂ,

ಮುಗುಳ್ಚಿಕ್ಕುವ ಶಕ್ತಿಯನ್ನುಳ್ಳವರುಂ, ಮತ್ತಮೆರಡುಮೆರಡುಂ, ನಾಲ್ಕುಮೆರಡುಂ ಯೆರಡುಂ ನಾಲ್ಕುಂ ಕಲ್ಪದೊಳು ಮೂರೆಡೆಯ ಮೂರರೊಳಂ, ಅನುದ್ದಿಶಾನುತ್ತರೆಯೊಳಂ.

ಕಂದ ॥ ತೊಳಪಶರೀರೋತ್ಸೇದಂ ।
ಮೊಳನೇಳಾರಯ್ದು ಬಳಿಕ ನಾಲ್ಕಲ್ಲಿಂದಂ ॥
ದಳಹೀನಕ್ರಮಮತ್ತಲು ।
ಮೊಳನೊಂದಪ್ಪಿನೆಗಮಿವುದಶಸ್ಥಾನಂಗಳ್ ॥ ೫೩ ॥

ಗಾಹೆ ॥ ದುಸುದುಸುಚವುದುಸುಚದುತಿತ್ರಿಸುತೇ ಸುಹಉಸ್ಸೇಹೋ ।
ರಯಣಣಸತ್ತಛಪ್ಪಂಣಚತ್ತಾರಿದಳೇಣಹೀಣಕಮಾ ॥ ೨೬ ॥

ಆಯುಷ್ಯಂ, ಕಲ್ಪಾಷ್ಟಯುಗದೊಳುಂ, ನವಗ್ರೈವೇಯಕದೊಳುಂ, ಅಣುದ್ದಿಶೆಯೊಳುಂ ಅನುತ್ತರೆಯೊಳುಂ.

ಕಂದ ॥ ಎರಡೇಳುಪತ್ತು ಪದಿನಾ- ।
ಲ್ಕೆರಡುತ್ತರೆಯಾಗೆಪೆರ್ಚುಗುಂ ಸ್ಥಿತಿಯಿಪ್ಪ- ॥
ತ್ತೆರಡುವರಮತ್ತಾವೊಂದು ।
ತ್ತರೆಯಿಂ ಮೂವತ್ತಮೂರುವರಮಂಬುಧಿಗಳ್ ॥ ೫೪ ॥

ಜಘನ್ಯಸೌಧರ್ಮಕಲ್ಪದೊಳು ಪಲ್ಯೋಪಮಮೀಶಾನಕಲ್ಪದೊಳಧಿಕಂ, ಮೇಗೆಲ್ಲಂ ಕೆಳಗಣವರುತ್ಕೃಷ್ಟಂಗಳು ಸಮಯಾಧಿಕವಾಗೆ ಮೇಗಣವರ ಜಘನ್ಯಂಗಳು.

ಗಾಹೆ ॥ ಸೋಹಂಮುವರಂಪ್ಪಲ್ಲಂ ವರಮುವಹಿಐಸತ್ತದಸಯುಜೊದ್ದನಯಂ ।
ಬಾವೀಸಾತ್ತಿದುವಟೆಯೆಕೆಕ್ಕಜ್ಞಾವತೆತ್ತೀಸಂ ॥ ೨೭ ॥

ಸೌಧರ್ಮದಲ್ಲಿ ಜಘನ್ಯಪಲ್ಯಂ, ಉತ್ಕೃಷ್ಟಸಾಗರೋಪಮಾನಂಗಳು. ೨, ೭, ೧೦, ೧೪, ೧೬, ೧೮, ೨೦, ೨೨, ೨೩, ೨೪, ೨೫, ೨೬, ೨೭, ೨೮, ೨೯, ೩೦, ೩೧, ೩೨, ೩೩, ಸರ್ವಾರ್ಥಸಿದ್ಧಿಯಲ್ಲಿ ಮೂವತ್ತುಮೂರು ಸಾಗರೋಪಮಂ ಜಘನ್ಯ ಮಧ್ಯಮ-ಸ್ಥಿತಿ ವಿಕಲ್ಪಗಳಿಲ್ಲಾ.

ಗಾಹೆ ॥ ಸಂಮೇಪೂಡೋಊಣಂ ಸಾಯುದರದಳಮಹಿಯಮಾಸಹಸಾರಾ ।
ಜಳಹಿದಳಮುಡುವರಾವೂಪಡಳಪ್ಪಡಿಜಾಣಹಾಣಿಚಯಂ ॥ ೨೮ ॥

ಟೀ॥—ಆದ್ಯಕಲ್ಪದ್ವಯದ ಹಾನಿವೃದ್ಧಿಯ ಪ್ರಮಾಣಂ ಸಾಗರೋಪಮದ ದ್ವಿತ್ರಿಂಶದ್ಭಾಗೇ ೨/೩೦, ಪಡಲಂ ಪ್ರತ್ಯುತ್ಕೃಷ್ಟಾಯುಷ್ಯಸೋ, ೧/೨, ೧೯/೩೦, ೨೦/೩೦, ೨೫/೩೦, ೨೭/೩೦, ೨೯/೩೦, ೩೧/೩೦, ೩೩/೩೦, ೩೭/೩೦ ೩೯/೩೦, ೪೧/೩೦, ೪೩/೩೦, ೪೫/೩೦, ೪೭/೩೦, ೪೯/೩೦, ೫೧/೩೦, ೫೩/೩೦, ೫೫/೩೦, ೫೭/೩೦, ೫೯/೩೦, ೬೧/೩೦, ೬೩/೩೦, ೬೫/೩೦, ೬೭/೩೦, ೬೯/೩೦, ೭೧/೩೦ ೭೩/೩೦, ೫/೧. ಸನತ್ಕುಮಾರಯುಗಳದಲ್ಲಿ ೪೫/೧೪, ೫೫/೧೪, ೬೫/೧೪, ೭೫/೧೪, ೮೫/೧೪, ೯೫/೧೪. ಬ್ರಹ್ಮಯುಗಳದಲ್ಲಿ ಮೂವತ್ತಮೂರಕ್ಕೆಭೇದ ೩೩|೯/೪, ೩೯/೪, ೨೧/೨. ಲಾಂತವದ್ವಯದಲ್ಲಿ ಇಪ್ಪತ್ತೈದಕ್ಕೆ ೨೫/೨, ೧೯/೨

ಶುಕ್ರದ್ವಯದಲ್ಲಿ ಮೂವತ್ಮೂರಕ್ಕೆ ಭೇದ ೩೩/೨. ಶತಾರದ್ವಯದಲ್ಲಿ ಮೂವತ್ತೇಳಕ್ಕೆ ೩೭/೨. ಆನತಾದ್ವಯದಲ್ಲಿ ಪೂತಾಯುಷ್ಯರಿಗೆ ಪುಟ್ಟುಗೆಯಿಲ್ಲ. ೧೯/೨, ೩೯/೨, ೨೦. ಆರಣಯುಗದಲ್ಲಿ ಅರುವತ್ತೆರಡಕ್ಕೆ ೬೨/೩. ಅಲ್ಲಿಂದ ಮೇಲಣವರಿಗೆ ಮುಂಚೆ ಹೇಳಿದ ಹಾಗೆ ಪೂತಾಯುಷ್ಯರೊಳು ರತ್ನೇಂದ್ರಿಕದೊಳು ಜಘನ್ಯಾಯುಷ್ಯಂ ಪಲ್ಯಂ, ತ್ರಿದ್ವಿಭಾಗೆ ಕ್ಷೆ.

ಗಾಹೆ ॥ ದಳಹಿದಳಪ್ಪಲ್ಲದ್ದಂ ಭವಣೆವೆಂತರದುಗೆಕಮೇಣಹೀಯಸ್ಸಮ್ಮೇ ॥
ಮಿಚ್ಛೇಪೂದೋಪಲ್ಲಾಸಖ್ಖಂತುಸಂಬಥ್ಥ ॥ ೨೯ ॥

ಪೂತಾಯುಷ್ಯರೊಳು ಸಮ್ಯಗ್ದೃಷ್ಟಿಗರ್ಧಸಾಗರೋಪಮಮಧಿಕಮಕ್ಕುಂ, ವ್ಯಂತರ ಜ್ಯೋತಿಷ್ಕರೊಳು ಸಮ್ಯಗ್ದೃಷ್ಟಿಗಳಿಲರ್ಧಪಲ್ಯಮಧಿಕಮಕ್ಕುಂ, ಅಂತು ಭವನವಾಸಿಗರೊಳಸುರರ್ಗೆ ಪೊಂದೂವರೆ ಸಾಗರೋಪಮ, ವ್ಯಂತರ ಜ್ಯೋತಿಷ್ಕರೊಳು ಪೊಂದುವರೆ ಪಲ್ಯಮಕ್ಕುಂ, ಪೂತಾಯುಷ್ಯರಪ್ಪ ಮಿಥ್ಯಾದೃಷ್ಟಿಗೆ ಸರ್ವತ್ರಚತುರ್ನಿಕಾಯದೊಳು ಪಲ್ಯಾಸಂಖ್ಯಾತಭಾಗಮಧಿಕಮಕ್ಕು, ಮತ್ತಂ ಸ್ತ್ರೀಯರ್ಗೆ ಪ್ರಥಮ ಯುಗಲದಲ್ಲಿ ಸಾಧಿಕಪಲ್ಯಂ, ಜಘನ್ಯಾಯುಷ್ಯಂ, ಉತ್ಕೃಷ್ಟಾಯುಷ್ಯಪಳಿತೋಪಮಂಗಳು, ಮತ್ತಂ ಹನ್ನೊಂದು ಕಲ್ಪದವರಿಗೂ ಎರಡೆರಡು ವೃದ್ಧಿ, ಮತ್ತಂ ನಾಲ್ಕು ಕಲ್ಪಗಳವರಿಗೂ ಏಳು ವೃದ್ಧಿಯಾಗೆ ಅಚ್ಯುತ ಕಲ್ಪದ ದೇವಿಯರ್ಗೆ ಐವತ್ತೈದು ಪಳಿತೋಪಮಗಳಾಗುವವು ॥

ಉಕ್ತಂಚ॥ ಗಾಹೆ॥ ಸಾಹಿಯಪಲ್ಲಂ ಅವರಂ ಕಪ್ಪದುಗಿದ್ದಿಣಪಣಗಪಢಮವರಂ ॥
ಯಕ್ಕಾರಸೇಚಉಕ್ಕೆಕಪ್ಪೇಥೋಸತ್ತಪರಿವಡ್ಡಿ ॥ ೩೦ ॥

ತಾ॰—ಸೌಧರ್ಮಕಲ್ಪದಲ್ಲಿ ಸಾಧಿಕಪಲ್ಯಂ, ಜಘನ್ಯಸ್ಥಿತಿ, ಸೌಧರ್ಮಾದಿಕಲ್ಪಂಗಳಲ್ಲಿ ಉತ್ಕೃಷ್ಟಸ್ಥಿತಿಪಲ್ಯಗಳು, ೫, ೭, ೯, ೧೧, ೧೩, ೧೫, ೧೭, ೧೯, ೨೧, ೨೩, ೨೫, ೨೭, ೩೪, ೪೧, ೪೮, ೫೫; ಮತ್ತಂ ಆ ದೇವದಂಪತಿಗಳಿಗೆ—

ಕಂದ॥ ಸಹಜಾಂಗಾಂಬರಭೂಷಣ ।
ಸಹಸ್ರಕಿರಣಂಗಳುಂ ನಿಜಾಂಗಪ್ರಭೆಯುಂ ॥
ಗೃಹಭಿತ್ತಿಯೇಮಣಿಕುಟ್ಟಿಮ ।
ಮಣಿಯಂಶುಗಳುಂ ಪಳಂಚಿ ಪತ್ತುಂ ದೆಶೆಯಂ ॥ ೫೫ ॥

ಪಾಸಿನಪೊರೆಯೊಳು ಜನಿಯಿಸಿ ।
ಭಾಸುರಭೂಷಾಂಬರಪ್ರಸೂನರ್ತೇಜೋ- ॥
ದ್ಭಾಸಿಗಳೊಪ್ಪಿನ ತಂಮಾ- ।
ವಾಸಿಸಿದರ್ಮನ್ನಸುಖಮನುಣ್ಬರ್ದಿವದೊಳ್ ॥ ೫೬ ॥

ಸಮಚತುರಸ್ರಶರೀರ- ।
ರ್ಸಮಸ್ತಮಲಧಾತುದೋಷರಹಿತಸ್ವೇದ ॥
ಶ್ರಮರೋಗವರ್ಜಿತ ದಿ- ।
ವ್ಯಮೂರ್ತಿಗಳು ದಿವ್ಯಬೋಧರಣಿಮಾದಿಗುಣರ್ ॥ ೫೭ ॥

ಸಾಸಿರವರ್ಷಕ್ಕನ- ।
ತಿಶಯಾನ್ನಮಂ ನೆನೆವರೋರ್ಮೆಸುಚ್ಛ್ವಸುರ್ಖದಿಂ ॥
ಮಾಸಾರ್ಧಕ್ಕೆಂ ಸಮಸ್ತ ಸು- ।
ರಾಸುರರಭ್ಯುಪಮ ಜೀವಿಗಳು ಸೌರಂಭವಮುಂ ॥ ೫೮ ॥

ತಾ॥—ಈ ಕ್ರಮದಿಂದ ಆಯುಷ್ಯವು ಹೆಚ್ಚಾಗಲು ಆಹಾರಕಾಲವುಂ ಉಛ್ವಾಸಕಾಲವುಂ ಹೆಚ್ಚುವದು. ಆ ರೀತಿಯಾಗಿ ಹೆಚ್ಚಿ ಸರ್ವಾರ್ಥಸಿದ್ಧಿಯ ದೇವರು ಮೂವತ್ತುಮೂರುಸಾಸಿರ (೩೩೦೦೦) ವರ್ಷಗಳಿಗೊಂದುಸಾರಿ ಮನಸ್ಸಿನಲ್ಲಿ ಆಹಾರವನ್ನು ಚಿಂತಿಸುವರು. ಹದಿನಾರು ವರೆ (೧೬½) ತಿಂಗಳಿಗೊಂದುಸಾರಿ ಉಚ್ಛ್ವಾಸವನ್ನು ಬಿಡುವರು. ಮತ್ತು ಅಂಥಾ ಸ್ವರ್ಗಗಳೊಳು ಯಾರುಂ ಹುಟ್ಟದೆ ಸಾಯದೆ ಇರುವ ಅಂತರಂ ಸೌಧರ್ಮ ಈಶಾನಗಳಲ್ಲಿ ಏಳು ದಿನಂ (೭); ಸನತ್ಕುಮಾರ, ಮಾಹೇಂದ್ರಗಳಲ್ಲಿ ಪಕ್ಷಂ (೧೫); ಅದರಿಂದ ಮೇಲಿರುವ ನಾಲ್ಕರಲ್ಲಿ ಮಾಸಂ (೧); ಅಲ್ಲಿಂದ ಮೇಲಿರುವ ನಾಲ್ಕರಲ್ಲಿ ದ್ವಿಮಾಸಂ (೨); ಅಲ್ಲಿಂದತ್ತ ನಾಲ್ಕರಲ್ಲಿ ಚಾತುರ್ಮಾಸಂ (೪); ಕಲ್ಪಾತೀತದಲ್ಲಿ ಷಣ್ಮಾಸಂ (೬); ಮತ್ತು ಉತ್ಕೃಷ್ಟದಿಂದ ಇಂದ್ರರುಂ, ಮಹಾದೇವಿಯರುಂ, ಲೋಕಪಾಲರುಂ, ತಂತಂಮ ಸ್ಥಾನಗಳಲ್ಲಿ ಹುಟ್ಟದಿರುವದು ಆರು ತಿಂಗಳುಂ (೬); ಸಾಮಾನಿಕ, ತ್ರಯತ್ರಿಂಶ, ಪಾರಿಷದಾತ್ಮರಕ್ಷರೆಂಬ ದೇವರ್ಗೆ ನಾಲ್ಕು (೪) ತಿಂಗಳು.

ಸೂ॥ ಬ್ರಹ್ಮಲೋಕಾಂತಾಲಯಾಶ್ಚತುರ್ವಿಂಶತಿಲೋಕಾಂತಿಕಾ: ॥ ೧೪ ॥

ತಾ॥—ಬ್ರಹ್ಮಲೋಕದ ಕಡೆಯಲ್ಲಿರುವ ಲೋಕಾಂತಿಕದೇವರ ಭೇದವು ಹ್ಯಾಗಂದರೆ—ಬ್ರಹ್ಮಲೋಕದ ಕಡೆಯೊಳೀಶಾನ್ಯ ದಿಕ್ಕಿನಲ್ಲಿರುವ ೧ ಸಾರಸ್ವತರುಂ, ೨ ಆಗ್ನ್ಯಾಭ, ೩ ಸೂರ್ಯಾಭ, ೪ ಆದಿತ್ಯ, ೫ ಚಂದ್ರಾಭ, ೬ ಸತ್ಯಾಭ, ೭ ವಹ್ನಿ, ೮ ಶ್ರೇಯಸ್ಕರ, ೯ ಕ್ಷೇಮಂಕರ, ೧೦ ಅರುಣ, ೧೧ ವೃಷಭೇಷ್ಟರುಂ, ೧೨ ಕಾಮಧರ, ೧೩ ಗರ್ಧತೋಯ, ೧೪ ನಿರ್ಮಾಣರಾಜಸ್ಕ, ೧೫ ದಿಗಂತರಕ್ಷಕ, ೧೬ ತುಷಿತ, ೧೭ ಆತ್ಮರಕ್ಷಿತ, ೧೮ ಸರ್ವರಕ್ಷಿತ, ೧೯ ಅವ್ಯಾಬಾಧರುಂ, ೨೦ ಮರುತು, ೨೧ ಅರಿಷ್ಟ, ೨೨ ವಸು, ೨೩ ಅಶ್ವ, ೨೪ ವಿಶ್ವರೆಂದಿವರು ಲೋಕಾಂತಿಕದೇವರು. ಇವರ ಸಂಖ್ಯೆ ಎನಿತೆಂದೊಡೆ—ಸಾರಸ್ವತರು ಯೇಳ್ನೂರೇಳ್ಪರು (೭೦೭) ॥ ೧ ॥ ಆಗ್ನ್ಯಾಭರು ಏಳುಸಾಸಿರದೇಳ್ಬರು (೭೦೦೭) ॥ ೨ ॥ ಸೂರ್ಯಾಭರು ವೊಂಭೈಸಾಸಿರದೊಂಭತ್ತು (೯೦೦೯) ॥ ೩ ॥ ಆದಿತ್ಯರೇಳ್ನೂರೇಳ್ಬರು (೭೦೭) ॥ ೪ ॥ ಚಂದ್ರಾಭರು ಹನ್ನೊಂದು ಸಾವಿರದಹನ್ನೊಂದು (೧೧೦೧೧) ॥೫॥ ಸತ್ಯಾಭರು ಹದಿಮೂರು ಸಾವಿರದಹದಿಮೂರು (೧೩೦೧೩) ॥೬॥ ವಹ್ನಿಗಳು ಏಳುಸಾಸಿರದೇಳ್ಬರು (೭೦೦೭) ॥೭॥ ಶ್ರೇಯಸ್ಕರರು ಹದಿನೈದುಸಾವಿರದಹದಿನೈದುಂ (೧೫೦೧೫) ॥೮॥ ಕ್ಷೇಮಂಕರರು ಹದಿನೇಳು ಸಾವಿರದಹದಿನೇಳುಂ (೧೭೦೧೭) ॥ ೯ ॥ ಮಂದಿಯುಂ, ಅರುಣರು ಏಳುಸಾವಿರದೇಳ್ವರು (೭೦೦೭) ॥೧೦॥ ವೃಷಭೇಷ್ಟರು ಹತ್ತೊಂಭತ್ತುಸಾವಿರದಹತ್ತೊಂಭತ್ತು (೧೯೦೧೯) ॥೧೧॥ ಕಾಮಧರರು ಇಪ್ಪತ್ತೊಂದುಸಾವಿರದಇಪ್ಪತ್ತೋರ್ವರು (೨೧೦೨೧) ॥೧೨॥ ಗರ್ಧತೋಯರು ವೊಂಭತ್ತುಸಾವಿರದವೊಂಭತ್ತು (೯೦೦೯) ॥೧೩॥ ಮಂದಿಯುಂ ನಿರ್ಮಾಣರಜಸ್ಕರರು ಇಪ್ಪ

ತ್ಮೂರುಸಾವಿರದಇಪ್ಪತ್ಮೂವರು ( ೨೩೦೨೩ )||೧೪|| ದಿಗಂತರರಕ್ಷಿತರು ಇಪ್ಪತ್ತೈದುಸಾವಿರದ ಇಪ್ಪತ್ತೈವರು ( ೨೫೦೨೫ ) ||೧೫|| ತುಷಿತರು ವೊಂಭತ್ತುಸಾವಿರದವೊಂಭತ್ತು ಮಂದಿಯು ( ೯೦೦೯ ) ||೧೬|| ಆತ್ಮರಕ್ಷಿತರು ಇಪ್ಪತ್ತೇಳುಸಾವಿರದಇಪ್ಪತ್ತೇಣ್ಬರು ( ೨೭೦೨೭ ) ||೧೭|| ಸರ್ವರಕ್ಷಿತರು ಇಪ್ಪತ್ತೊಂಭೈಸಾವಿರದಇಪ್ಪತ್ತೊಂಭ್ಯರು (೨೯೦೨೯) ||೧೮|| ಅವ್ಯಾಬಾಧರು ಹನ್ನೊಂದುಸಾವಿರದಪನ್ನೋರ್ವರು (೧೧೦೧೧) ||೧೯|| ಮರುತುಗಳು ಮೂವತ್ತೊಂದುಸಾವಿರದಮೂವತ್ತೋರ್ವರು ( ೩೧೦೩೧ ) ||೨೦|| ವಸುಗಳು ಮೂವತ್ಮೂರುಸಾವಿರದಮೂವತ್ಮೂವರು (೩೩೦೩೩) ||೨೧|| ಅರಿಷ್ಟರು ಹನ್ನೊಂದುಸಾವಿರದಹನ್ನೋರ್ವರು (೧೧೦೧೧) ||೨೨|| ಅಶ್ವರು ಮೂವತ್ತೈದುಸಾವಿರದಮೂವತ್ತೈವರು ( ೩೫೦೩೫ ) ||೨೩|| ವಿಶ್ವರು ಮೂವತ್ತೇಳು ಸಾವಿರದಮೂವತ್ತೇಣ್ಬರುಂ ( ೩೭೦೩೭ ) ||೨೪|| ಅಂತಾ ಲೋಕಾಂತಿಕದೇವರಲ್ಲಾ. ಕೂಡಿ ನಾಲ್ಕುಲಕ್ಷೆಯುಮೇಳುಸಾಸಿರದೆಂಟುನೂರಿಪ್ಪತ್ತು ( ೪೦೭೮೨೦ ) ಆಗುವರು.

ಮತ್ತಂ ಬ್ರಹ್ಮಲೋಕವೆಂಬುವದು ನಿಜನಿರಂಜನ ಪರಬ್ರಹ್ಮಸ್ವರೂಪಮಭೇದಭಾವನೆಯಿಂದಾಲೋಕಿಸುವದು ಬ್ರಹ್ಮಲೋಕವೆನ್ನುವದು. ಮೇಣೈದನೆಯ ಸ್ವರ್ಗದ ಕಡೆಗಡೆಯಲ್ಲಿರುವದು ಮೇಣ್ಸಂಸಾರದ ಕಡೆಯನೆಯ್ದಲ್ವೇಡಿದರುಂ ಬ್ರಹ್ಮಲೋಕಾಲಯದೇವರೆಂಬುದೀ ಲೋಕಾನ್ತಿಕದೇವರೆಲ್ಲಂ ಹೀನಾಧಿಕ ಭಾವವಿಲ್ಲದವರುಂ, ವಿಷಯರಹಿತರುಂ, ದೇವಋಷಿಯರೆಂಬವರುಂ, ದ್ವಾದಶಾನುಪ್ರೇಕ್ಷೆಯನ್ನು ಎಡೆವರಿಯದೆ ಭಾವಿಸುವರುಂ, ಶೇಷಪುರಂಧರರಿಂದ ಅಭ್ಯರ್ಚನೀಯರುಂ, ಚತುರ್ದಶ ಪೂರ್ವಧರರುಂ, ತೀರ್ಥಕರ ದೀಕ್ಷಾಕಲ್ಯಾಣದಲ್ಲಿ ಪ್ರತಿಬೋಧನಾಪರರಾದವರು. ಮತ್ತಮಿವರೆಲ್ಲರ ಸಂಖ್ಯೆಯೆನಿತೆಂದೊಡೆ ೪೦೭೮೨೦, ಇವರೆಲ್ಲರಾಯುಷ್ಯಂ ಎಂಟುಸಾಗರೋಪಮಂಗಳು || ಅವರಲ್ಲಿ ಅರಿಷ್ಟರಿಗೆ ವೊಂಭತ್ತು ಸಾಗರೋಪಮಂ ಪಂಚಹಸ್ತೋತ್ಸೇದ ಶರೀರಂಗಳುಂ, ಶುಕ್ಲಲೇಶ್ಯೆಯನ್ನುಳ್ಳವರುಂ, ಚತುರ್ಥ ಗುಣಸ್ಥಾನ ಯೋಗ್ಯ ವೀತರಾಗ ಸ್ವಸಂವೇದನಜ್ಞಾನದಿಂ ನಿಜನಿರಂಜನಾತ್ಮತತ್ವಮಂ ಭಾವಿಸುವರು. ಸ್ವಶುದ್ಧಾತ್ಮರುಚಿರೂಪನಿಶ್ಚಯಸಮ್ಯಕ್ತ್ವಸಮನ್ವಿತರುಂ, ಸಂಸಾರದುಃಖಭಯಭೀತರುಂ.

## ಸೂತ್ರಂ|| ಅಣಿಮಾದ್ಯಷ್ಟಗುಣಾಃ || ೮ ||

೧ ಅಣಿಮೆ, ೨ ಮಹಿಮೆ, ೩ ಲಘಿಮೆ, ೪ ಪ್ರಾಪ್ತಿ, ೫ ಪ್ರಾಕಾಮ್ಯ, ೬ ಈಶಿತ್ವ, ೭ ವಶಿತ್ವ, ೮ ಕಾಮರೂಪಿತ್ವಮೆಂದಿವಷ್ಟಗುಣಂಗಳು || ಮತ್ತಮಾದೇವಗತಿಯೊಳು ಭೇದಾಭೇದರತ್ನತ್ರಯಧಾರಕರುಂ, ಸಮ್ಯಗ್ದೃಷ್ಟಿಗಳುಂ, ಇಂದ್ರಾದಿ ಮಹರ್ಧಿಕಸ್ಥಾನದೊಳು ಶುದ್ಧ ಚಾರಿತ್ರನಾನಾಭೇದೋಚ್ಚನಿಲಯಮನೆಯ್ದಿ ನಿರತಿಶಯಸುಖಮನನುಭವಿಸುವರು || ಮತ್ತ ಅಂಥಾ ದೇವಗತಿಯಲ್ಲಿ ಎಂಥವರು ಹುಟ್ಟುವರೆಂದೊಡೆ, ಅಸಂಜ್ಞಿಪರ್ಯಾಪ್ತಕಂಗಳು ವಾನವ್ಯಂತರದೊಳುಂ, ತಾಪಸರುಂ, ಭೋಗಭೂಮಿಯ ಮಿಥ್ಯಾದೃಷ್ಟಿಗಳುಂ ಭವನತ್ರಯದಲ್ಲಿಯುಂ, ಭೋಗಭೂಮಿಯ ಸದೃಷ್ಟಿಗಳು ಸೌಧರ್ಮದ್ವಿಕದಲ್ಲಿ ಹುಟ್ಟುವರು. ಮತ್ತಂ ಭೋಗತೃಷ್ಣೆಯನುಳಿದ ಕಿರುಗೂಸುಗಳುಂ, ಕುಮಾರಬ್ರಹ್ಮಚಾರಿಗಳುಂ, ಪರವಶದಿ ಬ್ರಹ್ಮ

ಚರ್ಯೆಯಲ್ಲಿದ್ದವರುಂ, ಕಟ್ಟುಪಟ್ಟುಂ ತಗಪಟ್ಟುಂ ಸೆರೆಯೊಳಿರ್ದುಂ ಅಲಸದೆ, ಬೇಸರದೆ, ಮುನಿಯದೆ ಕಾಯಕ್ಲೇಶಮಂ ಪರವಶದಿ ಮಾಡುವವರುಂ, ದೇವಗತಿಗಾಯುಷ್ಯಮಂ ಕಟ್ಟಿ ಬಳಿಕಂ ಜಲಾನಲಾದಿ ಪ್ರವೇಶದಿಂ ಸತ್ತವರುಂ ನೀಚದೇವರಾಗಿ ಹುಟ್ಟುವರು, ಇತ್ತಮುತ್ಕೃಷ್ಟವಾದ ಬ್ರಹ್ಮಚರ್ಯಾದಿಗಳುಂ, ಆತ್ಮಾರಾಧಕರಾದ ಪಾರಿವ್ರಾಜಕರುಂ, ಬ್ರಹ್ಮಕಲ್ಪದವರಿಗೂ ಹುಟ್ಟುವರು, ಆ ಪರಮಹಂಸಜೀವಕರು ಅಚ್ಯುತಕಲ್ಪಂಬರಂ ನೀಚದೇವರಾಗುವರು. ತಿರ್ಯಗ್ಮನುಷ್ಯರಾದ ಅಸಂಯತ ಸಮ್ಯಗ್ದೃಷ್ಟಿಗಳುಂ, ದೇಶಸಂಯುತರುಂ, ಉಗ್ರತಪಸ್ವಿನಿಯರಾದ ದ್ರವ್ಯಸ್ತ್ರೀಯರುಂ ಅಚ್ಯುತಕಲ್ಪದವರಿಗೂ ಮಹರ್ಧಿಕದೇವರಾಗುವರು. ಮತ್ತು ದ್ರವ್ಯದಿಂ ಮಹಾವ್ರತಿಗಳ ಭಾವನೆಯಿಂ, ಭಾವದಿಂ ದೇಶವ್ರತಿ, ಅಸಂಯತ ಸಮ್ಯಗ್ದೃಷ್ಟಿ, ಮಿಥ್ಯಾದೃಷ್ಟಿಗಳಾದ ಮನುಷ್ಯರುಂ, ಉತ್ಕೃಷ್ಟದಿಂದ ನವಗ್ರೈವೇಯಕದವರಿಗೂ ಹುಟ್ಟುವರು. ದ್ರವ್ಯಭಾವದಿಂ ಮಹಾವ್ರತಿಗಳುಂ, ಮಹಾಋದ್ಧಿಸಂಪನ್ನರುಂ, ಉಪಶಮಶ್ರೇಣಿಯೊಳು ಕಾಲಂಗೆಯ್ದವರುಂ, ಸ್ವಶುದ್ಧಾತ್ಮಸ್ವರೂಪರುಂ, ಧರ್ಮಶುಕ್ಲಧ್ಯಾನದಿಂದಂ ಭಾವಿಸುವವರುಂ, ಸರ್ವಾರ್ಥಸಿದ್ಧಿಯವರಿಗೂ ಹುಟ್ಟುವರು. ಈಶಾನಕಲ್ಪದವರಿಗೆ, ಕಂದರ್ಪದೇಶದೇವರುಂ, ಅಚ್ಯುತಕಲ್ಪದವರಿಗೆ ಆಭಿಯೋಗದೇವರುಂ, ಹುಟ್ಟಿ ತಂತಂಮ ಕಲ್ಪದ ಜಘನ್ಯಾಯುಷ್ಯಮಂ ಕಟ್ಟಿ ಮನೋದುಃಖಮನನುಭವಿಸುವರು.

ಕಂದ॥ ಕರಯುಗಮಂ ಮುಗಿದೀ ಕಿಂ- ।
ಕರವಾಹನದೇವನಪ್ಪೆನೇಂ ಪಾಪಿಯೇನೋ- ॥
ತ್ಕರಕರಮೆಂದಾವಾಹನ ।
ಸುರಾದಿಗಳು ನೊಂದು ಬೇವುತಿರ್ಪರ್ಮನದೊಳ್ ॥ ೫೫ ॥

ವಚನ ॥ ಅಂತು ಪುಟ್ಟಿದಂತಪ್ಪೀದೇವರ್ಕಳುಮೆಲ್ಲಮುಪಪಾತಭವನದ ಪಾಸಿನ ಪೊರೆಯೊಳು ನೆಲಸಿದನ್ತರ್ಮುಹೂರ್ತಕೆ, ಷಟ್ಪರ್ಯಾಪ್ತಿಗಳ್ನೆರೆವುದುಂ, ದಿವ್ಯಶರೀರವನ್ನು ಕೈಕೊಂಡು ನವಯೌವನಂ ನೆರೆಯೆ ವಸ್ತ್ರಭೂಷಣಮಾಲ್ಯಾಲಂಕೃತರಾಗಿ, ಪಾಸಮಲಂಗಿ ಪಾಸಿನಮೇಲೆ ಕುಳ್ಳಿರ್ಪರ್ಗಳು.

ವೃ॥ ನೆರೆಯದೆ ಮುನ್ನಕೆತ್ತಪಡಿಗಳು ನವಸೌರುಭಮುಣ್ಮಿಮೊಕ್ಕಳಂ ।
ನೆರೆದವು ರತ್ನತೋರಣಗಣಂಗಳುದಗ್ರವಿಮಾನ ರಾಶಿಯೋ- ।
ಳ್ನೆರೆದವು ಜೀವನದೊಳ್ಗುಡಿಯದಾಂಗುಡಿಗಳಡಿದಾಡುವಂತೆ ಸು- ।
ತ್ತಿರಿದವು ಭೋಂಕನಾತನ ಪುರಾತನ ಪುಣ್ಯಫಲಪ್ರಭಾವದಿಂ ॥

ಮತ್ತಮಾದೇವನುದಯಿಸಿದನರಿದು ನಲಿನಲಿದಾಡುವ, ಪಾಡುವ, ಗುಡಿಗಟ್ಟುವ, ತೋರಣಂಗಟ್ಟುವ, ವಾದ್ಯಗಳಂ ಭಾಜಿಸುವ, ಜಯಜಯನುತಿಗೆಯ್ವ, ಪರಿವಾರಾಮರ ಲೋಕಂಗಳು ಘಾತಜಂಘೆಮುಲತೆಗಳ ನೆರಗಿತಂದು ಮುಂದೆ ಬಂದಾಡುವಚ್ಚರಸಯರುಮನೇಕಭಂಗಿ ಭೃಂಗಾರಮಣಿದರ್ಪಣ ಕನಕಕಲಶಚಾಮರಾತಪತ್ರತ್ರಯ ಕರಪಲ್ಲವೆಯರಾಗಿ ಸೇಸೆಯನಿಕ್ಕಲೆಂದು ಬಂದ ಸುರಪುರಂಧ್ರಿಯರುಮನಾಲೋಕನಮಾತ್ರದಿಂದಲೇ ಮನಮನಿಬ್ಬಗಿಮಾಡಿ

ಮಸೆದ ಮದನನಲರ್ಗಣೆಯಂತೆ ಕಣ್ಗೊಳಿಸದೆಳ ಬಂದಿರ್ದು ವಾಟದಾಟದ ಮುದ್ದಿನಬಿದ್ದಿನ ದೇವಿಯರುಮಂ ಪರಿವಾರದೇವಿಯರು ಮನತಿಲತಿನ ಚತುರಭಾಷಾವಿಶೇಷಕುಶಲೆಯರುಮಪ್ಪ ದೇವವಿಳಾಸಿನಿಯರುಮಭೋಂಕನೆ ಕಂಡು ಆನಾರ್ಗೀಲೋಕಮಾವುದಾಮುಂನೇನಂ ಮಾಡಿ ಯಿಲ್ಲಿ ಪುಟ್ಟಿದೆನೆಂಬಂನೆಗಂ ಭವಪ್ರತ್ಯಯಜ್ಞಾನಂ ತೊಟ್ಟನೆ ಪುಟ್ಟಲೊಡಂ ಮಿದುವೆದೇವ ಲೋಕ, ಮಾಂದಿವಿಜವರನ್ನ ಪರಿವಾರಮಿದೆನ್ನಮುನ್ನಮಾಡಿದ ಪುಣ್ಯದಿಂದಾದುದೆಂದು ಧರ್ಮ ಮಂ ಪೊಗಳ್ದು ಸರೋವರದೊಳ್ ಸ್ನಾನಂ ಮಾಡಿ ಸದ್ದೃಷ್ಟಿಗಳು ಜಿನಪೂಜೆಯಂ ಮಾಳ್ಪಂ; ಮಿಥ್ಯಾದೃಷ್ಟಿಗಳು ದೇವರ್ಕಳ ಪ್ರತಿಬೋಧನೆಯಿಂದ ಜಿನೇಂದ್ರಪೂಜೆಯಂ ಮಾಡುಗುಂ, ಸುಖ ಸಾಗರಮಧ್ಯಗತರು, ಗತಕಾಲಮನರಿಯರು, ಮತ್ತಂ ಚತುರ್ನಿಕಾಯಾಮರರು ಸರ್ವಜ್ಞನ ಮಹಾಪೂಜೆಗೆ ಪೋಗಿ ಮಾಡುವರು; ಅಹಮಿಂದ್ರರ್ತಂಮ ಸ್ಥಾನದೊಳಿರ್ದು ಮಣಿಮಕುಟ ಘಟಿತಕರಕುಟ್ಮಲ ಕುಶೇಶಯರಪ್ಪರಾಗಿ ಪರಮಭಕ್ತಿಯಿಂ ನಮಸ್ಕರಿಸುವರು; ಮತ್ತಂ ದೇವ ರ್ಕಳು ಭುಂಜ್ಯಮಾನಾಯುಷ್ಯದ ಷಣ್ಮಾಸಾವಸಾನದೊಳು ಮುಂದಣಗತಿಗಾಯುಷ್ಯಮಂ ಕಟ್ಟಿ ಭವಚ್ಯುತಿಯೊಳ್ ಮಧ್ಯಮಲೋಕದ ಕರ್ಮಭೂಮಿಯ ಮನುಷ್ಯತಿರ್ಯಂಚ ಜಾತಿ ಗಳೊಳು, ಸುಲಕ್ಷಣಸುರೂಪ ಶುಭಗ, ಸುಬುದ್ಧಿ, ಕೀರ್ತಿ, ವೀರ್ಯ, ಧೈರ್ಯ, ದ್ಯುತಿಮತಿ ಸುಖನಿಧಿಗಳಾಗಿ ಪುಟ್ಟುವರು, ಭವನತ್ರಯದ, ಸೌಧರ್ಮದ್ವಿಕದ ಮಿಥ್ಯಾದೃಷ್ಟಿಗಳು, ಅಜ್ಞಾನ ತಪದಿಂ ಕಾಯಕ್ಲೇಶಗಳಿಂದಂ, ಸ್ವಭಾವಶುದ್ಧಭದ್ರಶೀಲದಿಂ ಪಡೆದ ದೇವಸುಖಂಗಳೊಳಾದೇ ನಾನುಮಾಸಕ್ತರಾಗಿರ್ದವರು ಆರು ತಿಂಗಳಾಯುಷ್ಯಮುಂಟಾಗೆ, ಕಲ್ಪವೃಕ್ಷಗಳ ನಡುಕ ದಿಂದಂ ದೆಸೆಗಳು ಮಸುಳ್ದು ತೋರ್ಪುದುಂ, ದೃಷ್ಟಿಭ್ರಾಂತಿಯಿಂದಂ ಭಯದಿಂದಂ ಸೂಡಿದ ಪೂಮಾಲೆಯ ಬಾಡುಗೆಯಿಂ, ಮರಣಂ ಸಾರ್ದುದನರಿದು ಪಚ್ಚವಡದ ಕುಳಿಯಂತಪ್ಪ ಗರ್ಭಾ ವಾಸದೊಳು ಪುಟ್ಟುವುದೋ ಎಂದು ವಿಭಂಗಜ್ಞಾನದಿಂದರಿದು ಬೇಸುಗೆಯಿಂದಮಿರ್ದು ದೇವ ದಿವ್ಯಸ್ತ್ರೀಯರ ಕೊರಳನಪ್ಪಿಕೊಂಡು ವಿಯೋಗಶೋಕದಿಂದಗಲ್ದುಸಾರೆ ಮರಣಂ ಬಂದು ದೆಂದು ಪುಯ್ಯಲಿಡುತ್ತಂ ಅಸಾತಾವೇದನೀಯಕರ್ಮಫಲಮಾಗೆಯ್ದಿ ಶೋಕಭಾವದಿಂ ಬೀಳ್ದಂತೆ ಬಿದ್ದು ಮಧ್ಯಮಲೋಕದಲ್ಲಿ ಬೀಳ್ದ ಗರ್ಭಾವಾಸಕ್ಕೆ ಹೇಸಿದ ಸಂಕ್ಲೇಶಪರಿಣಾಮಂ ಕಾರಣ ಮಾಗಿ ಸ್ಥಾವರನಾಮಕರ್ಮೋದಯದಿಂ ನಿರ್ಬಾಧಮಪ್ಪೆಡೆಯೊಳು ಪರ್ವತಂಗಳ ನಿರ್ಝರ ಶೀತಲ ರಮ್ಯಸ್ಥಾನಂಗಳೊಳು ಶ್ರೀಖಂಡ, ಗೋಶೀರ್ಷ, ಚಂದನ, ಕಾಳಾಗರು, ತುರುಷ್ಕ ವಿಶೇಷಮಪ್ಪ ಪ್ರತ್ಯೇಕ ವನಸ್ಪತಿಗಳಾಗಿ ಮೇಷಾಪೃಥ್ವಿಕಾಯಕ ಬಾದರಪರ್ಯಾಪ್ತಕ ಸ್ಥಾವ ರೇಕೇಂದ್ರಿಯಗಳಾಗಿ ಪುಟ್ಟುವರು; ಮತ್ತಂ ಕೆಲವರು ಸಹಸ್ರಾರಕಲ್ಪಂಬರಮಿರ್ದ ಮಿಥ್ಯಾ ದೃಷ್ಟಿಗಳು ನಿದಾನದಿಂ ಶುದ್ಧಜಾತಿಗುಣಂಗಳೊಳ್ಪೂಜ್ಯಂಗಳಪ್ಪ ಗಜಾಶ್ವಂಗಳಪ್ಪ ಪೆರವು ಪಂಚೇಂದ್ರಿಯ ತಿರ್ಯಗ್ಜಾತಿಗಳೊಳಂ ಪುಟ್ಟುವರು, ಕರ್ಮಭೂಮಿಜರ ಮನುಷ್ಯರೊಳಂ ಪುಟ್ಟುವರು; ಸಮ್ಯಗ್‌ದೃಷ್ಟಿಗಳಪ್ಪ ದೇವರ್ಕಳು ಮರಣಚಿಹ್ನಂಗಳು ತೋರಲೊಡಂ ಅವಧಿ ಜ್ಞಾನದಿಂದರಿದು ಆನಂತಾನಂತಭವಸಂಕಟದೊಳೆನಿತು ಸೂಳ್ದೇವರಾಗವೆನಿತು ಸೂಳ್ದುರ್ಗತಿಗೆ ಸಲ್ಲೆವೆಂದು ಮನೋಜ್ಞಾಮನೋಜ್ಞಂಗಳಪ್ಪುವಂ, ಮತ್ತಂ ರಾಗದ್ವೇಷಂಗಳು ಕಾರಣಮಾಗಿ ಸಾತಾಸಾತೋದಯದಿಂ ಪುಣ್ಯಪಾಪಂಗಳಂ ನೆರಪಿ ಸುಖದುಃಖಂಗಳನೆಯ್ದಿ ಸಾವುತ್ತಂ ಪುಟ್ಟು

ತ್ರಂ, ಬಾರದ ಭವಂಗಳಂ ಬಂದೆವೆಂದು, ಭೇದಾಭೇದರತ್ನತ್ರಯಂಗಳಂ ಪಡದೆವಿಲ್ಲಪ್ಪುದ ರಿಂದಿಂನೆಗಂ ಸಂಸಾರಬಂಧನಂಗಳುಮಂ ಪರಿಯಲಾರದೆ ದುಃಖಸಮುದ್ರದೊಳು ಮೂಡುತ್ತ ಮಾಪತ್ತನೆಯ್ದಿದೆಸೆಗೆಟ್ಟೆನಿನ್ನು ಮನುಷ್ಯಲೋಕದೊಳು ಧರ್ಮಕ್ಷೇತ್ರದೊಳು ಉಭಯಕುಲ ತೇಜ ಜಾತಿಶುದ್ಧರುಂ, ಸುರೂಪರುಂ, ಸುಲಕ್ಷಣರುಮಾಗಿ ಪುಟ್ಟಿ ಭೋಗಕಾಂಕ್ಷೆಯಂ ತೊ ರೆದು ಅರ್ಹತ್ಪ್ರಣೀತ ಸನ್ಮಾರ್ಗದೊಳ್ನೆಗಳ್ದು ಸ್ವಕೀಯಶುದ್ಧ ಚಿದಾನಂದಮಯ ಟಂಕೋತ್ಕೀರ್ಣ ಜ್ಞಾಯಕೈಕಸ್ವರೂಪ ಧರ್ಮಶುಕ್ಲಧ್ಯಾನಂಗಳಿಂ ಕರ್ಮಕ್ಷಯಂಗೆಯ್ದು ಅನಂತಕಾಲಮನಂತ ಗುಣಭರಿತ ಸಿದ್ಧಸುಖವನೆಯ್ದಲು ಪೆತ್ತವೆಂದು ಮನಮೊಸೆದು ಮೂರುಂ ಲೋಕಂಗಳೊಳಮ ಪ್ಪವನೆಂಟು ಕೋಟಿಯುಂ ಮೂವತ್ತಾರುಲಕ್ಷೆಯುಂ ತೊಂಭತ್ತೇಳುಸಾಸಿರದ ನಾನೂರೆಂಭ ತ್ತೊಂದು ( ೮೫೬೯೭೪೮೧ ) ಪರಮಾತ್ಮ ನಿಲಯಂಗಳುಮಂ ಜ್ಯೋತಿರ್ವೆಂತರ ಲೋಕಂಗಳ ಸಂಖ್ಯಾತ ಸ್ವಯಂಭೂತ ಸರ್ವಜ್ಞಾಯತನಂಗಳನ್ನು ಅವರ ಪೂಜೆಗಳನ್ನೂ, ಸಪ್ತತ್ಯಧಿಕಶತ ( )ಧರ್ಮಕ್ಷೇತ್ರಂಗಳೊಳುವರ್ತಿಸುವ ತೀರ್ಥಕರ ಗಣಧರದೇವರ ಮತ್ತಂ ಕೆಲರ್ತ ಪೋನಿಷ್ಟಿತರ, ಜ್ಯೋತಿರೂಪಧ್ಯಾನನಿಷ್ಟಿತರ ಶ್ರೀಪಾದಂಗಳ್ಗೆರಗಿಯುಂ, ಚತುರ್ಥ ಗುಣ ಸ್ಥಾನಮಪ್ಪಾತ್ಮತತ್ವಮಂ ಭಾವಿಸುತ್ತಾರುದಿಂಗಳು ಪರಮಿಂತವಸಾನ ಕಾಲದೋಳ್ ಪಂಚ ಪದಂಗಳಂ ಸಿದ್ಧಾಕೃತಿಯುಮುಂ, ನಿಜನಿತ್ಯಾನಂದಾತ್ಮಭಾವನೆಯಿಂ ಧರ್ಮಧ್ಯಾನದಿಂದ ಅಶು ಭಕರ್ಮದ ಕಟ್ಟಂ ಬಿಡಿಸಿ ಸಮಾಧಿಯಿಂ ಮುಡುಪಿ ಸೊಡರ್ನಂದುವಂತೆ ( ದೀಪವುಕೆಡುವ ಹಾಗೆ ) ಅದೃಶ್ಯರಾಗಿ ಬಂದಿಲ್ಲಿಪುಟ್ಟಿ ತೀರ್ಥಕರ ಚಕ್ರವರ್ತ್ಯಾದಿಗಳ ಪದವಿಗಳಂ ಪಡೆಗುಂ, ತೀರ್ಥಕರನಾಮ ಸತ್ವಮುಳ್ಳ ಜೀವಕ್ಕೆ ಆರುದಿಂಗಳ ಅವಸಾನಕಾಲದೊಳು, ವಸ್ತ್ರಮಾಲ್ಯಾಭ ರಣಂಗಳು ಮಲೀಮಸಂಗಳಾಗಿ ತೋರಲು, ಅನುದ್ದಿಶಾನುತ್ತರೆಯಿಂಚ್ಯುತರಾದವರ್ಗೆ ಕೇಶವಾ ದಿಪದಂಗಳಾಗುವದಿಲ್ಲವು. ಮತ್ತಮಾಸರ್ವಾರ್ಥಸಿದ್ಧಿ ಪೊರಗಾಗಿಯುಳಿದ ಹದಿಮೂರುಸ್ಥಾನಕ ದವರ್ಗಳುಂ, ಮನುಷ್ಯರುಂ, ದೇವರುಂ, ಮನುಷ್ಯರಾಗಿ ಕರ್ಮಕ್ಷಯಂ ತಪ್ಪದಾಗುವದು. ಸೌಧರ್ಮೇಂದ್ರನಾತನ ಮಾದೇವಿಯರೊಳುತ್ಕೃಷ್ಟ ದೇವಿಯರುಂ ಆತನ ಲೋಕಪಾಲ ಕರುಂ, ದಕ್ಷಿಣೇಂದ್ರರುಂ, ಲೋಕಾಂತಿಕದೇವರುಂ, ಸರ್ವಾರ್ಥಸಿದ್ಧಿಯದೇವರುಂ, ಬರು ತ್ತಲೇ ಮಹರ್ಧಿಕ ಮನುಷ್ಯರಾಗಿ ಕರ್ಮಕ್ಷಯಂ ತಪ್ಪದಕ್ಕುಂ, ಆ ಸರ್ವಾರ್ಥಸಿದ್ಧಿಯಿಂ ಮೇಲೆ ದ್ವಾದಶಯೋಜನಂ ಪೋದಲ್ಲಿ ಮೂಲೋಕಾಗ್ರದ ಈಷತ್ಪ್ರಾಗ್ಭಾರಮೆಂಬೆಂಟನೆಯ ಭೂಮಿಯನೀಳಂ ದಕ್ಷಿಣೋತ್ತರದೊಳೇಳುರಜ್ಜು ಪೂರ್ವಾಪರದೊಳೊಂದು ರಜ್ಜುವಿನಗಲದ ದರ ಮಧ್ಯದೊಳು ಮನುಷ್ಯಕ್ಷೇತ್ರದನಿತು ವಿಸ್ತೀರ್ಣಮುಂ, ಗೋಳಕಾರ್ಧಸದೃಶಮುಂ, ಶುಧ್ಧ ಸ್ಫಟಿಕಮಯಮುಮಪ್ಪ ಅಷ್ಟಯೋಜನ ಬಾಹುಲ್ಯಮುಮಪ್ಪ ಸಿತಾವನಿಯೆಂಬ ಸಿದ್ಧಶಿಲೆಯ ಮೇಲೆರಡು ಮೊಂದೇನಾಲ್ನೂರಿಪ್ಪತ್ತೈದು ಬಿಲ್ಲುಗುಂದಿದೊಂದು ಕ್ರೋಶಪ್ರಮಾಣದ ಘನೋ ದಧಿ ಘನಾನಿಲತನುವಾತಮೆರ್ಕುಮಾ ತನುವಾತಮನೊಂಭತ್ತು ಲಕ್ಷೆಭಾಗಂ ಮಾಡಿದಲ್ಲಿ ಮೇಗ ಣೊಂದುಭಾಗದಲ್ಲಿ ಜಘನ್ಯಾವಗಾಹನದಲ್ಲಿ ಸಿದ್ಧರಿರುವರು. ಸಾಸಿರದ್ಯೆನೂರು ಭಾಗಂಮಾಡಿ ದಲ್ಲಿ ಕಡೆಯೊಂದು ಭಾಗದೊಳು ಉತ್ಕೃಷ್ಟಾವಗಾಹ ಸಿದ್ಧರಿರುವರು. ಜಘನ್ಯಮೆಂಬುದು ಮೂರುವರೆ ಮೊಳನುತ್ಕೃಷ್ಟಮಪ್ಪುದು, ಐಯ್ನೂರಿಪ್ಪತ್ತೈದು ಚಾಪಪ್ರಮಾಣಮಕ್ಕುಂ,

ಅಲ್ಲಿಮಧ್ಯಮಾವಗಾಹನಂ ನಾನಾಭೇದಮಕ್ಕುಂ, ಆ ಸಿದ್ಧತ್ವಕ್ಕೆ ಮಧ್ಯಮಲೋಕದೊಳು ಅವು ಲಸಹಜಾನುಷ್ಠಾನದಿಂ ಕರ್ಮಮಲಕಲಂಕಮಂ ನಿರ್ಮೂಲಂ ಮಾಡಿ ಶುಧ್ಧಾತ್ಮರು ಹುಟ್ಟು ವರು. ಆಸ್ಥಾನಮದೆಂತಪ್ಪುದೆಂದೊಡೆ, ಸಿದ್ಧಿಸ್ವಾತ್ಮೋಪಲಬ್ಧಿ, ಪರಮಾತ್ಮಸ್ಥಾನಂ, ಪವಿತ್ರಂ, ಕಲ್ಯಾಣಂ, ಸುಗತಿಲೋಕೋತ್ತರಂ, ಪರಮಪದಂ, ಅಕ್ಷಯಂ, ಅನಂತಂ, ಶಾಶ್ವತಂ, ಅಜರಾ ಮರಂ, ಅಭವ್ಯರ್ಗಗಮ್ಯಂ, ಭವ್ಯರ್ಗೆಯ್ದಲು ಪಡುವುದುಂ, ಸಮ್ಯಗ್ಜ್ಞಾನಿಗಳಿಂ ಬಯಸಲ್ಪ ಡುವುದುಂ ಅದು ಮೋಕ್ಷಮೆಂಬುದು, ಇದು ಊರ್ಧ್ವಲೋಕವರ್ಣನಂ.

ಮುಂಪೇಳ್ದ ಚೈತ್ಯಾಲಯಂಗಳ ಪ್ರಮಾಣವನ್ನು ಪೇಳುವೆನು.

ಕಂದ॥ ವರಮಧ್ಯಾಪರ ಜಿನಮಂ- ।
ದಿರಮರ್ಧಾರ್ಧಕ್ರಮಂ ವಿಮಾನದ ನಂದೀ- ॥
ಶ್ವರದ ಭದ್ರಶಾಲನಂದನ- ।
ದರಜಿನಹರ್ಮ್ಯಮಂತವುತ್ಕೃಷ್ಟಂಗಳ್ ॥ ೫೬ ॥

ಕುಳರುಚಕನಗೋತ್ತರ ಕುಂ- ।
ಡಲವಕ್ಷಾರಾಚಳಂಗಳಿಷ್ವಾಕಾರಂ- ॥
ಗಳ ಸೌಮನಸವನಂಗಳ ।
ನಿಳಯಂ ಮಧ್ಯದವು ಪಾಂಡುಕದಪರಂಗಳ್ ॥ ೫೭ ॥

ಆಯಾಮಂ ನೂರಗಲಮು- ।
ಮಾಯಾಮದಳ ದ್ವಯಾರ್ಧಮುತ್ಕೃಷ್ಟಗೃಹೋ- ॥
ಚ್ಛ್ರಾಯಂ ಷೋಡಶಕಂ ।
ದ್ವಾರಾಂತಿತಾನೆಂಟುಯೋಜನಂ ವಿಷ್ಕಂಭಂ ॥ ೫೮ ॥

ರಜತಗಿರಿ ಜಂಬುಶಾಲ್ಮಲಿ ।
ಕುಜಗತಭವನಾವಳಿಯೊಂದು ನೀಳಂ ಕ್ರೋಶಂ ॥
ತ್ರಿಜಗನುತಶೇಷಗೃಹ ।
ವ್ರಜಯುತಿಯುಂತಂತವಕ್ಕೆತಕ್ಕಂ ತಕ್ಕುಂ ॥ ೫೯ ॥

ಶ್ಲೋ॥ ಶ್ರೀಮನ್ಮೇರೌ ಕುಲಾದ್ರೌ ರಜತಗಿರಿವರೇ ಶಾಲ್ಮಲೌ ಜಂಬುವೃಕ್ಷೇ ॥
ವಕ್ಷಾರೇ ಚೈತ್ಯವೃಕ್ಷೇ ರತಿಕರರುಚಕೇ ಕುಂಡಲೇ ಮಾನುಷಾಂಕೇ ॥ ೧ ॥
ವಿಶ್ವಾಕಾರೇಂಜನಾದ್ರೌ ದಧಿಮುಖಶಿಖರೇ ವ್ಯಂತರೇ ಸ್ವರ್ಗಲೋಕೇ ॥
ಜ್ಯೋತಿರ್ಲೋಕೇಭಿವಂದೇ ಭವನಮಹಿತಲೇ ಯಾನಿ ಚೈತ್ಯಾನಿತಾನಿ ॥ ೨ ॥

ದೇವಾಸುರೇಂದ್ರನರನಾಗಸಮರ್ಚಿತೇಭ್ಯಃ ।
ಪಾಪಪ್ರಣಾಶಕರ ಭವ್ಯಮನೋಹರೇಭ್ಯಃ ॥
ಘಂಟಾಧ್ವಜಾದಿ ಪರಿವಾರವಿಭೂಷಿತೇಭ್ಯೋ ।
ನಿತ್ಯಂ ನಮೋ ಜಗತಿಸರ್ವಜಿನಾಲಯೇಭ್ಯಃ ॥ ೩ ॥

ಗಾಹೆ॥ ಕೋಡೀಲಲಕ್ಖಸಹಸ್ಸಂ ಅಠ್ಠಯಛಪ್ಪಣ್ಣ ಸತ್ತಾಣವುದೀಯಾ ।
ಚವುಸದಮೇಗಾ ಸೀದಿಗಣಣಗ ಯೇಚೇದಿಯೇವಂದೇ ॥ ೩೧ ॥

ಅಡದಾಳಾಣವಯುಸಯಾ ಸತ್ತಾವೀಸಸಹಸ್ಸಲಕ್ಖತೇವಂಣಾ ।
ಕೋಡೀಪಣವೀಸಣವಯುಸಯಾಜಿಣಪಡಿಮಾ ಅಕಠ್ಠಿಮಾಕಠ್ಠಿಮಾಣಿವಂದಾಮಿ ॥ ೩೨॥

ತಿಹುವಣ ಜಿಣಿಂದಗೇಹೋ ಅಕಟ್ಟಿಮಾಕಟ್ಟಿಮೇತಿಕಾಳ ಭವೇ ।
ವಣಕೋಮರ ಭೇಡಗ್ಗಾಮರಣರ ಖೇಚರವಂದಿಯೇವಂದೇ ॥ ೩೩ ॥

ಇತಿ ಶ್ರೀಮಾಘನಂದ್ಯಾಚಾರ್ಯವಿರಚಿತೇ ಶಾಸ್ತ್ರಸಾರಸಮುಚ್ಛಯೇ
ಕರಣಾನುಯೋಗವರ್ಣನಂ ನಾಮ ದ್ವಿತೀಯಃ ಪರಿಚ್ಛೇದಃ ।
ಇಂತು ಶ್ರೀಮಾಘನಂದಾಚಾರ್ಯರು ವಿರಚಿಸಿದ ಶಾಸ್ತ್ರಸಾರಸಮುಚ್ಛಯದೊಳ್
ಕರಣಾನುಯೋಗವೆಂಬ ಎರಡನೆಯಾಧ್ಯಾಯಂ ।

---



॥ ಶ್ರೀ ವೀತರಾಗಾಯನಮಃ ॥

# ಚರಣಾನುಯೋಗಂ.

ಕಂದ॥ ಸುರನರಕಿನ್ನರನುತನಂ ।
ಪರಮಶ್ರೀವೀರನಾಥನಂ ನೆನೆದೊಲವಿಂ ॥
ವರಭವ್ಯಜನಕೆ ಪೇಳ್ವೆಂ ।
ನಿರುಪಮ ಚರಣಾನುಯೋಗಮಂ ಕನ್ನಡದಿಂ ॥ ೧ ॥

ಸೂತ್ರಾವತಾರಕ್ಕೆ ಕಾರಣವೇನೆಂದರೆ—ಜ್ಞಾನಚಾರಿತ್ರಂಗಳೆಂಬ ಪ್ರಾಸಾದಕ್ಕೆ ಅಧಿಷ್ಠಾನವಾದ ವೃಕ್ಷಕ್ಕೆ ಮೂಲವು ಹ್ಯಾಗೋ ಹಾಗೆ ಆಧಾರವಾದ ಸಮ್ಯಕ್ತ್ವವು ಹ್ಯಾಗೆಂದರೆ, ಮೋಕ್ಷಪುರಪಥಿಕಪಾಥೇಯವುಂ, ಮುಕ್ತಿಸೌಂದರಿವಿಲಾಸಮಣಿದರ್ಪಣವುಂ, ಸಂಸಾರಸಮುದ್ರಗರ್ತಾವರ್ತನಿಮುಗ್ನಜನದತ್ತಹಸ್ತಾವಲಂಬನವುಂ, ಏಕಾದಶೋಪಾಸಕಸ್ಥಾನ ಪ್ರಾಸಾದಾಧಿಷ್ಠಾನವುಂ, ಉತ್ತಮಕ್ಷಮಾದಿ ದಶಕುಶಲಧರ್ಮಕಲ್ಪಪಾದಪವಿಚ್ಛಿನ್ನಮೂಲವುಂ, ಪರಮಲಕ್ಷ್ಮೀವಿವಾಹಮಂಗಲರತ್ನಮಯನಿಲಯವುಂ, ವಿಷಮದರ್ಶನಮಹೋಗ್ರ ಗ್ರಹೋಚ್ಚಾಟನಯಂತ್ರವುಂ, ದೀರ್ಘಸಂಸಾರ ಕೃಷ್ಣೋರಗಭೋಗಿಭೋಗ ಮುಖವಿವರವಿನಿರ್ಗತಾಶೀರ್ವಿಷ ಮರಣತಂತ್ರವುಂ, ಮೋಕ್ಷಲಕ್ಷ್ಮಿ ವಶೀಕರಣ ವರಮಂತ್ರವುಂ, ವ್ಯಂತರವಿಷೋರಗಾದಿಕ್ಷುದ್ರೋಪದ್ರವ ನಿವಾರಣದಕ್ಷಾ ರಕ್ಷಾಮಣಿರತ್ನವುಂ, ಆಸಂನಭವ್ಯ ಅಭಿವಾಂಛಿತಫಲ ಪ್ರಧಾನಚಿಂತಾಮಣಿರತ್ನವುಂ, ಸಂಸ್ಪರ್ಶಮಾತ್ರದಿಂ ಭವ್ಯಜೀವಲೋಹಮಂ ಮಲಹರಣಕಾರಣವರ್ಣೋತ್ಕರ್ಷದಿಂ ಜಾತರೂಪತ್ವಮಂ ನೆಯ್ದಿಸುವ ಸ್ಪರ್ಶನರತ್ನವುಂ, ನಿಖಿಲಪಾಪಾಟವೀದಹನ ದಾವಾನಲ ಪ್ರತಾಪವುಂ, ಜ್ಞಾನವೈರಾಗ್ಯ ಮಹೋದ್ಯಾನವನ ವಸಂತವುಂ, ವಿಶಿಷ್ಟ ಪುಣ್ಯಕರ್ಮಾನುಷ್ಠಾನ ಪವಿತ್ರತೀರ್ಥವುಂ, ಜನ್ಮಜರಾಮರಣಕಾರಣ ಪರಮಸಿದ್ಧರಸ ಕರಂಡಕಮುಂ, ಪುಷ್ಟಅಷ್ಟಾಂಗಾವಯವ ಪರಿಪೂರ್ಣ ಶೋಭಾಕಲಿತವುಂ, ಆದಂಥಾ ಸಮ್ಯಗ್ದರ್ಶನಕ್ಕೆ ಕಾರಣಗಳಾದ ಐದು ಲಬ್ಧಿಗಳ ಸ್ವರೂಪವು ಹ್ಯಾಗಂದರೆ—

ಸೂತ್ರಂ॥ ಅಥಃ ಪಂಚಲಬ್ಧಯಃ ॥ ೧ ॥

ತಾ:—ಅಥ: ಕರಣಾನುಯೋಗ ಕಥನಾನಂತರಂ ಪಂಚಲಬ್ಧಯಃ, ೧ ಕ್ಷಯೋಪಶಮಲಬ್ಧಿ, ೨ ವಿಶೋಧಿಲಬ್ಧಿ, ೩ ದೇಶನಾಲಬ್ಧಿ, ೪ ಪ್ರಾಯೋಗ್ಯತಾಲಬ್ಧಿ, ೫ ಕರಣಲಬ್ಧಿ ಪಂಚಲಬ್ಧಿಗಳನ್ನು ಪಡೆದು ಪ್ರಥಮೋಪಶಮ ಸಮ್ಯಗ್ದೃಷ್ಟಿಯಾಗುವನು. ಅದು ಹ್ಯಾಂಗಂದರೆ—ಯಾವುದೊಂದು ಕಾಲದಲ್ಲಿ ಅಶುಭಕರ್ಮಗಳ ಶಕ್ತಿಯನ್ನು ಸಮಯ ಸಮಯಗಳಲ್ಲಿಯೂ ತಪ್ಪದೆ ಅನಂತಗುಣಹೀನವಾಗಿ ಉದಿರಿಸುವಂಥಾದ್ದಾಗಲು ಅದು ಕ್ಷಯೋಪಶಮಲಬ್ಧಿಯೆನಿಸುವದು ॥ ೧ ॥

ಸಾತಾದಿಪ್ರಶಸ್ತ ಸಪ್ತಪ್ರಕೃತಿಬಂಧಯೋಗ್ಯಪರಿಣಾಮವು ವಿಶೋಧಿಲಬ್ಧಿಯೆನಿಸುವದು ೨

ಜೀವಾದಿ ವಸ್ತುಸ್ವರೂಪಗಳನ್ನು ಉಪದೇಶಮಾಡುವಂಥಾ ಆಚಾರ್ಯಾದಿಗಳು ದೊರೆಯುವದು ಮೇಣ್ ಉಪದೇಶವನ್ನು ಮಾಡುವ ವಸ್ತುಗಳ ಲಾಭವು ಮೇಣ್ ದೇಶನಾಲಬ್ಧಿಯೆನಿಸುವದು ‖ ೩ ‖

ಯಾಯುರ್ವರ್ಜಿತಂಗಳಾದ ಏಳು ಕರ್ಮಗಳ ಸ್ಥಿತಿಯನನ್ತಕೋಟಾಕೋಟಿಸಾಗರೋಪಮ ಪ್ರಮಾಣವಾಗಿಯುಂ ಲತಾದಾರ್ವಸ್ಥಿ ಶೈಲರೂಪನಾದ ಘಾತಿಕರ್ಮಂಗಳ ಶಕ್ತಿಯನ್ನು ಲತೆಯುಂ ದಾರುವಿನಂತೈಕಭಾಗಮಾಗಿ ಮಾಡುವದು ಪ್ರಾಯೋಗ್ಯತಾಲಬ್ಧಿಯೆನಿಸುವದು. ಇವು ನಾಲ್ಕುಂ ಭವ್ಯನಿಗೂ ಅಭವ್ಯನಿಗೂ ಸಮಾನವು ‖ ೪ ‖

ಅದರಲ್ಲಿ ಭವ್ಯಜೀವಕ್ಕೆ ಭೇದಾಭೇದರತ್ನತ್ರಯಾತ್ಮಕವಾದ ಮೋಕ್ಷಮಾರ್ಗವನ್ನೂ, ಸಕಲ ಕರ್ಮಕ್ಷಯ ಲಕ್ಷಣವಾದ ಮೋಕ್ಷವನ್ನೂ, ಅತೀಂದ್ರಿಯ ಪರಮಜ್ಞಾನಾನಂದಮಯವಾದ ಮೋಕ್ಷಸ್ಥಲವನ್ನೂ ಅನೇಕ ನಯನಿಕ್ಷೇಪಪ್ರಮಾಣಂಗಳಿಂದ ತಿಳಿಸುವದು ಕರಣಲಬ್ಧಿಯೆನಿಸುವದು. ‖ ೫ ‖

ಕಂದ ‖ ಆದುದರ್ಶನ ರತ್ನಪ್ರದ-।
ಮದುಸುಚರಿತ ಜನ್ಮನಿಲಯಮುಂತದು ಭವ್ಯ- ‖
ತ್ವದ ಕಣ್ದೆರವಿ ವಿವೇಕ-।
ಕ್ಕದು ಫಲಮದು ಬುಧಜನಪ್ರಣೂತಂ ಖ್ಯಾತಂ ‖ ೧ ‖

## ಸೂತ್ರಂ ‖ ಕರಣಂ ತ್ರಿವಿಧಂ ‖ ೧ ‖

ತಾः— ೧ ಅಧಃಪ್ರವೃತ್ತಿಕರಣ, ೨ ಅಪೂರ್ವಕರಣ, ೩ ಅನಿವೃತ್ತಿಕರಣವೆಂದು ಮೂರುಪ್ರಕಾರವು. ಅವುಗಳ ಕಾಲವು ಪ್ರತ್ಯೇಕಂ ಅಂತರ್ಮುಹೂರ್ತವಾಗುವದು. ಅಲ್ಲಿ ವೊಂದ ನೋಡಲು ವೊಂದರ ಕಾಲಸಂಖ್ಯಾತ ಗುಣಹೀನಂ, ಅದರಲ್ಲಿ ಅಧಃಪ್ರವೃತ್ತಿಕರಣಂ ಸಮಯಂ ಪ್ರತಿಯನನ್ತಗುಣ ವಿಶುದ್ಧಿಯಿಂದ ಅಂತರ್ಮುಹೂರ್ತಕಾಲಂ ನಿರಂತರವೂ ಹೆಚ್ಚುವದು. ಅಲ್ಲಿಂ ಪ್ರತಿ ಸಮಯಮಸಂಖ್ಯಾತ ಲೋಕ ಮಾತ್ರ ಪರಿಣಾಮಂಗಳ ಚರಮಸಮಯದವರಿಗೂ ಸಮಾನವೃದ್ಧಿಯಿಂದ ಹೆಚ್ಚುವದು. ಸಹಸ್ರಸ್ಥಿತಿಬಂಧಾಪಶರಣಕಾರಣಂಗಳುಂ ಅದಕ್ಕೆ ಅಧಃಪ್ರವೃತ್ತಿಕರಣವು. ಯಾಕಂದರೆ, ಮೇಗಣಸಮಯದೊಳಿರ್ದ ಜೀವಂಗಳ ಪರಿಣಾಮಗಳು ಪೋಲ್ಪುವಪ್ಪುದರಿಂ. ಅಲ್ಲಿಂ ಮೇಲೆ ಅಪೂರ್ವಕರಣವಾಗುವದು, ಅದು ಪ್ರತಿಸಮಯಮಸಂಖ್ಯಾತ ಲೋಕ ಮಾತ್ರ ಪರಿಣಾಮಂಗಳನುಳ್ಳದ್ದು ಕ್ರಮದಿಂ ಸಮಾನ ಸಂಖ್ಯೆಯಿಂ ಹೆಚ್ಚಿದಸಂಖ್ಯಾತ ಲೋಕ ಮಾತ್ರ ಪರಿಣಾಮಂಗಳನುಳ್ಳದ್ದು, ಸ್ಥಿತಿಬಂಧಾಪಶರಣ ಸಹಸ್ರಸ್ಥಿತಿಕಾಂಡಕಘಾತಮನುಭಾಗಕಾಂಡಕ ಘಾತಗುಣ ಸಂಕ್ರಮಣ ಗುಣಶ್ರೇಣಿನಿರ್ಜರೆ ಎಂದಿವುಗಳನ್ನು ಮಾಡುವದಕ್ಕೆ ಕಾರಣವಾಗುವದು. ಅಧಃಪೂರ್ವಕರಣಮೆಂಬ ಪೆಸರ್ಭಿನ್ನಸಮಯದೊಳಿರ್ದ ಜೀವಂಗಳ ಪರಿಣಾಮಂಗಳು ಸಮಾನವಾಗಿರುವದರಿಂದ ಅಲ್ಲಿಂ ಮೇಲೆ ಅನಿವೃತ್ತಿಕರಣಂ ಪ್ರತಿಸಮಯಮೊಂದೇ ಪರಿಣಾಮಮಲ್ಲಿಯುಂ ಸ್ಥಿತಿಬಂಧಾಪಶರಣಾದಿಗ

ಳುಂ ಮುನ್ನಿನಂತೆ ಆಗುವವು. ಅದರ ಕಡೆಯ ಸಮಯದಲ್ಲಿ ಭವ್ಯಂ ಚತುರ್ಗತಿಯೊಳ್ಪುಟ್ಟಿದಂ ಗರ್ಭಜಂ ಪಂಚೇಂದ್ರಿಯಂ ಸಂಜ್ಞಿಪರ್ಯಾಪ್ತಕಂ ಸರ್ವವಿಶುದ್ಧಂ ಜಾಗ್ರದವಸ್ಥೆಯೊಳಿರ್ದಂ ಚೇಷ್ಟಿತತೀರ್ದಶುಭಲೇಶ್ಯೆಯೊಳ್ಕೂಡಿದಂ ಜ್ಞಾನೋಪಯೋಗಮನುಳ್ಳಂಗನಿವೃತ್ತಿಕರಣಸಾಮರ್ಥ್ಯಮೆಂಬ ವಜ್ರದಂಡಘಾತದಿಂದ ಖಂಡಿಸಲ್ಪಟ್ಟ ಸಂಸಾರದುರ್ಗವಿವರಣೆಯೆನಿಸಿ ಮಿಥ್ಯಾತ್ವೋದಯಮಂತರ್ಮುಹೂರ್ತ ವ್ಯವಹಿತವಾಗಲು ಸಮ್ಯಜ್ಞಾನಲಕ್ಷ್ಮೀಸಂಗಮೋಚಿತ ಶುಭಮುಹೂರ್ತಮೆನಿಸಿದ ಅಂತರಕಾಲದಂತರ್ಮುಹೂರ್ತದ ಮೊದಲಸಮಯದೊಳು—

ಕಂದ ॥ ಉದಯಿಸಿದುದು ವರಭವ್ಯನ ।
ಹೃದಯದೊಳಘತಿಮಿರತರಣಿ ಸಕಲಾಭಿಮತಃ- ॥
ಪ್ರದಚಿಂತಾಮಣಿ ತವಿಲಿ- ।
ಲ್ಲದ ಸಂವೇಗಾದಿ ಗುಣದ ಕಣಿ ಸಮ್ಯಕ್ತ್ವಂ ॥ ೨ ॥

ವಚನ ॥ ತತ್ಕಾಲದೊಳುಪದೇಶಕ ವದನಾರವಿಂದಮಂ ನೋಳ್ಪ ತದುಕ್ತಿಯಂ ಕೇಳ್ವ ಸ್ವಶುದ್ಧಾತ್ಮತತ್ವಂ ಸುಯುಕ್ತಿಲೋಚನಕ್ಕೆ ವ್ಯಕ್ತವಾಗೆ. ॥ ೩ ॥

ಅಂತುಪರಮಾತ್ಮಪದಮು- ।
ನಂತಜ್ಞಾನಾದಿಗುಣಗಣಾಭ್ರಾಜಿತಮಂ ॥
ಭ್ರಾಂತಿಸದೆ ಲಬ್ಧಿವಶದಿಂ- ।
ದಂತಿಳಿದಡಿಗಡಿಗೆ ರಾಗಿಸುತಿರ್ಪಾಗಳ್ ॥ ೪ ॥

## ಸೂತ್ರಂ ॥ ಸಮ್ಯಕ್ತ್ವಂ ದ್ವಿವಿಧಂ ॥ ೩ ॥

ತಾಃ—೧ ಆಪ್ತಾಗಮಪದಾರ್ಥ ತಪಸ್ವಿಗಳ ಸ್ವರೂಪವನ್ನು ತಿಳಿದು ನಂಬುವದು ವ್ಯವಹಾರಸಮ್ಯಕ್ತ್ವವು, ೨ ನಿಜಶುದ್ಧಾತ್ಮನೇ ಸಾಕ್ಷಾನ್ಮೋಕ್ಷಕ್ಕೆ ಕಾರಣವೆಂದು ತಿಳಿದು ನಂಬುವದು ನಿಶ್ಚಯಸಮ್ಯಕ್ತ್ವವೆಂದು ಎರಡು ವಿಧವು; ಮೇಣ್ ಪದಾರ್ಥಸ್ವರೂಪಂ ನಿಸರ್ಗಜವುಂ ನಯನಿಕ್ಷೇಪಾದಿಗಳಿಂ ನಿಶ್ಚೈಸುವವಧಿಗಮಜವುಮೆಂದು ಮೇಣ್ ಸ್ವಪರಾಶ್ರಯದಿಂದ ಹುಟ್ಟುವ ಸರಾಗಜವುಂ ವೀತರಾಗ ನಿರ್ವಿಕಲ್ಪ ಸ್ವಸಂವೇದನಜ್ಞಾನದಿಂದ ಹುಟ್ಟುವ ವೀತರಾಗಸಮ್ಯಕ್ತ್ವವುಂ ಎಂದು ಮತ್ತೆರಡು ಭೇದವಾಗುವದು.

## ಸೂತ್ರಂ ॥ ತ್ರಿವಿಧಂ ॥ ೪ ॥

ಉಪಶಮ, ವೇದಕ, ಕ್ಷಾಯಿಕ, ಭೇದದಿಂದ ಸಮ್ಯಕ್ತ್ವವು ಮೂರು ವಿಧವು. ಅದು ಹ್ಯಾಗಂದರೆ—೧ ಅನಂತಾನುಬಂಧಿಕ್ರೋಧ, ೨ ಮಾನ, ೩ ಮಾಯಾ, ೪ ಲೋಭ, ೫ ಮಿಥ್ಯಾತ್ವ, ೬ ಸಮ್ಯಗ್ಮಿಥ್ಯಾತ್ವ, ೭ ಸಮ್ಯಕ್ತ್ವಪ್ರಕೃತಿ ಎಂದಿವು ಸಪ್ತಪ್ರಕೃತಿಗಳಾಗುವವು. ಈ ಏಳರುಪಶಮದಿಂದ ಸಮ್ಯಕ್ತ್ವವುಂಟಾಗುವದು. ಮೂರರುಪಶಮದಿಂದ ಸಮ್ಯಕ್ತ್ವಪ್ರಕೃತಿಯು

ಉದಯದಿಂದ ವೇದಕಸಮ್ಯಕ್ತ್ವವುಂಟಾಗುವದು. ಸಪ್ತಪ್ರಕೃತಿಗಳ ನಿರವಶೇಷಕ್ಷಯದಿಂದ ಕ್ಷಾಯಿಕಸಮ್ಯಕ್ತ್ವವುಂಟಾಗುವದು. ಮತ್ತು ವೇದಕಸಮ್ಯಗ್ದೃಷ್ಟಿ ಉಪಶಮಶ್ರೇಣ್ಯಾರೋಹಣಾರ್ಥವಾಗಿ ಹುಟ್ಟುವ ದ್ವಿತೀಯೋಪಶಮಸಮ್ಯಕ್ತ್ವವುಂ ಕ್ಷಾಯಿಕಸಮ್ಯಕ್ತ್ವದಿಂದ ಮುನ್ನ ಪುಟ್ಟುವ ಕೃತಕೃತ್ಯವೇದಕವು ಎಂದೈದು ಭೇದವಾಗುವವು.

ಸೂತ್ರಂ ॥ ದಶವಿಧಂ ವಾ ॥ ೫ ॥

ತಾ:—೧ ಆಜ್ಞಾಸಮ್ಯಕ್ತ್ವಂ, ೨ ಮಾರ್ಗಸಮ್ಯಕ್ತ್ವಂ, ೩ ಉಪದೇಶಸಮ್ಯಕ್ತ್ವಂ, ೪ ಸೂತ್ರಸಮ್ಯಕ್ತ್ವಂ, ೫ ಬೀಜಸಮ್ಯಕ್ತ್ವಂ, ೬ ಸಂಕ್ಷೇಪಸಮ್ಯಕ್ತ್ವಂ, ೭ ವಿಸ್ತಾರಸಮ್ಯಕ್ತ್ವಂ, ೮ ಅರ್ಥಸಮ್ಯಕ್ತ್ವಂ, ೯ ಅವಗಾಢಸಮ್ಯಕ್ತ್ವಂ, ೧೦ ಪರಮಾವಗಾಢಸಮ್ಯಕ್ತ್ವಂ ಎಂದು ಮತ್ತೆ ಹತ್ತು ಭೇದವಾಗುವದು.

ವಚನ ॥ ಕ್ರಮದಿಂ ಭಾವಿಪೊಡಾಜ್ಞೆಮಾರ್ಗಮುಪದೇಶಂ ಸೂತ್ರಬೀಜಂದಲುತ್ತಮ ಸಂಕ್ಷೇಪ ಸುವಿಸ್ತರಾರ್ಥದ ಗಾಡಾಖ್ಯಂ ಪ್ರಮಸಹ್ಯಂ ಮಾರ್ದವಬೀಜಂ ವಿನಯಮೂಲಮರ್ಹನಮಾರ್ಗಂ ॥

ಕಂದ ॥ ಮೃದುಶತವಚನದ ಬಕವೇ- ।
ಷದ ಮರೆಯೊಳು ಸವಿಯಮರೆಯ ವಿಷದುಗ್ರತೆಯಂ- ॥
ದದಿನಿಪ್ಪವಂಗಾಗದು ಸ- ।
ತ್ಯಾಧಿಷ್ಟಿತಂ ಜಿನೇಶ್ವರಮಾರ್ಗಂ ॥ ೬ ॥
ಇದು ಯೋಗ್ಯಮಯೋಗ್ಯ- ।
ಮಿದೆನ್ನದೀ ವಿಷಯದಲಂಘನಿಮಿರೆಗತಿಹಾನಿಗಮ- ॥
ಳದಿನಡೆವ ಕಾತರಂಗಾ- ।
ಗದು ಸಕಲತ್ಯಾಗ ಸಾಧಕಂ ಜೈನಮತಂ ॥ ೭ ॥

ಈ ಪ್ರಕಾರವಾಗಿ ಮೋಕ್ಷಮಾರ್ಗ ಪ್ರತಿಕೂಲಂಗಳಾದ—

ಇವು ಸಪ್ತಪ್ರಕೃತಿಗಳಿಂ- ।
ತಿವುಗಳುಪಶಮದಿಂ ಕ್ಷಯೋಪಶಮದಿಂ ಕ್ಷಯದಿಂ ॥
ಪವಣಿಲ್ಲದ ದಣಿವಿಲ್ಲದ ।
ಭವಸಮಿತಿಗೆ ಪವಣಂ ಮಾಡುತ್ತಮುದಯಿಪುದು ಸಮ್ಯಕ್ತ್ವಂ ॥ ೮ ॥

ಮತ್ತಂ ಮುಕ್ತಿಮಾರ್ಗವನ್ನು ತಿಳಿಯುವದು ಹ್ಯಾಗಂದರೆ—

ವೃತ್ತ ॥ ಬಯಸಿ ನಿದಾನಮಂ ಸುಕೃತಮಿಲ್ಲದವರ್ಭರದಿಂ ತದಗ್ರ ಭೂ- ।
ಮಿಯನಗಳುತ್ತಮಿರ್ದು ನಿಧಿಗಾಣ್ಬೆಡೆಯೊಳ್ ಮರುಳಾಗಿ ಪೋಪವಾ- ॥
ಳ್ಕೆಯಿನಪವರ್ಗಮಾರ್ಗದೊಡವಿಂ ಫಲರುಂ ಪಿರಿದೋದಿತತ್ವನಿ- ।
ರ್ಣಯ ಜನಕೋಕ್ತಿಯಲ್ಲಿ ಜಡರಪ್ಪರಿದೇನಘಶಕ್ತಿಚಿತ್ರಮೋ ॥ ೯ ॥

ಕಂದ ॥ ಜಿನದೀಕ್ಷೆಗೊಳ್ಗಿಮಹ- ।
ಮಿಂದ್ರರಾಗಿಪುಟ್ಟುಗುಮನಂತ ಭವದೊಳು ಜೀವ ॥
ಮನದೊಳು ಸಮ್ಯಗ್ದರ್ಶನ- ।
ಮನೋರ್ಮೆಯುಂ ಪೊರ್ದದಿಂ ನಮಘಟಿತಮೊಳವೇ ॥ ೧೦ ॥

ಶ್ಲೋಕ ॥ ಜ್ಞಾತ್ವಾ ತಲಾಮಲಕಮದ್ಬುವಿ ಸರ್ವ ವಿದ್ಯಾ ।
ಕೃತ್ವಾತಪಾಂಸ ಬಹುಕೋಟಿಯುಗಾಂತರಾಣಿಂ ॥
ಸದ್ದರ್ಶನಾಮೃತರಸಾಯನಪಾನಬಾಹ್ಯಾ ।
ನಾತ್ಯಂತಕಿಮನುಭವಂತಿ ಹಿ ಮೋಕ್ಷಲಕ್ಷ್ಮೀ ॥ ೧೧ ॥

ಕಂದ ॥ ಅದು ದೂರಭವ್ಯನೋಳ್ಕೊ- ।
ಡದುದೆಂತುಮಭವ್ಯ ಜೀವನೋಳ್ಪುಟ್ಟಯಿಸದಂ- ॥
ತದು ದುರ್ಲಭಮದುಭವಭಯ ।
ಭಿದುರಮದಾಸನ್ನಭವ್ಯನೋಳ್ ಸಮನಿಸುಗುಂ ॥ ೧೨ ॥

ಅದೆಂತೆಂದೊಡೆ—ಎಷ್ಟು ಬೆಳಕಾಗಿದ್ದಾಗ್ಯೂ ಕಾಣದ ಹುಟ್ಟುಕುರುಡನ ಹಾಗೆ, ಪರಮಾಗಮ ಶ್ರವಣವನ್ನು ಎಷ್ಟು ಮಾಡಿದರೂ ಅಭವ್ಯಜೀವನು ಸನ್ಮಾರ್ಗವನ್ನು ಯಾವರೀತಿಯಿಂದಲೂ ತಿಳಿಯಲಾರನು. ಕಣ್ಣುಗಳ ಬೇನೆಯು ನಾಶವಾದಕೂಡಲೇ ನೋಡುವ ಅಕ್ಷಿರೋಗಿಯ ಹಾಗೆ ದೂರಭವ್ಯನು ಕರ್ಮೋಪಶಮವಾದಾಗ ತಿಳಿಯುವನು. ಬೆಳಕಾದಕೂಡಲೇ ಕಾಣುವಂಥಾ ನಿರ್ಮಲ ದೃಷ್ಟಿಯ ಹಾಗೆ ಧರ್ಮೋಪದೇಶವಾದಕೂಡಲೇ ಆಸನ್ನಭವ್ಯನು ಆಪ್ತಾಗಮ ಪದಾರ್ಥಗಳನ್ನೂ ತಪಸ್ವಿಗಳನ್ನೂ ತಿಳಿದು ನಂಬುವ ಪರಿಣಾಮವು ಸಮ್ಯಕ್ತ್ವವಾಗುವದು. ಅದು ಹ್ಯಾಗಂದರೆ—

ಕಂದ ॥ ಆರಾಧ್ಯನನಾಗಮಮಂ ।
ಚಾರು ಪದಾರ್ಥಮಮಲಯೋಗೀಶ್ವರರಂ ॥
ಸಾರಾಸಾರವಿಚಾರದಿ ।
ನಾರೈದರಿದು ಒಲಿದು ನಂಬುವದು ಸಮ್ಯಕ್ತ್ವಂ ॥ ೧೩ ॥

ಪರಮಗುರುವಚನದೀಪ ।
ಸ್ಫುರಿತದ ಬಲದಿಂ ಸುಯುಕ್ತಿಲೋಚನದಿಂ ನೋ- ॥
ಳ್ಪರ ಮನದೊಳಾದ ವಸ್ತು- ।
ಸ್ವರೂಪಯಾದಾತ್ಮ ನಿಶ್ಚಯಂ ಸಮ್ಯಕ್ತ್ವಂ ॥ ೧೪ ॥

ಚಲಿಯಿಸುಗುಮೆತ್ತಲಾನು- ।
ಕುಲಭೂದರಮಗ್ನಿಶೈತ್ಯಮಂ ಕೈಕೊಳ್ಗುಂ ॥
ತಳೆಗುಂ ಚಂದ್ರಬಿಸುಪಂ ।
ತಳರದು ಜಿನವಚನಮೆಂಬಬಗೆ ಸಮ್ಯಕ್ತ್ವಂ ॥ ೧೫ ॥

ಸ್ಥಿರತೆಯೊಳಮರುವಿನೊಳಮೋ- ।
ರ್ವರನೋರ್ವರ್ಮಿಗುವಪುರುಷರುಳ್ಳದರಿಂದೆ- ॥

ಲ್ಲರುಮಂ ಮಿಗುವನುವೊಳನಾ ।
ಪರಮಾತ್ಮನೇ ದೈವಮೆಂಬಬಗೆ ಸಮ್ಯಕ್ತ್ವಂ ॥ ೧೬ ॥

ಸಕಲ ವಿಮೋಹಕ್ಷಯದಿಂ ।
ಸಕಲ ಜಗದ್ವಂದ್ಯವೀತರಾಗತೆ ಜಿನರೋಳ್ ॥
ಸಕಲಾವರಣಕ್ಷಯದಿಂ ।
ಸಕಲಜ್ಞಾನತೆಯೆಸಗುಮೆಂಬ ಬಗೆ ಸಮ್ಯಕ್ತ್ವಂ ॥ ೧೭ ॥

ಯೆನಿತುಂಟುಮೋಹಪಾಶಮ- ।
ದನಿತುಂ ಬಿಡೆ ಮೋಕ್ಷಮದರಿನಳಿಪೆಂಬುದ- ॥
ನೆನಿತುಮನೊಲ್ಲದು ಮುಕ್ತಿಗೆ ।
ಜಿನಮಾರ್ಗಮೇ ಮಾರ್ಗಮೆಂಬ ಬಗೆ ಸಮ್ಯಕ್ತ್ವಂ ॥ ೧೮ ॥

ಇದು ಪಾಪಾಸ್ರವಕಾರಣ- ।
ಮಿದು ಪುಣ್ಯಾಸ್ರವನಿಮಿತ್ತಮಿಂತಿದು ಮೋಕ್ಷ- ॥
ಪ್ರದಮೆಂದು ಜೀವಪರಿಣಾ- ।
ಮದ ತೆರನಂ ದಿಟದಿನರಿವ ಬಗೆ ಸಮ್ಯಕ್ತ್ವಂ ॥ ೧೯ ॥

ಮನದ ಪದುಳಿಕೆಗೆ ಕಂಟಕ- ।
ಮೆನಿಪ ಬಹಿರ್ವಿಷಯ ವಿಷಮದೇ ಉದೋಚಿತ್ಸಂ- ॥
ಜನಿತಸ್ವಾಸ್ಥ್ಯ ಸುಧಾರಸ- ।
ಮನುಪಮಮೆಂದರಿದು ಮೆಚ್ಚುವುದು ಸಮ್ಯಕ್ತ್ವಂ ॥ ೨೦ ॥

ಮಾನಧನಮೆನಿಪಸಮ್ಯ- ।
ಜ್ಞಾನಿಗೆ ತಕ್ಕುದು ನಿಜೋಪಶಮ ಜನಿತ ಸ್ವಾ- ॥
ಧೀನಸುಖಂ ಪರವಿಷಯಾ- ।
ಧೀನಸುಖ ನಷ್ಟಮೆಂಬ ಬಗೆ ಸಮ್ಯಕ್ತ್ವಂ ॥ ೨೧ ॥

ಇದೇ ಮೋಕ್ಷಮಾರ್ಗ- ।
ಮಿದೇ ಮೋಕ್ಷದ ಲಕ್ಷಣಮಿದುವೆ ಮೋಕ್ಷಫಲಮೆಂಬುದನು- ॥
ಳ್ಳುದನುಳ್ಳಮಾಳ್ಕೆಯಿಂ ತ- ।
ಪ್ಪದೆ ಮನದೊಳು ತಿಳಿದು ನಂಬುವದು ಸಮ್ಯಕ್ತ್ವಂ ॥ ೨೨ ॥

ವರಭೋಧಚರಿತ್ರಂಗಳ- ।
ನೆರವಂ ಪಾರದೆಯುಮೇಕಚತ್ವಾರಿಂಶ- ॥
ದ್ದುರಿತಂಗಳ ಬಂಧಮನಪ- ।
ಹರಿಪುದಚಿಂತ್ಯಪ್ರಭಾವನಿಧಿಸಮ್ಯಕ್ತ್ವಂ ॥ ೨೩ ॥

ಪರಮ ಜಿನೇಶ್ವರರಂ ಸಿ- ।
ದ್ಧರನಾಚಾರ್ಯಾದಿ ದಿವ್ಯಮುನಿಗಳ ನರಿದಾ- ॥
ದರದಿನಡಿಗಡಿಗೆ ತತ್ವ- ।
ಸ್ವರೂಪಮಂ ನೆನೆದುಲಿವ ಬಗೆ ಸಮ್ಯಕ್ತ್ವಂ ॥ ೨೪ ॥

ಕಂದ ॥ ಜಿನಬಿಂಬಾಕೃತಿಯುಂ ಲೋ- ।
ಚನದಿಂ ಕಾಣ್ಬಂತೆ ತಿಳಿದು ಸಿದ್ಧಾಕೃತಿಯುಂ ॥
ನೆನೆಯುಲೊಡಂ ಪ್ರವ್ಯಕ್ತಮಿ- ।
ದೆನೆ ಮನದಿಂ ಕಾಣ್ಬ ಕಾಣ್ಕೆಯದು ಸಮ್ಯಕ್ತ್ವಂ ॥ ೨೫ ॥
ಅನಿಮಿಷಲೋಚನ ಸಿಂಹಾ- ।
ಸನಕಂಪನಿಮಿತ್ತ ತೀರ್ಥಕರ ಪುಣ್ಯನಿಬಂ- ॥
ಧನಮೆನಿಸುವ ಷೋಡಶಭಾ- ।
ವನೆಯೊಳು ತಾನಗ್ರಗಣ್ಯಮಿದು ಸಮ್ಯಕ್ತ್ವಂ ॥ ೨೬ ॥
ಜಿತಮೂಢತ್ರಯುಮುಪಸಾ- ।
ರಿತಷಡನಾಯುತನಮುಪಗತಾಷ್ಟಮುದಂಗಳಂ ವ- ॥
ರ್ಜಿತ ಶಂಕಾದ್ಯಷ್ಟಮಲಂ ಪ್ರ- ।
ತೀತ ನವಸಪ್ತತತ್ವಮಿದು ಸಮ್ಯಕ್ತ್ವಂ ॥ ೨೭ ॥
ಪರನಿಂದಿತಖಿಳ ಹೇಯಾ- ।
ಚರಣದಿ ಸಂಸಾರದುಃಖಮಘಸಂತತಿ ಸಂ- ॥
ಸ್ಮರಣಮುಪಾದೇಯದಿನಿದು ।
ಪರಮಾರ್ಥಂ ತಪ್ಪದೆಂಬ ಬಗೆ ಸಮ್ಯಕ್ತ್ವಂ ॥ ೨೮ ॥
ಕರಕಂಜಳರೂಪಿಂದಂ ।
ಪರಿಣಮಿಸುವ ತೆರದಿ ನಿರ್ನಿಮಿತ್ತಂ ಕಾಲಂ ॥
ದೊರೆಕೊಳೆ ತನ್ನಿಂದಂ ತಾಂ ।
ಪರಮಾತ್ಮನಪ್ಪೆನೆಂಬ ಬಗೆ ಸಮ್ಯಕ್ತ್ವಂ ॥ ೨೯ ॥
ನಡೆವೆಡೆಯೋಳ್ ನುಡಿವೆಡೆಯೋಳ್ ।
ಕೆಡೆವೆಡೆಯೋಳ್ ದುಃಖಮೆಯ್ದುವೆಡೆಯೋಳ್ ಜವನೊ- ॥
ಯ್ವೆಡೆಯೋಳ್ ತತ್ವಸ್ಮರಣಮು- ।
ನೆಡೆವರಿಯದೆ ನೆಚ್ಚಮಾಳ್ಪದದು ಸಮ್ಯಕ್ತ್ವಂ ॥ ೩೦ ॥
ಅನಶನ ಮೊದಲಾರುಂ ತನು- ।
ತನುಕೃದ್ಧನಿತು ಭೂತಬಾಹ್ಯತಪ ಸಂ- ॥
ಜನಿತಾಯಾಸದೊಳೇನೆಂ- ।
ದನವರತಂ ನಿಜವ ನೆನೆವುದದು ಸಮ್ಯಕ್ತ್ವಂ ॥ ೩೧ ॥
ನಿರುತಂ ಬೋಧಚರಿತ್ರದೊ- ।
ಳೆರಡುಂ ತಾನೆನಿಸದೇಕಚತ್ವಾರಿಂಶ- ॥
ದ್ದುರಿತಾಪಹನಚಿಂತ್ಯ- ।
ಸ್ವರೂಪನವಿಕಲ್ಪಮೆಂಬ ಬಗೆ ಸಮ್ಯಕ್ತ್ವಂ ॥ ೩೨ ॥
ಆವೊಂ ಭವ್ಯಾನಂದಕ- ।
ಭಾವಂ ಭುವನೈಕವಂದಿತಂ ನಿಶ್ಚಯದಿಂ- ॥
ದಾವನನಂತಚತುಷ್ಟಯ- ।
ದಾ ವಿಭು ತಾಂ ದಾತೃವೆಂಬ ಬಗೆ ಸಮ್ಯಕ್ತ್ವಂ ॥ ೩೩ ॥

ಕಂದ ॥ ಯೆಂತಿರ್ದುವಖಿಳ ವಸ್ತುಗ- ।
ಳಂತನಿತುಮಿರ್ದಪರಿಯೋಳರಿದನಿತರೊಳಂ ॥
ಭ್ರಾಂತಂ ಬಿಟ್ಟು ನಿಜಾತ್ಮನ- ।
ನಂತರ್ಮುಖನಾಗಿ ನೆನೆವುದದು ಸಮ್ಯಕ್ತ್ವಂ ॥ ೩೪ ॥
ಪರಮೇಷ್ಠಿಸ್ವಾಮಿಗಳ್ಗೆ- ।
ವರಭೇದಮನರಿದು ನಂಬಿ ಕಿಲ್ಬಿಷಮಂ ಸಂ- ॥
ಹರಿಸಲು ನೆರೆವ ನಿಜಾತ್ಮ ।
ಸ್ವರೂಪಮಂ ಬಿಡದೆ ನೆನೆವುದದು ಸಮ್ಯಕ್ತ್ವಂ ॥ ೩೫ ॥
ಇಂತಿಶ್ರದ್ಧಾನಂ ಸಂ- ।
ಭ್ರಾಂತಿಯೊಳೇಂ ಕರಣಲಬ್ಧಿಯಿಂ ಕೈಕೊಳ್ಗಂ ॥
ಮಂತಣಮೇಂ ವಾಗ್ಜಾಳದಿ- ।
ನಂತಿಂತೆಂದೂಳ್ವಡಕ್ಕುಮೆ ಸಮ್ಯಕ್ತ್ವಂ ॥ ೩೬ ॥
ನಿಜತತ್ವದ ರುಚಿರಚಿತಂ ।
ನಿಜತತ್ವದ ರುಚಿಸಮಸ್ತಬೋಧಾದ್ವೈತಂ ॥
ನಿಜತತ್ವದ ರುಚಿ ಜಿನನುತಿ ।
ನಿಜತತ್ವದ ರುಚಿಯೆ ಸಂಯಮಂ ಪೆರತುಂಟೆ ॥ ೩೭ ॥
ನಿಜತತ್ವಂ ಸದ್ದೈವಂ ।
ನಿಜತತ್ವಂ ಪನ್ನೆತ್ತೆರದ ತಪಮುದೆನಿಕ್ಕುಂ ॥
ನಿಜತತ್ವಂ ಚಾರಿತ್ರಂ ।
ನಿಜತತ್ವಂ ಶೀಲಮೆಂಬ ಬಗೆ ಸಮ್ಯಕ್ತ್ವಂ ॥ ೩೮ ॥
ನಿಜತತ್ವಂ ನಯನಿಕರಂ ।
ನಿಜತತ್ವಂ ತಾಂ ಪ್ರಮಾಣಮಕ್ಕುಮವಶ್ಯಂ ॥
ನಿಜತತ್ವಂ ನಿಕ್ಷೇಪಂ ।
ನಿಜತತ್ವಂ ತತ್ವಮೆಂಬ ಬಗೆ ಸಮ್ಯಕ್ತ್ವಂ ॥ ೩೯ ॥
ನಿಜತತ್ವಂ ಸುಖಜನಿತಂ ।
ನಿಜತತ್ವಂ ಬ್ರಹ್ಮಚರಿಯಮುಪಗತದಂಡಂ ॥
ನಿಜತತ್ವಂ ಸಿದ್ಧತ್ವಂ ।
ನಿಜತತ್ವಂ ಕ್ಷಾಂತಿಯೆಂಬ ಬಗೆ ಸಮ್ಯಕ್ತ್ವಂ ॥ ೪೦ ॥
ನಿಜತತ್ವಂ ಗುಣನಿಕರಂ ।
ನಿಜತತ್ವಂ ಸಮಿತಿಗುಪ್ತಿಮಾರ್ದವ ಶೌಚಮ್ ॥
ನಿಜತತ್ವಂ ಕಿಂಚನ್ಯಂ ।
ನಿಜತತ್ವಂ ತತ್ವಮೆಂಬ ಬಗೆ ಸಮ್ಯಕ್ತ್ವಂ ॥ ೪೧ ॥
ನಿಜತತ್ವಂ ಆರ್ಜವತ್ವಂ ।
ನಿಜತತ್ವಂ ಸಂಯಮಂ ಮಹಾವ್ರತಮೆನಿಕುಂ ॥
ನಿಜತತ್ವಂ ಜಿನಪತಿನುತಿ ।
ನಿಜತತ್ವಂ ಕಾರ್ಯಮೆಂಬ ಬಗೆ ಸಮ್ಯಕ್ತ್ವಂ ॥ ೪೨ ॥

ಕಂದ ॥ ನಿಜತತ್ವಂ ದುರಿತಹರಂ ।
ನಿಜತತ್ವಮೇ ತಪ್ಪದಪ್ಪದಾರ್ಯರ್ಾಷಟ್ಕಂ ॥
ನಿಜತತ್ವಮುಪಾದೇಯಂ ।
ನಿಜತತ್ವಮೆಂಬ ಬಗೆ ಸಮ್ಯಕ್ತ್ವಂ ॥ ೪೩ ॥

ಇದು ಮುಖ್ಯಂ ಗ್ರಾಹದಲಿಂ- ।
ತಿದು ಗೌಣಂ ತ್ಯಾಜ್ಯಮೆಂದು ಬಿಡುವಂ ಪಾಲಂ ॥
ಪದುಳಂ ಪಿಡಿದ ವಿಚಾರದಿ ।
ತುದಿಗಯ್ಯಲಿ ಕಂದಲನೆ ಪಿಡಿವ ಮರುಳಂ ಪೋಲ್ಕಂ ॥ ೪೪ ॥

ದೋಷಘ್ನನೆಯಾಪ್ತಂ ಸ- ।
ದ್ಭಾಷಾತ್ಮಕಮಪ್ಪದಾಗಮಂ ತತ್ಕಥಿತಾ ॥
ಶೇಷಾಳಿಪದಾರ್ಥಂ ಜಿನ- ।
ಭಾಷಿತಮೆಂದರಿದು ನಂಬುವದು ಸಮ್ಯಕ್ತ್ವಂ ॥ ೪೫ ॥

ಎಂದುಂ ಮುನ್ನೆನೆಯದ ತ- ।
ನ್ನಂದಮೇನವಿಕಲ್ಪನಪ್ಪನಂ ಚಿಂತಿಸುವಾ- ॥
ನಂದಂ ಪರಿಣಾಮ ಘಟಯಿಸಿ ।
ದಂದಾತಂ ಶುದ್ಧದರ್ಶನಾಹ್ವಯನೆನಿಕುಂ ॥ ೪೬ ॥

ನಿಜವಂ ತಪ್ಪದೆ ನೋಡುವ ।
ನಿಜಮಂ ಪಲ್ಲಟಸುವರಿವ ತದ್ವಯಸಹಿತಂ ॥
ನಿಜದೋಳ್ ಚರಿಯಿಪ ಪರಿಣತಿ ।
ವೃಜಿನಘ್ನಂ ಶುದ್ಧದರ್ಶನಂ ತಾನೆನಿಕುಂ ॥ ೪೭ ॥

ವೃತ್ತ ॥ ಪಿರಿದುಂ ಮಾತಿನೊಳೇನುಬಾಹ್ಯಜನಿತವ್ಯಾಪಾರಮಂ ಬಿಟ್ಟು ಸ- ।
ದ್ಗುರುವಿನ್ನಾಗಮಮೆಂಬರನ್ನಸೊಡರಿಂ ಮಿಥ್ಯಾತಮೋಬಂಧಸಂ- ॥
ಹರಿತಾಂತರ್ಮುಖನಾಗಿ ನಿಶ್ಚಲಮನಂ ಸ್ವಾಧೀನಸೌಖ್ಯಾಮೃತಾ- ।
ಕರಮುಗ್ನಂ ವರಶುದ್ಧದರ್ಶನನವಂ ಸಂಸಾರವಾರಂಗಳಂ ॥ ೪೮ ॥

ಕಂದ ॥ ಕಿಡೆಸಮ್ಯಕ್ತ್ವಂ ಮಣ್ಗೊಡ- ।
ನೊಡೆದಂದಂ ಚರಿತಮಳಿಯೆ ಹಾಟಕಕುಂಭಂ ॥
ಪುಡಿಯಾದ ಭಂಗಿಯದರಿಂ ।
ಕೆಡಿಸದೆ ದರ್ಶನಮನೋವಿ ನಡೆವುದು ಭವ್ಯಂ ॥ ೪೯ ॥

ವೃತ್ತ ॥ ಜಿನಪೂಜೋತ್ಸವದಿಂ ಜಿನೇಂದ್ರಮಹಿಮಾಸಾನಂದದಿಂ ಜೈನಶಾ- ।
ಸನ ವಿಸ್ತಾರಿತಹರ್ಷದಿಂ ಜಿನಪದಾಂಭೋಜಾನತೋತ್ಸಾಹದಿಂ ॥
ಜಿನಧರ್ಮೋದ್ಗತಸಾರತತ್ವರುಚಿಯಿಂ ಶ್ರೀಜೈನಗೇಹಾವಲೋ- ।
ಕನ ಸೌಖ್ಯಾಮೃತಲಂಪಿನಿಂ ಚರಿಯಿಪಂ ಸಮ್ಯಕ್ತ್ವಯುಕ್ತೋತ್ತಮಂ ॥ ೫೦ ॥

ವೃತ್ತ ॥ ಮನವೊಂದೆಂಬುದು ಸುಪ್ರಸಿದ್ಧಮದುತಾಂ ಸಮ್ಯಕ್ತ್ವದೋಳ್ ಮಿಥ್ಯೆಯೋಳ್ ।
ಜನಿತೈಕತ್ವದೊಳೊಂದಿಯೊಂದುಸಮಯಪ್ರೋದ್ಭೂತವೆಂದೆಂಬ ಮಾ- ॥
ತಿನಭೇದಂ ಸಕಲಜ್ಞಗೋಚರಮದಂ ಪೂರ್ವೋಕ್ತಮಂ ನಂಬುವಾ- ।
ತನುವಾದಂ ಪ್ರತಿಭಾಪ್ರಯುಕ್ತಹೃದಯಂ ಸಮ್ಯಕ್ತ್ವಯುಕ್ತೋತ್ತಮಂ ॥ ೫೧ ॥

ಪರಮಗುರೂಪದೇಶದಿನಶೇಷಪದಾರ್ಥಮನುಳ್ಳಭೇದವಿ- ।
ಸ್ತರತೆಯನಾವಗಂ ತಿಳಿದು ತನ್ನೊಳತಾಂ ನೆಲೆಗೊಂಡು ನಚ್ಚುಮ- ॥
ಚ್ಚರನಿಜತತ್ವಸಂಜನಿತ ನಿಶ್ಚಲನಿರ್ಮಲದಿವ್ಯಸೌಖ್ಯಸಾ- ।
ಗರದೊಳಹರ್ನಿಶಂ ನೆಲಸಿನಿಂದನೆ ದರ್ಶನಶುದ್ಧನುತ್ತಮಂ ॥ ೫೨ ॥

ಜಿನಪತಿಕಾಳಿಕಾರಹಿತಕಾಂಚನದಂತೆ ನಿರಸ್ತಕರ್ಮಬಂ- ।
ಧನನೆನಿಸಿರ್ದನಾಂ ದುರಿತಬಂಧದಿ ಕಾಳಿಕೆಪರ್ವಿದೊಂದು ಕಾಂ- ॥
ಚನದವೊಲಿರ್ದನೀದುರಿತಮೊತೆರದಿಂದಮಗಲ್ವುದುಂ ಜಿನೇಂ- ।
ದ್ರನದೊರೆಯಪ್ಪೆನೆಂದು ತಿಳಿದಾತನೆ ದರ್ಶನಶುದ ನುತ್ತಮಂ ॥ ೫೩ ॥

ಕಂದ ॥ ಮುನ್ನನಿಜಾತ್ಮನನರಿಯದೆ ।
ಇನ್ನೇವರಂ ಪರಪರಂಗಳಾನೆಂದುಕರ- ॥
ಮನ್ನಿಸಿ ಕೆಟ್ಟೆ ಬಗೆಯದೆ ।
ಸನ್ನುತಮಪ್ಪಾತ್ಮಲಬ್ಧಿದುರ್ಲಭದಿಂದಂ ॥ ೫೪ ॥

ವೃತ್ತ ॥ ಮಾನವನಾಗದಂದು ಮೃಗಮುಂ ಖಗಮುಂ ಪಶುಕೀಟಮಾಗಿರಲ- ।
ಜ್ಞಾನಮದಿಲ್ಲತಪ್ಪೆಡರೋಳಕಟ ಮಾನಸನಾಗಿಯುಂ ನಿಜ- ॥
ಜ್ಞಾನಮನೊಕ್ಕು ಮತ್ತೆಪಶುಯೋನಿಯೊಳೊಯ್ಯನೆ ಬೀಳದಾತ್ಮನಂ ।
ಜ್ಞಾನಘನತ್ವದಿಂ ತಿಳಿದು ನಂಬುವುದೀ ಪರಮೋಪದೇಶದಿಂ ॥ ೫೫ ॥

ಕಂದ ॥ ಹರಿಯಲ್ಲಂ ಹರನಲ್ಲಂ ।
ಸರಸಿಜಭವನಲ್ಲನಖಿಳಸುಗತನುಮಲ್ಲಂ ॥
ಪರಮಾರ್ಥಂ ಚಿಜ್ಯೋತಿ- ।
ಸ್ವರೂಪನೆನ್ನಾತ್ಮನೆಂಬ ಬಗೆ ಸಮ್ಯಕ್ತ್ವಂ ॥ ೫೬ ॥

ವೃತ್ತ ॥ ಹುಟ್ಟದ ಯೋನಿ ಮೆಟ್ಟದ ನೆಲಂ ನೆರೆಕೊಳ್ಳದಾಹಾರಮೋರ್ಮೆಯುಂ ।
ಮುಟ್ಟದ ಭಾವಮೊಂದದಭವಂ ಪೆರತಿಲ್ಲೆನೆ ದುರ್ಮೋಹದಿಂ ॥
ತಿಟ್ಟನೆ ಬಂದು ನೀಂ ತಿರಿಯದಕ್ಕಟ ನಿನ್ನನಿಜಸ್ವರೂಪಮಂ ।
ನೆಟ್ಟನೆ ನೋಡಿ ಕೂಡಿ ಪಡೆ ನಿತ್ಯನಿರಂಜನಮೋಕ್ಷಲಕ್ಷ್ಮಿಯಂ ॥ ೫೭ ॥

ಕಂದ ॥ ಜಿನರೋಳ್ ಜಿನವಚನದೊ- ।
ಳಾಜಿನವಚನಾರ್ಥದೋಳ್ ಪಕ್ಷಪಾತಂ ಮೋಹ- ॥
ಕ್ಕೆನಿತೇನೆಡೆಗುಡದಿರೆನಿಸಿದ ।
ಮನದೆರಕಂ ಗುಣನಿಬಂಧನಂ ಸಮ್ಯಕ್ತ್ವಂ ॥ ೫೮ ॥

ಕಂದ ॥ ಹೇಯಮುದತಿವಿಷಮುವಿಷ- ।
ಪ್ರಾಯಂ ಜೀವಕ್ಕಧರ್ಮಮೆಂತುಂ ಧರ್ಮಂ ॥
ಶ್ರೇಯಮಮೃತೋಪಮಂ ಸುಖ- ।
ದಾಯಕಮಾದೇಯಮೆಂಬ ಬಗೆ ಸಮ್ಯಕ್ತ್ವಂ ॥ ೫೯ ॥

ವೊಂದುಗುಣಂ ತನ್ನೊಳು ನಿ- ।
ಸ್ಸಂದೇಹಂ ನೆಲಸಲೊಲಮಶೇಷಗುಣಂಗಳ್ ॥
ಬಂದಿದುಮಂದುಬಗೆ ।
ಯದುವುಂ ದೃಢತರದುರಿತವಿಜಯ ಜಿನವಿಶ್ವಾಸಂ ॥ ೬೦ ॥

ಜಡುವೊಡಿವ ಬೆರಸಿಕೊಳ್ವೀ ।
ಜಡತ್ವಮಂ ಪೊರ್ದದಿನಿತನರ್ಹತ್ವದಮಂ ॥
ಬಿಡದಿರ್ದಡಂಗಿದಿಂ ಕಿಡೆ ।
ಬೆಡಂಗನೊಳಕೊಂಡಮನಮೇ ದೃಢಸಮ್ಯಕ್ತ್ವಂ ॥ ೬೧ ॥

ಜಿನನೆನಗೇನನುಸಿರ್ದನದ ।
ನಿಂತುಂ ತಥ್ಯಂಗಲೆನಗೆ ಪಥ್ಯಂ ಪೋಗಿಂ ॥
ನೆನವೆಡಪೆರತನೆಂಬಿ ।
ಮನದ ವಿನಿಶ್ಚಯಮನರ್ಘ್ಯದರ್ಶನರತ್ನಂ ॥ ೬೨ ॥

ತೊಪ್ಪನೆನೆಲನಂ ಪೊಯಿದೊಡೆ ।
ತಪ್ಪುವೊಡಂ ತಪ್ಪಲಕ್ಕುಮೆಂತಾನುಂ ಕೈ- ॥
ತಪ್ಪದು ಜಿನಭಾಷಿತಮೆ- ।
ದಪ್ಪೊಡಮೆಂದರಿದು ನಂಬಿ ನೆಗಳ್ವನೇ ಭವ್ಯಂ ॥ ೬೩ ॥

ತಪ್ಪುವೊಡರ್ಹದ್ವಚನಂ ।
ತಪ್ಪುಗುಮಾವಾರ್ಧಿಮೇರೆಯುಂ ಮೇರುನಗಂ ॥
ತಪ್ಪುಗುಮಿರ್ದೆಡೆಯಿಂದಂ ।
ತಪ್ಪುಗುಮರ್ಕೋದಯಾಸ್ತಮಾನಕ್ರಮುಮಂ ॥ ೬೪ ॥

ವೊಂದುಭವಂ ಸರ್ವಜ್ಞಂ- ।
ಗೆಂದೀವರರುಂ ನಿಜೋತ್ತಮಾಂಗದೊಳನಂತಾ- ॥
ನಂದದೊಳಿರ್ದಂ ಪಡೆಗುಂ ।
ಕುಂದದ ಸೌಖ್ಯಮೆನಿಪದೊಂದು ಧಾತ್ರಿಗೆ ಚಿತ್ರಂ ॥ ೬೫ ॥

ಇಂತು ವ್ಯವಹಾರನಯದಿಂ ಆಪ್ತಾದಿವಿಷಯರುಚಿಯೇ ಸಮ್ಯಕ್ತ್ವವೆಂದು ಅದನ್ನು ತಿಳಿದುಕೊಂಡು ಪ್ರೀತಿಯಿಂದ ಹೇಳಿ ಸಕಷಾಯ ಜೀವಾಶ್ರಿತವಾದಿಯಾದಭ್ಯುತ್ವಾದಮುಮಂ ಅಪ್ತಧರ್ಮವಾದ ನಿಶ್ಚಯಸಮ್ಯಕ್ತ್ವಮಂ ತದುತ್ಪತ್ತಿ ಪ್ರತಿಬಂಧಕಾಭಾವನಿಮಿತ್ತಸಹಿತಂ ಪೇಳುವೆನು.

ಕಂದ ॥ ಭಾವಕಲುಷತ್ವಮಂ ಸಂ- ।
ಭಾವಿಪ ದೃಗ್ಮೋಹದಂದುದಯದಿಲ್ಲಮೆಯಿಂ ॥
ಭಾವವಿಶುದ್ಧತೆಯಕ್ಕುಂ ।
ಪಾವನಸಮ್ಯಕ್ತ್ವಮದುವೆ ನಿಜರುಚಿ ಗಮ್ಯಂ ॥ ೬೬ ॥

ಕಾಂಚನಮೆಂತಪಗತದೋ- ।
ಷಂ ಚೆಲ್ವಂ ಪಡೆಗುಮನ್ತೆ ದರ್ಶನರತ್ನಂ ॥
ಪಂಚಾಧಿಕವಿಂಶತಿ ಮಲ- ।
ಸಂಚಯದಿಂ ಪಿಂಗೆ ಸಹಜಭಾವದಿ ನೆಸೆಗುಂ ॥ ೬೭ ॥

ಜಿನ ವಚನ ರಸಾಮೃತದೋಳ್ ।
ಮನದೆರಕಂ ನಚ್ಚುಮೆಚ್ಚು ನಲವೊಲಮೆಂಬೀ- ॥
ವಿನುತಶ್ರದ್ಧಾನಾರ್ಥಮ- ।
ನೂನಸೌಖ್ಯಕ್ಕೆ ಬೀಜಮಂ ತಾನುಸಿರ್ಗುಂ ॥ ೬೮ ॥

ಸಮ್ಯಕ್ತ್ವಮೇ ಪರಮ ಪದಂ ।
ಸಮ್ಯಕ್ತ್ವಮೇ ಸಕಲ ಸುಖದ ನಿಲಯಂ ಮತ್ತಂ ॥
ಸಮ್ಯಕ್ತ್ವಮೇ ಮುಕ್ತಿಪಥಂ ।
ಸಮ್ಯಕ್ತ್ವದಿ ಕೂಡಿನೆಗಳ್ದ ತಪಮದು ಸಫಲಂ ॥ ೬೯ ॥

ಇನಿತಂ ಭವ್ಯನೆ ಕೇಳ್ ಪಾ- ।
ವನ ಸಮ್ಯಕ್ತ್ವ ವರ್ತಿಕುಂ ಶ್ರದ್ಧಾನಂ ॥
ಜಿನಭಕ್ತಿ ತತ್ವರುಚಿ ದ- ।
ರ್ಶನಮಾತ್ಮಜ್ಞಾನಮೆಂಬ ಪರಿಯಾಯಂಗಳ್ ॥ ೭೦ ॥

ನೀನುಮಿದಂ ತಿಳಿ ನಾನಾ- ।
ಯೋನಿಯ ದುಃಖಾಗ್ನಿತಾಪಮಂ ನೀಗುವೊಡಂ ॥
ಜ್ಞಾನಮಯ ಶಾಸ್ವತ ಸ್ವಾ- ।
ಧೀನ ಸುಖಾಮೃತದ ಕಡಲೊಳೋಲಾಡುವೊಡಂ ॥ ೭೧ ॥

## ಸೂತ್ರಂ॥ ತತ್ರ ವೇದಕಸಮ್ಯಕ್ತ್ವಸ್ಯ ಪಂಚವಿಂಶತಿ ಮಲಾನಿ ॥ ೬ ॥

ತಾಃ—ವೇದಕ ಸಮ್ಯಕ್ತ್ವಕ್ಕೆ ಪಂಚವಿಂಶತಿ ( ೨೫ ) ಮಲಗಳಾಗುವವು, ಹ್ಯಾಗಂದರೆ-

ಶ್ಲೋಕ ॥ ಮೂಢತ್ರಯಂ ಮದಾಶ್ಚಾಷ್ಟೌ ತಥಾನಾಯತನಾನಿಷಟ್ ।
ಅಷ್ಟೌ ಶಂಕಾದಯಶ್ಚೇತಿ ದೃಗ್ದೋಷಾಃ ಪಂಚವಿಂಶತಿಃ ॥

ಕಂದ ॥ ಡಂಭಕರ ಪರರ ಮಾತನೆ ।
ನಂಬಿ ಜಡಾತ್ಮರ್ಗೆ ತಾನು ಗತಿಕಾಲೋಕಂ ॥
ಯೆಂಬವೋಲಿದು ಪುಸಿ ಸನ್ನಿಯಿ- ।
ದೆಂಬುದನರಿಯದೆ ನೆಗಳ್ವರಿದು ಮೂಢತ್ವಂ ॥ ೭೨ ॥

ವಚನ ॥ ಆ ಮೂಢವು, ೧ ಲೋಕಮೂಢ, ೨ ದೇವತಾಮೂಢ, ಪಾಷಂಡಿಮೂಢವೆಂದು ಮೂರುಭೇದವಾಗುವದು. ಅದರಲ್ಲಿ ಲೋಕಮೂಢ ಹ್ಯಾಗೆಂದರೆ—ವೇದಿಲ್ಲ, ಶಾಸ್ತ್ರವಿಲ್ಲ, ಪುರಾಣವಿಲ್ಲ, ಆಚಾರ್ಯರಿಲ್ಲ, ಉಪದೇಶವಿಲ್ಲ ಗಳಪರಿಯೋಜರಾಗಿ ಯೋರೋರ್ವರೇನೆಂದೊಡಂ, ತಂತಮ್ಮ ಪಡೆಪುಕಾರಣವಾಗಿ, ಗಾಳಿಯಿಂ ಗಂಟಿಕ್ಕಿ ಕೊಂಡು ಪೇಳ್ದಾ ಪೇಳ್ದದನೆ ನೋಂಪುದುಂ, ಕುಡವೇಳ್ದುದನೇ ಕುಡುವುದುಂ, ಮಾಡ ವೇಳ್ದುದನೆ ಮಾಡುವುದುಂ, ಇವರೆಂತೆಂದವರಾಡಿದುದಂ ಆಡುವುದುಂ, ಇದು ಪುಸಿ ನನ್ನಿಗುಣ ದೋಷವೆಂಬುದವೆಂದರಿಯದುದಂ, ಮತ್ತಂ—

ಕಂದ ॥ ನದಿ ವಾರ್ಧಿಗಳಂ ಮಿಂಪುದು- ।
ಮದಿರದೆ ತಾಂ ಕಿಚ್ಚುವಾಯ್ವುದುಂ ಕಮ್ಮರಿವಾ- ॥
ಯ್ವುದುಮಿದು ಲೋಕಮೂಢಂ ।
ಪುದಿದು ಕರಂ ರಾಸಿ ಮಾಳ್ಪುದು ಕಲ್ಮಳಲಂ ॥ ೭೩ ॥

ವಚನ ॥ ತೊರೆಗಳಂ ಸಮುದ್ರಗಳಂ ಕೊಂಡಂಗಳುಮಂ ನಾಮತೀರ್ಥಂ ನಮಗೆ ಪುಣ್ಯಾರ್ಥಮೆಂದು ಪುಗದ ನಾಡಂ ಪೋಕ್ಕುಮಿವು ನಾಮತೀರ್ಥಮಲ್ಲದೆ ಭಾವತೀರ್ಥಮಲ್ಲವು ॥ ಸತ್ಯಮುಂ, ತಪವುಂ, ಇಂದ್ರಿಯನಿಗ್ರಹವುಂ, ಸರ್ವಜೀವದಯಾಪರತ್ವಮುಮೆಂದಿವು ಭಾವತೀರ್ಥಮೆಂಬುದಿನ್ತೀ ಭಾವತೀರ್ಥಂಗಳೊಳಾತ್ಮನೊಳೇಕೀಭಾವಮಾಗಿರ್ದ ಕರ್ಮಮಲಕಳಂಕಮೆಲ್ಲವುಂ, ಕರ್ಚ್ಚಿಕಳೆದಂತೆ ಪೋಕುಂ, ಸ್ವರ್ಗಮುಮಪವರ್ಗಮುಮಕ್ಕುಂ ॥ ನಾಮತೀರ್ಥಜಲಂಗಳಿಂ ಕಚ್ಚಿದೇವದತ್ತನೆಂಜಲಿಸಿದ ಕೂಳಂ ಕರ್ಚ್ಚಿದೊಡ ಪೆರಗುಣಲ್ಕೆಯೋಗ್ಯಮಪ್ಪೊಡಕ್ಕುಂ, ಉಚ್ಛಿಷ್ಟದೋಷಮುಂ ಕೆಡಿಸಲಾರದ ಜಲಮೆಂತೊಳಗಣ ಪಾಪಮುಂ ಕಳೆಗುಂ ॥ ಮತ್ತಂ ಜಲಾತ್ರಯಂಗಳೊಳಲ್ಲಿಯೇ ಪುಟ್ಟಿಯಲ್ಲಿಯೇ ಬೆಳದಲ್ಲಿಯೇ ನೀರನೇ ಕುಡಿದಲ್ಲಿಯೇ ಸಾವ ಮತ್ಸ್ಯಾದಿಮಕರಾದಿಗಳಂತದುಭಯತಟವರ್ತಿಗಳಪ್ಪ ಕಾಂಕಣಿಕ, ಸಿಂಹಳಿಕ, ಬರ್ಭರ, ಶಬರ, ಪ್ರಭೃತಿಗಳ್ಗಂ ಪಾಪಕ್ಷಯಮುಂ, ಪುಣ್ಯಬಂಧಮುಮಾಗವೇಕೆ ಪುಣ್ಯಬಂಧಮೆಮಗಕ್ಕುಮೆಂಬ. ಸಂಕಲ್ಪಮಿಲ್ಲದೇಕಕ್ಕುಮೆಂಬಡೆ ಸಂಕಲ್ಪಮಾತ್ರದೊಳೆ ತೈಲಾರ್ಥಮಾಗಿ ಮಣಲಂ ಪಿಳಿದೊಡೆಂಣೆಯಾಗದಂತೆ ಪುಣ್ಯಕ್ಕೆ ಕಾರಣಮಲ್ಲದುಮಂ ನೆಗಳ್ದಡೆ ನಿಷ್ಫಲಕ್ಲೇಶಂಗಳಕ್ಕುಂ ॥ ಮತ್ತಂ ಶಸ್ತ್ರಾಗ್ನಿಗಿರಿನದಿಗಳಂ ಪೊಯ್ದು ಸತ್ತವರಿಗೆ ಪುಣ್ಯಮೆಂಬಡೆ, ರಣದೊಳು ಕಯ್ದುವಿನೊಳು ಸಾವುದುಂ ಮೃಗಂಗಳೊಳ್ಕಾಳ್ಗಿಚ್ಚಿನೊಳ್ಸಾವುದುಂ, ಗಿರಿಗಳನೇರಿ ಜಗುಳ್ದುಸಾವುದುಂ, ತೊರೆಗಳ ನೀರಂ ನೀಸಲಾರದೆ ಸಾವುದುಂ, ಪರುಗೋಲಲರ್ದುಸಾವುದುಂ ಇಂನ್ತೀಯಂದದೊಳ್ಸತ್ತ ಪ್ರಾಣಿಗಳಿಗೆ ಪುಣ್ಯಮಾಗಲೇವೇಳ್ಕುಮಿಲ್ಲೆಂಬೊಡೆ ಮುನ್ನಿನ ನುಡಿ ಪುಸಿಯಾಗಲೇವೇಳ್ಕು ಮತ್ತೇಕೆಯಕ್ಕುಂ, ಪುಣ್ಯಮೆಯಕ್ಕುಮೆಂಬಡೀ ಲೋಕದೊಳಂತಪ್ಪ ಸಾವುಗಳಂ ಕಂಡು ನೆಂಟರ್ಪೋಗಳೀಯದುದೇ ಪೇಳ್ಗುಮಲ್ಲಿ ಪಾಪಮಲ್ಲದೆ ಪುಣ್ಯಮಿಲ್ಲ ॥ ಮತ್ತಂ, ಹಿತರರ ಮಾಡಿದಪ್ಪೆವೆಂಬರಂತಪ್ಪಡೆ ಪೆರವುಳಿಪುಟ್ಟ

ಬಳಯುತ್ತಿರ್ದ ಪರರನೂಡುವ ಪಾರ್ವತರ್ಾಮೇಕೆಯೊಳಿರ್ದ ಪಾರ್ವಂಗೆ ಕೂಳ ನೊಯ್ವಮರ್ಾನೆಯೊಳಿರ್ದೇ ಮಾಡಲಾಗದೇ, ಇನ್ತು ನನ್ನಿಪುಸಿ ಎಂಬುದನರಿಯದಿ ಯೋರೋರ್ವರಂ ಕಂಡು ನೆಗಳ್ವುದು ಲೋಕಮೂಢಮೆಂಬುದು.

ವೃತ್ತ ॥ ಪರಮಾರ್ಥಂ ಲೋಕಮೆಂಬೀ ಎರಡುವನರಿಯಂ ಲೋಗರೇನಾನುಮೊಂದಂ ।
ಭರದಿಂದಂ ಮಾಡುತಂ ಮಾಡುವನಘಹರಮೆಂದೆಯ್ದಿ ಸಿಂಧುಪ್ರವಾಹೋ- ॥
ತ್ಕರದೋಳ್ಮೀವಂ ಕೃಶಾನೋದಕಮರಣದಿ ಮೇಣ್ಭೈರವಂ ಬಾಯ್ದ ಮೇಣ್ಣಂ- ।
ಗರದೋಳ್ಸಂಹಾರಿಕುಂ ಪ್ರಾಣಮನೆನಿಪ ಜಡಂ ಲೋಕದೋಳ್ ಲೋಕಮೂಢಂ॥೭೩

ಇನ್ನು ಸಮಯ ( ಪಾಷಂಡಿ ) ಮೂಢವು ಹ್ಯಾಗೆಂದರೆ—ಮಿಥ್ಯಾತ್ವಗ್ರಹಗ್ರಸ್ಥರಾಗ ದ್ವೇಷಯುಕ್ತರುಂ, ದಂಡತ್ರಯಮಂಡಿತರುಂ, ಗಾರವತ್ರಯಧಾರಿಗಳುಂ, ಶಲ್ಯತ್ರಯಸಂಪೂ ರ್ಣರುಂ, ಮೂಢತ್ರಯ ಪ್ರರೂಢರುಂ, ಚತುಃಕಷಾಯವಶಗತರುಂ, ಚತುರ್ಗತಿಭ್ರಮಣಚಿ ತ್ತರುಂ, ಪಂಚಾವ್ರತಂತಚರಿತರುಂ, ಪಂಚಸೂನುನಿರತರುಂ, ಲೌಕೀಕಷಟ್ಕರ್ಮನಿರತರುಂ, ಸಪ್ತಭಯಯುಕ್ತರುಂ, ಅಷ್ಟಮದಾವಿಷ್ಟರುಂ, ನವನಯದೂರರುಂ, ದಶವಿಧಾಸಂಯಮಧಾ ರರಪ್ಪ ಕುಲಿಂಗಿಗಳಾಪ್ತಾಗಮಪದಾರ್ಥ ಭೇದಮನರಿಯದೆ ತಮ್ಮ ವಿಜ್ಞಾನಕಶಾಸ್ತ್ರಂಗಳಂ ಮಾಡಿ ಕುಹೇತು ಕುದೃಷ್ಟಾಂತ, ಕುನಯಂಗಳಂ ತೋರಿ ತಂತಮ್ಮ ವಶವರ್ತಿಗಳಾದ ಅಜ್ಞಾನಿ ಜನಂಗಳಂ ಮೋಹಿಸಿ ಇಂದ್ರಿಯ ಸುಖಂಗಳಂ ಬಯಸಿ ನಿದಾನಪೂರ್ವಕಂ ದಂಡಮುಂಡ ಜಟಾವಲ್ಕಲಧರರ್ಕಳಾಗಿ ಸಂಸಾರದೊಳು ನವೆವ ಕಪಿಗಳ ಬೌದ್ಧರಕ್ತಪಟ, ಸ್ವೇತಪಟ, ಏಕ ದಂಡಿ, ತ್ರಿದಂಡಿ, ಹಂಸ, ಪರಮಹಂಸ, ಪ್ರಭೃತಿಪಾಷಂಡಿಗಳಂ ಕೊಂಡಾಡುವದುಂ, ಕಾಲಂ ತೊಳೆವುದುಂ, ಭಕ್ತಿಗೆಯ್ವುದುಂ, ಪಾಷಂಡಿಮೂಢವೆಂಬುವದು.

ವೃತ್ತ ॥ ಕುಲಧರ್ಮಂ ದ್ವಿಜಮುಖ್ಯರೋಳ್ ದಶವಿಧ ಪ್ರತ್ಯಕ್ಷಮಾಶೈವರೋಳ್ ।
ವಿಲಸಪ್ರಗ್ನಿವಿಶುದ್ಧಬುದ್ಧರೊಳಿವುಂಟೆಂದಿಂತು ಮಿಥ್ಯಾಗುಣಂ- ॥
ಗಳನಾವಂ ಪೊಗಳುತ್ತಮಾಗಮದ ವಿಜ್ಞಾನೋಕ್ತಿಗಳ್ಗಂ ಮನಂ ।
ಗೊಳುತ್ತಿಪ್ಪಾತನೇ ಬಲುಕಲಸಮಯಮೂಢಂ ಭೂರಿಭೂಚಕ್ರದೋಳ್ ॥ ೭೪ ॥

ಇನ್ನು ದೇವತಾಮೂಢವು ಹ್ಯಾಗೆಂದರೆ—

ವೃತ್ತ ॥ ಪೊಗೆವದಿನೇಶನಂ ಪರಿವಸಿಂಧುವನೂಡುವ ಘಾಳಿಯುಂ ಧಗ- ।
ಧಗಿಸುವ ಕಿಚ್ಚನೂಳ್ವ ನೆಲನಂ ಕರೆವಾಕಳನಿಪ್ಪಸದ್ಮಮುಂ ॥
ಸೊಗಯಿಸಿನಿಂದ ಪೇರ್ಮರನ ನುಂಬಗಳಂ ಬೆಸಕೆಯ್ವ ತಮ್ಮ ಮು- ।
ಟ್ಟುಗಳನೆ ದೈವಮೆಂದೆರಗುವಾತನೇ ದೇವವಿಮೂಢನಲ್ಲನೇ ॥ ೭೫ ॥

ಮತ್ತಂ ಹರಿಹರ ಪಿತಾಮಹ ಬುದ್ಧರೆಂಬ ಮನುಷ್ಯರ್ಕಳುಂ, ಚಂದ್ರಾದಿತ್ಯರ್ಮೊದ ಲಾದ ಜ್ಯೋತಿಷ್ಕರುಂ, ಕ್ಷೇತ್ರಪಾಲ, ವಣಾರ, ಭೈರವ, ಮೈಲಾರ, ಬೆನಕ, ಕಾರ್ತಿಕೆಯ, ಭಗವತಿ, ಬಳಾರಿ, ಕಾಳಿ, ಮಹಾಕಾಳಿ, ಚಂಡಿ, ಮುಂಡಿ, ಮಾರಿ, ಮಸಣಿ, ಸೊಸನಿ, ಚಾ ಮುಂಡಿ ಮೊದಲಾದ ವ್ಯಂತರಂಗಳಂ ಮೂಢಜನಂಗಳು ದೈವಮೆಂದು ಕೊಂಡಾಡುವದು

ದೇವತಾಮೂಢಮೆಂಬುದೆಂತಾದೊಡೆ ‖ ಲೌಕಿಕದವರೇ ದೈವಮೆಂಬಡೆ ಪೂರ್ವಕಾಲದೊಳು ನಿರ್ವಾಣಕ್ಷೇತ್ರಂಗಳಂ ಭವ್ಯಜನಗಳ್ಮುಟ್ಟಿ ನಮಸ್ಕಾರಂ ಗೆಯ್ವುದಂ ಕಂಡು, ಮೂರ್ಖರ್ಭೂಮಿಯುಂ ದೇವರೆಂದರು ‖ ಉದಧಿಯುಂ, ಅಗ್ನಿಯುಂ, ವಾಯುವೆಂಬ ಲೋಕಪಾಲಕರುಂ, ನಾಗರ್ಕಳುಂ, ಪರಮನಸ್ನಪನಕಾಲದೊಳು ತರ್ಪಣಂ ಗೆಯ್ವುದಂ ಕಂಡು, ನೀರುಂ, ಕಿಚ್ಚುಂ, ಘೂಳಿಯುಂ, ಸರ್ಪಂಗಳುಂ, ದೈವಮೆಂಬರು ‖ ಕಾವುದಿ ಮನೋಬವಿದ್ಯೆ ಧೇನುರೂಪದಿಂ ಕಾಮಿಸಿದ ವಸ್ತುವಂ ಕುಡೆ, ಸಾಧಕರದಂ ಕಂಡು ಪಶುಗಳಂ ದೈವಮೆಂಬವರ್ತವುಗೆಯವುದ್ಯೆವಮಪ್ಪಡೆ ಅವಂ ಬಾಧೆವಡಿಸುವುದೇಕೆ ‖ ಮತ್ತಂ ವಿಷ್ಣು ದೇವನೆಂಬಡೆ ಗೋವ್ಪಗಾದಂ, ದೂದು ಪೋದಂ, ಸಾರಥಿಯಾದಂ, ದಾನಂ ಬೇಡಿದಂ, ಗೋವಳ್ತಿಯೊಳ್ಕಟ್ಟಂ ‖

ಶ್ಲೋಕ‖ ಮತ್ಸ್ಯಕೂರ್ಮೋ ವರಾಹಶ್ಚ ನಾರಸಿಂಹೋಥವಾಮನಾ ।
ರಾಮೋ ರಾಮಶ್ಚ ರಾಮಶ್ಚ ಬುದ್ಧಃ ಕಲ್ಕಿ ಚ ತೇ ದಶಃ ‖

ಎಂಬೀ ದಶಾವತಾರಂ ಬಂದನೆಂಬುದೇಕೆ‖ರುದ್ರಂ ದೇವನೆಂದೊಡೆ ತ್ರಿಪುರಮಂ ಸುಟ್ಟಂ, ಅಂಧಕಾಸುರನಂ ಕೊಂದಂ, ದಾರುವನ ಕ್ರೀಡೆಯಾಡಿದಂ, ತೊಗಲಂ ಪೊದ್ದದಂ, ಎಲುವಂ ತೊಟ್ಟಂ, ಕಪಾಲದೊಳುಂಡಂ, ಡಮರುಗಮಂ ಪೊಡೆದಿರ್ದಾಡಿದಂ, ಜಾಹ್ನವಿಯೊಳು ಬೆರ್ದಂ, ಶಾಪಂ ಬೆತ್ತಂ, ಬ್ರಹ್ಮತಿ ಪೋದನೆಂಬುದೇಕೆ ‖ ಬ್ರಹ್ಮದೇವನಪ್ಪೊಡೆ, ಊರ್ವಸಿಯೊಳು ಮರೆವಾಳ್ದಂ, ಮಹೇಶ್ವರಂಗೆ ಪುಸಿದು ಶಾಪಂ ಬೆತ್ತಂ, ಕರಡಿಯೋಳ್ಬೆರಸಿದಂ, ತಪದಿಂ ಕೆಟ್ಟಂ, ತನ್ನ ಸುತೆಯಪ್ಪ ಪದ್ಮೆಗಳುಪಿದನೆಂಬುದೇಕೆ‖ ಬುದ್ಧಂ ದೇವನಪ್ಪೊಡೆ, ತಜ್ಜನನಿಯನೆಕೊಂದು ಪುಟ್ಟಿದ ಆತ್ಮವಧೆಯ ಮಾಡಿಕೊಂಡನೆಂಬುದೇಕೆ ‖ ಇಂತಿವರೆಲ್ಲಂ ದೇವರಪ್ಪಡೆ, ಲೋಕದೊಳು ಕೊಲುವನುಂ, ಕಳುವನುಂ, ಪುಸಿವನುಂ, ಪರಸ್ತ್ರೀಗಮನಂ ಗೆಯ್ವನುಂ, ಊರ್ಗಳಂ ಸುಡುವನುಂ, ದನಗಾಯುವವನುಂ, ಮಾಂಸಾದಿಗಳನು ಸೇವಿಸುವನುಮೆಂದಿವರ್ಮೊದಲಾದ ಪಾಪಿಗಳೆಲ್ಲಂ ದೇವರಾಗಲೇವೇಳ್ಕುಂ ‖ ಮತ್ತಮಾದಿತ್ಯಂ ದೇವನಪ್ಪಡೆ ಕಾಸ್ಯಪಂಗೆ, ಪುಟ್ಟಿದಂ, ಅಸುರರೊಡನೆ ಕಾದಿದಂ, ಕೇಡಗಂ ನುಂಗಲಿಬರೆ, ಪೋಡಿ ಇಂದ್ರನಮರೆಯಂ ಪೊಕ್ಕು ಬದುಕಿದಂ, ಕೊಂತಿಯೊಳು ಪೊಲ್ಲಕೆಯ್ದನೆಂಬುದೇಕೆ ‖ ಅನ್ಯಾತನಾರ್ಗಂ ಪುಸಿವನುಂ, ಕಾದುವನುಂ, ಪೋಡುವನುಂ, ಪೊಲ್ಲಕೆಯ್ವನುಮಲ್ಲಂ, ಜ್ಯೋತಿಷ್ಕದೇವಂ ‖ ಅಗ್ನಿಯೇ ದೇವನೆಂಬಡೆ, ಪಾಂಡುರೋಗಮೆಂಬ ಕುತ್ತಮಾದೊಡೆ ಅರ್ಜುನನಲ್ಲಿ ದಾನಂ ಬೇಡಿಕೊಂಡು ಕಾಂಡವವನದ ಸರ್ವೌಷಧಿಗಳೆಂಬ ವೃಕ್ಷಂಗಳ ರಸಮನುಂಡು ಬದುಕಿದನೆಂಬುದೇಕೆ ‖ ಮತ್ತಮಜ್ಞಾನಿಗಳಿಟ್ಟ ಮರಂಗಳ, ನೊಟ್ಟಸಿದ ಕಲ್ಲುಗಳುಮಂ, ನೆಟ್ಟ ಕಲ್ಲುಗಳುಮಂ, ದೈವಮೆಂದವಕೊಂದು ಪೆಸರನಿಟ್ಟು ಕೊಂಡಾಡಿ ಬರವನಿಗುವೆಂದಾಶೆಯಿಂ, ತಮ್ಮುಳ್ಳರ್ಥಮುಂ ಬರುಸೂರೆಗೆಯ್ವರಾದೆಯ್ವಂ ಬರಮನಿವಂದಮೆಂತುಟೆನೆ ‖ ಬಂಜೆ ಹೆಂಮುಗನಂ ಮೃಗತೃಷ್ಣಾಂಬುವ ಮಿಂದು ಕಲ್ಲುನಾರ ಶೀರೆಯ ನುಟ್ಟು, ಆಕಾಶಪೂವಂ ತುರುಂಬಿ ಮೊಲದಕೋಡ ಬೀಳಲು ವಿಡಿದು ಬರುತಿಪ್ಪುದಂ, ಪುಟ್ಟುಗುರುಡ ನಂಧಕಾರದ ನಟ್ಟಿರುಳೊಳು ನೆಟ್ಟನೆ ಕಂಡೆನೆಂಬಂತೆ, ನಿಷ್ಕಶೇಶವುಂ ದುರ್ಗತಿ ದುಃಖಮುಮುಕ್ಕುಂ, ಆದೆಯ್ವಮುಂ ಪೆರಗೀವುದುಂ ಕಾವುದುಮಂತಿರ್ಕೆ ತಮಗೆಂದು ಸಂಕಲ್ಪಿಸಿದ ವಸ್ತುಗಳಂ ಕಾಯಲಾರದೆಂತೆನೆ ‖

ಕಂದ ॥ ಜನ್ನಿಗೆಯೊಡಂ ಪರಸಿದ ।
ಪೊನ್ನಂ ಪರಿಯಣಮನೊಯ್ವ ಕಳ್ಳರನಂತಿಂ- ॥
ಶೆನ್ನದಿಗಡ ಮನೆದೆಯ್ವದ ।
ಸನ್ನಿಧಿಕೆಯನೋಡೆ ಮನೆಯ ಕುನ್ನಿ ವಿಶೇಷಂ ॥ ೩೫ ॥

ವೃತ್ತ॥ ಪರಕೆಗೆ ದೆಯ್ವದಚ್ಚ್ಯುಗಳನಚ್ಚರಿಯಾಗಿರೆ ಕಟ್ಟುವರ್ಕೆಲ- ।
ಕೆೞರಲೊಳದೇಕೆ ಕಟ್ಟಿದೊಡೆ ದೇವತೆತಿಂಗುಮೆ ಕಳ್ವಕಳ್ಳರಂ ॥
ಕರಗಿಸುವಕ್ಕಸಾಲೆಗಳನುಕ್ಕೆವದಿಂದೇಕವರ್ತೆಗೊಂಡು ಪೋ- ।
ಪರಸರವೆಂಡಿರಂ ಮರೆದು ತಿಂದೆಡೆಯುಳ್ಳೊಡೆ ತೋರಲಾಗದೇ ॥ ೩೬ ॥

ಎಂಬಿದಂ ಪ್ರತ್ಯಕ್ಷಮಾಗರಿವುತ್ತಂ ಮೂಢತ್ವದಿಂ ಮತ್ತಮಾ ದೆಯ್ವಂಗಳೊಳ್ಪಂ, ಹೊಲ್ಲಮೆಯುಂ ಮಾಳ್ಪಮೆಂಬುದಂ ಬಗೆದು ಭೀತಿಯಿಂದೆಂತೆಂದರ್. ॥

ಕಂದ ॥ ಪರಕೆಯುನೀಯ್ಯದೆ ಮೊಸಲ ।
ಸರುಗಮುಮುಂದಿಡದೆ ತಡೆಯದೂಡದೆ ಪರರುಂ ॥
ಬೆರಸಟ್ಟನೆಯಾಡದೆ ಮಾಣ್ದಡೆ ।
ಪರಪೀಡೆಗಳೇಕೆ ಮಾಣ್ಬವೆಂದು ಜಡಾತ್ಮರ್ ॥ ೩೭ ॥

ಚಂ. ವೃತ್ತ ॥ ಪೊಸತಿಲಮೇಲನೊಕ್ಕೆರದುಮೊಸಲತುಯ್ಯಲನಟ್ಟು ಬಾಗಿಲ- ।
ರ್ಚಿಸಿ ಚಿಗುದಿಕ್ಕಿ ಚಟ್ಟರಿದು ಕಂಬದೊಳಿಂಬಿನೆ ಬುತ್ತಿಗೊಟ್ಟು ಪೂ- ॥
ಜಿಸಿ ಪತಿಯಿಂದೆ ಜೊಂತೆನಿಪ ಡಂಭಕದೊತ್ತಿರಪ್ಪುದೊಂದು ಬೇ- ।
ವಸಕೊಳಗಾದ ಮಾನಸದೆಂತೊಳಗಪ್ಪನೊ ಜೈನಮಾರ್ಗದೊಳ್ ॥ ೩೮ ॥

ಮತ್ತಂ ಶುಚಿರ್ಭೂತರಾಗಿ ಚಕ್ಕುಲಿಯಂತೆ ಪಿಟ್ಟನಿಂ ಬಟ್ಟಿದುವಾಗಿ ಬರೆದವರಮೇಲೆ ಸರುಗಮನಿಟ್ಟು ಪೊಡೆವಟ್ಟು ದೇವರನೋಗರಮನೆಲ್ಲರನುಣವೇಳ್ಕುಮೆಂದೆಲ್ಲರುಮುಂಡುಕುತ್ತ ಉಳಂಗಿಕ್ಕುವುದುಮವಮಿಂದುದುಮಲ್ಲದೆಯುಂ ರಸಾಢ್ಯಮಪ್ಪಾಹಾರಮನುಂಡು ಮರುಳವಿಸಿ ಬಿದ್ದಡೆ ನೋಡಿಸಿ ನೋಡುವರು. ॥ ೩೯ ॥

ಕಂದ ॥ ಪಿಂಡಮನಿಡುವುದು ತಡೆಯದೆ ।
ಪೆಂಡಿರನೂಡುವುದು ಕುರಿಯನಿಕ್ಕುವುದೊಲವಿಂ ॥
ಪಿಂಡಿನೊಳ್ಳೆದಾರಂ ಮೇಣ್ ।
ಕೊಂಡಾಟದೆ ನಿಮ್ಮದೆಯ್ವಮಿದುಂ ಕಾಗುಂ ॥ ೪೦ ॥

ಎಂದೆಲ್ಲಮಂ ಮಾಡಿ ತಮ್ಮರ್ಥಮಂ ತರಿಸಿ ಬರುಸೂರೆಗಳದು ಪಲಕಾಲ ವಾಸನಾವದಿ॥

ಕಂದ ॥ ನೋಡಿಸಿ ನೋಡುವರಬ್ಬೆಯು ।
ನೋಡುವರಕ್ಕಂಗೆ ಚೆಕ್ಕನಿಮಂ ರೂಪಂ ॥
ಮಾಡಿಸಿ ಕಟ್ಟುವ ವಚ್ಚೆನೆ ।
ಯಾಡುವಮೆಂದಾಡುವವೆಂದಾಡುತಿರ್ಪರಾಜಡರ್ ॥ ೪೧ ॥

ಮರುಗಿದೆನೊವೋಸೂಜೆವುಸಗಿತ್ತೆನೆ ಮತ್ತೋರ್ವಳೆದ್ದು ಕುಕ್ಕಿರಿದು ಕೊಕಿಲ್ದುತೇಗಿದೊಡೆ ದೇವತೆ ನಿಂ ಬೆಸಸಾರ್ಗೆ ವೂಣದೆ ಕರೆವೆಗೆ ಕಾಳರಕ್ಕಸಿಯೇ ನಾಂ ಕುರಿಬೇಡಿದೊಡಿಕ್ಕುಂ ವಕ್ಕುರಿ ಕುರಿಪಟ್ಟವೆಯ್ದಿ ತಿನಲಾರದೆ ದೇವಿಗೆ ಕುತ್ತವೂಗಿರಿವುದುಂ, ಧನಂ ಬಡೆವೆನೆಂದು ಕೋಳಿಗೆ ಹಾಳಂ ಬಟ್ಟು, ಕುತ್ತಮುಂ ಪೀಡಿಸುವ ನಿಮಿತ್ತದಿಂ ಚಂಡಿಗೆಪೆಂಡಮುಂ ನಿಟ್ಟು, ಮಾರಿಗೆ ಬಾರಿಗುರಿಯನಿತ್ತುಂ, ಯೆರೆಯಪ್ಪಂಗೆ ಮರಿಗಳಂ ಪರಸಿಯುಂ, ಜಕ್ಕಿಗೆ ಮಕ್ಕಳಂ ಬಲಿಗೊಳಿಸಿಯುಂ, ನಾಗಂಗೆ ನಾಗಗಳಂ ಮಾಡಿಸಿ ಕಿವಿಯೊಳಿಟ್ಟುಂ, ಬೊಂಬೆಯಂ ಸೂಜಿಸೆಂಡುಕೋಲುಗಳಂ ಮಾಡಿಸಿ ಕಟ್ಟಿಯುಂ, ಕಾಟೆರೆಯಂಗೆ ಪಡೆದುದರೊಳು ದಶವಂದಮನೀವೆನೆಂದು ಪರಸಿಯುಂ, ಮತ್ತಂ ಪೆಸರ್ವೆಸರದೆಯ್ವಂಗಳಿಗೆಲ್ಲಾ ರೂಪುಗಳಂ ಮಾಡಿಸಿ ಕೊರಳೊಳು ತಗುಳ್ಚಿಕೊಂಡು, ಪುಟ್ಟಿದ ಶಿಸುಗಳಂ ಭೂತಪ್ರೇತಾದಿಗಳ ಪೆಸರನಿಟ್ಟು ಪಶುಗಳಿಗೆ ಜನ್ನಿಗೆಪೆಸರನಿಟ್ಟುಂ, ಕುಲದೈವಮೆಂದು ಕೊಂಡಾಡಿಯುಂ, ಪೊಸತನುಷ್ಟೆವಲ್ಲೆಂದಿರ್ದುಂ, ಇಂತನೇಕ ಪ್ರಕಾರಂಗಳಿಂದಂ, ರೌದ್ರದೇವತೆಗಳಂ ಕೊಂಡಾಡಿ ದುಃಖದಿಂದಾಳುತ್ತಂ ಮುಳುಗುತ್ತಮಿರ್ದರಿಂತುಂ ॥

ಕಂದ ॥ ಕಳೆಪೆಲನೆಯದನೆಂದನೆಂದಡೆ ।
ಘುಳಿವೆನೆ ತಾಂ ಮಾರಿ ಕಳೆಗೇರಿಂನೆಂದಡೆ ತಾಂ ॥
ಸಲೆ ಮಾರಿ ಕಚ್ಚಿತಿಂಗೆದಡೆ ।
ಮುಸಿರದಡಂಗಿದಂತೆವೋಲಿರ್ಪಳ್ ॥ ೮೧ ॥

ಬನದಬ್ಬೆ ಬಳರಿಬಾದುಮೇ ।
ಕಿನಿಸಂ ಬಲಿ ಜಲದಜಕ್ಕಿ ಜಾತ್ರೆಯ ದೆಯ್ವಂ ॥
ಮನೆದೆಯ್ವಮಿಂಬಿವಿನಿತುಂ ।
ಜಿನಭಕ್ತಂಗೆಡದ ಕಾಲಕೆಪ್ಪಿಂಕಷ್ಟಂ ॥ ೮೨ ॥

ದೇವತೆಗೆ ಪರಸಿ ಸುತರಂ ।
ಭಾವಿಸಿಯೂನಾಮವಿಟ್ಟು ಪಡೆವರ್ಶತಪ್ಪ- ॥
ತ್ರಾವಳಿಸುಖದಿಂದುಕ್ಕುಮ ।
ದೇವವೀಮೂಢಾವಲೀಢರರಿಯರ್ಮನುಜರ್ ॥ ೮೩ ॥

ನೀರಂಕಡೆದೊಡೆ ಬೆಂಣೆಯ- ।
ನಾರಾನುಂ ಪಡೆದರೊಳರೆ ವರಮಿಗುಮೆ ಮೈ- ॥
ಲಾರಂ ಕಾಟೆರೆಯುಂ ತಾಂ ।
ಮಾರಿಗೆ ಮಸಣಿಗೆ ಯೆನಿಪ್ಪ ಕೊಳೆದೆಯ್ವಂಗಳ್ ॥ ೮೪ ॥

ವೃತ್ತ॥ ಸೂರ್ಯಚಂದ್ರ ಗ್ರಹಕೋಕುಲಮಾರುತವಹ್ನಿ ವಿಪ್ರ ಭೂ- ।
ದರ ತರು ತಾರಕಾದಿತಿ ವಿನಾಯಕ ಷಣ್ಮುಖ ಮಾತೃಕಾದರಾ ॥
ಧರಣಿ ಪಿತಾಮಹಭವಾನ್ನ ಶಿವಾಕುಲದೇವತಾಧಿ ದುಃ- ।
ಪರಿಣತಬುದ್ಧಿಯಂತವನೇ ಭಾವಿಸೆ ದೇವವಿಮೂಢತಾನಪ್ಪುದುಂ ॥ ೮೫ ॥

ವೃತ್ತ॥ ನೋಡಿಸಿ ನೋಡುವಂ ಕರೆದು ಕಿಡಿಗೆರಿಂ ಮನೆದೆಯ್ವವೆಲ್ಲವುಂ ।
ಹಾಡಿಸುವಂ ಬಳಿಕ್ಕವರ ಕಾಟದ ಕೋಟಲೆಗಂಜಿ ಬೇಗದಿಂ ॥
ಬೇಡಿದನಿಕ್ಕುವಂ ಹರಸುವಂ ಮನದಿಚ್ಛೆಗನಪ್ಪಬಾರ್ತೆಗೆ- ।
ಟ್ಟೋಡುವ ನಿರರ್ಥಕಂ ಬಸದಿ ವೊಕ್ಕು ಬೊಗುಳ್ದಡೆ ಜೈನನಕ್ಕುಮೇ ॥ ೮೬ ॥

ವೀತರಾಗ (ಪರಮಾತ್ಮ) ಸರ್ವಜ್ಞನಿರ್ದೋಷಿ ಪರಮಾತ್ಮನಪ್ಪ ದೈವಮನರಿಯದೆ ಖ್ಯಾತಿ ಪೂಜಾ ಲಾಭರೂಪುಲಾವಣ್ಯ ಸೌಭಾಗ್ಯಾರೋಗ್ಯ ಪುತ್ರಮಿತ್ರಕಳತ್ರ ಗೋತ್ರರಾಜ್ಯವಿಭೂತಿನಿಮಿತ್ತಂ ಕುಲದೇವತಾರಾಧನೆಯುಂ ಮಾಳ್ಪರಾದೇವತೆಗಳೇನುಮಂ ಮಾಡಲಾರರೆಂತೆನೆ ॥ ರಾಮಲಕ್ಷ್ಮಣವಿನಾಶಾರ್ಥಂ ರಾವಣಂ ಬಹುರೂಪಿಣಿವಿದ್ಯೆಯಂ ಸಾಧಿಸಿದಂ, ಪಾಂಡವರ ವಧೆನಿಮಿತ್ತಂ ದುರ್ಯೋಧನಂ ಕಾರ್ತ್ಯಾಯನವಿದ್ಯೆಯಂ ಸಾಧಿಸಿದಂ, ನಾರಾಯಣವಧಾರ್ಥಂ ಕಂಸಂ ಪಲವು ವಿದ್ಯೆಯಂ ಸಾಧಿಸಿದಂ, ಆ ದೇವತೆಗಳೇನುಮಂ ಮಾಡಿದುವಿಲ್ಲ, ರಾಮಪಾಂಡವನಾರಾಯಣಾದಿಗಳು ಮಿಥ್ಯಾರಾಧನೆಯುಂ ಮಾಡದೆಯುಂ ನಿರ್ಮಲಸಮ್ಯಕ್ತ್ವದಿಂ ಪೂರ್ವಭವಕೃತ ಪುಣ್ಯದಿಂದೆಲ್ಲಾ ನಿರ್ವಿಘ್ನಮಾದುದೆಂದರಿದಾಕುದೇವತಾ ನಮಸ್ಕಾರಮಂ ಸಮ್ಯಗ್ದೃಷ್ಟಿಗಳ್ಮಾಡದಿಕ್ಕೆ ॥ ಮತ್ತಂ—

ಕಂದ ॥ ಚಾಪಾಸಿ ಚಕ್ರವನಿತಾ ।
ರೂಪಾನ್ವಿತ ರಕ್ತವಿಕೃತ ಕುಪಿತಧ್ಯಾ- ॥
ನಂ ಪಾಪೈಕಹೇತು ಬೀಜಘ- ।
ಲೋಪೇತಮಿದೆಂದುಮರಿಯರಕಟಾ ಮೂಢರ್ ॥ ೮೭ ॥

ಮಾಡಿದನೀ ತ್ರಿಭುವನಮಂ ।
ಬೇಡಿದುದಂ ಕುಡುವ ನೂಡುವಂ ಮಾಡಿದುದಂ ॥
ಕಾಡಿದುದಂ ಕೊಲ್ವಂ ತಾಂ ।
ನೋಡಲು ಸರ್ವಗತನೀಶನಿದು ಕಡುಊಚೇದ್ಯಂ ॥ ೮೮ ॥

ಪೆರರಂ ಮಾಳ್ಪಡೆ ತನ್ನಿಂ ।
ಪೆರರೊಳರೆ ತನ್ನನಿನ್ನು ಮಾಳ್ಪಡೆ ಮುನ್ನಂ ॥
ನೆರೆದಿರ್ದಂ ತಾನಲ್ಲಂ ।
ತೆರನರಿಯದೆ ಮಾಳ್ಪನೆಂದು ಕೆಮ್ಮನೆ ನುಡಿವರ್ ॥ ೮೯ ॥

ಶಿಷ್ಟರುಮಂ ತ್ರಿಭುವನದೊಳ್ ।
ದುಷ್ಟರುಮಂ ಮಾಡಿ ಶಿಷ್ಟರಂ ರಕ್ಷಿಸಿಯಾ- ॥
ದುಷ್ಟರನಳಿದೊಡೆ ಮುನ್ನಮ- ।
ಶಿಷ್ಟಜನಂಗಳನೆ ಶಂಭುಮಾಡಲೆವೇಡಾ ॥ ೯೦ ॥

ಅರಿಯದೆ ಮಾಡಿದನಪ್ಪೊಡೆ ।
ಅರಿತಂ ತನಗಾಗದೆಲ್ಲರಂ ನನೆ ರುದ್ರಂ ॥
ಪೆರತೇನೋ ಮಾಡಿಯುಳಿವಡೆ ।
ಕಿರಿಯಂ ಪುರುಳಿಲ್ಲ ತನ್ನ ಮಕ್ಕನಳಿದಂ ॥ ೯೧ ॥

ಕಂದ ॥ ಅವರಂ ಮಾಡಿದನಪ್ಪಡೆ ।
ಭುವನಮುಮಂ ಮಾಡನೆಂಬುದು ವಿತಥಮದರಿಂ- ॥
ದವರಂ ಮಾಡಿದನಪ್ಪಡೆ ।
ಭುವನಮುಮಂ ತಾನೆ ಮಾಡಿದಂ ತ್ರಿಪುರಹರಂ ॥ ೯೨ ॥

ಜಗಮಂ ಮಾಡಿದದೇವಂ ।
ಜಗಮರಿಯಲ್ಕಿಲ್ಲದೇಕೆನಲ್ಕೇಳ್ಪೇಳ್ವಂ ॥
ಜಗದಧಿಪನಪ್ಪೊಡೆಂತುಂ ।
ಜಗಮೆಲ್ಲಮನೇಕೆ ತನ್ನ ವಶವಂ ಮಾಡಂ ॥ ೯೩ ॥

ಅದರಿಂದ ಮಾಡನೆಂಬುದು ।
ವಿದಿತಂ ಲೋಕ ಸ್ವಯಂಭುನಿತ್ಯಂ ತಾನೆಂ- ॥
ತುದಯಿಸಿದರಂತೆಯುಣ್ಬಂ ।
ಮುದದಿಂದಂ ಮಾಡದೂಡದಿರಿಸದೀತಂಮುಂ ॥ ೯೪ ॥

ಭುವನಕ್ಕೆ ಕರ್ತೃವೆನಿಸಿದ ।
ಭುವನೇಶ್ವರನೋರ್ವನುಳ್ಳೊಡಿಂತೇಕೀಭೂ- ॥
ಭುವನಮನಾಯ್ಕುಮದರಿಂ ।
ಭುವನಕ್ಕಾಕರ್ತವೆನಿಪ ದೇವನ ಭಾವಂ ॥ ೯೫ ॥

ಮನೆಯನಿತಂ ನಿಯಮಿಸುವಂ ।
ಮನೆಯುದ ನೂರನಿತನೂರವಂ ನಿಯಮಿಸುವನೆಂ- ॥
ಬೆನೆ ನಿಯಮಿಪನರಸಂ ನಾ- ।
ಡನಿತಂ ನಿಯಮಿಸದೇಕೆ ದೇವಂ ಜಗಮಂ ॥ ೯೬ ॥

ಮಾಡಿದ ಶುಭಾಶುಭಂಗಳ ।
ನೊಡುವರಾರುಣ್ಬರಾರೊ ಮುನ್ನಂ ತನ್ನಂ ॥
ಮಾಡಿ ಬಳಿಕಂತೆ ತನ್ನನೆ ।
ಮಾಡುವನೆನೆ ತಾನೇ ನೆರಪಿಸರ್ವಗತಾತ್ಮಂ ॥ ೯೭ ॥

ಇದು ತನ್ನಭಿಮತವಾದೊಡೆ ।
ಪೊದವಿದ ದುಃಖಾಗ್ನಿಯಿಂದೆ ಬೇವನಿತುಂ ಲೋ- ॥
ಕದಕಷ್ಟಯೋನಿಯೊಳ್ ಪು- ।
ಟ್ಟಿದರುಂ ಸರ್ವಗತಮತದಿ ದೇವರೆನಿಕ್ಕುಂ ॥ ೯೮ ॥

ಪೊಲೆಮೊದಲಾಗಿರೆ ಕುತ್ಸಿತ ।
ಕುಲದೊಳ್ ಪುಟ್ಟಿದರ್ದು ನಮೆವರಂ ಕಂಡವರಂ ॥
ತೊಲಗೆನಲಾಱದುದು ದೋಷಂ ।
ನೆಲಸುಗುಮಾಸರ್ವಗತನೊಳಾತಂ ದೇವಂ ॥ ೯೯ ॥

ಸರ್ವಗತನಾಗಿದೇವಂ ।
ಸರ್ವಕುಜಾತಿಯೊಳವಿರ್ಪನಪ್ಪೊಡೆ ತಾವಾ- ॥
ಸರ್ವಜ್ಞನಿಂದಧಿಕರೇ ।
ಸರ್ವಕುಜಾತಿಗಳನೇಕೆ ಪರಿಹರಿಸುವರೋ ॥ ೧೦೦ ॥

ಸರ್ವಜ್ಞಂ ಸರ್ವಗತಂ ।
ಸರ್ವಂ ವಿಷ್ಣುಮಯುಮೆಂಬ ನಿಯಮದ ಮನುಜರ್ ॥
ಸರ್ವಪ್ರಾಣಿವ್ರಜಮಂ ।
ಸರ್ವಜ್ಞಂ ವಿಷ್ಣುವೆಂದು ಭಾವಿಸವೇಡಾ ॥ ೧೦೧ ॥

ಏನೆಂಬೆಂ ಕೆಲಬರ- ।
ಜ್ಞಾನಿಗಳುಂ ಲೋಕದಾತ್ಮನೋರ್ವನೆಯೆಂಬ- ॥
ರ್ನೀನಾಂ ಲೋಗನೆನೆಂಬಭಿ- ।
ಧಾನಂ ಭಿನ್ನಾತ್ಮಕತ್ವಮಂ ಪ್ರಕಟಿಸದೇ ॥ ೧೦೨ ।

ಆರಾಧಕನಾರಾಧ್ಯಂ ।
ಧಾರುಣಿಯೊಳೆ ಬಡವನೊಡೆಯನಾಳ್ದಂ ಭಂಟಂ ॥
ಚಾರುಗುಣಂ ಗುಣಹೀನಂ ।
ಶೂರಂ ಭೀರುವೆನಿಪಿನಿತುಮೋರ್ವನೊಳಘಟಂ ॥ ೧೦೩ ॥

ಯೆನಿತೊಳವು ಜಗದೊಡಲ್ಗಳ- ।
ವನಿತಕ್ಕಂ ಬೇರೆಬೇರೆಯಾತ್ಮಂ ಸಿದ್ಧಂ ॥
ಮನಮುಂ ಸುಖದುಃಖಾದಿಯು- ।
ಮನಿತಕ್ಕಂ ಬೇರೆಬೇರೆಯುಪ್ಪುದರಿಂದಂ ॥ ೧೦೪ ॥

ದೇವಂ ಕೊಲ್ವಂ ಕಾವನು- ।
ಮಿವಂ ತಾನಲ್ಲನಕ್ಕುಮಪ್ಪಂದರ್ಹ- ॥
ದ್ದೇವರ ನಾರಾಧಿಸುವಿ- ।
ರ್ನೀವೇಕೆನೆ ಪೇಳ್ವೆನದರ ತೆರನಂ ತಿಳಿಯಲ್ ॥ ೧೦೫ ॥

ಪರಮ ಶ್ರೀಯೋಳ್ಕೂಡುವ ।
ಪರಮೋಪಾಯುಮನೆ ಜಗಕೆ ತೋರ್ಪುದರಿಂದಂ ॥
ಪರಮಾವನಿಯೊಳಗರ್ಹ- ।
ತ್ಪರಮೇಶ್ವರನಂತೆ ಪರಮಗುರುಃವರಿಭವ್ಯಾ ॥ ೧೦೬ ॥

ಮತ್ತಂ ದೈವಾದೈವದ ವಿಚಾರದೆಡೆಯೊಳಚೇತನಮುಮಜ್ಞಾನಿಯುಂ, ದೈವಮಲ್ತು ಚೈತನ್ಯ ಚಿಜ್ಯೋತಿಯುಂ, ಪರಮಜ್ಞಾನಾನಂದ ಸ್ವರೂಪನುಂ, ಜಗತ್ರಯ ಕಾಲತ್ರಯವರ್ತಿ ಸಮಸ್ತವಸ್ತುವಾಸ್ತವಮಂ ಹಸ್ತತಲಾಮಲಕಂಬೋಲರಿವನುಂ ಕಾಣ್ಬನುಮಪ್ಪ ಪರಮಾತ್ಮಂ ತನಗೆರಗಿದ ಭವ್ಯಜನಂಗಳ್ಗಕ್ಷಯಸುಖಮಂ ಕುಡುಗುಮಂತಪ್ಪದೈವವ ನಾರಾಧಿಸಿದೊಡಂ ಪೂಜಿಸಿದೊಡಂ ಸ್ತುತಿಯಿಸಿದೊಡಂ, ಪಡೆಯಲ್ಕರಿದಪ್ಪ ವಸ್ತುವಾವುದು ಮಿಲ್ಲದನರಿಯದಜ್ಞಾನಿ

ಜನಂಗಳೋರ್ವರಂ ಕಂಡೋರ್ವರ ನೆಗಳ್ವುದು ದೇವತಾಮೂಢಂ॥ ಮತ್ತಂ ಜಿನಶಾಸನರಕ್ಷಾದಕ್ಷೆಯರಪ್ಪ ಯಕ್ಷಾದಿದೇವತೆಯರಂ ಬರವನಪೇಕ್ಷಿಸದೆ ಧರ್ಮವಾತ್ಸಲ್ಯನಿಮಿತ್ತಂ ಸರ್ವಜ್ಞಪೂಜಾಂಶದಿಂ ಮನ್ನಿಸುವುದು ದೇವತಾಮೂಢಮಲ್ಲೆಂಬುದರ್ಥಂ ॥

ಕಂದ ॥ ಮದಮೆಂಬುದು ಮಿಥ್ಯಾತ್ವದ ।
ಮೊದಲದು ತಾನೆಂಟುಭೇದಮಕ್ಕುಂ ತನ್ನೊ- ॥
ಳ್ವಿದಿತಮೆನೆ ಪೇಳ್ವಡಂತದು ।
ಮದವಿರಹಿತದರ್ಶನಿಕನಕ್ಕುಂ ಪುರುಷಂ ॥ ೧೧೯ ॥

ತಾ:—೧ ವಿಜ್ಞಾನ, ೨ ಐಶ್ವರ್ಯ, ೩ ಆಜ್ಞಾ, ೪ ಕುಲ, ೫ ಬಲ, ೬ ತಪ, ೭ ರೂಪು, ೮ ಜಾತಿಯೆಂದು ಮದವು ಎಂಟು ಭೇದವಾಗುವದು ॥ ೧ ಮಿಥ್ಯಾದೈವ, ೨ ಮಿಥ್ಯಾಲಯ, ೩ ಮಿಥ್ಯಾಜ್ಞಾನಿ, ೪ ಮಿಥ್ಯಾಜ್ಞಾನ, ೫ ಮಿಥ್ಯಾತಪ, ೬ ಮಿಥ್ಯಾತಪಸ್ವಿ, ಎಂದಿವು ಷಡನಾಯತನ ಸೇವೆಗಳಾಗುವವು ॥ ಜಿನೇಶ್ವರಂ ಪೇಳ್ದಾಗಮಮೋ, ಮೇಣ್ಬೌದ್ಧಾದಿಗಳ್ವೇಳ್ದದಾಗಮಮೋ ಎಂಬ ಶಂಕೆಯುಂ ೧ ಈ ವ್ರತದಿಂದೀಗತಿಯಾಗಲೇ ವೇಳ್ಕುಮೆಂಬ ಕಾಂಕ್ಷೆಯುಂ ೨ ಗುಣವಂತರ ವ್ಯಾಧಿಯಂ ಕಂಡುಪೇಕ್ಷಿಸುವಲ್ಲಿ ಚಿಕಿತ್ಸೆಯುಂ ೩ ವಸ್ತುವಿಂತುಟಂತುಟೆಂಬ ನಿರ್ಣಯವಿಲ್ಲದ ಮೂಢದೃಷ್ಟಿತ್ವಮುಂ ೪ ಧರ್ಮದ ಪಳಿಯಂ ಮರಸದನುಪಗೂಢಮುಂ ೫ ಧರ್ಮದಿಂ ಕೆಟ್ಟುಪೋಪರಂ ನಿಲಿಸದ ಅಸ್ಥಿತೀಕರಣಮುಂ ೬ ಚಾತುರ್ವರ್ಣದೋಳ್ ಸ್ನೇಹವಿಲ್ಲದ ಅವಾತ್ಸಲ್ಯಮುಂ ೭ ಧರ್ಮಕ್ಕಪ್ರಭಾವನೆಯುಂ ಮಾಳ್ಪುದುಮೆಂದಿವೆಂಟು (೮) ಶಂಕಾದಿದೋಷಗಳಾಗುವವು ॥ ಇಂತೀ ಇಪ್ಪತ್ತೈದು ಮಲದೋಷಗಳಿಂದ ಬಿಡಲ್ಪಟ್ಟರುವದು ಶುದ್ಧಸಮ್ಯಕ್ತ್ವವಾಗುವದು ॥

## ಸೂತ್ರ ॥ ಅಷ್ಟಾಂಗಾನಿ ॥ ೭ ॥

ಎಂಟಂಗಗಳು ಹ್ಯಾಗೆಂದರೆ—೧ ನಿಃಶಂಕೆ, ೨ ನಿಃಕಾಂಕ್ಷೆ, ೩ ನಿರ್ವಿಚಿಕಿತ್ಸೆ, ೪ ಅಮೂಢದೃಷ್ಟಿತ್ವ, ೫ ಉಪಗೂಹನ, ೬ ಸ್ಥಿತೀಕರಣ, ೭ ವಾತ್ಸಲ್ಯ, ೮ ಧರ್ಮಪ್ರಭಾವನೆ ಎಂಬ ಈ ಎಂಟು ಅಂಗಗಳಿಂದ ಕೂಡಿದ ಸುದೃಷ್ಟಿಗಳು ಹೊಂದುವ ಫಲಮನೇ ವೇಳ್ವುದೊಂದೊಂದು ಗುಣದೊಳು ಈ ಲೋಕದೊಳಂ ಪರಲೋಕದೊಳಂ ಫಲವತಿಶಯಂಗಳನೆಯ್ದುವರೊಳಾರಾರೆಂದೊಡೆ ॥ ೧ ಅಂಜನಚೋರನುಂ, ೨ ಅನಂತಮತಿಕನ್ನೆಯುಂ, ೩ ಓದ್ದಾಯನಮಹಾರಾಜನುಂ, ೪ ರೇವತಿಶ್ರಾವಕಿಯುಂ, ೫ ಜಿನೇಂದ್ರಭಕ್ತನುಂ, ೬ ವಾರಿಷೇಣಕುಮಾರನುಂ, ೭ ವಿಷ್ಣುಕುಮಾರನುಂ, ೮ ವಜ್ರಕುಮಾರನುಂ, ಎಂಬೀ ಯೆಣ್ಬರುಂ, ದೃಷ್ಟಾಂತಮಾದರಿಂತಿವರ ಕಥೆಯಂ ಗ್ರಂಥಾವತಾರದೊಳರಿದುಕೊಳ್ಗೆ ।'

## ಸೂತ್ರಂ ॥ ಅಷ್ಟಗುಣಾಃ ॥ ೮ ॥

ತಾ:—ಸಮ್ಯಕ್ತ್ವಮೆಂಟುಗುಣಗಳೆಂತೆನೆ ॥ ೧ ಧರ್ಮಾನುರಾಗವನ್ನೇ ಲಕ್ಷಣವಾಗಿಯುಳ್ಳ ಸಂವೇಗವುಂ, ೨ ಸಂಸಾರಶರೀರನಿರ್ವೇಗವುಂ, ೩ ಆತ್ಮನಿಂದೆಯುಂ, ೪ ತಾನು ಮಾಡಿದ ದೋಷಗಳನ್ನು ಗುರುಗಳೊಳು ಆಲೋಚಿಸುವುದನ್ನೇ ಲಕ್ಷಣವಾಗುಳ್ಳಗರ್ಹಣವುಂ, ೫ ಉ

ಪಶಮವುಂ, ೬ ಅರ್ಹದಾಚಾರ್ಯಾದಿಗಳಲ್ಲುಂಟಾದ ಭಕ್ತಿಯುಂ, ೭ ಪ್ರಾಣಿಗಳಲ್ಲಿ ಉಂಟಾದ ಅನುಕಂಪೆಯುಂ, ೮ ಜೀವಾದಿ ಪದಾರ್ಥಗಳಿರುವವೆಂದು ನಿಶ್ಚಯಿಸುವಾಸ್ತಿಕ್ಯವುಮೆಂಬಿವರಿಂ ವ್ಯಕ್ತಿಯನುಳ್ಳದ್ದುಂ, ಸಂಸಾರಲತಾಮೂಲವಿಚ್ಛೇದಿಯುಂ, ತ್ರೈಜ್ಞಾನಶುದ್ಧಿಕರಮುಂ, ಮೂಢಾದಿವರ್ಜಿತಮುಂ, ಷಟ್ಪಂಚನವಭೇದತತ್ವಾರ್ಥಶ್ರದ್ಧಾನ ಲಕ್ಷಣವುಂ, ಆರಾಧನೆಯುಂ, ಮೋಕ್ಷಪ್ರಾಸಾದಾರೋಹಣ ಪ್ರಥಮಸೋಪಾನಮುಂ, ಉಪಶಮಾದಿಭೇದವನ್ನುಳ್ಳ ಸಮ್ಯಕ್ತ್ವದೊಳ್ಕೂಡಿದ ಜ್ಞಾನಚಾರಿತ್ರತಪೋಪಶಾಂತಿಗಳು ಪೂಜ್ಯಂಗಳಾಗುವವು ॥

ಸೂತ್ರಂ ॥ ಪಂಚಾತಿಚಾರಾಯಿತಿ ॥ ೯ ॥

ತಾ:—೧ ಶಂಕಾ, ೨ ಕಾಂಕ್ಷಾ, ೩ ವಿಚಿಕಿತ್ಸಾ, ೪ ಮಿಥ್ಯಾದೃಷ್ಟಿಗಳ ಗುಣಮಂ ಮನದಿಂ ಮೆಚ್ಚುವ ಅನ್ಯದೃಷ್ಟಿಪ್ರಸಂಶೆಯುಂ, ೫ ತದ್ಗುಣಮಂ ವಚನದಿಂ ಪೊಗಳ್ವ ಅನ್ಯದೃಷ್ಟಿಗಳ ಸಂಸ್ತವನಮುಮೆಂದಿವಯ್ದುಂ ಸಮ್ಯಕ್ತ್ವದತಿಚಾರಗಳುಂ ೬ ಸಮ್ಯಕ್ತ್ವಧರಂಶ್ರಾವಕಂ, ಹಗಲು ಸ್ತ್ರೀಯರ ತೊರೆದನಾರನೆಯ ದಿವಾಬ್ರಹ್ಮಚಾರಿಯುಂ, ೭ ರಸರುಧಿರಮಾಂಸಮೇದೋಸ್ತಿಮಜ್ಜಶುಕ್ಲಂಗಳೆಂಬ ಸಪ್ತಧಾತುಮಯಮುಂ, ವಾತಪಿತ್ತಶ್ಲೇಷ್ಮದುತ್ಪತ್ತಿಕ್ಷೇತ್ರಮುಂ, ಕ್ರಿಮಿಕುಲನಿಲಯಮುಂ, ಪೂತಿಗಂಧಮಯವಾದ ಶರೀರಗಳೊಳ್ಕಾಮಸೇವೆಗೆಯ್ವುದು ಕಷ್ಟವೆಂದು ನಿಯಮದಿಂ ತೊರೆದವನೇಳನೆಯ ಬ್ರಹ್ಮಚಾರಿಯುಂ, ೮ ಅಸಿ, ಮಸಿ, ಕೃಷ್ಯಾದ್ಯಾರಂಭಮಂ ತೊರೆದ ನೆಂಟನೆಯ ಆರಂಭನಿವೃತ್ತನುಂ, ೯ ಕ್ಷೇತ್ರವಾಸ್ತು ಮೊದಲಾದ ಪರಿಗ್ರಹಮಂ ತೊರೆದನೊಂಭತ್ತನೆಯ ಪರಿಗ್ರಹವಿರತನುಂ, ೧೦ ಆರಂಭ (ಕೃಷಿಕರ್ಮ ವ್ಯಾಪಾರ ಮುಂತಾದವುಗಳು), ಪರಿಗ್ರಹ ( ಧನಧಾನ್ಯ ದಾಸದಾಸೀ ಮೊದಲಾದವುಗಳು ), ಐಹಿಕ (ಲಗ್ನಕಾರ್ಯಾದಿಗಳು) ಇವುಗಳಲ್ಲಿ ಯಾವಾತನ ಒಡಂಬಡಿಕೆಯಿಲ್ಲವೋ, ಆ ಸಮಬುದ್ಧಿಯುಳ್ಳವನು ಹತ್ತನೆಯ ಅನುಮತಿವಿರತನುಂ, ೧೧ ಗೃಹಮಂ ಪತ್ತುವಿಟ್ಟು ಮುನಿವಾಸಮನೆಯ್ದಿ ಕೇಶಪಾಶಮಂ ಕಳೆದು ಗುರೂಪಕಂಠದೊಳು ಸಮಸ್ತ ವ್ರತಗಳನ್ನು ಕೈಕೊಂಡು ವಸ್ತ್ರಖಂಡಧಾರಿಯುಂ, ಪಾತ್ರಕುಂಡಿಕಾದ್ಯುಪಕರಣಸಮನ್ವಿತನುಂ, ಭೈಕ್ಷಾಸಮನೋರ್ಮೆಕುಳ್ಳಿರ್ದುಪಾಣಿಪುಟದೊಳುಣ್ಬನುಂ ಯಮನಿಯಮಸ್ವಾಧ್ಯಾಯಧ್ಯಾನಧಾರಣ ಮೌನಾನುಷ್ಠಾನಪರಾಯಣನುಂ, ರಾತ್ರಿ ಪ್ರತಿಮಾಯೋಗಯುಕ್ತನುಂ, ನಿರಂಜನಶುಧ್ಧಾತ್ಮೈಕಾಗ್ರನಿಷ್ಟನುಂ, ದ್ವಾದಶವಿಧತಪೋನುಷ್ಠಾನ ನಿರತನಾದ ಹನ್ನೊಂದನೆಯ ಉದ್ದಿಷ್ಟನಿವೃತ್ತನೆಂದು ಶ್ರಾವಕರು ಹನ್ನೊಂದು ಭೇದವಾಗುವರು.

ಸೂತ್ರಂ ॥ ಏಕಾದಶ ನಿಲಯಾಃ ॥ ೧೦ ॥

ಗಾಹೆ ॥ ದಂಸಣವದಸಾಮಾಯಿಯ ಪೋಸಹಸಚ್ಚಿತ್ತರಾಯಿಭತ್ತೇಯ ।
ಬಹ್ಮಾರಂಭಪರಿಗ್ಗಹ ಅಣುಮಣಮುದ್ದಿಠ್ಠದೇಶವಿರದೇದೆ ॥ ೧ ॥
ಯಥ್ಥಪಮಾದಕದಾದೋ ಅಇಚಾರಾದೊ ಣಿಯತ್ತೊಹಚ್ಛೇದೋ ।
ವತ್ಥಾವಣಹೋಉಮಝ್ಝುಂ ॥ ೨ ॥

ಎಂಬುದುಮೆಂದಿಂತಣುವ್ರತಿಯುಕ್ಕೆ ಸಮಿತಿಯೊಳ್ಕೂಡಿದವರೇ ಸಂಯತನವಿಲ್ಲದ ಸಮಯದೊಳು ವಿರತನೆಂಬುದಿಂನಂತಾಪನ್ನೊರ್ವರೊಳು ಮೊದಲರುವರುಂ ಜಘನ್ಯರು. ಮಧ್ಯದ

( ೭-೮-೯ ) ಮೂವರುಂ ಮಧ್ಯಮರುಂ, ಮೇಗಣೀರ್ವರು ( ೧೦-೧೧ ) ಉತ್ತಮರು. ಇವರೆಲ್ಲಂ ಭಾವಿತಾತ್ಮರು.

## ಸೂತ್ರಂ ॥ ತ್ರಿವಿಧೋ ನಿರ್ವೇಗಃ ॥ ೧೧ ॥

೧ ಸಂಸಾರನಿರ್ವೇಗ, ೨ ಶರೀರನಿರ್ವೇಗ, ೩ ಭೋಗನಿರ್ವೇಗ ಈ ಮೂರು ನಿರ್ವೇಗಂಗಳು.

## ಸೂತ್ರಂ ॥ ಸಪ್ತವ್ಯಸನಾನಿ ॥ ೧೨ ॥

ತಾಃ—೧ ಜೂಜುಂ, ೨ ಮಾಂಸ ಸೇವೆಯುಂ, ೩ ಮದ್ಯಸೇವೆಯುಂ, ೪ ವೇಶ್ಯಾಗಮನವುಂ, ೫ ಬೇಂಟೆಯುಂ, ೬ ಪರಧನಹರಣವುಂ, ೭ ಪರದಾರಗಮನವುಂ ಎಂದಿವು ಸಪ್ತವ್ಯಸನಗಳಿವಂ ತೊರೆವನುಂ, ತತ್ವನಿಷ್ಠಾಪರನುಂ ದರ್ಶನೀಕನೆಂಬ ಮೊದಲನೆಲೆಯ ಶ್ರಾವಕಂ. ಇನ್ನಾ ಸಪ್ತವ್ಯಸನಂಗಳಿಗುದಾಹರಣಮಾದವರಾರೆಂದೊಡೆ॥ ಈ ಜಂಬೂದ್ವೀಪದ ಭರತಕ್ಷೇತ್ರದ ಕುನಾಳವಿಷಯದ ಶ್ರಾವಂತಿಪುರದ ಸುಕೇತುಮಹಾರಾಜಂ ಮಹಾತ್ಯಾಗಿ ಜೂದಿನ ವ್ಯಸನದಿಂ ತನ್ನ ಭಂಡಾರಮಂ, ನಾಡುಮಂ, ರಾಣಿವಾಸಮಂ ಸೋಲ್ತು ಪಿರಿದು ದುಃಖಮನೆಯ್ದಿದಂ. ಮತ್ತಂ ನಳನೆಂಬರಸಂ ದ್ಯೂತಮಂ ಆಡಿ ರಾಜ್ಯಭ್ರಷ್ಟನಾದಂ, ಪಾಂಡವರೊಳು ಧರ್ಮಪುತ್ರಂ ಜೂಜನಾಡಿ ಸೋಲ್ತುಕೆಟ್ಟಂ, ತಮ್ಮಂದಿರು ನಾಲ್ವರುಂ ನೋಡಿ ಕೆಟ್ಟರು. ಮಾಂಸಸೇವೆಯಿಂ ಕುಂಭನೆಂಬರಸನುಂ, ಮದ್ಯದಿಂ ಯಾದವರುಂ, ವೇಶ್ಯಾಗಮನದಿಂ ಚಾರುದತ್ತನುಂ, ಬೇಂಟೆಯಿಂ ಬ್ರಹ್ಮದತ್ತನೆಂಬರಸ ಸಕಲಚಕ್ರವರ್ತಿಯುಂ, ಚೌರ್ಯದಿಂ ವಿದ್ಯುದ್ವೇಗನುಂ, ಪರವಧುವಿನಳಿಪಿನಿಂ ರಾವಣನೆಂಬೆಂಟನೆಯ ಪ್ರತಿವಾಸುದೇವನುಂ, ಯೆಂದಿವರು ಸಪ್ತವ್ಯಸನಗಳಿಗುದಾಹರಣಮಾಗಿ ಬಹು ದುಃಖಿತರಾಗಿರ್ದರು ಇವರುಗಳ ಕಥೆಯಂ ಗ್ರಂಥಾಂತರದಲ್ಲಿ ಅರಿದುಕೊಳ್ಳುವದು.

ಕಂದ ॥ ವ್ಯಸನಂಗಳೇಳುಮಂ ವ- ।
ರ್ಜಿಸಿ ಪಂಚೌದುಂಬರಂಗಳಂ ತೊರೆದು ಮನಂ ॥
ಬಸದೆ ಪದಾರ್ಥದೊಳೊಳ ಪೊ- ।
ಕ್ಕೆಸಗುವ ಸದ್ದೃಷ್ಟಿತಾನವಂ ದರ್ಶನೀಕಂ ॥ ೧೧೦ ॥

## ಸೂತ್ರಂ ॥ ಶಲ್ಯತ್ರಯಂ ॥ ೧೩ ॥

ತಾಃ—ಮಿಥ್ಯಾಶಲ್ಯ, ಮಾಯಾಶಲ್ಯ, ನಿದಾನಶಲ್ಯಮೆಂದೀ ಶಲ್ಯತ್ರಯಗಳಿಂದಗಲಾತಂ ವ್ರತೀಕಂ ॥ ಶಲ್ಯತ್ರಯಂಗಳೆಂತೆನೆ ॥ ಭೋಗದ ಬಯಕೆ ನಿದಾನಂ, ರಾಗಂ ಮಿಥ್ಯಾತ್ವದಲ್ಲಿ ಮಿಥ್ಯಾಶಲ್ಯಂ ॥ ವ್ಯೋಗರನುಕ್ಕೆವ ಪೊಂದಭಿಯೋಗಂ ಮಾಯಾಭಿದಾನಮಸುಖನಿಧಾನಂ ॥

## ಸೂತ್ರಂ ॥ ಅಷ್ಟೌ ಮೂಲಗುಣಾಃ ॥ ೧೪ ॥

ತಾಃ—ಕಳ್ಳು ( ಹೆಂಡ ), ಅಡಗು ( ಮಾಂಸ ), ಜೇನತುಪ್ಪ, ಅತ್ತಿ, ಅರಳೆ, ಆಲ, ಬಸುರಿ, ಗೋಳಿಮೆಂಬೀಯಯ್ದುಂ ಪಾಲ್ಮರದ ಪಣ್ಗಳು ವೆರಸಿ ಎಂಟರ ತೊರವಿ ಮೂಲಗು

ಣವೆಂಬುದು. ಮಕಾರತ್ರಯುಮುಂ ಅವ್ರತಪಂಚಕಂಗೂಡಿ ಮೇಣೆಂಟರತೊರವಿ ಮೇಣ್ಮೂಲಗುಣಾಷ್ಟಕವುಂ ॥

ಕಂದ ॥ ಇದು ಸತ್ಯಂ ನುಡಿಯದುದನ್ಯ ।
ವಧೂಹರಣಮುಪದಿ ಮದ್ಯಂ ಮಾಂಸಂ ॥
ಮಧುವೆಂಬಿನಿತುಮನುಳಿವುದು ।
ಬುಧಸಂದೋಹಕ್ಕೆ ಮೂಲಗುಣವಿೂ ಎಂಟುಂ ॥ ೧೧೧॥

ಮಿಥ್ಯಾತ್ವವುಂ ಸಪ್ತವ್ಯಸನಂಗಳುಂ ಎಂಬೀ ಎಂಟರ ತೊರವಿ ಮೇಣ್ಮೂಲಗುಣಾಷ್ಟಕವೆಂಬುದು.

ಆರ್ಯ ॥ ಹಿಂಸಾಽಸತ್ಯಾಸ್ತೇಯಾದಬ್ರಹ್ಮ ಪರಿಗ್ರಹಾಚ್ಚ ಬಾದರ ಭೇದಾ ।
ದ್ಯೂತಾನ್ಮಾಂಸಾನ್ಮದ್ಯಾದ್ವಿರತಿ ಗೃಹೀಣಾಷ್ಟ ಸತ್ಯಮೂಲಗುಣಾಃ ॥
ಮದ್ಯೋದುಂಬರ ಪಂಚಕಾಮಿಷ ಮಧುತ್ಯಾಗಾಃ ಕೃಪಾ ಪ್ರಾಣಿನಾಂ ।
ನಕ್ತಂ ಭುಕ್ತಿವಿಮುಕ್ತರಾಪ್ತವಿನುತಿಸ್ತೋಯಂ ಸುವಸ್ತ್ರಸ್ರುತಂ ॥
ಏತೇಷ್ಟೌ ಪ್ರಗುಣಾಗುಣಾಗಣಧರೈಃ ರಾಗಾರಿಣಾಂ ಕೀರ್ತಿತಾಂ ।
ಏಕೇನಾಪ್ಯಮುನಾವಿನಾಭುವಿ ತಥಾ ಭೂತೋ ನ ಗೇಹಾಶ್ರಮೀ ॥

ಮತ್ತಂ ಃ ಸಿಯುಲ್ಲಂ, ಪಸಿಯರಿಸಿನಂ, ಉಳ್ಳಿ, ಕಬ್ಬು, ಬೆಲ್ಲವತ್ತದಕಾಯಿ, ಉಪ್ಪಿನರಸಗಾಯಿ, ದುದ್ದಿಕೆಯುಕಾಯಿ, ಸೊರೆಯುಕಾಯಿ, ಏರದಹಣ್ಣು, ಕರಜಿಗೆಯ ಹಣ್ಣು, ಹೂವಿನ ಬಾಡು, ನಾಳವುಳ್ಳಲುಲ್ಲಾವಾದುರವುಂ, ಆಗಮದೊಳ್ನಿಷಿದ್ಧ ಮಪ್ಪೆಲ್ಲಾ ಕಂದಮೂಲ ಕರೀರಶಾಕ ಪುಷ್ಪಫಲಾದಿಗಳಂ ಬೆಂಣೆಗಿಂಣಾಳೆಂಬೀ ಮೊದಲಾದುವನರಿದು ತೊರೆವುದಿಂತೂ.

ಕಂದ ॥ ಅತಿಚಾರದಿಂದಗಲ್ದು ।
ವ್ರತಮಯ್ದುಂ ಶೀಲಮೇಳುಮಂತಾಳ್ದಿದಣು- ॥
ವ್ರತಿ ಶಲ್ಯತ್ರಯುವ- ।
ರ್ಜಿತನಾದಂ ವ್ರತಿಕನೆಂಬುಪಾಸಕನಕ್ಕುಂ ॥ ೧೧೨॥

## ಸೂತ್ರಂ॥ ಪಂಚಾಣುವ್ರತಾನಿ ॥ ೧೫ ॥

ತಾ:—ಐದಣುವ್ರತಗಳು ಯಾವವೆಂದರೆ ಹೇಳುತ್ತಾರೆ ॥ ದೇವತೆಗಳಿಗೆಂದುಂ, ಪಿತೃಗಳಿಗೆಂದುಂ, ವ್ಯಸನಾರ್ಥವಾಗಿಯುಂ, ಔಷಧಕಾರಣವಾಗಿಯುಂ, ಅವಪ್ರಾಣಿಯುಮಂ ಕೊಲ್ಲದುದುಂ, ಕೊಲಲಾಗದೆಂಬ ಮೊದಲಣುವ್ರತಮಕ್ಕುಂ, ಲಾಭ ಲೋಭ ಭಯ ದ್ವೇಷ ರಾಗ ಮೋಹಂ ಕಾರಣವಾಗಿ ಪುಸಿಯುದದುಂ ಪುಸಿಯಲಾಗದೆಂಬೆರಡನೆಯಣುವ್ರತಮಕ್ಕುಂ, ಊರಡವಿ ಬಟ್ಟೆ ಬೆಟ್ಟಂ ಮೊದಲಾದವರೊಳು ಬಿರ್ದುದು, ಕೆಟ್ಟುದು ಮೊದಲಾದ ಪೆರರೊಡವೆಯುಂ ಕೊಳ್ಳದುದು ಕಳಲಾಗದೆಂಬ ಮೂರನೇ ಅಣುವ್ರತವಕ್ಕುಂ, ಪರಸ್ತ್ರೀಯರಂ ತಾಯಿ, ತಂಗಿ, ಅಕ್ಕ ಮಗಳೆಂಬಿವರಂ ಕಾಣ್ಬಂತೆ ಕಂಡು ಸ್ವಸ್ತ್ರೀಯರೊಳೆ ಸಂತೋಷಂ ಬಡುವುದು ಸ್ವದಾರಸಂತೋಷವೆಂಬ ನಾಲ್ಕನೆಯಣುವ್ರತವಾಗುವದು, ಕ್ಷೇತ್ರ ಮನೆ ಧನ ಧಾನ್ಯ

ಮೊದಲಾದ ವಸ್ತುಗಳನ್ನು ಅಧಿಕವಾಗಿ ಬಯಸದೆ ದೊರೆಕೊಂಡನಿತರಲ್ಲಿ ಸಂತೋಷಪಡುವದು ಪರಿಮಿತ ಪರಿಗ್ರಹಮೆಂಬೈದನೆಯ ಅಣುವ್ರತವಾಗುವದು ॥

## ಸೂತ್ರ॥ ಗುಣವ್ರತತ್ರಯಂ ॥ ೧೬ ॥

ತಾಃ—ಮೂರು ಗುಣವ್ರತಂಗಳೆಂತೆನೆ ॥ ದಶದಿಕ್ಕಿನೊಳಿನಿತುಗಾವುದಂ ಹೋಗೆನೆಂದು ಬೆಟ್ಟ ಘಟ್ಟಂ ಮೊದಲಾದವನ್ನು ಗುರುತನ್ನು ಮಾಡಿಯಲ್ಲಿಂದತ್ತಲೆಂದುಂ ಪೋಗೆನೆಂಬುದು ದಿಗ್ವಿರತಿಯೆಂಬ ಮೊದಲ ಗುಣವ್ರತಮಕ್ಕುಂ ॥ ೧ ॥ ಮನೆಯುಂ, ಕೆರೆಯುಂ, ಮೇಣ್ಬಸತಿಯುಂ, ಮೇಣಲ್ಲಿಂದತ್ತಲೆಂದುಂ ಪೋಗೆನೆಂಬುದು ದೇಶವಿರತಿಯೆಂಬೆರಡನೆಯ ಗುಣವ್ರತವು ॥ ೨ ॥ ಪ್ರಯೋಜನಮಿಲ್ಲದೆಯುಂ ಪಾಪಕ್ಕೆ ಕಾರಣಮಪ್ಪುವಂ ತೊರೆವುದು ಅನರ್ಥದಂಡವಿರತಿಯೆಂಬ ಮೂರನೆಯ ಗುಣವ್ರತವಾಗುವದು ॥ ೩ ॥ ಅದು ಐದು ಭೇದವು ಹ್ಯಾಗೆಂದರೆ ॥ ೧ ಪಾಪೋಪದೇಶಂ, ೨ ಹಿಂಸಾದಾನ, ೩ ಅಪಧ್ಯಾನಂ, ೪ ದುಃಶ್ರುತಿಯುಂ, ೫ ಪ್ರಮೋದಚರಿತಮುಮೆಂದಾಗುವವು ॥ ಅಲ್ಲಿ ೧ ತಿರ್ಯಗ್ವಣಿಜೆಯುಂ, ೨ ಕ್ಲೇಶವಣಿಜೆಯುಂ, ೩ ಆರಂಭಕೋಪದೇಶಮುಂ, ೪ ಪ್ರಲಂಬನೆಯುಂ, ಎಂದು ಪಾಪೋಪದೇಶಂ ನಾಲ್ಕು ಭೇದವಾಗುವದು ॥ ೪ ॥ ಬೇಂಟೆಗಾರ ಮಿರ್ಗಂಬುಲಿಗಮೊದಲಾದವರ್ಗೆ, ಹುಲ್ಲೆ, ಮೊಲಂ, ಹಂದಿ ಪಕ್ಷಿಜಾತಿ ಮೊದಲಾದ ಜೀವಗಳು ಇಂಥಾ ಕಡೆಯಿರುತ್ತವೆಯೆಂದುಂ, ಪೆರರ ಪಗೆವರಂ, ಸೂಳೆ ಬಂದಿರನಿಂತಪ್ಪೆಡೆಯೊಳಿರ್ದರೆಂದು ಪೇಳ್ವುದುಂ, ಶಸ್ತ್ರವಿದ್ಯೆಯು ಧನುರ್ವಿಧ್ಯೆಯುಮೆಂಬಿವಂ ಕಲಿಸುವದು ಹಿಂಸೋಪದೇಶವು ॥ ಗಿಡುಗಡಿವುದು ಉಳುವುದು ಹರಗುವ ಪೆರವುಂ ಸಾವದ್ಯ ಬಹಳಗಳಾದ ಕೆಲಸಂಗಳುಮಂ ಮತ್ತಂ ಬಾರ್ತೆಯಿಲ್ಲದೆ ಪೋಗುತ್ತಂ ಬರುತ್ತಂ ನಿಂದಿರುತ್ತಂ ಸಚಿತ್ತಂಗಪ್ಪುಹಮುಂ ಕೆದರುತ್ತಂ ಪರಿಯುತ್ತ ಪೆರರೊಳು ಪೊರ್ಕುಳಿಯಿಕ್ಕುತಂ ಮೈಯೊರಿಸುತ್ತಂ ಬೊಟ್ಟುವರಿಸುತ್ತಮಿವು ಮೊದಲಾಗೆ ಪೆರವು ರಾಗದ್ವೇಷಹೇತುಗಳಪ್ಪುವಂ ಮಾಡುತಿರ್ಪುದುಂ, ವಂಚನೆ ಮೊದಲಾದ ಕ್ಷುದ್ರಿಕೆಗಳನುಪದೇಶಂ ಮಾಳ್ಪುದುಂ, ಆರಂಭಕೋಪದೇಶವಾಗುವದು.॥ ಇಂತೀ ನಾಲ್ಕುಂ ಪಾಪೋಪದೇಶಭೇದಮಕ್ಕುಂ ॥ ಕೊಡಲಿ, ಕತ್ತಿಗೆ, ಕುಡುಗೋಲು, ಈಳಿಗೆ, ಸುರಿಗೆ, ಅಥಾಯುಧಂ, ಕದಿರ, ಕೊಂತ, ಥಾಣೆ ಮೊದಲಾದಾಯುಧಂಗಳಂ, ನೇಣು, ಮಿಣಿ, ಸಂಕಲೆ, ಕಿಚ್ಚು, ನಂಜು, ವಿಷ, ಹಾಲಾಹಲ, ಕಾಲಕೂಟಮುಂ, ತೊಳಲಿಕಲ್ಲು, ಹಸೆಯಕಲ್ಲು, ಬಿರಳಕಲ್ಲು, ಪೊನಕೆ ಎಂಬಿವು ಮೊದಲಾದವುಗಳುಂ ಕೊಲೆಗೆ ಕಾರಣಂಗಳಾದ ಬೆಕ್ಕು, ಮುಂಗುಲಿ, ನಾಯಿ, ಕೋಳಿ, ಕೋಡಗ, ಹಾವು, ಹುಲಿ, ಹಂದಿ, ಅಂಕಂ, ಗಿಣಿ ಮೊದಲಾದವುಗಳಂ ಆಳುವುದುಂ ಪುಣ್ಯಹೇತುವೆಂದು ಅನ್ಯರಿಗೆ ಕೊಡುವದುಂ ಹಿಂಸಾದಾನವೆಂಬೆರಡನೆಯ ಅನರ್ಥದಂಡವಾಗುವದು. ॥ ೨ ॥ ರಾಗದ್ವೇಷಗಳಿಂ ಪೆರರ ಪೆಂಡಿರುಮಕ್ಕಳು ಮೊದಲಾಗೊಡೆಯುವರ್ಗಳಿಗೆಲ್ಲಂ, ಕೊಲೆಯುಮುಂ, ಬಂಧನಮುಂ, ಅಂಗಚ್ಛೇದನಮುಂ, ಸೋಲಮುಮಂ, ಗೆಲ್ಲಮುಮಂ, ಕೇಡುಮುಂ, ನೋವಮುಂ, ಕ್ಲೇಶಮುಮನೆಯ್ದುವಕ್ಕೆಂದು ಚಿಂತಿಸುವದುಂ ॥ ಪ್ರಯೋಜನವಿಲ್ಲದೆ ಪಾಪಕ್ಕೆ ಕಾರಣಗಳಾದ ಪರಸಮಯದ ರಾಮಾಯಣ ಭಾರತ ದೇವಾಸುರ ವಾಚ್ಛಾಯನ ಕಾದಂಬರಿ ಮದನಪತಾಕಾದಿ ಕಾವ್ಯಗಳಂ ಮನದಿಂ ಚಿಂತಿಸುವುದುಂ

ಅಪಧ್ಯಾನವೆಂಬ ಮೂರನೆಯ ಅನರ್ಥದಂಡವಾಗುವದು. ॥ ೩ ॥ ಕೊಲೆ, ಹುಸಿ, ಕಳವು, ಅಬ್ರಹ್ಮ, ಕ್ರೋಧ, ಮಾನ, ಮಾಯಾ, ಲೋಭ ಹಾಸ್ಯಾದಿಗಳಂ, ಮದ, ಮಾತ್ಸರ್ಯ, ಠಕ್ಕು, ಠವುಳ, ವಂಚನೆ, ಮಿಥ್ಯಾತ್ವವೆಂದಿವು ಮೊದಲಾದ ದೋಷಂಗಳೋಳ್ಕೂಡಿದ ದುಷ್ಟರ ಕಥೆಗಳಂ ಪೆರರ ನಿರಿದ ಮೆರೆದ ಚಿಂತಿಸಿದ, ಬಳಲಿಸಿದ, ಸುತ್ತಿದ, ಮುತ್ತಿದ, ಕೊಂದ, ಗೆಲ್ದ, ಪಾಳಿಸಿ ದಾಳಿಸಿದ, ಸೋಲದ ಗೆಲ್ಲದ, ಪಡೆಮಾತುಗಳ್ಕಂಬೆಳೆಂಬಾಹಿಂಸೆಗಳುಮಂ, ರಾಗಿಸಿ ತಾಂ ಕೇಳ್ವುದುಂ, ಪೆರರ್ಗೆ ಪೇಳ್ವುದುಂ, ಮೊದಲಾದವೆಲ್ಲಂ ದುಃಶ್ರುತಿಯೆಂಬ ನಾಲ್ಕನೆಯನರ್ಥದಂಡಮಕ್ಕುಂ ॥ ೪ ॥ ತನಗೆ ಪ್ರಯೋಜನವಿಲ್ಲದೆ ನೆಲನಂ ಘಟ್ಟಿಸುವದುಂ, ಅಗೆಯುವುದುಂ, ನೀರಂ ತುಳುಕುವುದುಂ, ಕದಡುವುದುಂ, ಕಿಚ್ಚನುರಿಸುವುದುಂ, ನಂದಿಸುವುದುಂ, ಗಾಳಿಯಂ ಪುಟ್ಟಿಸುವುದುಂ, ಪೊಯಿಸುವುದುಂ, ವನಸ್ಪತಿಗಳಂ ಮುರಿಯಿಸುವುದುಂ, ರಾಗಿಸಿ ಪರಿವುದುಂ, ಪರಿಯಿಸುವುದುಂ, ಪೆರವು ಸಾವದ್ಯ ಕಾರಣಂಗಳಪ್ಪನೆಗಳ್ತೆಗಳಂ ನೆಗಳ್ವುದುಂ, ಪ್ರಮೋದಾಚರಿತಮೆಂಬೈದನೆಯ ಅನರ್ಥದಂಡವಾಗುವದು ॥ ೫ ॥ ಈ ಐದುಮಂ ನಿರವಶೇಷಂ ತೊರೆಯುವದು ಅನರ್ಥದಂಡ ವಿರತಿಯೆಂಬ ಮೂರನೆಯ ಗುಣವ್ರತವಾಗುವದು. ॥ ೩ ॥ ಮತ್ತಂ ಈ ಗುಣತ್ರಯಗಳು ಪ್ರತ್ಯಾಖ್ಯಾನ ಕಷಾಯದ ಚಾರಿತ್ರಮೋಹನೀಯದ ಮಂದೋದಯದಿಂ ತನ್ನ ಶೀಮೆಯಿಂದೊಳಗೆ ಮಹಾವ್ರತಕ್ಕೆ ಬರಲಾರದ ಅಣುವ್ರತಿ ತನಗೆ ತಕ್ಕ ಗುಣದಿಂ ನಡೆಗುಂ ಪ್ರಮಾಣಿಸಿದ ಮೇರೆಯಿಂ ಹೊರಗೆ ಯಾವ ಜೀವಂ ಲಾಭ, ಲೋಭ, ಭಯ, ರಾಗದ್ವೇಷದಿಂದಾದೊಡಂ, ಕೊಲೆ ಮೊದಲಾದ ದೋಷಂಗಳೇನುಮಂ ಮನ, ವಚನ, ಕಾಯ, ಕೃತಕಾರಿತಾನುಮೋದದಿನ್ನೆಂದುಂ ಮಾಡದಿರ್ಪುದರಿಂದಂ ಮಹಾವ್ರತಿಯೆನೆಪಡುಗುಂ. ॥

ಸೂತ್ರಂ ॥ ಶಿಕ್ಷಾವ್ರತಾನಿ ಚತ್ವಾರಿ ॥ ೧೭ ॥

ಟಾ:—ನಾಲ್ಕು ಶಿಕ್ಷಾವ್ರತಂಗಳು ಹ್ಯಾಗೆಂದರೆ—ಬಸದಿಯುಂ ಕ್ಷೇತ್ರಶುದ್ಧಿಯನ್ನುಳ್ಳ ಪೆರವುಂ ಪ್ರದೇಶಂಗಳುಮೆಂದಿವರೊಳು ವಿಷಯ ಕಷಾಯಾದಿಗಳಿಂದಗಲ್ದು ಮೌನದಿಂ ತ್ರಿಭುವನ ಸ್ವಾಮಿಯಾದ ಜಿನೇಶ್ವರನಂ ತ್ರಿಸಂಜೆಯೊಳಂ ತ್ರಿಕರಣಶುದ್ಧಿಯಿಂ ವಸ್ತುಸ್ತವ, ರೂಪಸ್ತವ, ಗುಣಸ್ತವಂಗಳಿಂ ಸ್ತುತಿಯಿಸುವುದು ಸಾಮಾಯಿಕವೆಂಬ ಪ್ರಥಮ ಶಿಕ್ಷಾವ್ರತವಾಗುವದು ॥ ೧ ॥

ಕಂದ ॥ ಎರಡಿರದಾವರ್ತನ ಪ- ।
ನ್ನೆರಡಿರದೆರಕ ಮನದರ್ಥಿಯಿಂದಿವು ವೆರಸಾ- ॥
ದರದಿಂ ತ್ರಿಸಂಜೆಯೊಳು ನುತ ಜಿನ- ।
ವರರಂ ಸ್ತುತಿಗೆಯ್ವ ಮಾನವಂ ಸಾಮಾಯ್ಯಂ ॥ ೧೧೩ ॥

ಸ್ಪರುಶನ, ರಸನ, ಘ್ರಾಣ, ಚಕ್ಷು, ಶ್ರೋತ್ರವೆಂಬೈದಿಂದ್ರಿಯಂಗಳಂ ತಂತಮ್ಮ ವಿಷಯಗಳಿಗೆ ಪರಿಯಲೀಯದೆ ತಡೆದು ಅನ್ನ, ಪಾನ, ಖಾದ್ಯ, ಲೇಹ ಎಂಬ ಚತುರ್ವಿಧಾಹಾರಮಂ ಅಷ್ಟಮಿ ಮೊದಲಾದ ಪರ್ವ ದಿನಂಗಳಲ್ಲಿ ತೊರೆಯುವದು ಪ್ರೋಷಧೋಪವಾಸವಾಗುವದು ॥ ಮತ್ತಂ ನೀರನುಳಿದು ಸರ್ವಾಹಾರಮನುಂಡಲ್ಲಿಯೇ ಮುಖಶುದ್ಧಿಯಂ ಕಳೆದುಕೊಂಬುದು ಏಕಭುಕ್ತವೆಂಬುದು, ಸರ್ವಾಹಾರಮನುಂಡಲ್ಲಿಯೇ ನೀರುಮಂ ಕೊಳ್ವುದು ಏಕಠಾಣ

ಮೆಂಬುದು, ನೇಸರ್ಮೂಡಲ್ಪೂರಿದ ಬಳಿಕ್ಕುಂಬುವದು ಪುರಿಮಂಡಲಂ, ಬರುಗೂಳನುಂಬ ( ಬರೀಅನ್ನ ) ನಿಬ್ಬಗಡಿಯುಂ, ಕಳಿಯುಂ ಕೂಳನುಣ್ಬುದು ( ಬರೀ ಸಪ್ಪೆಗಂಜಿ ) ಅಂಬಿಲಮುಂ, ಇವರೊಳಾವುದಂ ಮಾಡಿದೊಡಂ ಪ್ರೋಷಧೋಪವಾಸವಕ್ಕುಂ ॥ ೨ ॥ ಅನ್ನಪಾನ ಗಂಧ ಪುಷ್ಪಮಾಲೆ ಮೊದಲಾದುಪಭೋಗವಸ್ತುವುಂ ಸ್ತ್ರೀವಸ್ತ್ರಾಭರಣವಾಹನಂ ಮೊದಲಾದ ಪರಿಭೋಗವಸ್ತುವಂ ಇನಿತರೊಳಿನಿತೇಸಾಲ್ಗೆಂದು ಪವಣಿಸುವುದು ಭೋಗೋಪಭೋಗ ಪರಿಮಾಣಮೆಂಬುದು ॥೩॥ ಅಲ್ಲಿ ೧ ತ್ರಸಘಾತಮುಂ, ೨ ಪ್ರಮಾದಮುಂ, ೩ ಬಹುವಧೆಯುಂ, ೪ ಅನಿಷ್ಟಮುಂ, ೫ ಅನುಪಸೇವ್ಯಮೆಂದು ಪರಿಸಂಖ್ಯಾನಮೈದುತೆರಂ ॥ ೫ ॥ ಅದರಲ್ಲಿ ತ್ರಸಘಾತಮೆಂಬುದು ತ್ರಸಂಗಳನ್ನು ಕೊಂದಡಲ್ಲದೆ ಮಧುಮಾಂಸಮಿಲ್ಲಪ್ಪದರಿಂದವಂ ಸದಾಕಾಲಂ ವರ್ಜಿಸುವುದು ॥

ಆರ್ಯೆ॥ ಆಮಾಸು ಚ ಪಕ್ವಾಸು ಚ ವಿಪಚ್ಯಮಾನಾಃಸು ಮಾಂಸಪೇಸಿಷು ।
ಉತ್ಪತ್ತಿರ್ಜೀವಾನಾಂತ ಜಾತೀನಾಂ ನಿರೋಧಾನಾಂ ॥
ಯಃಪಕ್ವಮಪಕ್ವಂ ವಾ ಪೇಲಸ್ಯ ಖಂಡಂ ಸ್ಪೃಶೇಚ್ಚ ।
ಹಂತಿಕಿಲಾಸೌ ಖಂಡಂ ಬಹುಕೋಟೀನಾಂ ಹಿ ಜೀವಾನಾಂ ॥

ಬಹುಸಾವದ್ಯಮಪ್ಪುದುಕಾರಣಂ ಮಾಂಸಭಕ್ಷಣಂಗೆಯ್ವಂಗೆ, ದಯೆಯುಂ, ಕ್ಷಮೆಯುಂ, ಇಲ್ಲ ಅವಂಗೆದರ್ಪ ( ಗರ್ವ ) ಮಧಿಕಮಕ್ಕುಂ. ಮತ್ತಂ ಪ್ರಮಾದನೆಲ್ಲಾ ದೋಷಂಗಳ್ಗಂ ಮೂಲವಾದ ಮದ್ಯಮಂ ಪರಿಹರಿಸುವದು. ಮೋರೆ ಜಾತಿಭೇದಮೆಂಬಿವು ಪರಿಪಟ್ಟುವು. ಕಳ್ಳೊಳಪ್ಪಕಾರಣದಿಂದಂ ತೊರೆವ ಪ್ರಮಾದಮೆಂದದನರಿವುಳ್ಳವರಧಿಕ ನಿರ್ಗುಣತ್ವೋತ್ಪಾದಕಮಕ್ಕುಂ, ಮದ್ಯದ ಸೇವೆಮಾಡುವನಿಗೆ, ಮೋರೆಯುಂ, ಮರನುಂ, ನಾಣುಂ, ತತ್ಕೂರ್ಮೆಯುಂ ಇಲ್ಲ, ತಕ್ಕುದುತಗದೆಂಬ ಬುದ್ಧಿಯುಂ ಕೆಡುಗುಂ, ಸಂಮೋಹಪರಿಣಾಮಂ ಪೆರ್ಚುಗುಂ, ಅವನಿಂವರ್ಜಿಸೆಪಡುವ ದೋಷಮಾವುದುಮಿಲ್ಲ, ವರ್ಜಿಸದವಂಗೆ ಲೋಕಮೆಲ್ಲಂ ಪೇಸುಗುಂ, ಸಹಪಂಕ್ತಿ ಭೋಜನಂಗಳಿಗೆ ಯೋಗ್ಯನುಮಲ್ಲಂ ॥

ಕಂದ ॥ ಗಿಂಣಂ ಪಾಲ್ಮರನೈದರ ।
ಪಂಣಂ ಜೇನೆಯ್ದುಡಗನಾಣಂಬಿಯುನಾ- ॥
ಗಂಣ್ಣಲ್ಯಳ್ಳುಮನರಿವು- ।
ಳ್ಳಂಣಂ ಬಿಡುಗಿರುಳಿ ನುಣಿಸುಮಂ ಜಿನಮತದೊಳ್ ॥ ೧೧೪ ॥

ಮತ್ತಂ ಬಹುವಧೆಮೆಂಬುದೆಂತೆನೆ—ಪೂವಿನಬಾಡುಪ್ಪಿನಕಾಯಿ ಭಾವಿಸೆ ಹಸಿಯಲ್ಲ ಉಳ್ಳಿ ಮೂಲಂಗೆಕಬ್ಬೆಂಬೀವಿಧದಾಹಾರಂ, ದೋಷಾವಹಮತಿಘಾತಮಲ್ಪಫಲಮೆನೆಪಡುಗುಂ॥ ಬಹುಘಾತಾಲ್ಪಫಲಪ್ರಾಪ್ತಿಯಪ್ಪ ವಸ್ತುಗಳ್ಯಾವುವೆಂದೊಡೆ—ಹಸಿಯ ಅರಿಸಿನ, ಸೂರಣ, ಹೆಂಡಗಗೆಣಸು, ಕೆಸವಿನಗೆಡ್ಡೆ, ಮೊದಲಾದನನ್ತಕಾಯಂಗಳುಂ, ಪಲವುಂ ಪ್ರಾಣಿಗಳ್ಗೆಯೋನಿಸ್ಥಾನಮಪ್ಪ ಪುಷ್ಪಾದಿಗಳುಂ, ಬಹುಕಾಂಕ್ಷಾದರ್ಪಕರಮಪ್ಪ ನವನೀತಮೆಂದಿವೆಲ್ಲಂ ತೊರೆಯಲು ಪಡುಗುಂ.

ಉಕ್ತಂಚ ॥ ಅಲ್ಪಫಲ ಬಹುವಿಘಾತಾನ್ಮೂಲಕಮಾದಾಣಿ ಶೃಂಗವೇರಾಣಿ ।
ನವನೀತನಿಂಬಕುಸ್ಮಂ ಕೈತಕಮಿತ್ಯೇವಮುವಹೇಯಂ ॥ ೨ ॥

ಮತ್ತಂ ತನಗಿಷ್ಟಮಲ್ಲದ ಪರಿಗ್ರಹಗಳನ್ನು ತೊರೆಯುವದುಂ ವಿಷಯಂಗಳುಮಂ ತೊರೆವುದು ಅನಿಷ್ಟವೆಂಬುದು ॥ ಮತ್ತಂ ಅನುಪಸೇವ್ಯಮೆಂಬುದಷ್ಟಮಪ್ಪ ಚಿತ್ರವಸ್ತ್ರ ವಿಕೃತವೇಷಾಭರಣಂಗಳಿಂತಿವು ರಾಗಹೇತುಗಳೆಂದು ವರ್ಜಿಸುವದು. ಆಗದಿರ್ದೊಡೆ ಕಾಲನಿಯಮದಿಂ ವಸ್ತುಪರಿಣಾಮದಿಂ ನಿವೃತ್ತಿಯಂ ಮಾಳ್ಪದು ॥

ಉಕ್ತಂಚ ॥ ಯದನಿಷ್ಟಂ ತದ್ವ್ರತಯೇದ್ಯಚ್ಚಾನುಪಸೇವ್ಯಮೇತದಪಿ ಜಹ್ಯಾತ್ ।
ಅಭಿಸಂಧೀಕೃತಾವಿರತಿರ್ವಿಷಯದ್ಯೋಗ್ಯಾದ್ವ್ರತಂ ಭವತಿ ।

ವಚನ ॥ ಅಂಥಾ ಭೋಗೋಪಭೋಗಂಗಳಿಗೆ ನಿಯಮವೆಂದುಂ, ಯಮವೆಂದುಂ ಇತ್ತೆರಂ ॥ ಅದರಲ್ಲಿ ನಿಯಮವೆಂಬುದು, ಘಳಿಗೆ, ಮುಹೂರ್ತ, ದಿವ, ರಾತ್ರಿ, ದಿನ, ಪಕ್ಷ, ಮಾಸ, ಋತು, ಅಯನ, ಸಂವತ್ಸರಾದಿ ಕಾಲಪ್ರಮಾಣದಿಂ ಪರಿಹರಿಸೆ ಪಡುವುದು. ಯಮವೆಂಬುದು, ಬಾಳ್ವಂನೇವರಂ ತೊರೆವುದೆಂದಿಂತು ಭೋಗೋಪಭೋಗ ಪರಿಮಾಣಮೆಂಬ ಮೂರನೆಯ ಶಿಕ್ಷಾವ್ರತವಾಗುವದು ॥ ಅತಿಥಿಸಂವಿಭಾಗವೆಂತೆನೆ--ಸ್ವಶುದ್ಧಾತ್ಮೈಕತತ್ವಭಾವನಾನಿಷ್ಟರುಂ, ರಾಗದ್ವೇಷದ್ವಯವಿಷ ನಿರ್ಮುಕ್ತರುಂ, ಇಡ್ಡಿ, ರಸ, ಸಾತಗಾರವತ್ರಯದೂರರುಂ, ಚತುರ್ವಿಧ ಪುರುಷಾರ್ಥಸಾರರುಂ, ಖಂಡನಿ, ಪೇಷಣಿ, ಉದಕುಂಭ, ಪ್ರಮಾರ್ಜನಿ, ಚುಲ್ಲಿಯೆಂಬ ಪಂಚಸೂನುಗಳಿಲ್ಲದವರುಂ. ೧ ನೀರಂತರಿಸುವುದುಂ, ೨ ಸಗಣಮನಿರಿಸುವುದುಂ, ೩ ಗೋಡೆಯನಿಡುವುದುಂ, ೪ ಸಾರೈಸೂದುಂ, ೫ ಕುಟ್ಟವೇಳ್ಪುದುಂ, ೬ ಕಿಚ್ಚಿನವ್ಯಾಪಾರಮೆಂಬ ಲೌಕಿಕಷಟ್ಕರ್ಮ ನಿರ್ಮುಕ್ತರುಂ. ೧ ಇಹಲೋಕಭಯ, ೨ ಪರಲೋಕಭಯ, ೩ ಅತ್ರಾಣಭಯ, ೪ ಅಗುಪ್ತಿಭಯ, ೫ ಮರಣಭಯ, ೬ ವೇದನಾಭಯ, ೭ ಆಕಸ್ಮಿಕಭಯಗಳೆಂಬ ಸಪ್ತಭಯವಿಮುಕ್ತರುಂ. ಪಲ್ಯ, ಸಾಗರ, ಸೂಚ್ಯಂಗುಳ, ಪ್ರತರಾಂಗುಳ, ಘನಾಂಗುಳ, ಜಗತ್ಶ್ರೇಣಿ, ಲೋಕಪ್ರತರೆ, ಲೋಕಪೂರಣಮೆಂಬುಪಮಾಪ್ರಮಾಣಾಷ್ಟಕ ನಿಪುಣರುಂ, ನವವಿಧ ಬ್ರಹ್ಮಚರ್ಯಸಮೇತರುಂ, ದಶಸಂಯಮ ಸಮೇತರುಮಪ್ಪ ದಿವ್ಯತಪಸ್ವಿಗಳಿಗೆ, ನಿರವದ್ಯಾಹಾರಮುಂ, ಔಷಧಮುಂ, ಉಪಕರಣಮುಂ, ಆವಾಸಮುಂ ಎಂಬಿವಂ ಬಿಡುವದಾನಂ ವೈಯ್ಯಾವೃತ್ಯಮೆಂಬುದು. ಮತ್ತಮಾಪತ್ತಂ ಪಿಂಗಿಸುವುದುಂ, ಶ್ರಮಮುಂ ಕಳೆಯುವದುಂ, ಪಾದಯುಗಳಮಂ ಗುಣಾನುರಾಗದಿಂ ತನ್ನ ತೊಡೆಯಮೇಲಿಟ್ಟು ಪೊರಸುವುದು ಮೊತ್ತುವುದುಂ, ತೊಳೆಯುವದು, ಮೊದಲಾದುವೆಲ್ಲಂ ವೈಯ್ಯಾವೃತ್ಯಮೆಂಬುದು. ಇವೆಲ್ಲವರಿಂ ಗೃಹಸ್ಥಂಗೆ ಗೃಹಕರ್ಮದಿಂ ನೆರಪಿದ ಪಾಪಂ ತೊಳೆದು ಪೋಕುಂ ॥

ಉಕ್ತಂಚ ॥ ಗೃಹಕರ್ಮಣೋಪಸಿಚಿತಂ ಕರ್ಮವಿಮಾರಿಷ್ಟಿಖಗಲು ಗೃಹಮುಕ್ತಾನಾಂ ।
ಅತಿಥೀನಾಂ ಪ್ರತಿಪೂಜೋ ರುಥಿರಮಲಂ ದಾವತೇ ವಾರಿ ॥

ವಿಧಿದ್ರವ್ಯದಾತೃ ಪಾತ್ರವಿಶೇಷದಿಂದಾದಾನಂ ವಿಶೇಷಿಸೇ ಪಡುಗು, ಮದುವುಂ ಸಾಕ್ಷಾತ್ಪು ಣ್ಯಬಂಧಂ, ಪರಂಪರೆಯಿಂ ಮುಕ್ತಿಗೆ ಕಾರಣಮಕ್ಕುಂ ॥

ಕಂದ ॥ ಮನೇಳ್ತರೆ ಸತ್ಪಾತ್ರಮಿ- ।
ದೆನಗಭಿಮತ ಫಲಮನೀಯಲೇಳ್ತಂದುದು ಸ- ॥
ನ್ಮುಸಿರೂಪದಿಂದೀಕಲ್ಪಾ- ।
ವನೀರುಹಮೆನಿಸಿರ್ದ ರಾಗರಸ ಸಂಭ್ರಮದಿಂ ॥ ೧೧೫ ॥

೧ ಅಲ್ಲಿ ಇದಿರ್ಗೊಳುವದುಂ, ೨ ಉನ್ನತಸ್ಥಾನದೋಳ್ಕುಳ್ಳಿರಿಸುವದುಂ, ೩ ಪಾದಪ್ರಕ್ಷಾಲ ನಂ ಮಾಳ್ಪದುಂ, ೪ ಅಷ್ಟವಿಧಾರ್ಚನೆಯಿಂದರ್ಚಿಸುವದುಂ, ೫ ನಿರ್ಭರಭಕ್ತಿಯಿಂ ಪೊಡಮಡು ವದುಂ, ೬ ಮನಶ್ಶುದ್ಧಿಯುಂ, ೭ ವಾಕ್ಸುದ್ಧಿಯುಂ, ೮ ಶರೀರಶುದ್ಧಿಯುಂ, ೯ ದ್ರವ್ಯಶುದ್ಧಿಯುಂ, ಎಂಬಿವು ನವವಿಧ ಪುಣ್ಯಗಳು ॥ ೯ ॥ ವಿವಿಧವಿಶೇಷಂ, ಸ್ವಾಧ್ಯಾಯ ಧ್ಯಾನಾನುಷ್ಠಾನಂಗಳಂ ಪೆರ್ಚಿಸುವ ನಿರವದ್ಯಮುಪ್ಪನ್ನಪಾನಾದಿಗಳು ದ್ರವ್ಯವಿಶೇಷಂ ॥ ೧ ರತ್ನವೃಷ್ಟಿಯುಂ, ೨ ಪು ಷ್ಪವೃಷ್ಟಿಯುಂ, ೩ ಸುಗಂಧದಕ್ಷಿಣಾನಿಲಮುಂ, ೪ ದೇವದುಂದುಭಿಯುಂ, ೫ ದೇವರ್ಕಳ ಪ್ರಶಂಸೆಯುಂ, ಎಂಬ ಪಂಚಾಶ್ಚರ್ಯಗಳನ್ನು ಬಯಸದವನುಂ, ಮತ್ತಂ ॥

ಗಾಹೆ॥ ಸದ್ಧಾ ಭಗತೀ ತುಠ್ಠೀ ವಿಣ್ಣಾಣ ಮಲುದ್ಧಯಾ ಖಮಾ ಸತ್ತಿ ।
ಜತ್ಥೇದೇ ಸತ್ತಗುಣಾ ತಂ ದಾಯಾರಂ ಪಸಂ ಸಂತ್ಸಿ ॥

ಶ್ರದ್ಧೆ, ಭಕ್ತಿ, ಸಂತೋಷ, ವಿಜ್ಞಾನ, ನಿರ್ಲೋಭತೆ, ಕ್ಷಮೆ, ಶಕ್ತಿ ಈ ೭ ದಾತೃ ಗುಣಗಳು.

ಕಂದ ॥ ನೆರದ ತ್ರಿಶಕ್ತಿ ಭಕ್ತಿದ- ।
ಲರಿದೌದಾರ್ಯ್ಯಂ ದಯಾಗುಣಂ ಕ್ಷಮೆ ಎಂಬಿಂ- ॥
ತುರಿಗಿದ ಗುಣಮೇಳರೊಳಂ ।
ನೆರೆದಿರ್ದುದದಾವುದದುವೇ ದಾತೃವಿಶೇಷಂ ॥ ೧೧೬ ॥

ಭೇದಾಭೇದ ರತ್ನತ್ರಯಾರಾಧಕರುಮಪ್ಪದಿವ್ಯಮುಮುಕ್ಷುಗಳುತ್ತಮಪಾತ್ರಂ, ದೇಶ ಸಂಯುತರ್ಮಧ್ಯಮಪಾತ್ರಂ, ಅಸಂಯತ ಸಮ್ಯಗ್ದೃಷ್ಟಿಗಳು ಜಘನ್ಯಪಾತ್ರಂ, ಇಂತೀತ್ರ ಯಮ್ ಪಾತ್ರವಿಶೇಷಮುಂ, ಚಾರಿತ್ರಾಭಾಸ ಚಾರಿತ್ರರುಂ, ಸ್ವಭಾವದಿಂ ಪಾಪಭೀರುಗಳುಂ, ಆರ್ಜವರುಮಾಗಿ ತಮ್ಮಂ ಸಮರಿನಡೆವ ಕುದೃಷ್ಟಿಗಳು ಕುಪಾತ್ರಂ, ಸಪ್ತವ್ಯಸನಾದಿಭೂ ತರುಂ, ಡಂಭಹಾಸ್ಯ ಪ್ರಯುಕ್ತ ವಿಕಥಾ ಪ್ರಲಾಪರುಂ, ಮಾಯಾಪ್ರಪಂಚಿಗಳುಮೆಂದಿವರೆಲ್ಲ ರುಮಪಾತ್ರಂ ॥ ಇವರ್ಗೆ ಕೊಟ್ಟದಾನ ನಿಷ್ಫಲ ಸಂಸಾರ ಭ್ರಮಣೆಯಂ ಮಾಳ್ಕುಂ.॥

ಕಂದ ॥ ಬೇವಿಂಗೆ ಪರಿದನೀರಿನ ।
ಪಾವಿಂಗಾರ್ತೆರದ ಪಾಲಪಯವುಲಿಗಿಂಬಿಂ ॥
ಭಾವಿಸಿ ಮಾಳ್ಪಪಕೃತಿ- ।
ಯುಮೋಲೇಳ್ಪುದೀ ಪಾತ್ರದಾನದೊಂದ ತಮತೆಯುಂ ॥ ೧೧೭ ॥

ಕುಪಾತ್ರದಾನದಿಂ ಕುಭೋಗಭೂಮಿಯಲ್ಲಿ ಹುಟ್ಟಿ ಕುತ್ಸಿತ ಭೋಗಂಗಳನನುಭವಿಸುವ ರಂತಾ ಕುಪಾತ್ರಾಪಾತ್ರಂಗಳಂ ವರ್ಜಿಸಿ ಸತ್ಪಾತ್ರಕ್ಕೆ ಕೊಡುವುದು. ಮತ್ತಂ, ಬಾಲವೃದ್ಧ ಮೂಕಾಂಧ ಬಧಿರ ವ್ಯಾಧಿಪೀಡಿತ ಜೀವಂಗಳಿಗೆ ಯಥೋಚಿತ ವಸ್ತುಗಳನ್ನು ಕೊಡುವುದು ಕಾರುಣ್ಯದಾನಮೆಂಬುದು. ಮತ್ತ, ಮಾಸತ್ಪಾತ್ರಕ್ಕೆ ಕೊಟ್ಟ ಸಮ್ಯಗ್ದೃಷ್ಟಿಗಳು ಕಲ್ಪಾವಾಸಂಗಳಲ್ಲಿ ಹುಟ್ಟಿ ಸಂಸಾರಭೋಗಗಳನನುಭವಿಸುತ್ತಂ, ಕೆಲವು ಭವಂಗಳಲ್ಲಿ ಮುಕ್ತರಾಗುವರು. ಚಂದ್ರಶೀಲಿಗಳು ಮಾರ್ದವಾರ್ಜವಗುಣೋಪೇತರುಮಪ್ಪ ಮಿಥ್ಯಾದೃಷ್ಟಿಗಳು ಉತ್ತಮ ಮಧ್ಯಮ ಜಘನ್ಯ ಭೋಗಭೂಮಿಯೊಳ್ಪುಟ್ಟಿ, ತತ್ಸುಖಮನನುಭವಿಸಿ ದೇವಗತಿಯೊಳ್ಪುಟ್ಟುವರು. ಮತ್ತಂ ಪೂರ್ವವಿದೇಹದ ಪುಷ್ಕರಾವತಿ ವಿಷಯದ, ದನ್ಯಕವಾಳದ ಶಷ್ಪಿರ್ಸರೋವರದ ತಡಿಯಲ್ಲು, ಶ್ರೀಮತಿ, ವಜ್ರಜಂಘರು ಧಮವರ, ಸಾಗರಸೇನರಿಗೆ ಆಹಾರದಾನಮಂ ಮಾಡಲಾದಾನಕ್ಕೊಡಂಬಟ್ಟ ಫಲದಿಂ ಹುಲಿ, ಹಂದಿ, ಕೋಡಗ, ಮುಂಗುಲಿಯೆಂಬೀ ನಾಲ್ಕುಂ ಅಭ್ಯುದಯ ಸುಖಪರಂಪರೆಯ ನೆಯ್ದಿ, ಆ ವಜ್ರಜಂಘಂ ಪರಂಪರೆಯಿಂ ಆದಿದೇವನಾದ ಭವದೊಳವರ್ಗೆ ಮಕ್ಕಳಾಗಿ ಮುಕ್ತರಾದರು. ಆ ಶ್ರೀಮತಿಯಪ್ಪಜೀವಂ ಅಭ್ಯುದಯ ಸುಖಪರಂಪರೆಯ ನೆಯ್ದುತ್ತಂ ಬಂದು ಶ್ರೇಯಾಂಸಕುಮಾರನಾಗಿ ಆ ಪುರುಪರಮೇಶ್ವರಂಗೆ ದಾನಮನಿತ್ತು ದಾನತೀರ್ಥಪ್ರವರ್ತಕನಾಗಿಯಾತನುಂ ಸಿದ್ಧನಾದನು. ಮತ್ತಮೀಭರತಕ್ಷೇತ್ರದೊಳಾರ್ಯಾಖಂಡದ ಮಲೆಯದೇಶದ ರತ್ನಸಂಚಯದರಸಂ ಶ್ರೀಷೇಣನಾತನರಸಿಯರು ಸಿಂಹನಂದಿತೆಯುಂ, ಅನಿಂದಿತೆಯುಮೆಂಬೀರ್ವರುಂ, ಮತ್ತೋರ್ವ ಸತ್ಯಭಾಮೆಯೆಂಬ ಬ್ರಾಹ್ಮಣಿತಿಯು ಎಂಬೀನಾಲ್ವರುಂ, ಅನನ್ತಗತಿಯುಂ, ಅರಿಂಜಯರುಮೆಂಬ ಚಾರಣ ಮುನಿಗಳಿಗೆ ದಾನಮನಿತ್ತರ್ದಾನ ದಾನಾನುಮೋದದ ಫಲದಿಂದಭ್ಯುದಯ ನಿಃಶ್ರೇಯಸ ಸುಖಭಾಗಿಗಳಾದರು.

ಕಂದ ॥ ಈ ಧೊರೆಯುತ್ತಮ ಪಾತ್ರ- ।
ಕ್ಕಾದರದಿಂದಿತ್ತ ದಾನಫಲಮೆನೆಯುಂ ದಾ- ॥
ನೋದಯಮಿಲ್ಲದ ನರಪಶು- ।
ಚಾದಿ ನೊಳೆಂ ಬಗೆದು ನೋಡೆ ಕುರಿಗಳಭಾವಂ ॥ ೧೧೮ ॥

ಈಧೊರೆಯು ಪಾತ್ರಮಂ ಪಡೆ- ।
ದಾದಂ ಬಡವಂ ನಿಧಾನಮಂ ಪಡೆದವೋಲು- ॥
ತ್ಪಾದಿಸಿ ಮುದಮಂ ಮನದೋ- ।
ಳ್ಸಾದರದಿಂದಿತ್ತ ದಾನಮದು ಕೇವಲಮೇ ॥ ೧೧೯ ॥

ಸುಕ್ಷೇತ್ರಮಾಗಿ ಕೆಲಸದ- ।
ಧ್ಯಕ್ಷತೆಯುಂ ಪಡೆದು ಪದದೀ ಮಳೆಕೊಳಲದರೊಳ್ ॥
ನಿಕ್ಷಿಪ್ತಮಾದ ಬೀಜಂ ।
ಸಾಕ್ಷಾತ್ಫಲಮೆಂತುಟಂತೆ ತದ್ದಾನಫಲಂ ॥ ೧೨೦ ॥

ವೃತ್ತ ॥ ಭರತಾದಿ ಕ್ಷಿತಿಪಾಲಕರ್ಗುದಿತ ಲೋಭಾಶಕ್ತಿಯಿಂದಾದುದೀ ।
ಸಿರಿ ಭಿಕ್ಷಾರ್ತಿಗಳಾರ್ಗೆಕೊಟ್ಟು ತಿರಿಯುತ್ತಂ ಬಂದಪರ್ಪುಣ್ಯದಿಂ- ॥
ದಿರವಿಂದಂ ಸಿರಿನಿಲ್ಕು ಮಿಲ್ಲದೊಡೆ ತಾಂ ಮುಂಪೋಕುಮೆಂದಂದು ಲೋ- ।
ಭರೆನಿಪ್ಪೆಗ್ಗಿಕೆ ಪಾತ್ರದಾನತೆ ಯಶಃಪುಣ್ಯಾರ್ಥಿಯಂ ತಾಳ್ದಿರೆ ॥ ೧೨೧ ॥

ಪರಮಾನಂದದಿ ವಜ್ರಜಂಘನರಪಂ ಸತ್ಪಾತ್ರದಾನಕ್ರಿಯಾ- ।
ನಿರತಂ ಸತ್ಪ್ರಿಯನುತ್ತರೋತ್ತರಕುರು ಶ್ರೀನಾಥನಾದಂದುತಂ ॥
ನರಪಾಲ ಪ್ರಿಯಕಾರಿಗಳ್ ನಕುಲಗೋಳಾಂಗೂಳಶಾರ್ದೂಳಸೂ- ।
ಕರಿಗಳ್ ದಾನದೊಡಂಬಡಿ ಪಡೆದುವಾ ಭೋಗೋರ್ವಿಯೋಳ್ಭೋಗಮಂ ॥ ೧೨೨ ॥

ಮಾಡಿದ ಪಾತ್ರದಾನವಿಭವಂ ವಿಭವಾಸ್ಪದ ಭೋಗಭೂಮಿಯೊಳ್ ।
ಮಾಡಿನಿವಾಸಮಂ ವಸಥಮಂತೆ ವಿಭೂಷಣತೂರ್ಯಭಾಜನೋ- ॥
ನ್ಮಿಡಸುದೀಪ್ತಿ ದೀಪ್ತಿವರಭಾಜನಪಾನದಕಲ್ಪಭೂರುಹಂ ।
ಮಾಡಿಮನೋನುರಾಗದೊದವಂ ಪ್ರಿಯಪಾರವಧೂವಿರಾಜಿತಂ ॥ ೧೨೩ ॥

ಕಂದ ॥ ರತಿವರ ರತಿವೇಗಾಹ್ವಯ ।
ಕೃತಸುಕೃತಕಪೋತಮಿಥುನಮುತ್ತಮಪಾತ್ರಂ ॥
ನುತದಾನದೊಡಂಬಡಿಕೆಯಿ- ।
ನತಿಶಯ ಸುಖನಿರತ ಖಚರದಂಪತಿಯಾದರ್ ॥ ೧೨೪ ॥
ಶ್ರೀಷೇಣಂ ಪ್ರಿಳಾಯುತ ।
ವೇಷಂಗತದೋಷ ನಿಖಿಳವಿಷಯುಜಸುಖಸಂ- ॥
ತೋಷಂ ಸುಖಾಮೃತಾರ್ಣವ ।
ತೋಷಾಕರನಾಗಿ ಪರಮಪದಮಂ ಪಡೆದಂ ॥ ೧೨೫ ॥

ವೃತ್ತ ॥ ಮುತ್ತಮಪಾತ್ರದಾನಫಲದಿಂ ನಿಜಕೀರ್ತಿವಿಳಾಸಮಾದಿಶಾ- ।
ಭಿತ್ತಿಗಳಂ ಪಳಂಚಲೆಯ ಸಾರಸುಖಪ್ರದ ಕಲ್ಪವೃಕ್ಷ ಸ- ॥
ದೃತ್ತವಿಭಾಸಿ ಭೋಗಭುವನಾಸ್ಪದ ದೇವವಿಳಾಸಿನಿ ಮಹೋ- ।
ದೃತ್ತಪಯೋದರಾವಸಥ ಮೋಕ್ಷಸುಖಂ ನಿಜಹಸ್ತಸಂಗತಂ ॥ ೧೨೬ ॥

ವಿತ್ತಮುದಾಗದಾದೊಡಮುದಾಗದುಚಿತಮುದಾದೊಡಂ ಗುಣೋ- ।
ದಾತ್ತಸಹಾಯ ಸಂಪದಮುದಾಗದ ವಾದೊಡಮಾಗದಲ್ತೆಮು- ॥
ತ್ತುತ್ತಮಪಾತ್ರಮಿನ್ತಿನಿದು ಮಾಗಳ್ಪುಪುಬಳಾಪಹಾರಿಯ- ।
ಪ್ಪುತ್ತಮದಾನದಿಂದ ಮದನನ್ತಚತುಷ್ಟಯಮಾಗದಿಕ್ಕುಮೇ ॥ ೧೨೭ ॥

ಕಂದ ॥ ಅದರಿಂದೀನಿರತಿಚಾರಾ- ।
ಸ್ಪದಮಾಗಿರಲನ್ನದಾನಮಂ ಮಾಳ್ಕೆಮಹಾ- ॥
ಭ್ಯುದಯಸುಖಮೂಲಮಂ ಶಿವ ।
ಪದಮಹೀನಿಕ್ಷಿಪ್ತ ಬೀಜಮಂ ಭವ್ಯಜನಂ ॥ ೧೨೮ ॥

ಮತ್ತಮೌಷಧದಾನದಿಂ ವೃಷಭಸೇನೆಯುಂ, ಶಾಸ್ತ್ರದಾನದಿಂ ಕೌಂಡೇಶನುಂ, ಆವಾಸದಾನದಿಂ ಸೂಕರನುಂ ದೃಷ್ಟಾಂತಮಾದರು.

ಶ್ಲೋಕ ॥ ಸೌರೂಪ್ಯಮಭಯಾದಾಹುರಾಹಾರೋದ್ಭೋಗವಾನ್ ಭವೇತ್ ।
ಆರೋಗ್ಯಮೌಷಧಾಜ್ಞೇಯಂ ಶ್ರುತಾತ್ಸ್ಯಾತ್‌ಶ್ರುತಕೇವಲಿ ॥
ಗೃಹಾಣಿನಾಮತಾನ್ಯೆವ ತಪೋರಾಶಿರ್ಭವಾದೃಶಃ ।
ಸಂಭಾವಯತಿಯೋ ನೈವ ಪಾವನೈಃ ಪಾದಪಾಂಶುಭಿಃ ॥
ದೇವದೀಷ್ಣ್ಯಮಿವಾರಾಧ್ಯ ಮದ್ಯಪ್ರಭೃತಿಯೋಗೃಹಂ ।
ಯೂಷ್ಮತ್ಪಾದರಜಃ ಪಾತಃ ಧೌತನಿಶ್ಯೇಷಕಲ್ಮಷಃ ॥

ಪಾಪಕರ್ಮವಿನಿರ್ಮುಕ್ತರುಂ, ಪುಣ್ಯಮೂರ್ತಿಗಳುಮಪ್ಪ ದಿವ್ಯತಪಸ್ವಿಗಳ ಶ್ರೀಪಾದಸಂಶ್ಲಿಷ್ಟಮಪ್ಪ ಧೂಳಿಯಾವನೋರ್ವನಂಗಣ ಸಂಗತಮಕ್ಕುಮಾಗೃಹಂ ದೇವತಾಗೃಹದಿಂದಧಿಕಮಾಯ್ತೆಂಬುದರ್ಥಂ ॥ ಮತ್ತಮಾ ತಪೋನಿಧಿಗಳ್ಗೆರಗಿ ಪೊಡಮಟ್ಟ ಫಲದಿಂದುತ್ತಮ ಕುಲಮಕ್ಕುಂ, ಭಿಕ್ಷಾಶುದ್ಧಿಯಿಂ ಲಕ್ಷಣಮಪ್ಪ ದಾನದಿಂದನೇಕ ಭೋಗೋಪಭೋಗಂಗಳುಮಂ ಉಪದೇಶಗೆಯ್ದುದರಿಂ ಪೂಜ್ಯತ್ವಮುಮಂ ಸರ್ವಾಂಗೋಪಾಂಗದ ಚೆಲ್ವುಮಂ, ಸ್ತವನಂಗೆಯ್ದುದರೆಂದಿಗು ದನ್ತಿದನ್ತಂಬರಂ ನಿಮಿರ್ದ ಶಶಧರಕೀರ್ತಿಯುಮನೆಯ್ದಿ ಕತಿಪಯ ಭವಂಗಳಿಂ ದೇವರೊಳಂ ಮನುಷ್ಯರೊಳಧಿಕ ಸುಖಮನನುಭವಿಸಿ ತಪದಿಂದಪವರ್ಗ ಸುಖಿಗಳಕ್ಕುಂ ॥

## ಸೂತ್ರಂ॥ ಸಪ್ತಶೀಲಾನಿ ॥ ೧೮ ॥

ಗುಣವ್ರತಮೂರು, ಶಿಕ್ಷಾವ್ರತನಾಲ್ಕು ಈ ೭ ಸಪ್ತಶೀಲಂಗಳು ಎಂದಿಂತು ಅತಿಥಿ ಸಂವಿಭಾಗ ಎಂಬೀನಾಲ್ಕನೆಯ ಶಿಕ್ಷಾವ್ರತಂ ಪೇಳಲ್ಪಟ್ಟಿತು. ಇನ್ನು ಹನ್ನೆರಡು ತೆರದವ್ರತಂಗಳತಿಚಾರಂಗಳೆಂತೆನೆ—

## ಸೂತ್ರಂ॥ ವ್ರತಶೀಲೇಷು ಪಂಚಪಂಚಾತಿಚಾರಾಃ ॥ ೧೯ ॥

ಟಾಃ—ಅವುಗಳು ಯಾವ್ಯಾವುಗಳೆಂದರೆ—೧ ನೇಣ್ಮೊದಲಾದುವ ( ಹಗ್ಗ ) ರಿಂದಾಳಿಸಿ ಕಟ್ಟುವಬಂಧಮುಂ, ೨ ಚಂಮಟಗೆ ಮೊದಲಾದವರಿಂಬಡಿವವಧೆಯುಂ, ೩ ಕಿವಿ ಮೂಗು ಮೊದಲಾದವಂ ಕೊರೆಯುವ ಅಂಗಚ್ಛೇದಮುಂ, ೪ ಅಧಿಕವಾದ ಹೊರೆಯನ್ನು ಹೊರಿಸುವ ಅತಿಭಾರಾರೋಹಣಮುಂ, ೫ ಉಣ್ಬ ನೀರುಕುಡಿವ ಪೊತ್ತರೊಳು ಉಣಿಸುಮಂ ನೀರುಮಂ ಕುಡಿಸದಂನ್ನಪಾನ ನಿರೋಧಮುಮೆಂದಿವಯ್ದು ಅಹಿಂಸಾವ್ರತದ ಅತಿಚಾರಂಗಳು, ೧ ಮಿಥ್ಯಾತ್ವವನುಪದೇಶಂಗೆಯ್ವ ಮಿಥ್ಯೋಪದೇಶಮುಂ, ೨ ಸ್ತ್ರೀಪುರುಷರೇಕಾಂತಮಂ ಪ್ರಕಟಸುವ ರಹೋಭ್ಯಾಖ್ಯಾನಮುಂ, ೩ ಕಳ್ಳಪತ್ರಕರಾರುಗಳನ್ನು ಬರೆಯುವ ಕೂಟಲೇಖಕ್ರಿಯೆಯುಂ, ೪ ( ವಿಶ್ವಾಸದಿಂದ ) ಬಯ್ಕೆಕೊಟ್ಟರ್ಥಮಂ ಮರಸಿಕೊಳ್ವನ್ಯಾಸಾಪಹಾರಮುಮಂ, ೫ ಅಂಗಚೇಷ್ಟೆಮೊದಲಾದವರಿಂ ಪೆರರ ಮಂತಣಮಂ ಪ್ರಕಟಸುವ ಸಾಕಾರಮಂತ್ರಭೇದಮುಂ, ಎಂದಿವಯ್ದುಂ ಅನೃತದಣುವ್ರತದತೀಚಾರಂಗಳು ॥ ೨ ॥ ೧ ಕಳುವದಿಲ್ಲವೆಂದು ಕಳಿ

ಸುವ ಸ್ತೇನಪ್ರಯೋಗಮುಂ, ೨ ಕದ್ದು ತಂದವುಗಳನ್ನು ಕ್ರಯಕ್ಕೆ ತೆಗೆದುಕೊಳ್ಳುವ ತದಾಹೃತಾರಮುಂ, ೩ ರಾಜ್ಯಪಲ್ಲಟದಿಂ ಬಂದುದಂ ಖರೀದಿಗೆ ತೆಗೆದುಕೊಳ್ಳುವ ವಿರುದ್ಧ ರಾಜ್ಯಾತಿಕ್ರಮಮುಂ, ೪ ಹಿರಿಯಕೊಳಗ ತೊಲೆನೊದಲಾದವುಗಳಿಂದ ಮಾರುಗೊಂಡು ಕಮ್ಮಿಯವರಿಂ ಮಾರುವರಿಂ ಹಿನಾಧಿಕಮಾನೋನ್ಮಾನಮುಂ, ೫ ತುಪ್ಪದೊಳೆಂಣೆಯಂ ಉಪ್ಪಿನೊಳ್ಮಣ್ಣಂ ಮೊದಲಾದುವಂ ಬೆರಸಿ ಮಾರುವ ಪ್ರತಿರೂಪಕ ವ್ಯವಹಾರಮುಮೆಂದಿವಯ್ದುಂ ಅಚೌರ್ಯವ್ರತದತಿಚಾರಗಳು ॥ ೩ ॥ ೧ ಅನ್ಯರಿಗೆ ಮಾಡುವ ಮದುವೆಯಂ ಮೇಲಾಡಿ ತನಗೆ ಮಾಡಿಕೊಳ್ಳುವದನ್ಯವಿವಾಹಕರಣಂ, ೨ ಯೋನಿಮೋಹನಂಗಳೊಳಲ್ಲದೆ ಪೆರತೊಂದು ಪ್ರದೇಶಗೊಳು ಕ್ರೀಡಿಸುವ ಅನಂಗಕ್ರೀಡೆಯುಂ, ೩ ಚುಂಬನಾದಿ ವಿಟವಿಕಾರಂ ಮಾಡುವ ವಿಟತ್ವಮುಂ, ೪ ಯಾವಾಗಲೂ ಕಾಮರಾಗದೊಳಿಪ್ಪುದುಂ ತಣಿವಿಲ್ಲದುದುಂ, ವಿಪುಳ ತೃಷೆಯೆಂಬುದುಂ, ೫ ಇತ್ವರಿಕೆಯೆಂಬಳು ಬಿಸುಡುಗಾರ್ತಿ ಅಂತಪ್ಪವರೊಳು ಪೋಪುದು ಇತ್ವರಿಕಾಗಮನಮೆಂದಿವಯ್ದುಂ ಸ್ವದಾರಸಂತೋಷವ್ರತದತಿಚಾರಗಳಂತೆಯುಂ ಹೇಳಲ್ಪಟ್ಟಿತು ॥ ೪ ॥

ಉಕ್ತಂಚ ॥ ಅನ್ಯವಿವಾಹಕರಣಾನಂಗಕ್ರೀಡಾ ವಿಟತ್ವವಿಪುಲ ತೃಷ್ಣಾ ।
ಇತ್ವರಿಕಾಗಮನಂ ಚಾಸ್ಮರಸ್ಯ ಪಂಚವ್ಯತೀಚಾರಾ: ॥

೧ ಖರಮಹಿಷಾದಿ ಪ್ರಾಣಿಗಳ ಶ್ರಮಮನರಿಯದೆ ನಿಲಿಸದೆ ಪೊರೆಯ ನಿಳಿಪದೆ ಬಡಿಯುತ್ತಂ ಗೆಂಟುಮೊಯ್ವ ಅತಿವಾಹನಮುಂ, ೨ ಸಂಗ್ರಹಂಗೆಯ್ದ ಧಾನ್ಯಂಗಳೊಳು ತ್ರಸಂ ಪುಟ್ಟುವನ್ನಂ ಬಚ್ಚಿಡುವುದು ಅತಿ ಸಂಗ್ರಹವೆಂಬುದು, ೩ ಅನ್ಯರೈಶ್ವರ್ಯಂಗಳಂ ಕಂಡು ಇದಾವುದು ಪಿರಿದೆನ್ನದೇ ಎಂದು ಚೋದ್ಯಂಬಡುವದು ಅತಿವಿಸ್ಮಯಂ, ೪ ದಾನಪೂಜೆಗಳಿಗೇನುಮಂ ಕೊಡದತಿಲೋಭಮುಂ, ೫ ತನಗಶಕ್ಯವಾದ ಕಾರ್ಯಂಗಳನೆತ್ತಿಡುವುದು ಅತಿಭಾರವಾಹನಮೆಂಬುದು, ಇಂತಿವಯ್ದುಂ ಪಂಚಾಣುವ್ರತದ ಅತಿಚಾರಂಗಳು ॥

ಇನ್ನು ಗುಣವ್ರತದ ಅತಿಚಾರಗಳೆಂತೆನೆ—೧ ಬೆಟ್ಟಘಟ್ಟಂಗಳು ಮೊದಲಾದವುಗಳನ್ನೇರುವ ಊರ್ಧ್ವಾತಿಕ್ರಮಣಮುಂ, ೨ ಭಾವಿ ಮೊದಲಾದವುಗಳನ್ನು ಇಳಿಯುವ ಅಧೋತಿಕ್ರಮಮುಂ, ೩ ಹಳ್ಳಕೊಳ್ಳ ಮೊದಲಾದುವಂ ಪುಗುವ ತಿರ್ಯಗ್ಗತಿಕ್ರಮಮುಂ, ೪ ಇನಿತುಗಾವುದಂ ಪೋಪೆನೆಂದು ಪವಣಿಸಿ ಲಾಭಕಾರಣಮಾಗಿ ಅಲ್ಲಿಂದತ್ತ ಅಧಿಕಮಂಬಯಸುವ ಕ್ಷೇತ್ರವೃದ್ಧಿಯುಂ, ೫ ಕೈಕೊಂಡ ಮೇರೆಯಂ ಮರೆಯುವ ಸ್ಮೃತ್ಯಂತರಾದಾನಮುಂ, ಎಂದಿವಯ್ದುಂ ದಿಗ್ವಿರತಿ ಎಂಬ ಮೊದಲ ಗುಣವ್ರತದತಿಚಾರಂಗಳು ॥ ೧ ॥ ೧ ಮಾಡಿದ ಮೇರೆಯಿಂದ ಪೊರಗಿರ್ದವಂ ತರಿಸುವಾನಯನಮುಂ, ೨ ತಾಂ ಮಾಡಿದ ಮೇರೆಯಿಂದತ್ತಲು ಭಂಟರನಟ್ಟಿತರಿಸುವ ಪ್ರೇಷ್ಯಪ್ರಯೋಗಮುಂ, ೩ ಮೇರೆಯಿಂದೊಳಗಿರ್ದು ಧ್ವನಿಯಿಂ ತೋರ್ಪ ಶಬ್ದಾನುಪಾತಮುಂ, ೪ ಮೇರೆಯಿಂದೊಳಗಿದ್ದು ಹೆಂಟೆಕಲ್ಲು ಮೊದಲಾದವುಗಳಿಂದಿಡುವುದು ಪುದ್ಗಲಕ್ಷೇಪಮುಂ, ೫ ಮೇರೆಯಿಂದೊಳಗಿರ್ದು ರೂಪನ್ನು ತೋರಿಸಿ ಹೊರಗಿರ್ದವರನ್ನು ಬರಮಾಡಿಕೊಳ್ಳುವ ರೂಪಾನುಪಾತಮುಂ, ಎಂದಿವಯ್ದುಂ ದೇಶವಿರತಿಯೆಂಬೆರಡನೆಯ ಗುಣವ್ರತದತಿಚಾರಂಗಳು ॥ ೧ ಚಾರಿತ್ರಮೋಹನೀ

ಯದುದಯದಿಂ ನೆರಪಲ್ಪಟ್ಟ ರಾಗವೃದ್ಧಿಯಿಂದ ನಗೆಯೊಳ್ಕೂಡಿದ ಸಭಾಯೋಗ್ಯಮಲ್ಲದುದಂ ನುಡಿಯುವದನ್ನೇ ಸ್ವರೂಪವಾಗುಳ್ಳ ಕೌತ್ಕುಚ್ಯಮುಂ, ೨ ಪ್ರಯೋಜನಮಿಲ್ಲದೆ ಹಲವಂ ಗಳಪುವ ಮೌಖರಿಯಮುಂ, ೩ ಕಾದಂಬರಿ ವಾಚ್ಯಾಯನ ದೇವಾಸುರಂ ರಾಮಾಯಣ ಮೊದಲಾದ ಪಾಪಸೂತ್ರಂಗಳಂ ಮನದಿಂ ಚಿಂತಿಸುವುದುಂ ವಚನದಿಂ ಅನ್ಯರಿಗೆ ಹೇಳುವದುಂ, ೪ ಸಚೇತಚಿಂತಿತಂಗಳಪ್ಪ ಪತ್ರಪುಷ್ಪಫಲಾದಿಗಳಂ ಬರಿದೆ ಮುರಿಯುವುದೆಂಬ ಸಮೀಕ್ಷ್ಯಾಧಿಕರಣಮುಂ, ೫ ಉಪಭೋಗ ಪರಿಭೋಗಾನರ್ಥಕ್ಯಮೆಂಬೈದುಂ ಅನರ್ಥದಂಡವಿರತಿಯೆಂಬ ಮೂರನೆಯ ಗುಣವ್ರತದ ಅತಿಚಾರಂಗಳು ||

ಇನ್ನು ಶಿಕ್ಷಾವ್ರತದ ಅತಿಚಾರಗಳೆಂತೆನೆ—೧ ದೇವತಾಸ್ತವನಮಂ ಮಾಡುತ್ತಂ ಶರೀರದಡಕಮಿಲ್ಲದ ಕಾಯಪ್ರಣೀಧಾನವುಂ, ೨ ವಚನದಡಕಮಿಲ್ಲದ ವಾಕ್ಪ್ರಣಿಧಾನಮುಂ, ೩ ಮನದಡಕಮಿಲ್ಲದ ಮನೋದುಃಪ್ರಣಿಧಾನಮುಂ, ೪ ಅರ್ಥಿಯಿಲ್ಲದೆ ಮಾಡುವ ಅನಾದರಮುಂ, ೫ ಮರವೆಯಿಂದ ಹೇಳಿದ್ದನ್ನೇ ಹೇಳುವ ಸ್ಮೃತ್ಯನುಪಸ್ಥಾನಮುಮೆಂದಿವಯ್ದುಂ ಸಾಮಾಯಿಕವೆಂಬ ಮೊದಲ ಶಿಕ್ಷಾವ್ರತದ ಅತಿಚಾರಂಗಳು || ೧ ಉಪವಾಸದದಿವಸಂ ನೋಡದೆ ಶುದ್ಧಮಲ್ಲದೆಡೆಯೊಳು ಮಲಮೂತ್ರಂ ಮೊದಲಾದುವಂ ಪರಿಹರಿಸುವುದು ಪ್ರತ್ಯಕ್ಷಿತಾಪ್ರವೇದಿತೋತ್ಸರ್ಗಮುಂ, ೨ ನೋಡದೆ ಪರಿಲೇಖಿಸದೆ ಉಪಕರಣಂಗಳನ್ನು ಕೊಳ್ವ ಪ್ರತ್ಯವೇಕ್ಷಿತಾಪ್ರಮಾರ್ಜಿತಾದಾನಮುಂ, ೩ ನೋಡದೆ ಪರಿಲೇಖಿಸದೆ ತನ್ನ ಪಟ್ಟರ್ವ ಸಂಸ್ತರಮನಿಕ್ಕುವ ಪ್ರತ್ಯವೇಕ್ಷಿತಾಪ್ರಮಾರ್ಜಿತಾ ಸಂಸ್ತರೋಪಕ್ರಮಣಮುಂ, ೪ ಉಪವಾಸದೊಳರ್ಥಿಯಿಲ್ಲದ ಅನಾದರಮುಂ, ೫ ಶ್ರಮದಿಂ ಮೈಯ್ಯರಿಯದ ಸ್ಮೃತ್ಯನುಪಸ್ಥಾಪನಮುಮೆಂದಿವಯ್ದುಂ, ಪ್ರೋಷಧೋಪವಾಸವೆಂಬೆರಡನೆಯ ಶಿಕ್ಷಾವ್ರತದ ಅತಿಚಾರಂಗಳು || ೧ ಹಸಿಯುವಪ್ಪವಸ್ತುವನುಣ್ಬುದೆಂಬ ಸಚಿತ್ತಾಹಾರಮುಂ, ೨ ಹಸಿಯುಪ್ಪವಸ್ತುವಂ ಪೊರ್ದಿದುವನುಣ್ಬುದೆಂಬ ಸಚಿತ್ತಸಂಬಂಧಾಹಾರಮುಂ, ೩ ಹಸಿಯು ವಸ್ತುಗಳಿಂದ ಕೂಡಿರುವದನ್ನು ಉಣ್ಣುವ ಸಚಿತ್ತಸಂಮಿಶ್ರಾಹಾರಮುಂ, ೪ ತೂವಂಬಿಲಂ ಮೊದಲಾದುದನ್ನೆ ಉಣ್ಣುವ ಅಭಿಷವಾಹಾರಮುಂ, ಕೊಳ್ಗಂಜಿಗೊಂಡುಮನೊಳ್ಳಕ್ಕಿವೋದದುಮಂ ಉಣ್ಬುದೆಂಬದಪಕ್ವಾಹಾರಮುಮೆಂದಿವಯ್ದುಂ ಉಪಭೋಗಪರಿಮಾಣಮೆಂಬ ಮೂರನೆಯ ಶಿಕ್ಷಾವ್ರತದತಿಚಾರಂಗಳು || ೧ ಬಾಳೆಯಲೆ ಮೊದಲಾದವರೊಳಿಕ್ಕಿ ತಂದೀವ ಸಚಿತ್ತನಿಕ್ಷೇಪಮುಂ, ೨ ಬಾಳೆಯಲೆ ಮೊದಲಾದವರಿಂ ಮುಚಿ ತಂದೀವುದು ಸಚಿತ್ತಾಭಿದಾನಮುಂ, ೩ ನಿಲಿಸಿ ತನ್ನಿಮೆಂದು ತನ್ನ ಶರೀರಸಂಬಂಧಮಲ್ಲದವರ್ಗೆ ಪೇಳ್ವಪರವ್ಯಪದೇಶಮುಂ, ೪ ಪೆರರ್ಮಾಡಿದುದಂ ನೋಡಿ ಮಾಡುವ ಮಾತ್ಸರ್ಯವುಂ, ೫ ಹೊತ್ತುದಪ್ಪಿಸಿ ಮನೆಯ ಬಾಗಿಲೊಳು ನಿಂತಿರ್ದು ನೋಡುವುದು ಕಾಲಾತಿಕ್ರಮುಮೆಂಬಿವಯ್ದುಂ, ಅತಿಥಿಸಂವಿಭಾಗವೆಂಬ ನಾಲ್ಕನೇ ಶಿಕ್ಷಾವ್ರತದ ಅತೀಚಾರಂಗಳು||

ಶ್ಲೋಕಃ— ಗೃಹಕಾರ್ಯಾಣಿ ಸರ್ವಾಣಿ ದೃಷ್ಟಿಪೂತಾನಿ ಕಾರಯೇತ್ ||
ದ್ರವ ದ್ರವ್ಯಾಣಿ ಸರ್ವಾಣಿ ಪಟಪೂತಾನಿ ಕಾರಯೇತ್ || ೧ ||
ಆಸನಂ ಶಯನಂ ಮಾರ್ಗಂ ಮನಮನ್ಯಚ್ಚ ವಸ್ತುಯತ್ ||
ಅದೃಷ್ಟಂತ ನ ಸೇವೇತು ಯಥಾಕಾಲಂ ಭಜಂ ನಪಿ || ೨ ||

ಶ್ಲೋಕ—ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಪಿಬೇಜ್ಜಲಂ ॥
ಸತ್ಯಪೂತಂ ವದೇದ್ವಾಕ್ಯಂ ಮನಃಪೂತಂ ಸಮಾಚರೇತ್ ॥ ೩ ॥
ಮದ್ಯಾದಿ ಸ್ವಾದಿಗೇಹೇಷು ಪಾನಮನ್ನಂ ಚ ನಾಚರೇತ್ ॥
ತದಮತ್ರಾದಿ ಸಂಪರ್ಕಂ ನ ಕುರ್ವೀತ ಕದಾಚನ ॥ ೪ ॥
ಕುರ್ವನ್ ನ ವ್ರತಭಿಸ್ಸಾರ್ಧಂ ಸಂಸರ್ಗಂ ಭೋಜನಾಧಿಕಂ ॥
ಪ್ರಾಪ್ನೋತಿ ವಾಚ್ಯತಾಮತ್ರ ಪರತ್ರಂ ಚ ನ ಸತ್ಫಲಂ ॥ ೫ ॥

ಕಂದ ॥ ವ್ರತಹೀನರ ಸಂಸರ್ಗಂ ।
ವ್ರತಹೀನರ ಮನೆಯ ಭಾಂಡಭಾಜನಮಿಶ್ರಂ ॥
ವ್ರತಹೀನರಿತ್ತ ಭುಕ್ತಂ ।
ವ್ರತಹೀನರ ಪಂಕ್ತಿ ಉಣಿಸದಾಗದಮೋಘಂ ॥ ೧೯ ॥

ಶ್ಲೋಕ—ದೃತಿಪಾಯೇಷು ಪಾನೀಯಂ ಸ್ನೇಹಂ ಚ ಕುಡಪಾದಿಷು ॥
ವ್ರತಸ್ಥೋ ವರ್ಜಯೇನ್ನಿತ್ಯಂ ಯೋಷಿತಶ್ಚ ವ್ರತೋರ್ಜಿತಾ: ॥ ೬ ॥
ವತ್ಸೋತ್ಪತ್ತ್ಯೈ ಸಮಾರಭ್ಯಃ ಪಕ್ಷಾ ಪ್ರಾಗ್ದಗ್ಧದುಗ್ಧಕಂ ॥
ತದ್ದಾದ್ಯಾದಿ ಪರಿತ್ಯಾಜ್ಯ ಮಾಜಂಗವ್ಯಂ ಚ ಮಾಹಿಷಂ ॥ ೭ ॥
ನವನೀತಂ ಪ್ರಸೂತಾನಿ ಶೃಂಗವೇರಮಸಂಸ್ಕೃತಂ ॥
ಪಲಾಂಡುಲಶುಣಂ ತ್ಯಾಜ್ಯ ಮೂಲಕಂ ಚ ಕಳಿಂಗಕಂ ॥ ೮ ॥

## ಸೂತ್ರಂ ॥ ಮೌನಂ ಸಪ್ತಸ್ಥಾನಂ ॥ ೨೦ ॥

ಶ್ಲೋಕ—ಹದನಂ ಮೂತ್ರಣಂ ಸ್ನಾನಂ ಪೂಜನಂ ಪರಮೇಷ್ಠಿನಂ ॥
ಭೋಜನಂ ಸುರತಂ ವಮನಂ ಸ್ತೋತ್ರಂ ಕುರ್ಯಾನ್ಮೌನಸಮನ್ವಿತಂ ॥೯॥
ವೃಷ್ಟವಾಕ್ಸುರನರೇಂದ್ರಸುಖೇಶೋ ವಲ್ಲಭಶ್ಚ ಕವಿತಾದಿ ಗುಣಾನಾಂ ॥
ಕೇವಲದ್ಯುಮಣಿಬೋಧಿತ ಲೋಕೋ ಮೌನಸುವ್ರತಫಲೇನ ನರಸ್ಯಾತ್॥೧೦॥
ದೂರಃ ಕಳತ್ರ ಪುತ್ರಾದಿರ್ವರ್ಜನಾದಿ ವಿವರ್ಜಿತಃ ॥
ಮೌನಹೀನೋ ಭವೇನ್ನಿತ್ಯಂ ಘೋರದುಃಖೈಕಸಾಗರ: ॥ ೧೧ ॥
ಅತಿಪ್ರಸಂಗದಹಾನಾಯ ತಪಸ: ಪ್ರವೃದ್ಧಯೇ ॥
ಅಂತರಾಯಸ್ಕೃತಾಸದ್ಭಿಃ ವ್ರತಬೀಜವ್ರತಿಕ್ರಿಯಾ ॥ ೧೨ ॥

## ಸೂತ್ರಂ ॥ ಅಂತರಾಯಂ ಚ ॥ ೨೧ ॥

ತಾಃ—ಅಂತರಾಯಗಳು ಯಾವವೆಂದರೆ—ಉಣ್ಣುತಿರ್ದು ಮಾಂಸಮಂ ಕಂಡಡಂ ಕೇಳ್ದಡಂ, ಕೀವಂ ಕಂಡಡಂ ಕೇಳ್ದಡಂ, ರಕ್ತಮಂ ಕಂಡಡಂ ಕೇಳ್ದಡಂ, ಅಗಲೋಳ್ಸತ್ತಪ್ರಾಣಿಯಂ ಕಂಡಡಂ ಕೇಳ್ದಡಂ, ತೊರೆದಾಹಾರಮನುಣುತಂ ನೆನೆದೊಡಂ ಮುಟ್ಟುಪಡವಂ ಮಾಳ್ಪದು; ಮತ್ತಮಸ್ತ್ರ್ಯಾದಿ ವಿಕ್ರೃತಮಪ್ಪನ್ನಪಾನಾದಿಗಳ ಮೆತ್ತಲಾನುಮರಿಯದುಂಡಡೆ ಉಂಡ ಬಳಿಕಂ

ಕೇಳ್ದಡಂ ಆ ಕ್ಷಣದೊಳ್ ವಮನಂ ಮಾಡಿ ಸ್ನಾನಮಂ ಮಾಳ್ಪುದುಂ, ಮೃತ್ತಿಕಾಭಾಂಡಮಂ ಬಿಸುಡುವದು, ಕಂಚು ಮೊದಲಾದ ಭಾಜನಂಗಳಂ ಕಂಚುಗಾರರಿಂ ಭಸ್ಮಾಗ್ನಿಯಿಂ ಶುದ್ಧಂ ಮಾಡಿಸಿ ಚೈತ್ಯಾಲಯಕ್ಕೆ ಹೋಗಿ ಗುರುಗಳಲ್ಲಿ ಪ್ರಾಯಶ್ಚಿತ್ತಮಂ ಕೈಕೊಳ್ಳುವುದು; ಮತ್ತಂ ಮುಗುರ್ದಂತಮಂ ಕಂಡೊಡಂ ಮುಟ್ಟುಪಡಮಂ ಪ್ರಾಯಶ್ಚಿತ್ತಮಂ ಮಾಳ್ಪುದು, ಚಿಪ್ಪು ಗುಳ್ಳೆ ಕವಡಿ ಕೂದಲು ಮೊದಲಾದುವಂ ಕಂಡಡೆ ನೀರುಮುಕ್ಕಳಿಸಿ ಉಣ್ಬುದು, ಪೇಸುವಡೆ (ಹೇಸಿಗೆಯಾದರೆ) ಅಂತರಾಯವನ್ನು ಮಾಡುವದು ॥

ಶ್ಲೋಕ॥ ಅಸ್ಪೃಶ್ಯಾಂಗವಿಲೋಕ್ಯಪಿ ತ್ವ ದ್ವಚಶ್ರವಣಗೋಚರೇಃ ॥
ಭೋಜನಂ ಪರಿಹರ್ತವ್ಯಂ ದುರ್ದರ್ಶಶ್ರವಣಾದಪಿ ॥ ೧೩ ॥

ಕಂದ ॥ ಹೋಸಂ ಮಾಡದವಂಗ- ।
ಪ್ರಾಸುಕುಮಂ ಕೊಳ್ವಗೆ ಪರಸಮಯಿಗಳಾ- ॥
ವಾಸದೊಳಿಪ್ಪಂಗರ್ಹ- ।
ತ್ಯಾಸನದೊಳ್ಪೇಳ್ದ ಮುಟ್ಟುಪಡಂ ನಡೆದವುದೇ ॥ ೧೩೦ ॥

ಶ್ಲೋಕ॥ ಅಹಿಂಸಾವ್ರತರಕ್ಷಾರ್ಥಂ ಮೂಲವ್ರತವಿಶುದ್ಧಯೇ ॥
ನಿಶಾಯಾಂ ವರ್ಜಯೇದ್ಭುಕ್ತಿಂ ಮಿಹಾಮಿತ್ರ ಚ ದುಃಖದಾ ॥ ೧೪ ॥

ಆರನೇ ಅಣುವ್ರತಮೆನಿಸಿದ ಹೋಸಮನುಳ್ಳವನಲ್ಲದೆ ವ್ರತೀಕನಲ್ಲೆಂಬುದರ್ಥವು॥ ಇಲ್ಲಿಗೆ ಪ್ರಸ್ತುತ ಶ್ಲೋಕಂಗಳು ॥

ಪಿಪೀಲಿಕಾದಯೋ ಜೀವಾ ಭಕ್ಷಂ ತದಿಪಿಕಾ ನಿಶಿ ॥
ಗಿಲ್ಪಂತೇ ಭೋಕ್ತೃಭಿಃ ಪುಂಭಿಃ ಸ್ತೇ ಪುನ: ಕಬಲೈ ಸಮ: ॥ ೧೫ ॥
ಸ್ಫುಟತಾಂಘ್ರಿಕರಾದೀನಾಂ ಏಕಾಷ್ಟತೃಣವಾಹಕ: ॥
ಕುಚೇಲಾ ದುಃಕುಲಾ ಸಂತಿ ತೇ ರಾತ್ರ್ಯಾಹಾರಸೇವನಾತ್ ॥ ೧೬ ॥
ನಿಜಕುಲೈಕಮಂಡನಂ ತ್ರಿಜಗಧೀಶಸಂಪದಂ ॥
ಭಜತಿ ಯಃಸ್ವಭಾವತಃ ತ್ಯಜತಿನಕ್ತಭೋಜನಂ ॥ ೧೭ ॥

## ಸೂತ್ರಂ॥ ಶ್ರಾವಕಧರ್ಮಶ್ಚತುರ್ವಿಧಃ ॥ ೨೨ ॥

ತಾ:—ದಾನ, ಪೂಜೆ, ಶೀಲ, ಉಪವಾಸಗಳೆಂದು ನಾಲ್ಕುಂ ಶ್ರಾವಕರ ಧರ್ಮಂಗಳು॥ ಅದರಲ್ಲಿ ದಾನವೆನ್ನುವದು ಆಹಾರದಾನಂ, ಅಭಯದಾನಂ, ಔಷಧದಾನಂ, ಶಾಸ್ತ್ರದಾನವೆಂದು ೪ ಭೇದವಾಗುವದು ॥ ೧ ॥ ದೇವ, ಗುರು, ಶಾಸ್ತ್ರಗಳನ್ನು ಪೂಜಿಸುವದು ಪೂಜೆಯೆನಿಸುವದು ॥ ೨ ॥ ತಾನು ಕೈಕೊಂಡ ವ್ರತಂಗಳನ್ನು ರಕ್ಷಿಸುವುದು ಶೀಲವೆನಿಸುವದು ॥ ೩ ॥ ಅಷ್ಟಮಿ, ಚತುರ್ದಶಿ, ಪಂಚಮಿಗಳುಪವಾಸಂ, ಮೇಣೇಕಠಾಣಂ, ಮೇಣೇಕಭುಕ್ತಂ ಅಥವಾ ವಸ್ತುಪ್ರಮಾಣಮೆಂಬಿವುಗಳನ್ನು ತನ್ನ ಶಕ್ತಿಗೆ ತಕ್ಕ ಹಾಗೆ ಮಾಡುವದು ಉಪವಾಸವೆನಿಸುವದು ॥ ೪ ॥

ಕಂದ ॥ ಜೈನರ ನೆರೆ ಜೈನರ ಕೆಳೆ ।
ಜೈನರ ವ್ರತನಿಷ್ಠೆ ಜೈನಧರ್ಮಶ್ರವಣಂ ॥
ಜೈನಪ್ರತಿಮಾರಾಧನೆ ।
ಜೈನಂಗಿವು ಕೂಡಿಬಂದೊಡವನೆ ಕೃತಾರ್ಥಂ ॥ ೧೩೧ ॥

ಸೂತ್ರಂ॥ ಜೈನಾಶ್ರಮಾಶ್ಚ ॥ ೨೩ ॥

ತಾ:—ಬ್ರಹ್ಮಚಾರಿಯುಂ, ಗೃಹಸ್ಥನುಂ, ವಾನಪ್ರಸ್ಥನುಂ, ಭಿಕ್ಷುಕನುಂ ಎಂದು ಜೈನಾಶ್ರಮಗಳು ನಾಲ್ಕು ಪ್ರಕಾರವಾಗುವವು ॥ ೪ ॥ ಅದರಲ್ಲಿ ವಾನಪ್ರಸ್ಥಂಗೆ ವಿಶೇಷ ವ್ಯಾಖ್ಯಾನವಿಲ್ಲದ್ದರಿಂದ ಮುಂಚೆ ಹೇಳಿದರು. ವಾನಪ್ರಸ್ಥನೆಂಬುವನು ಜಿನರೂಪವನ್ನು ಧರಿಸದೆ ಖಂಡವಸ್ತ್ರವನ್ನು ಧರಿಸಿ ನಿರತಿಶಯತಪದೋಳ್ ನೆಗಳುವಂಥವನು ವಾನಪ್ರಸ್ಥನೆಂಬುವನಾಗುವನು.

ಸೂತ್ರಂ॥ ತತ್ರ ಬ್ರಹ್ಮಚಾರಿಣಃ ಪಂಚವಿಧಃ ॥ ೨೪ ॥

ತಾ:—೧ ಉಪನಯನಬ್ರಹ್ಮಚಾರಿಯುಂ, ೨ ಅವಲಂಬನಬ್ರಹ್ಮಚಾರಿಯುಂ, ೩ ಅದೀಕ್ಷಾಬ್ರಹ್ಮಚಾರಿಯುಂ, ೪ ಗೂಢಬ್ರಹ್ಮಚಾರಿಯುಂ, ೫ ನೈಷ್ಠಿಕಬ್ರಹ್ಮಚಾರಿಯುಮೆಂದು ಐದು ವಿಕಲ್ಪವಾಗುವರು. ಅವರಲ್ಲಿ ಗಣಧರ ಸೂತ್ರಮಂ ಧರಿಸಿದವರು ಉಪಾಸಕಾಧ್ಯಯನಾದಿ ಸಮಸ್ತ ಶಾಸ್ತ್ರಂಗಳನ್ನೋದಿ ಬಳಿಕ ಗೃಹಸ್ಥಧರ್ಮದೊಳಗಿರುವವರುಗಳು ಉಪನಯನ ಬ್ರಹ್ಮಚಾರಿಗಳು ॥ ೧ ॥ ಕ್ಷುಲ್ಲಕರೂಪದಿಂದ ಆಗಮಾಭ್ಯಾಸಮಾಡಿ ಬಳಿಕ ಗೃಹಸ್ಥಧರ್ಮಾನುಷ್ಠಾನದಲ್ಲಿ ನಡೆಯುವವರುಗಳು ಅವಲಂಬನಬ್ರಹ್ಮಚಾರಿಗಳು ॥ ೨ ॥ ವ್ರತಚಿಹ್ನೆಗಳನ್ನು ಧರಿಸದೆ ಸಮಸ್ತ ಶಾಸ್ತ್ರಗಳನ್ನೋದಿ ಅನಂತರ ಗೃಹಸ್ಥಾವಾಸದೊಳಿರುವವರುಗಳು ಅದೀಕ್ಷಾಬ್ರಹ್ಮಚಾರಿಗಳು ॥ ೩ ॥ ಕುಮಾರಶ್ರಮಣತ್ವದಿಂ ಸಕಲಶಾಸ್ತ್ರಪಾರಂಗತರಾಗಿ ಬಂಧುಗಳ ದೆಸೆಯಿಂದಲಾಗಲಿ, ಪರೀಷಹಂಗಳಿಂದಾಗಲಿ, ನೃಪತಿಗಳಿಂದಾಗಲಿ, ಸಂಯಮಪರಿಚ್ಯುತರಾಗಿ ಜಿನರೂಪವನ್ನು ಬಿಟ್ಟು ಗೇಹಾಶ್ರಮನಿರತರಾಗಿರ್ಪವರ್ಗಳು ಗೂಢಬ್ರಹ್ಮಚಾರಿಗಳು ॥ ೪ ॥ ಸಮುದಿಗತ ಶಿಖಾಲಕ್ಷಿತ ಶಿರೋಲಿಂಗಮುಂ, ಗಣಧರಸೂತ್ರಲಕ್ಷಿತಮುಪ್ಪುರೋಲಿಂಗಮುಂ, ಶುಕ್ಲವಸ್ತ್ರಖಂಡ ಕೌಪೀನೋಪಲಕ್ಷಿತ ಕಟಿಲಿಂಗಮುಂ, ಎಂದೀ ಬ್ರಹ್ಮಚಿಹ್ನೆಗಳನ್ನು ಧರಿಸಿ ಭಿಕ್ಷಾವೃತ್ತಿಯಿಂದುಂಡು ದೇವತಾರ್ಚನಾಪರರಾಗಿರ್ಪ ಸ್ನಾತಕ ನೈಷ್ಠಿಕ ಬ್ರಹ್ಮಚಾರಿಗಳಕ್ಕುಂ ॥ ೫ ॥

ಸೂತ್ರಂ॥ ಆರ್ಯಷಟ್ಕರ್ಮಾಣಿ ॥ ೨೫ ॥

ತಾ:— ೧ ಗೃಹಾಶ್ರಮದೊಳಿರುವ ಉಪಾಸಕರಿಗೆ ಈಜ್ಯೆಯುಂ, ೨ ವಾರ್ತೆಯುಂ, ೩ ದತ್ತಿಯುಂ, ೪ ಸ್ವಾಧ್ಯಾಯವುಂ, ೫ ಸಂಯಮಮುಂ, ೬ ತಪಮುಮೆಂದು ಆರ್ಯಷಟ್ಕರ್ಮಗಳಾಗುವವು ॥ ೬ ॥

ಸೂತ್ರಂ॥ ತತ್ರೇಜ್ಯಾ ದಶವಿಧಾ: ॥ ೨೬ ॥

ತಾ:—೧ ಅಲ್ಲಿಂ ದೇವೇಂದ್ರಮಾಳ್ಪ ಮಹಾಮಹಪೂಜೆಯುಂ, ೨ ಮೇಣ್ಕೈಂದ್ರಧ್ವಜಮುಂ, ೩ ಚತುರ್ನಿಕಾಯಾಮರರ್ಮಾಳ್ಪ ಸರ್ವತೋಭದ್ರಮುಂ, ೪ ಚಕ್ರವರ್ತಿಗಳ್ಮಾಳ್ಪ

ಚತುರ್ಮುಖಪೂಜೆಯುಂ, ೫ ವಿದ್ಯಾಧರರ್ಮಾಳ್ಪ ರಥಾವರ್ತನಮುಂ, ೬ ಮಹಾಮಂಡಲೀಕರ್ಮಾಳ್ಪ ಇಂದ್ರಕೇತುವುಂ, ೭ ಮಂಡಲೀಕರ್ಮಾಳ್ಪ ಮಹಾಪೂಜೆಯುಂ, ೮ ಅರ್ಧಮಂಡಲೀಕರ್ಮಾಳ್ಪ ಮಹಿಮೆಯುಂ, ೯ ನಂದೀಶ್ವರದೆಂಟುದಿನಂಗಳೊಳು ಮಾಳ್ಪ ಅಷ್ಟಾಹ್ನಿಕಪೂಜೆಯುಂ, ೧೦ ತನ್ನ ಶಕ್ತಿಯಿಂ ನಿಜಗೃಹದಿಂ ಜಿನಗೃಹಕ್ಕೆ ಗಂಧಾಕ್ಷತಪುಷ್ಪಾದ್ಯಷ್ಟವಿಧಾರ್ಚನೆ ದ್ರವ್ಯಗಳನ್ನೊಯ್ದು ಕೊಡುವದುಂ, ತನ್ನ ವಿತ್ತಾನುಸಾರದಿಂ ಜಿನಾಲಯಂಗಳನ್ನು ಕಟ್ಟಿಸುವದುಂ, ಜಿನಪ್ರತಿಮೆಗಳಂ ಪ್ರಾತಿಹಾರ್ಯಸಮೇತಂಗಳಂ ಮಣಿಕನಕರಜತಶಿಲಾಮಯಂಗಳಿಂ ಶಕ್ತ್ಯಾನುರೂಪದಿಂ ವಿರಚಿಸಿ ವಿಧಿಪೂರ್ವಕದಿಂ ತನ್ಮಧ್ಯದೊಳು ಸ್ಥಾಪಿಸಿ ಪೂಜಿಸಿ ಗೀತವಾದ್ಯನೃತ್ಯಾದಿ ಭೋಗಂಗಳ ನಡಿಸುವದುಂ, ಕ್ಷೇತ್ರಗ್ರಾಮಾದಿಗಳನವಕ್ಕೆ ಶಾಸನಂಗಳಂ ಮಾಡಿಸಿ ಬಿಡುವದುಂ, ಪೂಜೋಪಕರಣಂಗಳಂ ಕೊಡುವದುಂ, ಯಥೋಚಿತ ವಿಧಿಯಿಂ ಪೂಜಿಸುವದುಂ, ನಿತ್ಯ ಮಹಿಮೆಯೆಂಬುವದು ಇಂತೀ ಪೂಜೆ ದಶವಿಧವಾಗುವದು.

ಸೂತ್ರಂ ॥ ಅರ್ಥಾನಿ ಷಟ್ಕರ್ಮಾಣಿ ॥ ೨೭ ॥

ತಾ:—೧ ಅಸಿ, ೨ ಮಷಿ, ೩ ಕೃಷಿ, ೪ ವಾಣಿಜ್ಯ, ೫ ಪಶುಪಾಲ್ಯ, ೬ ಶಿಲ್ಪಕರ್ಮ ಎಂಬ ಷಟ್ಕರ್ಮಗಳಿಂ ಶುದ್ಧವೃತ್ತಿಯಿಂದ ಅರ್ಥೋಪಾರ್ಜನೆಗೆಯ್ವುದು ವಾರ್ತೆಯೆಂಬಾರ್ಯಾಕರ್ಮಂ.

ಸೂತ್ರಂ ॥ ದತ್ತಿಶ್ಚತುರ್ವಿಧಾಃ ॥ ೨೮ ॥

ತಾಃ—೧ ದಯಾದತ್ತಿಯುಂ, ೨ ಪಾತ್ರದತ್ತಿಯುಂ, ೩ ಸಮದತ್ತಿಯುಂ, ೪ ಸಕಲದತ್ತಿಯುಂ ಎಂದು ನಾಲ್ಕು ವಿಧಂ. ೧ ಅದರಲ್ಲಿ ಸಕಲ ಪ್ರಾಣಿಗಳಲ್ಲಿಯೂ ದಯೆಯನ್ನು ಮಾಡುವದು ದಯಾದತ್ತಿಯು, ೨ ನಿಶ್ಚಯವ್ಯವಹಾರ ರತ್ನತ್ರಯಭಾವನಾಪರರುಂ ತಮ್ಮನ್ನೂ ತಮ್ಮನ್ನಾಶ್ರಯಿಸಿದ ಭವ್ಯಪ್ರಾಣಿಗಳನ್ನೂ ಸಂಸಾರಸಮುದ್ರವನ್ನು ದಾಟಿಸುವಂಥವರುಗಳಾದ ಪರಮ ಸಂಯಮಧರರ ತಪ ಸ್ವಾಧ್ಯಾಯ ಧ್ಯಾನಕ್ಕೆ ಸಹಕಾರಿಯಾಗಿರುವ ನಿರವದ್ಯವಾದ ಆಹಾರದಾನವನ್ನು ಅವರಿಗಿತ್ತು ಕೃತಾರ್ಥನುಂ ಧನ್ಯನುಮೆನ್ನಂ ಸಫಲಮಾಂ ಪಡೆದರ್ಥಂ ಸಾರ್ಥಕವಾಯ್ತೆಂದು ಸಂತೋಷಂ ಬಟ್ಟಿದೆಮ್ಮೊಡವೆ ಪೆರತೆಲ್ಲಂ ಪರಾರ್ಥಮೆಂದು ಮನದೊಳು ನಿಶ್ಚಯಿಸಿ ಅಭ್ಯುದಯ:ನಿಶ್ರೇಯಸಸುಖದಾಯಕವಾದ ಸತ್ಪಾತ್ರಗಳಿಗೆ ಕೊಡುವದು ಪಾತ್ರದತ್ತಿಯು, ೩ ಸದಾಚಾರಿಯಾಗಿ ತನ್ನ ಕುಲದೊಳು ಸಮಾನನಾದವನಿಗೆ ಹೆಣ್ಣುಮಕ್ಕಳನ್ನು ಲಗ್ನಮಾಡಿಕೊಡುವದು ಸಮದತ್ತಿಯೆನಿಸುವದು, ೪ ತನ್ನ ಮಗಂ ಮೇಣ್ ಮಗನಿಲ್ಲದಿರ್ದೊಡೆ ಗೋತ್ರಜಂಗೆ ಮೇಣ್ ಮನೆವಾರ್ತೆಯನ್ನು ಕೊಡುವದು ಸಕಲದತ್ತಿಯು, ಇದು ಮೂರನೆಯ ಆರ್ಯಾಕರ್ಮವು, ಸ್ವಾಧ್ಯಾಯಮೆಂಬುದು ತತ್ವಜ್ಞಾನಂಗಳನ್ನು ಓದುವದುಂ ಓದಿಸುವದುಂ ಮೊದಲಾದವುಗಳು ಸ್ವಾಧ್ಯಾಯಮೆಂಬ ನಾಲ್ಕನೆಯ ಆರ್ಯಾಕರ್ಮಂ, ಪಂಚಾಣುವ್ರತವರ್ತನ ಎಂಬೈದನೆಯ ಆರ್ಯಕರ್ಮಂ, ೧ ಸಾಕಾರನಾಕಾರಮುಪ್ಪನಶನಮುಂ, ೨ ಒಂದು ತುತ್ತುಂ ಮೇಣೆರಡು ತುತ್ತುಂ ಮೇಣ್ ಕುಂದಿಸಿಯುಂಬುದುಂ ಚಾಂದ್ರಾಯಣಂ ಮೊದಲಾಗೊಡೆಯ ಅವಮೋದರ್ಯಮುಂ, ೩ ವಸ್ತುಪ್ರಮಾಣಂಗಳಂ ಮಾಡಿ ಉಣ್ಬ ವೃತ್ತಿಪರಿಸಂಖ್ಯಾನಮುಂ, ೪ ರಸವರ್ಗಂಗಳಂ ತನ್ನ ಶಕ್ತಿಯಿಂ ನಿವೃತ್ತಿಗೆಯ್ವ ರಸಪರಿತ್ಯಾಗ

ಮುಂ, ೫ ಶಯನಾಸನಂಗಳ ನಿಯಮಂ ಮಾಳ್ಪ ವಿವಿಕ್ತಶಯನಾಸನಮುಂ, ೬ ಕುಕ್ಕುಟಾಸನಮುಂ ರಾತ್ರಿಪ್ರತಿಮೆಯುಂ ಮೊದಲಾಗೊಡೆಯ ಕಾಯಕ್ಲೇಶವೆಂಬ ಬಾಹ್ಯತಪಂಗಳು ಆರು ವಿಧವಾಗುವವು ॥ ೧ ಆಲೋಚನೆ ಪ್ರತಿಕ್ರಮಣಾದಿ ಭೇದಮಪ್ಪ ಪ್ರಾಯಶ್ಚಿತ್ತಮುಂ, ೨ ಸಮ್ಯಗ್ದರ್ಶನಜ್ಞಾನಾದಿ ವಿನಯಮಪ್ಪ ವಿನಯಮುಂ, ೩ ಆಚಾರ್ಯೋಪಾಧ್ಯಾಯಾದಿ ಸಮಾಶ್ರಿತವಾದ ವೈಯ್ಯಾವೃತ್ಯಮುಂ, ೪ ಅಧ್ಯಯನಾಧ್ಯಾಪನಾದಿ ಸ್ವಾಧ್ಯಾಯಮುಂ, ೫ ಬಾಹ್ಯಾಭ್ಯಂತರ ಭೇದಗಳಾದ ಪಾಪಗಳನ್ನು ಬಿಡುವದು ಉತ್ಸರ್ಗಮು, ೬ ಪದಸ್ಥ, ಪಿಂಡಸ್ಥ, ರೂಪಸ್ಥ ರೂಪಾತೀತಮಪ್ಪ ಧ್ಯಾನವೆಂಬ ಅಭ್ಯಂತರ ತಪಂಗಳಾರುಂ, ಇಂತನಶನಾದಿ ದ್ವಾದಶವಿಧ (೧೨)ತಪಂಗಳುಂ, ತಪವೆಂಬಾರನೆಯ ಆರ್ಯಕರ್ಮವಾಗುವದು.

ಕಂದ ॥ ಜ್ಞಾನದ ಸತ್ಪರಿಣಾಮಂ ।
ದಾನದ ರುಚಿ ಸಮಯಭಕ್ತಿ ತತ್ವವಿಚಾರಂ ॥
ಜೈನನಿಗಿವಿಲ್ಲದಿರ್ದೊಡೆ ।
ಮೌನದೊಳುಣ್ಬಂತೆ ಪಶುವೇದನೆಯ ನಿದಾನಾ ॥ ೧೩೨ ॥

## ಸೂತ್ರಂ ॥ ಕ್ಷತ್ರಿಯೋ ದ್ವಿವಿಧಃ ॥ ೨೯ ॥

ತಾ:—ಮುಂಚೆ ಹೇಳಿದ ಆರ್ಯಷಟ್ಕರ್ಮನಿರತರಾದ ಗೃಹಸ್ಥರು ಜಾತಿಕ್ಷತ್ರಿಯರುಂ, ತೀರ್ಥಕ್ಷತ್ರಿಯರುಂ ಎಂದು ಎರಡು ವಿಧವು ॥ ೧ ಅದರಲ್ಲಿ ಜಾತಿಕ್ಷತ್ರಿಯರು ಕ್ಷತ್ರಿಯ, ಬ್ರಾಹ್ಮಣ, ವೈಶ್ಯ, ಶೂದ್ರ ಭೇದದಿಂದ ಚತುರ್ವಿಧ(೪)ವಾಗುವರು. ತೀರ್ಥಕ್ಷತ್ರಿಯರು ಜೀವಿತ ಕಲ್ಪದಿಂದ ಹಲವು ಭೇದವಾಗುವರು.

## ಸೂತ್ರಂ ॥ ಭಿಕ್ಷುಃ ಚತುರ್ವಿಧಃ ॥ ೩೦ ॥

ತಾ:—೧ ಅನಗಾರರುಂ, ೨ ಯತಿಗಳುಂ, ೩ ಮುನಿಗಳುಂ, ೪ ದೇವಋಷಿಗಳುಂ ಎಂದು ಭಿಕ್ಷುಗಳು ನಾಲ್ಕು ಭೇದವಾಗುವರು. ಅದರಲ್ಲಿ ಅನಗಾರ ಸಾಮಾನ್ಯಸಾಧಕ ಅನಗಾರರೆಂಬರು.

## ಸೂತ್ರಂ ॥ ಯತಿನೋ ದ್ವಿವಿಧಃ ॥ ೩೧ ॥

ತಾ:—೧ ಉಪಶಮಶ್ರೇಣ್ಯಾರೋಹಣರುಂ, ೨ ಕ್ಷಪಕಶ್ರೇಣ್ಯಾರೋಹಣರುಂ ಎಂಬದಾಗಿ ಯತಿಗಳಲ್ಲಿ ಎರಡು ತೆರವು.

## ಸೂತ್ರಂ ॥ ಮುನಯಸ್ತ್ರಿವಿಧಃ ॥ ೩೨ ॥

ತಾ:—೧ ಅವಧಿಜ್ಞಾನಿಗಳುಂ, ೨ ಮನಃಪರ್ಯಯಜ್ಞಾನಿಗಳುಂ, ೩ ಕೇವಲಜ್ಞಾನಿಗಳುಂ ಎಂದು ಮುನಿಗಳಲ್ಲಿ ಮೂರು ಪ್ರಕಾರವು.

## ಸೂತ್ರಂ ॥ ಋಷಯಶ್ಚತುರ್ವಿಧಾಃ ॥ ೩೩ ॥

ತಾ:—೧ ಬುದ್ಧಿಪ್ರಾಪ್ತರಾದ ಋಷಿಯರುಂ, ರಾಜಋಷಿಯರು, ೨ ಬ್ರಹ್ಮಋಷಿಯರು, ೩ ದೇವಋಷಿಯರು, ೪ ಪರಮಋಷಿಯರು ಎಂದು ನಾಲ್ಕು ವಿಧವು.

ಸೂತ್ರಂ ॥ ತತ್ರ ರಾಜರ್ಷಯೋ ದ್ವಿವಿಧಾ: ॥ ೩೮ ॥

ತಾ:—೧ ವಿಕ್ರಿಯಾಶಕ್ತಿಯುಕ್ತರುಂ, ೨ ಅಕ್ಷೀಣಋದ್ಧಿಪ್ರಾಪ್ತರುಂ ಎಂದು ರಾಜಋಷಿಗಳಲ್ಲಿ ಎರಡು ವಿಧವು.

ಸೂತ್ರಂ ॥ ಬ್ರಹ್ಮಋಷಿಯದ್ವಿವಿಧಃ ॥ ೩೯ ॥

ತಾಃ—೧ ಬುದ್ಧಿಋದ್ಧಿಯುಂ, ೨ ಔಷಧಋದ್ಧಿಯುಂ ಎಂದು ಬ್ರಹ್ಮಋಷಿಯರಿತ್ತೆರವು. ಮತ್ತಂ ಗಗನಗಮನಸಾಮರ್ಥ್ಯವನ್ನುಳ್ಳವರ್ಗಳು ದೇವಋಷಿಯರೆಂದರಿಯಲ್ಪಡುವರು, ಕೇವಲಜ್ಞಾನಿಗಳು ಪರಮಋಷಿಯರೆಂದು ತಿಳಿಯಲ್ಪಡುವರು.

ಉಕ್ತಂಚ ॥ ಬ್ರಹ್ಮಚಾರೀಗೃಹಸ್ತಶ್ಚ ವಾನಪ್ರಸ್ತಶ್ಚ ಭಿಕ್ಷುಕ: ॥
ಇತ್ಯಾಶ್ರಮಾಸ್ತು ಜೈನಾನಾಂ ಸಪ್ತಮಾಂಗಾಂ ದ್ವಿನಿಶ್ರಿತಾ ॥ ೧೮ ॥

ದೇಶಪ್ರತ್ಯಕ್ಷವಿತ್ಕೇವಲಭೃದಿಹಮುನಿಸ್ಸ್ಯಾದೃಷಿಃ ಪ್ರಾಪ್ತಋದ್ಧಿರಾರೂಢ ಶ್ರೇಣಿಯುಗ್ಮೋಜನಯತಿರನಗಾರೋಪರಸ್ಸಾದುರುಕ್ತ, ರಾಜಾಬ್ರಹ್ಮಚದೇವಃ ಪರಮಯಿತಿಋಷಿರ್ವಿಕ್ರಿಯಾಕ್ಷೀಣಸಪ್ತಃ ಪ್ರಾಪ್ತೌ ಬುಧೌಷಧಿಶೋವಿಯುದಯನಪಟುರ್ವಿಶ್ವವೇದಿಕ್ರಮು—

ಕಂದ॥ ಪನ್ನೊಂದುಪಾಸಕಸ್ಥಾನಂ ।
ಸನ್ನುತನಿಲಯದ ಮೇಲೆಮೇಲನುಕ್ರಮದಿನವುಂ ॥
ಮುನ್ನಾದ ಗುಣದಿಂ ಕೂಡಿರ್ದುಂ ।
ನುನ್ನಂ ಪೆರ್ಚಿ ನಿಲ್ವುದಂತ್ಯಂಬರೆಗಂ ॥ ೧೩೩ ॥

ವಚನ ॥ ಅದೆಂತೆಂದೊಡೆ॥ ದರ್ಶನೀಕನಿಂ ತೊಟ್ಟು ಉದ್ದಿಷ್ಟವಿರತಂ ಬರೆಗಮೇಕಾದ್ಯೆಕೋತ್ತರದಿಂ ಪೆರ್ಚಿದುಪಾಸಕಸ್ಥಾನಂಗಳುತ್ತರಭಂಗಮುರುವತ್ತಾರು (೬೬) ವಿಕಲ್ಪಮಕ್ಕುಂ ॥ ಇಂತೀ ಶ್ರಾವಕರ್ಗೆ ಅಸ್ಯಾದಿ ಷಟ್ಕರ್ಮಂಗಳತ್ತಣಿಂ ಹಿಂಸಾದಿದೋಷಗಳು ಸಂಭವಿಸಿದೊಡೆ ಪಕ್ಷಚರಿಯೆ ಸಾಧಕತ್ವಮೆಂಬಿವರಿಂದಾದೋಷಮಂ ಪರಿಹರಿಸಿ ಶುದ್ಧರಪ್ಪರಲ್ಲಿ ಪಕ್ಷಮೆಂಬುದಹಿಂಸಾಪರಿಣಾಮತ್ವಮೇವದೆಂದೊಡೆ, ಸ್ವಚ್ಛಂದವೃತ್ತಿಗಳಂತೆ ಧರ್ಮಾರ್ಥದಿಂದಮಕ್ಕುಮುಪ್ಪವಾಸಕ ಪ್ರಾಣಿಹಿಂಸೆಯುಂ ಮಾಳ್ಪರಲ್ಲರು, ಪ್ರಮಾದವಶದಿಂ ಹಿಂಸೆ ಸಂಭವಿಸಿದೊಡೆ ಪ್ರಾಯಶ್ಚಿತ್ತಂಗಳಿಂ ಶುದ್ಧಮಪ್ಪರು; ಪರಿತ್ಯಾಗಕರಣಂಗಳಪ್ಪಟ್ಟದೊಡೆ ತನ್ನ ಗೃಹಮಂ ಧನಮಂ ಧರ್ಮಮುಮಂ ಪುತ್ರರುಗಳಿಗೆ, ಅಥವಾ ಗೋತ್ರಜನಂಗಳಿಗೆ ಸಮರ್ಪಿಸಿಕೊಟ್ಟು ನೀನುಮೆನ್ನ ಪರೋಕ್ಷದೊಳೀಯಂದದೊಳ್ ನೆಗಳುವದೆಂದು ಗೃಹಮಂ ಪತ್ತುವಿಡುವನ್ನೆವರೆಗಚ್ಚರಿಯೇ ಎಂಬುದಕ್ಕುಂ ॥

---

ಮತ್ತಮಲ್ಲಿ ನಿಮಿತ್ಯವೆಂಬುದೆಂತೆನೆ—ಶ್ರೀವರ್ಧಮಾನಸ್ವಾಮಿಗಳಿಗೆ ನಮಸ್ಕಾರಂಗೆಯ್ದು ಮರಣವಿಭಕ್ತಿಯಂ ಪೇಳ್ವೆನದೆಂತೆನೆ—ಎರಡು ಕಣ್ಗಳುಮನೊಂದೊಂದಂ ನಾಲ್ಕೆಸಳಾಗಿ ಬಗೆವುದಲ್ಲಿ ಎಡದ ಕಣ್ಣದೀಪ್ತಿಯಂ ಚಂದ್ರನಂತೆ ಬಗೆಗೆ, ಬಲದ ಕಣ್ಣದೀಪ್ತಿಯನಾದಿತ್ಯನಂತೆ ಬಗೆವುದಲ್ಲಿ ಎಡದ ಕಣ್ಣಮೇಗಣ ಪೊಟ್ಟೆಯನೊತ್ತೆಯಡಿಯಣದೆಶೆಯೊಳು ಜ್ಯೋತಿಯಂ ಕಾಣ ದೊಡೆ ಯರುದಿಂಗಳಾಯುಷ್ಯಂ ॥ ೧ ॥ ಅಡಿಯಣ ಪೊಟ್ಟೆಯನೊತ್ತೆ ಮೇಗಣ ದೆಶೆಯೊಳು ದೀಪ್ತಿಯಂ ಕಾಣದೊಡೆ ಮೂರು ತಿಂಗಳಾಯುಷ್ಯಂ ॥ ೨ ॥ ಮೊದಲುಗಣ್ಣನೊತ್ತಿನೋಡೆ ಕಡೆಗಣ್ಣೊಳು ದೀಪ್ತಿಯಂ ಕಾಣದೊಡೆರಡುತಿಂಗಳಾಯುಷ್ಯಂ ॥ ೩ ॥ ಕಡೆಗಣ್ಣನೊತ್ತಿ ನೋಡೆ ಮೊದಲೊಳು ದೀಪ್ತಿಯಂ ಕಾಣದೊಡೊಂದು ತಿಂಗಳಾಯುಷ್ಯಂ ॥ ೪ ॥ ಬಲದಕಣ್ಣ ಮೇಗಣ ದೆಶೆಯನೊತ್ತಿನೋಡೆ ಅಡಿಯಣ ದೆಶೆಯೊಳು ಜ್ಯೋತಿಯಂ ಕಾಣದೊಡೆ ಪದಿನೈದು ದಿವಸವಾಯುಷ್ಯಂ ॥ ೫ ॥ ಅಡಿಯಣ ದೆಶೆಯೊಳೊತ್ತಿನೋಡೆ ಮೇಗಣ ಪೊಟ್ಟೆಯೊಳು ದೀಪ್ತಿಯಂ ಕಾಣದೊಡೆಂಟು ದಿನವಾಯುಷ್ಯಂ॥೬॥ಕಡೆಗಣ್ಣ ದೀಪ್ತಿಯಂ ಕಾಣದೊಡೆ ಆರುದಿ ವಸವಾಯುಷ್ಯಂ॥೭॥ ಮೊದಲಗಣ್ಣ ದೀಪ್ತಿಯಂ ಕಾಣದೊಡೆ ಮೂರುದಿನದಾಯುಷ್ಯಂ ॥೮॥

ಶ್ರೀಖಂಡದ ನಿಮಿತ್ಯಮಂ, ಅಲತಗೆಯನಿಮಿತ್ಯಮಂ ಪೇಳ್ವೆನದೆಂತೆಂದೊಡೆ—ತಾಂ ಶುಚಿರ್ಭೂತನಾಗಿ ಪಾರಿಶ್ವಪ್ರತಿಮೆಗೆ ಅಭಿಷೇಕಾಷ್ಟವಿಧಾರ್ಚನೆಯಂ ಮಾಡಿ ಎಡದ ಕೈಯಂ ಶುಕ್ಲಪಕ್ಷಮಾಗಿ, ಬಲದಕೈಯಂ ಕೃಷ್ಣಪಕ್ಷಮಾಗಿ ಬಗೆದೆರಡು ಕೈಗಳುಮುಂ ಗೋ ಮೂತ್ರದಿಂ, ಬಿಸಿನೀರಿಂ, ಹಾಲಿಂ ಕರ್ಚಿ ಮತ್ತಂ ತಣ್ಣೀರಿಂ ಶುದ್ಧಮಾಗಿ ಕರ್ಚಿ ಪೊಂದೊಂದು ಬೆರಲಿಂಗೆ ಮೂರು ಮೂರು ರೇಖೆಯಾಗಲೈದು ಬೆರಲಿಂಗಂ ಹದಿನೈದು ರೇಖೆಯಕ್ಕುಂ, ಉಂ ಗುಷ್ಠದ ಪರ್ವಣಿಯಿಂ ತೊಡಗಿ ಕಿರುಕುಣಿಕೆಯ ಮೊದಲ ಪರ್ವಣಿವರೆಗಂ ಈ ಏಳು ಪಂಚನ ಮಸ್ಕಾರದಿಂದೊಂದು ಪರ್ವಣಿಯಂ ಅಭಿಮಂತ್ರಿಸಿ ಅಪೂಸಿದ ಶ್ರೀಖಂಡಮಾರುವನ್ನೇವರ ಮಿರ್ದು ಉಂಗುಷ್ಠದ ಮೊದಲ ಪರ್ವಣಿಯಿಂ ತೊಟ್ಟು ಪಾಡಿವ ಮಾದಿಯಾಗಿ ಎಣಿಸುಗೆ ಕಿರು ಗುಣಿಕೆಯು ಮೊದಲ ಪರ್ವಣಿವರೆಗೆಮೆಣಿಸೆ ಪದಿನೈದು ಪರ್ವಣಿಯೊಳಾ ಪರ್ವಣಿಯೋಳ್ಕ ರಿಯ ಬಿಂದು ತೋರುಗೆಮಾದಿನಂ ಮೃತ್ಯುವೆಂದರಿಗೆ ॥ ಅಲತಗೆಯೋಳ್ ಈ ರೀತಿಯಿಂದ ನೋಡೆಯಾವಪರ್ವಣಿಯೊಳಲತಗೆಯಂ ಕಾಣಲಕ್ಕುಂ ಆ ದಿವಸಂ ಸಮಾದಿಯೆಂದರಿಗೆ ॥

ಶ್ಲೋ ॥ ಲಕ್ಷ್ಯಂ ಲಕ್ಷಣಲಕ್ಷಿತೇನ ಮನಸಾ ಸಂಶುದ್ಧಭಾನೋರ್ಜ್ವಲೇ ।
ಕ್ಷೀಣೇ ದಕ್ಷಿಣ ಪಶ್ಚಿಮೋತ್ತರಂ ಪುರೇ ಷಟ್ತ್ರಿದ್ವಿಮಾಸೈಕಕಂ ॥ ೧೯ ॥
ಛಿದ್ರಂ ಪಶ್ಯತಿ ಮಧ್ಯಮೇ ದಶದಿನಂ ಧೂಮಾಂಕುಲೇ ತದ್ದಿನಂ ।
ಕೃಷ್ಣೇ ಸಪ್ತದಿನಂ ಸಕಂಪನಮತಃ ಪಕ್ಷೇ ವಿನಿರ್ದಿಶ್ಯತಾಂ ॥ ೨೦ ॥

ಚಂದ್ರಾರ್ಕನಿಮಿತ್ಯಮೆಂತೆನೆ—ಶಾಂತಿಜಿನಪ್ರತಿಮೆಯಂ ಯಥಾವಿಧಿಯಿಂದಭಿಷೇಕಂ ಮಾ ಡಿಯರ್ಚಿಸಿಯಾಗಂಧೋದಕಮಂ ಬೆಳಗಿನೊಳಿಟ್ಟು ಚಂದ್ರನಕ್ಕೆ, ಮೇಣ್ಸೂರ್ಯನಕ್ಕೆ, ತೆಂಕ ಮುಖವಾಗಿರ್ದು ನೋಡಿ ತೆಂಕಣದೆಶೆ ಹೀನವಾಗಲರುದಿಂಗಳಾಯುಷ್ಯಂ ॥ ೧ ॥ ಪಡುವಲು ಹೀನವಾಗಲು ಮೂರು ತಿಂಗಳು ॥ ೨ ॥ ಬಡಗಲು ಹೀನವಾಗಲು ಎರಡು ತಿಂಗಳು ॥೩॥ ಮೂಡಲು ಹೀನವಾಗೆ ಒಂದು ತಿಂಗಳು ॥ ೪ ॥ ನಡುಛಿದ್ರವಾಗೆ ಪತ್ತುದಿನಂ ॥ ೫ ॥ ನಡು ಗುವಡೆ ಪದಿನೈದುದಿನಂ ॥ ೬ ॥ ಎರಡು ಬಿಂಬಂಕರೀದಾಗಿ ತೋರಲೇಳುದಿನಂ ॥ ೭ ॥

ಛಾಯಾವೃಕ್ಷನಿಮಿತ್ತಮುಂ ಪೇಳ್ವೆಂ || ೧ ಛಾಯಾವೃಕ್ಷದ ನೆಳಲಂ ಕಂಡಂಗೆ ಪರೆದು ಬಿರ್ದ ಕೊಂಬುಗಳನಮಂ ಭೂತಪಿಶಾಚಾದಿಗಳುಮಂ ಕಂಡಂಗೆ ಪತ್ತುತಿಂಗಳಾಯುಷ್ಯಂ|| ೨ ಆದಿತ್ಯನಂ ನೋಡಿದಾಗಳಾದಿತ್ಯ ಕಿರಣಮಂ ಕಾಣದಿರ್ದೊಡಂ, ಕಿಚ್ಚಂ ನೋಡಿದಾಗಳು ಕಿರಣಂಗಳಂ ಕಾಣದಿರ್ದೊಡಂ ಪನ್ನೊಂದು ತಿಂಗಳಾಯುಷ್ಯಂ || ೩ ಮೂತ್ರಂ ಪುರೀಷಂಗಳುಂ ಬೆಳ್ಳಿಯ ಪೊನ್ನ ಬಣ್ಣಮಾಗಿ ಪೋಪಡಂ, ಕನಸಿನೊಳಂ ಮನಸಿನೊಳಮಾವನೋರ್ವಂ ಕಾಣ್ಗುಮಾತಂಗೆ ಪೊಂಭತ್ತು ತಿಂಗಳಾಯುಷ್ಯಂ || ೪ ತಣಿವಿಲ್ಲದೆ ತಣಿದಂತೆ ಶರೀರಂ ತೋರ್ಪಡಂ ತಣಿವಂ ಯೇಗೆಯ್ದೊಡಂ ತಣಿಯದಂತೆ ಶರೀರಂ ಬಡವಾಗಿ ತೋರ್ಪಡಂ, ತನ್ನ ತನ್ನನೆಗಳ್ವ ನೆಗಳ್ತೆಯಲ್ಲದೆ ಮತ್ತೊಂದಂ ನೆಗಳ್ದಡಂ ಎಂಟು ತಿಂಗಳಾಯುಷ್ಯಂ || ೫ ಮತ್ತಂ ಮುಂದಕ್ಕೆ ಪೆರಗಕ್ಕೆ ಆವನೋರ್ವನ ಪಾದಂ ಕೊರೆದಂದಮಾಗಿಕ್ಕುಮಪ್ಪೊಡಂ ಏಳು ತಿಂಗಳಾಯುಷ್ಯಂ || ೬ ಕಾಗೆ ತನ್ನೆರಡೆರಕೆಯೊಳು ಪೊಯ್ದೊಡಂ, ಮಳಲಮಳೆ ಸುರಿಯೆ ಕಂಡೊಡಂ, ತನ್ನ ನೆಳಲು ತನ್ನನೆಳಲಲ್ಲದೆ ವಿಪರೀತಮಾಗಿ ತೋರ್ಪುದಾರುದಿಂಗಳಾಯುಷ್ಯಂ|| ೭ ಕಾಗೆ ಹೊರಸು ಹದ್ದು ತಲೆಯನೇರಿಕ್ಕುಮಪ್ಪೊಡಂ, ಮತ್ತಂ ಮಾಂಸಮುಂ ತಿಂಬ ಪಕ್ಷಿಗಳೇರಿರೆಯುಂ, ಅಯ್ದುತಿಂಗಳಾಯುಷ್ಯಂ || ೮ ತೆಂಕಣ ಕಡೆಯಾಕಾಶದೊಳು ಮುಗಿಲಿಲ್ಲದೆ ಮಿಂಚಂ ಕಂಡಡಂ, ನೀರೊಳಗಿಂದ್ರಧನುವಂ ಕಂಡೊಡಂ ನಾಲ್ಕು ತಿಂಗಳಾಯುಷ್ಯಂ || ೯ ರವಿಶಶಿಗಳಂ ಕನಸಿನೊಳಂ ಮನಸಿನೊಳಂ ನಡು ಛಿದ್ರಮಾದಂತೆ ಕಂಡೊಡೆ ಮೂರು ತಿಂಗಳಾಯುಷ್ಯಂ || ೧೦ ಶರೀರಂ ಮೃತಗಂಧಂ ನಾರ್ಪಡಂ, ಪಲ್ಲು ಬಿರ್ದು ಬೇನೆಗೆಯ್ದು ನೀರೊಡಿ ಆರಿ ಇದ್ದಿಲಂತಿರ್ಕುಮಪ್ಪೊಡಂ, ಎರಡು ತಿಂಗಳಾಯುಷ್ಯಂ || ೧೧ ನೀರಿಳಿಯೆ ಪೊಯ್ದಾಗಳು ಪಾದದಿಂ ಮುನ್ನಂ ಮೈ ಎದೆಯಾರುವೊಡಂ, ಒಂದು ತಿಂಗಳಾಯುಷ್ಯ || ೧೨ ಮಿಂದಾಗಳುಂ, ಮೀಯ್ದಾಗಳುಂ, ತಲೆಯೊಳು ಧೂಮುಂ ಪೊರಮಡುಗುಮಪ್ಪೊಡೊಂದು ತಿಂಗಳಾಯುಷ್ಯಂ||೧೩ ಕುತ್ತಮಿಲ್ಲದೆ, ಬೇನೆಯಿಲ್ಲದೆ ಒಂದು ಕಂಣು ನೀರುಸುರಿಗುಮಪ್ಪೊಡಂ ತಮ್ಮಿರ್ದೆಡೆಯಿಂ ಪುಚ್ಚಳಿದು ಬಿರ್ದಿರ್ದಂತೆಗೆಯ್ಗುಂ, ಕಿವಿಗಳಪ್ಪಡಂ, ಮೂಗುನಸುಗೊಂಕಿ ತೋರ್ಪಡಂ ಒಂದು ತಿಂಗಳಾಯುಷ್ಯಂ || ೧೪ ಮಧ್ಯಾಹ್ನಮಾದಾಗಳು ತನ್ನ ನೆಳಲಾದಿತ್ಯಂಗಿದಿರಪ್ಪೊಡಂ, ಪನ್ನೆರಡು ದಿವಸದಾಯುಷ್ಯಂ|| ೧೫ ನೀರುಮಂ ಕನ್ನಡಿಯುಮಂ ನೋಳ್ಪಾಗಳು ತನ್ನ ನೆಳಲಂ ಕಾಣದಿರ್ದೊಡಂ, ನೆಳಲೆರಡು ತಲೆಯಾಗಿತೋರ್ಪಡಂ, ಪನ್ನೊಂದು ದಿವಸಂ || ೧೬ ಮುನ್ನನಿಸ್ತೇಜಮಪ್ಪ ಮೊಗಮಿಸಿ ತೋರ್ಪಡಂ ಮುಂ ಪೊಲ್ಲನಾರ್ಪ ಮೈ ತಾವರೆಯಗರು ಗಂಧಂ ನಾರ್ಪೊಡಂ, ಮುನ್ನ ಚಂದ್ರಮಂಡಲದ ಕಾಂತಿಯ ಮೊಗಂ ನಿಸ್ತೇಜಮಪ್ಪೊಡಂ ಪತ್ತು ದಿನದಾಯುಷ್ಯಂ || ೧೭ ಮೊಳಗಿದ ಪರೆಯುಮಂ, ಪೊಡದ ಕಂಚಿನ ಸರಮುಮಂ, ಪೆರರು ಕೇಳದೆ ತಾಂ ಕೇಳ್ವುದುಂ, ಕಾರಣಮಿಲ್ಲದೆ ತನ್ನಿಂತಾನೊಂದಂ ಬಗೆದುಬ್ಬೆಗಂ ಬಡುತಿಪ್ಪೊಡಂ, ಮೂತ್ರಪುರೀಷಂಗಳುಂಬಮಿಪ್ಪಾಗಳು ನಿರೋಧಮುಕ್ಕುಮಪ್ಪೊಡಂ, ಎಂಟು ದಿವಸದಾಯುಷ್ಯಂ || ೧೮ ದ್ವಾರಂಗಳಿಂ ಕಾಯ್ದು ಪೊರಮಡುವಾಗಳು ಬೇನೆವೆರಸಿ ಪೊಗೆ ಪೊರಮಡುಗುಮಪ್ಪೊಡಂ, ಮರ್ಮಸ್ಥಾನಂಗಳು ಬೇನೆವೆರಸಿಕ್ಕುಮಪ್ಪೊಡಂ, ಮೈಯ್ಯೊಳು ನೀರಂ ಪೊಯ್ದಾಗಳು ಬಿಸಿದುಂ ತಣಿತ್ತು ಮರಿಯಬಾರದಿಕ್ಕುಮಪ್ಪೊಡೇಳು ದಿವಸದಾಯುಷ್ಯಂ || ೧೯ ನಾಲಗೆ ಕರಿದಾಗಿಯುಂ, ಬಿಣ್ಣಿತ್ತಾಗಿಯುಮಿರ್ಪುದುಂ, ಮೊಗಕ್ಕೆಂದುಮಿಲ್ಲದಾಗುಳಿಯುಂದುಗಿರ್ಕ್ಕುಮಪ್ಪೊಡಂ, ನಾಲ್ಕು ದಿವಸಂ ||

೨೦ ನೀರೊಳಗಂ ಕನ್ನಡಿಯೊಳಗಂ ತನ್ನ ನೆಳಲಂ ಕಾಣದಿರ್ದೊಡಂ, ವೊಂದುದಿನಂ ಆಯುಷ್ಯಂ ॥
೨೧ ಕಿವಿಯೊಳಗಣ ಧ್ವನಿಯಂ ಕೇಳಲು ಬಾರದಿಕ್ಕುವುಪ್ಪಡೆ, ಎರಡು ದಿವಸದಾಯುಷ್ಯಂ ॥

ಕಂದ ॥ ಕನ್ನಡಿಯೊಳಾನು ನೀರೊಳು ।
ತನ್ನ ಮುಖಾವಯವನೊಂದುಮಂ ಕಾಣದೊಡಂ ॥
ತನ್ನ ಶಿರಮಿಲ್ಲದಿರ್ದೊಡಂ ।
ಸನ್ನುತಮವನೊಂದು ವರುಷದಂದಿಂಗಳಿಗುಂ ॥ ೧೩೪ ॥

ಧರೆಯೊಳುರಿನೆಗೆಯೆ ಕಂಡೊಡೆ ।
ಮರಣಂ ಸಮನಿಸುಗುಮೆಯ್ದೆ ದಶಮಾಸದೊಳೆಂ- ॥
ದಿರದರಿ ಮೃತ್ಯುಂಜಯುಮಂ ।
ಪರಿಣತೆಯಿಂ ಮಾಡಿ ಕಾಗ್ಗೆ ತನ್ನಂ ಪುರುಷಂ ॥ ೧೩೫ ॥

ಎವೆಯಂ ಪುರ್ವಂ ಮೂಗಂ ।
ಕ್ರಮದಿಂ ತಾಂ ಕಾಣದಿರ್ದನಪ್ಪೊಡೆ ಮರಣಂ ॥
ಸಮನಿಸುಗು ಮೂರುತಿಂಗ- ।
ಳಮಿತಗುಣೋಪೇತರರಿವುದಿಂತೀಕ್ರಮದಿಂ ॥ ೧೩೬ ॥

ನೆಟ್ಟನೆಪೇರ್ವೊಟ್ಟಂ ಮಣಿ- ।
ಕಟ್ಟಂಗಿಳಿತಂದ ಸಂದಿಯುಲ್ಲಿಯ ನೆರೆಯಂ ॥
ಮುಟ್ಟದೊಡೆ ಮಿಡಿಯದಿರ್ದೊಡೆ ।
ನಿಟ್ಟಯಿಸುಗುಮಯ್ದು ತಿಂಗಳಾಯುಕ್ರಮಮಂ ॥ ೧೩೭ ॥

ಮಿಡಿಯೆ ಪರಡೆರಡೆರಡೆಯಣ- ।
ನಿಡಿದಪ್ಪಾನರವು ಮಿಡಿಯದಿರ್ದೊಡೆ ಪೆರತೇಂ ॥
ಮಡಿವಕ್ಕುಮೊಂದುತಿಂಗ- ।
ಳ್ಗೆಡೆಯಿಲ್ಲೆಂದರಿದು ನೆಗಳ್ಗೆ ನಿಯಮಿತ ಚಿತ್ತಂ ॥ ೧೩೮ ॥

ಮೇಂಗಾಲ ನರವು ಮಿಡಿಯುದೆ ।
ತುಂಗ ಯಶಾವಮಾಣ್ದುದಪ್ಪೊಡದು ನಿಶ್ಚಯದಿಂ ॥
ಸಂಗತ ಗುಣರರಿವುದಿದಂ ।
ಪಿಂಗದು ಮರಣಂ ತ್ರಿಮಾಸದಂದಿಂಗಳಿಗುಂ ॥ ೧೩೯ ॥

ತ್ರಿಕಟಿಕೆಯು ಕರ್ಣಮೂಲದ ।
ವಿಕಸಿತದ ರದನದ್ವಯಂಗಳವು ಮಿಡಿಯುತ್ತಂ ॥
ಪ್ರಕಟಂ ನಡುಗುತಿಪ್ಪೊಡೆ ।
ನಿಕರಂ ಮಡಿವಕ್ಕುಮೆರಡು ತಿಂಗಳಿಗೆಂತುಂ ॥ ೧೪೦ ॥

ಕಂಣೆರಡರ ಪೊಟ್ಟೆಗಳ ।
ತಿಣ್ಣಂ ಬೆರಳಿಂದಮೊತ್ತೆ ಕತ್ತಲೆಯೊಳು ಕೇ- ॥
ಳಂಣ ಬೆಳಗೆಸೆಯೆ ಪೊಳೆಗುಂ ।
ತಿಂಣಂ ಮಾಣ್ದದೊಂದು ತಿಂಗಳಿಗಳಿಸುಂ ॥ ೧೪೧ ॥

ಕಂದ ॥ ನೊಸಲೊಳು ಕರತಳಮಂ ಪ- ।
ತ್ತಿಸಿ ತಾನೆ ಮೈಯಿಕ್ಕಿದಡರೆ ನೋರ್ಪುದು ಮುಂಗೈ- ॥
ಯುಸಿದಾಗಿ ಬಾಳ್ಗು ಮಲ್ಲದೊ- ।
ಡಸುವಳಿಗುಂ ತಡೆಯದಿಪ್ಪತ್ತೆಂಟು ದಿನಕ್ಕಂ ॥ ೧೪೨ ॥

ಸೊಡರಕುಡಿಗಡ್ಡಮಪ್ಪಂ- ।
ತಿಡುವೆರಳಂ ಮುಚ್ಚಿಯೊಂದುಕಣ್ಣಂ ಕ್ರಮದಿಂ ॥
ನಡೆನೋಡಿ ಕುಡಿಯಡಂಗಿ- ।
ರ್ದೊಡೆ ಬಾಳ್ಗಂ ಮಿಕ್ಕು ತೋರೆ ಮರಣಮವಶ್ಯಂ ॥ ೧೪೩ ॥

ಈಸಾಡೆ ನೀರು ಮೈಯೊಳು ।
ಪೂಸಿದವೋಲಿರದೆ ಪದ್ಮಪತ್ರದನೀರಂತೆವೊ- ॥
ರಸಿ ಪೋಗೆ ತನುವಿಂ- ।
ಬಿಸರಮೆನಿಪ್ಪತ್ತಾರು ದಿನದೊಳ್ ಮರಣಂ ॥ ೧೪೪ ॥

ಉರದೊಳ್ ನೊಸಲೊಳ್ ತೊಡೆಯೊಳ್ ।
ಶರೀರದೊಳ್ ಮುಯ್ವುಪೆಗಲು ಬೆನ್ನೊಳ್ ಪುರುಷಂ ॥
ಸಿರಿಗಂಪ ನೆರೆ ಪೂಸಿದೊ- ।
ಡುರದದು ಮುನ್ನಾರೆ ಪಂಚವಿಂಶತಿದಿವಸಂ ॥ ೧೪೫ ॥

ಕಾರಣಮಿಲ್ಲದೆ ಕಣ್ಣೊಳ- ।
ಕಾರಣದಿಂ ನೀರು ಸುರಿಗುಮಪ್ಪೊಡೆ ಮೂಗಿಂ ॥
ವಾರಿಜಭವನುಂ ಅರಂ ।
ಧಾರುಣಿಯೊಳ್ ಕಾಯಲಿಪ್ಪತ್ತೆರಡನೆ ದಿವಸಂ ॥ ೧೪೬ ॥

ಉಟ್ಟಮಡಿ ಮುಡಿದ ಕುಸುಮಂ ।
ತೊಟ್ಟವಿಚಿತ್ರಾಂಗಭೂಷಣಂಗಳು ರುಚಿಗಳ್ ॥
ತೊಟ್ಟನೆ ಮಸುಳಿಪ್ಪಡವಂ ।
ಕೆಟ್ಟಳಿಗುಂ ವಿಂಶತಿಪ್ರಮಾಣಂ ದಿವಸಂ ॥ ೧೪೭ ॥

ಕರಚರಣಗ್ರೀವಂಗಳು ।
ಪುರುಷಂಗತಿಶಯದಿ ಮುನ್ನಿನಾಕೃತಿಯುಂತಾ- ॥
ಗಿರದಿರೆ ಹ್ರಸ್ವಾಕಾರಂ ।
ದೊರೆಕೊಳೆ ಪದಿನೆಂಟು ದಿವಸದೊಳ್ ಮಡಿವಕ್ಕುಂ ॥ ೧೪೮ ॥

ಸನ್ನುತದಿಂ ಕನ್ನಡಿಯೊಳ್ ।
ತನ್ನೆಂದಾಕಾರಮಿಲ್ಲದದು ವಿಪರೀತಂ ॥
ಮುನ್ನಿಲ್ಲದದು ಕಂಡಡೆ ।
ಮನ್ನಿಸದಾಸನ್ನಮೃತ್ಯು ಷೋಡಶದಿನದೊಳ್ ॥ ೧೪೯ ॥

ಕಂದ ॥ ಸುಖದಿನಿರೆ ತೊಟ್ಟನೋರ್ಮೆಯೆ ।
ನಖ ದಂತ ವಿಲೋಚನ ತ್ವಚಂಗಳ ರುಚಿಗಳ್ ॥
ವಿಖರಜರಪರುಷದಿಂದಂ ।
ಮುಖರಂದೊರದೊಂದೊಂದೆ ಪಕ್ಷಂ ಬಾಳ್ಗುಂ ॥ ೧೫೦ ॥

ಕರಮೆರಡುಮುಭಯಪಕ್ಷಂ ।
ಸರಳಾಂಗುಳಿಪರ್ವಮನಿತುಮವು ನೆರೆ ತಿಥಿಗಳ್ ॥
ಕರಮೇ ಶುಚಿಯಾಗಿ ನೋರ್ಪುದು ।
ಕರಿದಪ್ಪಾರೇಖೆಯಾದ ತಿಥಿಯೊಳ್ ಮಡಿಗುಂ ॥ ೧೫೧ ॥

ನಡೆವೆಡೆಯು ಮಳಲ ಪಜ್ಜೆಗ- ।
ಳೆಡೆವರಿದೊಡಮುತ್ತಪ್ಪಿತ್ತನರಿವುದು ಪುರುಷಂ ॥
ಮಡಿಗುಂ ಪೆರಗಾರುದಿಂಗಳು ।
ಗಡಿವಜ್ಜೆಯುಮುಂತು ಕೆಟ್ಟೊಡರಿ ಮೂದಿಂಗಳ್ ॥ ೧೫೨ ॥

ಮಾರುತಪಥಮಧೃವಮುಂ ।
ಸಾರಮರುಂಧತಿಯನಂತೆ ಕಾಣದೊಡಾತಂ ॥
ವಾರಿಜಭವನುಂ ಕಾಯನ- ।
ಕಾರಣದಿಂದ್ಯೈವತ್ತೊಂದು ದಿನದೊಳ್ ಮಡಿಗುಂ ॥ ೧೫೩ ॥

ತಿಂಣಂ ಮುಂತಣ ಮನುಜರ ।
ಕಂಣಾವಿಯೊಳಾತ್ಮಬಿಂಬಮಂ ಕಾಣದೊಡೇ- ॥
ನಂಣವುಸಿಯುಂತೇ ನೊಸಲೊಳ್ ।
ಕಂಣುಳ್ಳಂಗರಿದು ಪತ್ತು ದಿನದಿಂ ಕಾಯಲ್ ॥ ೧೫೪ ॥

ಕಿವಿಯೊಳು ಬೆರಳಂತೂತಿ- ।
ಟ್ಟು ವಿಚಳಮತಿನೋಳ್ಕೆ ಘೋಷಮಿಲ್ಲದಿರ್ದೊಡಂ ತಾ- ।
ಯುವನರಿವುದೇಳು ದಿವಸದಿ ।
ಸಮನಿಸುಗುಂ ಮೃತ್ಯುವೆಂದು ನಿಶ್ಚಯದಿಂದಂ ॥ ೧೫೫ ॥

ತೊಟ್ಟಗೆ ನಾಲಗೆ ಕೆಟ್ಟೊಡೆ ।
ನಿಟ್ಟಯಿಸುಗೆ ಮೂರು ದಿವಸದೊಳ್ ಮಡಿವಕ್ಕುಂ ॥
ದಿಟ್ಟಿಡೆಯೆರಡು ದಿವಸಮು ।
ನಿಟ್ಟಳದಿಂ ಹೃದಯಕಂಪದೊಳ್ ದಿನಮೆರಡುಂ ॥ ೧೫೬ ॥

ಭರದಿಂ ಕಂಪಿಸೆ ಕಂಠಂ ।
ಸ್ಥಿರಮಲ್ಲಂ ಮಡಿಗುಮೆರಡು ಝಾವದೊಳಾತಂ ॥
ಕರಮತಿಶಯದಿಂ ತಾಳುಂ ।
ಸ್ಫುರಣೆಯೊಳವನೊಂದು ಝಾವದಾಗಳೆ ಮಡಿಗುಂ ॥ ೧೫೭ ॥

ಕಂದ ॥ ಆಡುವಡೆ ಕಿಚ್ಚಿಲ್ಲದೆ ಪೊಗೆ ।
ಇಡುವಡೆ ಮೇಣ್ಪೊದೆದ ಸೀರೆವುರಿಯೇಳ್ವಡೆ ಮೇಣ್ ॥
ಕಿಡಿಗಳು ತಲೆಯಿಂದಂ ಪೊರ- ।
ಮಡುವಡೆ ಯಮಮುಖಮನೆಯ್ದುಗುಂ ತಡೆಯದವಂ ॥ ೧೫೮ ॥

ಭ್ರೂನಾಸಿಕಾಗ್ರಜಿಹ್ವಾಳಿಗಾಣದೊಜ್ಜಿನಪದಮುಂ ಧ್ಯಾನಿಸುಗಾಯುವದಿನ ಸಂಖ್ಯಾನಂ ನವ ನಿಧಿ ಶರಾಗ್ನಿ ಶಶಿಸಂಖ್ಯಾನಂ ॥ ೯-೯-೫-೩-೧ ॥

ಕಂದ ॥ ಸಮುಸಪ್ತಮುರಾಶಿ ಸ- ।
ದ್ಯುಮಣಿಯೊಳಾಮಕರ ಲಗ್ನದೊಳ್ ನೋಡುಗೆ ಸಂ- ॥
ಕ್ರಮಣಮನಮಳಮನಪ್ಪಟು ।
ಸಮುದಾತು ಜಿತಾಸನಂ ಸ್ವನಾಳಿಗಳೆಡೆಯೊಳ್ ॥ ೧೫೯ ॥

ಶರರಸಗಿರಿ ವಸುನವದಶ- ।
ಶರಹತವಿಂಶತಿ ಮಿತಘಟಿಕೆಯುಂ ಭಂದಿಶಖವಸು- ॥
ಖರಸವಿಯುಶರಸುರತತ್ವಾಬ ಕೃ- ।
ಷ್ಣರವಿಯುಂ ಶಿತಶಶಿಗತಿಯನರಿ ಜೀವಿತಮಂ ॥ ೫,೬,೭,೮,೯,೧೦,೧೦೦,೮೦,೬೦,೫೦, ೩೩,೨೫, ॥ ೧೬೦ ॥

ಕರವಾರ್ಧಿ ಗಜಾಯಾಮುದೇ ।
ಕರಾಗ್ನಿಗತಿದಿನದಿ ನೆಗಳೆತತ್ವಾರ್ಕದಿಶಾ ॥
ಕರಿಪುರುವರುಷಂಗಳು ।
ಹರಿಶಶಿ ವಿಪರೀತಗತಿಯ ಜೀವಿತದ ಪವಣುಂ॥ ೨,೪,೮,೨,೩,೪,೨೫,೧೨,೧೦,೮,೩, ॥೧೬೧॥

ವ್ರತದಿಶಿದಿವ ಘಟಿಕೆಗಳಿಂ ।
ತ್ರಿತಯಾಕ್ಷಿಂದ್ವಬ್ಧ ಸಂಖೆಗಳು ನಖತತ್ವೋ- ॥
ತ್ಕೃತಿಭಲಾಂಘಟಿಯಿಂ ರಸಾಗ್ನಿ ।
ದ್ವಿತಯ ಕ್ಷಿತಿಮಾಸಮುಭಯ ಚಾರಸ್ಥಿತಿಯಿಂ ॥೫,೧೦,೧೫,೩,೨,೧,೨೦,೨೫,೨೬,೬,೩, ೨,೧, ॥ ೧೬೨ ॥

ಕರಿಕರ ನಿಧಿನಯನಾಂಬರ ।
ಪುರುಮಿಂದ್ವಗ್ನಿಪ್ರರಾಗ ಸುರಘಟಿಕೆ ದಿನಾಂ- ॥
ತರದ ಶರಸಶಿಖಿಕರಶಶಿ ।
ಪರಿಮಿತ ಜೀವಿತದಿನಂಗಳುಭಯೋದಯದೊಳ್ ॥ ೨೮,೨೯,೩೦,೩೧,೩೨,೩೩,೧೫,೧೦, ೬,೩,೨,೧, ॥ ೧೬೩ ॥

ಹೂಂಕಾರಮುಷ್ಣಮಾಗಿರೆ ।
ಹಾಂಕಾರಂ ಶೀತಮಾಗೆ ದಿನಸಪ್ತಕದಿಂ- ॥
ಪೋಂಕುಂ ಪರಲೋಕಕ್ಕೆಂ- ।
ಬೀಂಕುರುಪಂ ಬಗೆವುದಾಪ್ತವಚನಂ ತಥ್ಯಂ ॥ ೧೬೪ ॥

ಕಂದ ॥ ಹೊಸನೀರಿಂ ಕರ್ಚಿ ಪರೀ- ।
ಕ್ಷಿಸುವುದು ಪಾದಂಗಳಿರ್ವುಮೇಗಾಲಲುಜೀ- ॥
ವಿಸುಗುಂ ಕೆಳಗಿಳಿಯಲು ಜೀ- ।
ವಿಸನೆಂದರಿ ಮಾರಸಿಂಗನನುಮತದಿಂ ॥ ೧೬೫ ॥

ಕರಪಾದಂಗಳ ತೊಳೆದಡೆ ।
ನಿರುತಂ ವೊಣಗಿದನ್ತಿರಲ್ಮೂರುದಿನಂ ॥
ಕರಮರಿದು ಮೈಯ್ಯತೊಳೆದೊಡೆ ।
ಇರದಾಗಳೆ ಪೊಟ್ಟೆರೊಣಗೆ ತ್ರಿದಿನಂ ಬಾಳ್ಗುಂ ॥ ೧೬೬ ॥

ಶೀತಳಮೆನಿಸುವ ಪವನಂ ।
ಮಾತೆಂಬಾಯ್ಮೂಗು ಕಂಣುಗುದದಿಂ ಪೋಗ- ॥
ಲ್ಕಾತಂ ಶೀಘ್ರಂ ಪೋಕುಂ ।
ಹೇತುವೆನಲ್ ಮಾಡು ದಾನ ಪೂಜೆಗಳಂ ॥ ೧೬೭ ॥

ಕಂಣೀರ್ಸುರಿವಡಮಾಗದು ।
ತಿಂಣಂ ಹಲುಹತ್ತಿಬಿಡದೆ ಕಾಡುತಿರಲೇ- ॥
ಕಂಣ ದಿನವೆರಡಂ ಬಾಳ್ಗು ।
ಬಂಣಿಸದಿರು ಮಾಡು ದಾನಪೂಜಾದಿಗಳಂ ॥ ೧೬೮ ॥

ನೆಳಲಂ ಕಾಣದೊಡಿನಿಸುಂ ।
ನೆಳಲೆರಡಾಗಿರ್ದುತೋರ್ಪಡಂತೆರಡುದಿನಂ ॥
ಇಳೆದೆಶೆಗಳ್ಪಸುರಾಗಲುವ- ।
ರಿಸಿನ ಮೈಪೂಸೆ ಪತ್ತದಿರೆ ಲಘು ಮರಣಂ ॥ ೧೬೯ ॥

ಕಾಲಜ್ಞಾನಂಗಳುಮಂ ।
ಕೇಳ್ದವಂ ಕಲ್ತಡೇನೊ ಛಾಯಾಪುರುಷಂ ॥
ಕಾಲಮನರಿಪುಗು ನಿರುತಂ ।
ಕೇಳ್ತಾನಾಗಾತ್ಮ ತತ್ವಪರತತ್ವಮುಮಂ ॥ ೧೭೦ ॥

ನಿರುತಂ ತಪ್ಪದು ನಿಚ್ಚಂ ।
ಪರಮಾರ್ಥಮಿದೊಂದೆಸಾಲ್ಗು ಕಾಲಜ್ಞಾನಂ ॥
ತ್ವರಿತಂ ಪೇಳ್ಗುಂ ನಿನಗಂ ।
ಪುರುಷಾಪೇಕ್ಷೆಯೊಳೆ ನೋಡೆ ಪೆರರ್ಗವಂ ಪೇಳ್ಗುಂ ॥ ೧೭೧ ॥

ಕಾರ್ತಿಕ ಮಾರ್ಗಶೀರ್ಷದೊ- ।
ಳಾರ್ತಮನುಳಿ ಪೌರ್ಣಿಮಮವಾಸಿ ಚತುರ್ದಶಿಯೊಳ್ ॥
ಕೀರ್ತಿಸೆ ಪ್ರಾರಂಭಿಸು ಪೀಂ ।
ಮಾರ್ತಂಡನ ತೇಜಮುಳ್ಳದಿನಮದು ಮುಖ್ಯಂ ॥ ೧೭೨ ॥

ಕಂದ ॥ ಜಿತಪದ್ಮಾಸನದಿಂದಂ ।
ಮತಿಯುತ ಸಮಪಾದದಿಂದನಿಂದಿರ್ದು ಮೇಣ್ ॥
ಹಿತಮೆನೆಪೇಳ್ವೆಂ ಪೆರರ್ಗಂ ।
ಸತತಮುದೆಡದಲ್ಲಿ ನಿಲಿಸಿ ನೋಡುಗೆ ತಥ್ಯಂ ॥ ೧೩೩ ॥

ಗಿಡುಮರನ ಮುಗಿಲ ನೆಳಲುಂ ।
ಬಿಡೆ ಕಳಕಳದ ರವಮು ಜೀವದನದುಲಿವುಗಳುಂ ॥
ಕಡುಗಾಳಿ ಶೀತಮಿಲ್ಲದ ।
ಕಡುವಿಸಿಲೊಳು ನೋಡೆ ತೋರ್ಕು ಛಾಯಾಪುರುಷಂ ॥ ೧೩೪ ॥

ನಿರ್ಮೇಘಮೆನಿಪ ದಿನದೊಳ್ ।
ನಿರ್ಮಲಮೆನಿಪೊಂದು ಠಾವಿನೊಳ್ ನಿಂದಿನಿಸುಂ ॥
ನಿರ್ಮಲಚಿತ್ತದಿ ನೋಡಲು ।
ಘಮ್ಮನೆ ತಾಂ ತೋರ್ಕುಮಲ್ಲಿ ಛಾಯಾಪುರುಷಂ ॥ ೧೩೫ ॥

ಇರೆರವಿಪೆರಗೆ ಶರೀರದ ।
ನೆಳಲಗ್ರದಿ ದೃಷ್ಟಿಸೂಸದಿನಿಸುಂ ನೋಡು- ॥
ತ್ತಿರು ನಿರುತಂ ಮೇಗಂ ನೋಡಲು ।
ಪರಮಾರ್ಥಂ ತೋರ್ಕುಮಲ್ಲಿ ಛಾಯಾಪುರುಷಂ ॥ ೧೩೬ ॥

ಧ್ಯಾನಂ ನಿಂದೊಡೆ ನಿನಗಮು- ।
ದೇನುಂ ಸಂದೇಹಮಿಲ್ಲ ದಿವ್ಯಜ್ಞಾನಂ ॥
ತಾನೇಂ ದೊರೆಕೊಳ್ಗುಮೆಂದದ- ।
ನೂನಂಗುಣಂ ಪುಟ್ಟಿ ಕಾಲಮರಿವುದು ಪಿರಿದೆ ॥ ೧೩೭ ॥

ಬಿಳಿದಾಗಿರೆ ಕರಮೇಶುಭಂ ।
ತಿಳಿನೀಂ ಕರಿದಾಗಿರಲ್ಕೆಯಶುಭಮುದಕ್ಕುಂ ॥
ತಳರ್ಗುಂ ನೆಲೆಯಿಂ ಪಸುರಿಂ ।
ಘಳಿಯಿಸುಗುಂ ರಕ್ತದಿಂದೆಪಿರಿದಪ್ಪೆರಂ ॥ ೧೩೮ ॥

ಕನಕ ಛವಿಯಿಂ ರುಜೆಯುಂ ವಿನುತಗುಣಾಕೆಲಕೆ ತೋಱಗಲಂತಾರುಂ, ಕೇಳದುದಂ ತಾಂ ಕೇಳ್ಗುಮಪ್ಪುಡಂ, ಕಾರಣಮಿಲ್ಲದೆ ತನ್ನಿಂ ತಾನೊಂದಂ ಬಗೆದುಬ್ಬೆಗಂ ಬಡುತಿಕ್ಕುಮಪ್ಪೊಡಂ, ಮೂತ್ರ ಪುರೀಷಾದಿಗಳುಂಬಮಿಪ್ಪಾಗಳು ನಿರೋಧಮಪ್ಪೊಡಂ ಎಂಟು ದಿವಸಮಾಯುಷ್ಯಂ ॥

ಕಂದ ॥ ಅರಿವುದು ಕಾಲಜ್ಞಾನಮು- ।
ನರಿವುದು ಬಳಿಕಲ್ಲಿ ನೆಗಳಲಕ್ಕುಂ ತನಗಂ- ॥
ತರಿಯದೆ ಬೆರಗಾಗಿರ್ದೊಡೆ ।
ಯರಿಮುರುಳಕ್ಕುಂ ಸಮಾಧಿಯುಂ ಪಡೆದಪನೆ ॥ ೧೩೯ ॥

ಕಂದ ॥ ಕಲಿಸತ್ತು ಪಂದೆ ಬದುಕಂ ।
ಕಲಿಬದುಕಿಯೇ ಪಂದೆ ಸಾಯುನದು ಸಿಕ್ಷಯದಿಂ ॥
........................
..................................॥ ೧೮೦ ॥

ಬಡಗಲು ಮೂಡಲು ತೆಂಕಲು ।
ಪಡುವಲು ಮುಕ್ಕಾಗಿತೋರಲಿನ ಬಿಂಬಂತಾಂ ॥
ಕೆಡುಗುಮದಾರುಂ ತಿಂಗಳು ।
ಗಡನಾಲ್ಕುಂ ಮೂರುಮೆರಡು ತಿಂಗಳಿನಳಿಗುಂ ॥ ೧೮೧ ॥

ಮನಕುಬ್ಬೆಗಮುಂ ಕರ್ವುರ ।
ಜನಿಯಿಸುಗುಂ ಪಲವು ವರ್ಣದಿಂ ಬಹುದೋಷಂ ॥
........................
..................................॥ ೧೮೨ ॥

ಆರುದಿಂಗಳು ಬಲಗಯ್ಯಂ ।
ನೆರೆಯುದೊಡೆಡಗೈಗೆ ಮೂರು ತಿಂಗಳಮರಣಂ ॥
ಆರಿಬಲಗಾಲಿ ತಿಂಗಳು ।
ಪೆರತೇನೆಡಗಾಲು ಬಾಳ್ಗಂ ದಿನ ಹದಿನೈದುಂ ॥ ೧೮೩ ॥

ಕರಕರಿದಾದೊಡೆ ಪಕ್ಷಂ ।
ಕರಮದು ಪೊಗೆಯಾಗಿ ತೋರಲೇಳು ದಿವಸಂ ॥
ಸಿರುತಮದು ತೋರಿಕರಗಲು ।
ಪರಮಾರ್ಥಂ ಮೂರುದಿನದಿಸಾಗುವುಮೋಘಂ ॥ ೧೮೪ ॥

ತಲೆಕೆಳಗಾಗಲು ದಶದಿನ ।
ತಲೆಯಿಲ್ಲದೆ ತೋರಲಂತ್ರೈದುಂ ದಿವಸಂ ॥
ನೆಲದೊರ್ಬಿದೊರ್ಡೆ ಸದ್ಯಂ ।
ಸಲೆ ಸೋರ್ಪಡೆ ಛಾಯಾಪುರುಷನಿಂದಂ ಪೋಕ್ಕುಂ ॥ ೧೮೫ ॥

ತಲೆಯುಂ ಬಲಗೈ ಎಡಗೈ ।
ಸಲೆ ವೃತ್ತಂ ಬಲದ ಕಾಲುಮಂತೆಡಗಾಲುಂ ॥
ಸಿಲೆ ಕಾಣದೊಡಾರಯ್ದುಂ ।
ಸಲೆ ನಾಲ್ಕುಂ ಮೂರುಮೆರಡುತಿಂಗಳ ಮರಣಂ ॥ ೧೮೬ ॥

ಶಿರದುಂ ಕರದಿಂ ವಿಂಶತಿ ।
ಶಿರಮುಂ ಬಲಗೈಗಳಂತೆ ದಿನವೈದುಂ ॥
ಎರಡುಂಚರಣದಿ ದಶದಿನ ।
ಶಿರಮುಂ ಬಲಗಾಲು ಕೈಯೊಳ್ಕೊಳೊಂಭತ್ತುದಿನಂ ॥ ೧೮೭ ॥

ಕಂದ ॥ ಯೆರಡುಂ ಕರಮುಂ ಬಲಗಾ- ।
ಲಿರದೆಂಟುಂ ದಿವಸಮೆರಡುಕ್ಕೆ ಬಲಕಾಲ್ಗಂ ॥
ನಿರತಮದ್ವೈದುಂ ದಿವಸಂ ।
ಪರಮಾರ್ಥಮಿದೆಂದು ಪೇಳ್ದರನ್ಯರ್ಕೆಲಬರ್ ॥ ೧೮೮ ॥

ಪರಮಾತ್ಮನ ಚಿಹ್ನಮಿದಂ ।
ಪರಮ ಮುನೀಂದ್ರರ್ಕಳಿದನೆ ನೋಡುತ್ತಿರ್ಪರ್ ॥
ಪರಮಾರ್ಥಮಿದುವೆ ತಪ್ಪದು ।
ಪರಮಾತ್ಮನ ಕಾಣಬಕ್ಕುಮಭ್ಯಾಸತೆಯಿಂ ॥ ೧೮೯ ॥

ಪರಮಾತ್ಮನ ಭಾವನೆಯಿಂ ।
ಪರಮಾರ್ಥಂ ಮುಕ್ತಿಯುಕ್ಕುಮೆಂದಡೆ ಪೆರತೇಂ ॥
ಪರಮಾತ್ಮ ಛಾಯೆಯಿಂದಂ ।
ಪರಿಭಾವಿಸಿ ನೋಡೆ ಪೇಳ್ಗು ಪೆರರ್ಗಂ ತನಗಂ ॥ ೧೯೦ ॥

ತನಗೆಂತು ಮರಿವುದರಿದೇ ।
ಮನುಜರ್ತಿರಿಕರುಮನಿರಿಸಿನೆಳಲಗ್ರಮುಮಂ ॥
ಮನದಿಂದೆ ನೋಡಿ ಪೇಳ್ವುದು ।
ತನಗರಿವುದರಂತೆ ನೋಡಿ ಪೇಳ್ವುದು ಪೆರರ್ಗಂ ॥ ೧೯೧ ॥

ವರಪದ್ಮಾಸನದಿಂದಂ ।
ಸ್ಥಿರಮೆನೆಕುಳ್ಳಿತು ಅಂ ಕ್ರೋಂ ಮೆನಿಪ್ಪಕ್ಕರವಂ ॥
ಚಿಂತಿಸಿ ಧ್ಯಾನಂ ನಿಂದಡೆ ।
ಸಂತತಮಂ ತೋರು ಚೋದ್ಯಮಂ ಜನಕೆಲ್ಲಂ ॥ ೧೯೨ ॥

ಇಂತೀಕ್ರಮದಿಂ ನೆನೆಯುಲು ।
ಭ್ರಾಂತಿಲ್ಲದೆ ತಿಳಿವುದರಿದು ಕಾಲಮನಿನಿಸುಂ ॥
ಚಿಂತಿಸದಿಂ ನಿನ್ನಿಂ ।
ಚಿಂತಿಸು ಕಾಲಮನೆ ವಂಚಿಪಂದದ ತೆರನಂ ॥ ೧೯೩ ॥

ವಚನ ॥ ಇಂತು ಶಕುನನಿಮಿತ್ಯಾದಿಗಳಂ ನಿಜಾಯುರವಸಾನಮನರಿದೆಲ್ಲರೊಳಂ ಕ್ಷಮೆಯಂ ಮಾಡಿ ನಿದಾನದೊಳು (ಗುರುಗಳ ಸನ್ನಿಧಾನದೊಳು) ಸಮಸ್ತಾತಿಚಾರಂಗಳನಾಳೋಚಿಸಿ ಕ್ರಮದಿಂದಾಹಾರಪರಿತ್ಯಾಗಂ ಗೆಯ್ದು ಶರೀರಪ್ರಕಂಪಿತೋಚ್ಛ್ವಾಸೋನ್ಮೀಲನಾದಿಗಳಂ ಪರಿಹರಿಸಿ ಪಂಚಪದಂಗಳಂ ನಿಜಶುದ್ಧಾತ್ಮನಂ ಭಾವಿಸುತ್ತಂ ಲೋಕಾಗ್ರದೋಳ್ಮತಿಯನಿಟ್ಟು ಶರೀರಭಾರಮನಿಳಿಪುವುದು ಸಾಧಕತ್ವಮೆಂಬುದಿಂತು॥

ಮತ್ತಂ ಗೃಹಸ್ಥರ್ಮಾಳ್ಪಸಲ್ಲೇಖನೆಯ ಕ್ರಮಮೆಂತೆನೆ—ಶರೀರಸಲ್ಲೇಖನೆಯುಂ, ಕಷಾಯಸಲ್ಲೇಖನೆಯೆಂದು ಇತ್ತೆರನಕ್ಕಿ ॥ ಶರೀರಸಲ್ಲೇಖನೆಯೆಂಬುವದು ಅನಶನಾದಿ ಬಾಹ್ಯತಪಂಗಳಿಂ ಶರೀರಮಂ ಕೃಶಮಾಳ್ಪುದು ॥ ಕಷಾಯಸಲ್ಲೇಖನೆಯೆಂಬುದದು ಪರಿಣಾಮೋತ್ಪತ್ತಿ ನಿಮಿತ್ತಂಗಳಪ್ಪ ಸಮಸ್ತವಸ್ತುಗಳಂ ತೊರೆವುದು ಕಷಾ

ಯಂಗಳ ನಡಗಿಸುವುದುಃ ॥ ಇಂತೀ ಸಲ್ಲೇಖನೆಗಳಂ ಮುನ್ನ ಮಾಡದಿರ್ದೊಡಂ, ಗೃಹಸ್ಥರೆಲ್ಲಿಯೆಲ್ಲಿ ಮಾಳ್ಪರೆಂದೊಡೆ—

ಉಕ್ತಂಚ ಶ್ಲೋ ॥ ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃಪ್ರತೀಕಾರೇ ॥
ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಾಃ ॥ ೨೧ ॥
ಸಮಂತಭದ್ರಸ್ವಾಮಿಕೃತಂ.

ಅರ್ಥ—ಉಪಸರ್ಗ, ದುರ್ಭಿಕ್ಷ, ಮುಪ್ಪು, ರೋಗ ಇವುಗಳಿಗೆ ಪ್ರತೀಕಾರ ಇಲ್ಲದೇ ಇದ್ದ ಪಕ್ಷಕ್ಕೆ ಧರ್ಮಕ್ಕಾಗಿ ಶರೀರವನ್ನು ಬಿಡುವದು, ಅಂದರೆ ನಿಶ್ಚಯವ್ಯವಹಾರದ ಧರ್ಮದೊಳಾತ್ಮನಂ ಕೂಡಿ ಶರೀರಭಾರವಂ ಬಿಡುವದು, ಇದುವೇ ತಪದ ಫಲಂ, ನಿಚ್ಚಲುಂ ಬಯಸುವ ಸಮಾಧಿಮರಣಮೆಂದು ಸರ್ವಜ್ಞರ್ಪೇಳ್ವರು ॥ ಕದಳೀಘಾತದಿಂದಕ್ಕೆ, ಸ್ವಪಾಕದಿಂದಕ್ಕೆ, ಮೇಣಾಯುಃಕ್ಷಯಮುಂ, ಮರಣಮೆಂಬುದಲ್ಲಿ ॥

ಗಾಹೆ॥ ವಿಸವಿಯಣ ರಂಶಂಖಯ ಭಯಸತ್ತಂ ಗಹಣ ಸಂಕಿಲೆಸ್ಸೋಯ ।
ಉಸ್ಸಾಸಾಹಾರಾಣಾ ಣಿರೋದದೋಛಿಜ್ಜದೇ ಆಊ ॥ ೩ ॥

ವಿಷವೇದನಾದಿಗಳಿಂ, ರಕ್ತಕ್ಷಯಮುಂ, ಭಯಮುಂ, ಶಸ್ತ್ರಪ್ರಹರಣಮುಂ, ಸಂಕ್ಲೇಶಮುಂ, ಉಚ್ಛ್ವಾಸನಿರೋಧಮುಂ, ಆಹಾರನಿರೋಧದಿಂ, ಜಲ, ಜ್ವಲನದಿಂ, ಮೃತಿಯನೆಯ್ದುವುದು ಕದಳಿಘಾತವೆಂಬುದು ॥ ಘಾತವಿಲ್ಲದೆ ಗೋಪುಚ್ಛಾಕಾರದಿನಿರ್ದಾಯುಷ್ಯ ನಿಷೇಕಗಳು ಕ್ರಮದಿನುಂಡು ತಪಿಸುವುದು ಸ್ವಪಾಕಮೆಂಬುದು ॥

ಸೂತ್ರಂ ॥ ಮರಣಂ ದ್ವಿತ್ರಿಚತುಃಪಂಚವಿಧಂ ವಾ ॥ ೩೬ ॥

ತಾ:—೧ ನಿತ್ಯಮರಣಮೆಂದುಂ, ೨ ತದ್ಭವಮರಣಮೆಂದುಂ ಎರಡು ತೆರವು ॥

೧ ಭಕ್ತಪ್ರತ್ಯಾಖ್ಯಾನಮರಣ, ೨ ಇಂಗಿನೀಮರಣ, ೩ ಪ್ರಾಯೋಪಗಮನಮರಣಮೆಂದು ಮೂರು ಭೇದವಾಗುವದು ॥

೧ ಸಮ್ಯಕ್ತ್ವಮರಣ, ೨ ಸಮಾಧಿಮರಣ, ೩ ಪಂಡಿತಮರಣ, ೪ ವೀರ್ಯಮರಣ ಎಂದು ನಾಲ್ಕು ಭೇದವಾಗುವದು ॥

೧ ಬಾಲಬಾಲಮರಣಮುಂ, ೨ ಬಾಲಮರಣಮುಂ, ೩ ಬಾಲಪಂಡಿತಮರಣಮುಂ, ೪ ಪಂಡಿತಮರಣಮುಂ, ೫ ಪಂಡಿತಪಂಡಿತಮರಣಮುಮೆಂದು ಪಂಚ (೫) ಪ್ರಕಾರವಾಗುವದು. ಅದು ಹ್ಯಾಗಂದರೆ—

ಮುನ್ನುಪಾರ್ಜಿಸಿದ ಆಯುಷ್ಯದ ಸ್ಥಿತಿಯು ತಪಿಲಂ ಮರಣಮೆಂಬುದು; ಅದು ನಿತ್ಯಮರಣಮೆಂದೊಡಂ, ಆವಿಚಿಮರಣಮೆಂದೊಡಂ, ಏಕಾರ್ಥವು. ಅಲ್ಲಿ ಪರಿಪೂರ್ಣತಟಾಕೋದರಮೆಂತು ಪ್ರತಿದಿನಂ ಕ್ರಮಾನುಗತಿಯಿಂ ಕುಂದುತ್ತಮಿರ್ಕುಮನ್ತೀ ಜೀವಂಗರ್ಭದೊಳ್ನೆಲಸಿದಂದಿಂ ತೊಟ್ಟು ಪ್ರತಿಸಮಯಮಾಯುಷ್ಯಂ ಕ್ರಮಾನುಗತಿಯಿಂ ಕುಂದುತ್ತಮಿರ್ಪುದು ಆವಿಚಿಮರಣಮೆಂಬುದು ॥ ಜನ್ಮಾಂತರ ಪ್ರಾಪ್ತಿಯಂ ಮಾಳ್ಪುದು ತದ್ಭವಮರಣಮೆಂಬುದು ॥

೧ ಸ್ವಪರವೈಯ್ಯಾವೃತ್ಯ ಸಾಪೇಕ್ಷಮಪ್ಪ ಭಕ್ತಪ್ರತ್ಯಾಖ್ಯಾನಮರಣಮುಂ, ಪರಮವೈಯ್ಯಾವೃತ್ಯ ನಿರಾಪೇಕ್ಷಮಪ್ಪ ಇಂಗಿನೀಮರಣಮುಂ, ೩ ಸ್ವಪರವೈಯ್ಯಾವೃತ್ಯ ನಿರಾಪೇಕ್ಷವಾದ ಪ್ರಾಯೋಪಗಮನಮರಣಮೆಂದು ಮೇಣ್ ಮೂರು ತೆರಂ ‖ ೧ ವಾತಪಿತ್ತಶ್ಲೇಷ್ಮಾದಿಗಳಂ ಮತಿಮುಹಿಸಿದೊಡಂ ಸಮ್ಯಕ್ತ್ವಮಂ ಬಿಡದದು ಸಮ್ಯಕ್ತ್ವಮರಣಮುಂ, ೨ ನಿವೃತ್ತಿಪೂರ್ವೋಕ್ತಮಾಗಿ ಶರೀರಭಾರಮನಿಳಿಪುವುದು ಸಮಾಧಿಮರಣಮುಂ, ೩ ನಿವೃತ್ತಿಪೂರ್ವಕಂ ಸ್ವಾತ್ಮತತ್ವಭಾವನಾಪೂರ್ವಕಂ ಶರೀರಮನುಳಿವುದು ಪಂಡಿತಮರಣಮೆಂಬುದು, ೪ ಧೈರ್ಯಂಬೆರಸು ಉತ್ಸಾಹದಿಂ ಭೇದಭಾವನಾಪೂರ್ವಕಂ ಪೊಡಲಂ ಬಿಡುವುದು ವೀರ್ಯಮೆಂಬುದು ಮೇಣ್ ನಾಲ್ಕು ಭೇದಮಕ್ಕುಂ ‖ ೧ ಸಮ್ಯಗ್ದರ್ಶನ, ಜ್ಞಾನ ಚಾರಿತ್ರ ತಪಮೆಂಬ ಚತುರ್ವಿಧಾರಾಧನೆಗಳೊಳೊಂದಾರಾಧನೆಯುಮಿಲ್ಲದ ಮಿಥ್ಯಾದೃಷ್ಟಿಯ ಸಾವು ಬಾಲಬಾಲಮರಣಂ, ೨ ಸಮ್ಯಗ್ದರ್ಶನಾರಾಧನೆಯುಳ್ಳ ಅಸಂಯತ ಸಮ್ಯಗ್ದೃಷ್ಟಿಯ ಸಾವು ಬಾಲಮರಣಂ, ೩ ಸಮ್ಯಗ್ದರ್ಶನಜ್ಞಾನಮೇಕದೇಶಚಾರಿತ್ರಂಗಳಂ ತನಗೆ ವಶಂ ಮಾಡಿ ನೆಗಳ್ವ ದೇಶವ್ರತಿಯ ವೃತಿ ಬಾಲಪಂಡಿತ ಮರಣಂ, ೪ ಚತುರ್ವಿಧಾರಾಧನೆಯೊಳಂ ನಿರತಿಚಾರವೃತ್ತಿಯಿಂ ಕೂಡಿದ ಮಹಾವ್ರತಿಗಳ ಪಂಚತ್ವಂ ಪಂಡಿತಮರಣಂ, ೫ ತದ್ಭವದೊಳು ಕರ್ಮಕ್ಷಯಂ ಗೆಯ್ದು ಸಮಯಮಾತ್ರದಿಂ ಲೋಕಾಗ್ರವಾಸಿಗಳಪ್ಪವರ್ಗಳ ತನುವಿನಾಶಂ ಪಂಡಿತಪಂಡಿತಮರಣಮೆಂದು ಮೇಣಯ್ದು ಭೇದಮಕ್ಕುಂ ‖ ಅಥವಾ ೧ ಸಾಯುರ್ಮರಣಂ, ೨ ನಿರಾಯುರ್ಮರಣ ಭೇದದಿಂ ದ್ವಿವಿಧಮಕ್ಕುಂ ‖ ಅಲ್ಲಿ ವರ್ತಮಾನಸ್ಥಿತಿ ವಿನಾಶಮಾದೊಡಂ ಜನ್ಮಾಂತರಕ್ಕೆ ಬದ್ಧಮಾಯುಷ್ಯ ಸ್ಥಿತಿಸಮೇತಮಪ್ಪ ಸಂಸಾರಿಗಳ ಮರಣಂ ಸಾಯುರ್ಮರಣಮೆಂಬುದದವುಂ ‖ ಸಗುಣಸಾಯುರ್ಮರಣಮೆಂದುಂ, ೧ ನಿರ್ಗುಣಸಾಯುರ್ಮರಣಮೆಂದುಂ, ೨ ದ್ವಿವಿಧಮಕ್ಕುಂ ಅಲ್ಲಿಯುಂ ಯತಿ, ಗೃಹಸ್ಥ ಧರ್ಮದ್ವಯದೊಳಾಗಮೋಕ್ತಮಕ್ರಮದಿಂ ವಿಗತಾರ್ಥಚಾರಿತ್ರವೃತ್ತಿಯಿಂ ನಡಿಯುವ ಜೀವಂಗಳ ಸಮಾಧಿಮರಣಮಂ ಸಗುಣಾಯುರ್ಮರಣಮೆಂಬುದು, ಉಕ್ತ ಧರ್ಮದ್ವಯಾಭಾವದಿಂ ಗುಣಲೇಶಮಿಲ್ಲದೆ ಸ್ವೈರವೃತ್ತಿಯಿಂ ನಡೆಯುವ ಜೀವಂಗಳ ದುರ್ಮರಣಮಂ ನಿರ್ಗುಣಸಾಯುರ್ಮರಣಮೆಂಬುದಿಂತು ಸಾಯುರ್ಮರಣಮಿತ್ತೆರನಕ್ಕು ‖ ವರ್ತಮಾನ ಭಾವಿ ಜನ್ಮಾಂತರ ನಿಬದ್ಧನಿಖಿಳಾಯುರ್ವಂಧ ವಿಚ್ಛಿತ್ತಿಯಿಂ ಕೇವಲಜ್ಞಾನಿಗಳ ಪರಿನಿರ್ವಾಣಮಂ ನಿರಾಯುರ್ಮರಣಮೆಂಬುದಕ್ಕುಂ ‖

ಇನ್ನು ಪಶ್ಚಿಮಸಲ್ಲೇಖನೆಯನರಿದುಕೊಂಬುದೆಂತೆನೆ—ಜಿನಾಗಮದೊಳು ಕುಶಲರಪ್ಪಾಚಾರ್ಯರಯ್ನೂರುಗಾವುದದೊಳಿರ್ದಡಂ ಸಮಾಧಿಪ್ರಿಯರಾದ ದಿವ್ಯ ತಪೋಧನರು ಕ್ರಮಾನುಗತಿಯಿಂದವರ ಶ್ರೀಪಾದನಿಕಟಮಂ ಸಾರ್ದು ಕೃತದೋಷಮಂ ನಿಂದಾಗರ್ಹಣೆಯಿನ್ನವರೊಳು ಆಲೋಚಿಸಿ ಕೃತಪ್ರಾಯಶ್ಚಿತ್ತರಾಗಿ ನೆಗಳ್ವುದು ಕಡೆಯೊಳು ವ್ಯಾಧಿಮೊದಲಾದವರಿಂ ಆಯುಷ್ಯಾವಸಾನಮನಾಚಾರ್ಯರರಿದು ಮಹಾನುಭಾವಂಗೆ ಸಮಾಧಿಯಂ ಮಾಳ್ಪವೆಂದು ಚತುರ್ಗೋಪುರಾನ್ವಿತಮಾಗಿ ಸಮಚತುರಸ್ರಮಪ್ಪಾರಾಧನಾಮಂಡಪಮಂ ಯಥಾವಿಧಿಯಿಂ ಗೃಹಸ್ಥರಿಂ ಸಮಯಿಸಿದದರನಡುವೆ ಚತುರಸ್ರವಾದ ವೇದಿಕೆಯಂ ಶುದ್ಧಮೃತ್ತಿಕೆಯಿಂ ನಿರ್ಮಿಸಿ ಪೂರ್ವದಿಗ್ಭಾಗದೊಳಂ ಮೇಣ್ ಉತ್ತರದಿಗ್ಭಾಗದೊಳಂ ವೀತರಾಗಸರ್ವಜ್ಞಪ್ರತಿಮೆಯನರ್ಚ

ನಾಪುರಸ್ಸರವಾಗಿ ಸಂಸ್ಥಾಪನಂಗೆಯ್ದು ವೇದಿಕೆಯ ಮಧ್ಯದೊಳು ಪ್ರತಿಮಾಭಿಮುಖಮಾಗಿ ಸಮಾಧಿಪ್ರಿಯನಪ್ಪ ತಪೋಧನನಂ ಪಲ್ಯಂಕಾಸನದೊಳು ಮೇಣೇಕಪಾರ್ಶ್ವದೊಳು ನಿರಿಸಿ ತೋರಣ ಧ್ವಜವಿತಾನ ಪುಷ್ಪಧಾಮ ಕಾಳಾಗರು ಮೊದಲಾದ ದೀಪ ಧೂಪ ಭೃಂಗಾರ ಕಳಸ ದರ್ಪಣ ಸರ್ವಧಾನ್ಯಮಾತುಳಂಗ ಛತ್ರತ್ರಯ ಚಾಮರಾದಿ ಮಂಗಲದ್ರವ್ಯಗಳಿಂ ವೇದಿಕೆಯ ನಲಂಕರಿಸಿ ಜಿನಾಭಿಷೇಕಪೂರ್ವಕ ಪೂಜಾರ್ಚನಾದಿ ಮಹಾಮಹಿಮೆಗಳಂ ನಿರ್ವರ್ತಿಸಿದ ನಂತರಂ ತಮ್ಮ ಸಮುದಾಯವಾಸಿಗಳಪ್ಪ ನಿಯತರಪ್ಪಾಚಾರ್ಯರಂ ಕರೆದು ಮಂಡಪದ ಪೂರ್ವದ್ವಾರದಲ್ಲಿ ಪ್ರಥಮಾನುಯೋಗಮನ್ನೋದುತ್ತಂ ಪೇಳುತ್ತಮಿರಿಯೆಂದು ಏಳ್ತಂಡ ಋಷಿಯರಂ ನಿಯೋಜಿಸಿ, ದಕ್ಷಿಣದ್ವಾರದೊಳು ಕರಣಾನುಯೋಗಮನ್ನೋದುತ್ತಂ ಪೇಳುತ್ತಮಿರಿಯೆಂದು ಏಳುತಂಡ ಋಷಿಯರಂ ನಿಯೋಜಿಸಿ, ಪಶ್ಚಿಮದ್ವಾರದೊಳಂ ಚರಣಾನುಯೋಗಮನ್ನೋದುತ್ತಮಿರಿಯೆಂದು ಏಳ್ತಂಡ ಮುನಿಗಳಂ ನಿಯೋಜಿಸಿ, ಉತ್ತರದ್ವಾರದೊಳು ದ್ರವ್ಯಾನುಯೋಗವನ್ನೋದುತ್ತಂ ಪೇಳುತ್ತಮಿರಿಯೆಂದು ಏಳ್ತಂಡ ಯತಿಗಳಂ ನಿಯಮಿಸಿ, ಸಮಾಧಿಪ್ರಿಯನಪ್ಪ ತಪೋಧನನ ಸಮೀಪವರ್ತಿಗಳಾಗಿ ಚತುರ್ವಿಧಾರಾಧನಾಗ್ರಂಥಗಳನ್ನೋದುತ್ತ ಪೇಳುತ್ತಮಿರಿಯೆಂದು ಏಳ್ತಂಡ ಋಷಿಯರಂ ನಿಯಮಿಸಿ, ಪಥ್ಯಪಾನಮಂ ಕೊಟ್ಟು ಮಲಮೂತ್ರಾದಿಗಳಂ ಪರಿಹರಿಸಿ, ನಿರವದ್ಯವೃತ್ತಿಯಿಂ ವಿಸರ್ಜಿಸುವದಕ್ಕೆ ಏಳ್ತಂಡ ಋಷಿಯರಂ ಸಮಕಟ್ಟಿ, ಚತುರ್ದಿಶಾವಲೋಕನಂ ಗ್ರಾಮದ ತಲೆವೊಲಂಬರಂ ಪೋಗಿ ಕ್ಷಾಮ, ಡಾಮರ, ಪರಚಕ್ರ, ದೇಶ, ಕಾಲ, ರಾಷ್ಟ್ರ, ಗ್ರಾಮ, ರಾಜ್ಯಾದಿಗಳ ಸ್ವಸ್ಥದುಸ್ಥಿತಿಯ ಶುದ್ಧಿಯಂ ಬುದ್ಧಿಯಿಂ ಕೊಂಡು ಬರಲೇಳುತಂಡ ಋಷಿಯರಂ ಪೇಳ್ದಿಂತು ನಾಲ್ವತ್ತೊಂಭತ್ತೀರ್ವರಾಚಾರ್ಯರಂ ಸಮಕಟ್ಟಿ, ಬಳಿಕ ಬಹ್ವಾಚಾರ್ಯರಂ ಸಮಾಧಿಪ್ರಿಯರಪ್ಪ ಋಷಿಯರಂ ಸ್ವೀಕರಿಸಿ ಷೋಡಶ ಭಾವನೆಗಳಂ ಚತುಸ್ತ್ರಿಂಶದತಿಶಯಂಗಳಂ ಪರಮ ಚಿದಾನಂದೈಕಸ್ವರೂಪಮಂ ವೀತರಾಗ ನಿರ್ವಿಕಲ್ಪ ಸಮಾಧಿಸ್ವರೂಪಮಂ ಪೇಳುತ್ತಮಿರಲು ಕೇಳುತ್ತ ಮನದೊಳು ಭಾವಿಸುತ್ತಂ ಸರ್ವ ಪ್ರಯತ್ನದಿಂ ಗುರುನಿರೂಪಿತ ಕ್ರಮದಿಂ ಶರೀರಮಂ ಪಳಿಕೆಯ್ದು ತೊತ್ತನುಳಿವಂತುಳಿದು ಲೀಲೆಯಿಂ ಗತ್ಯಂತರಮನೆಯ್ದುವ ಮರಣಂ ಭಕ್ತಪ್ರತ್ಯಾಖ್ಯಾನಮರಣಂ ॥ ೧ ॥ ನೋಕರ್ಮ, ದ್ರವ್ಯಕರ್ಮ, ಭಾವಕರ್ಮ ತ್ರಯರಹಿತ ಸಹಜಶುದ್ಧ ಕೇವಲಜ್ಞಾನಾದ್ಯನಂತಗುಣಸಹಿತಂ ಪರಮಾತ್ಮದ್ರವ್ಯ ಸಮ್ಯಕ್ತ್ವಶ್ರದ್ಧಾನ ಜ್ಞಾನಾನುಷ್ಠಾನರೂಪ ಅಭೇದರತ್ನತ್ರಯಾತ್ಮಕ ವೀತರಾಗ ನಿರ್ವಿಕಲ್ಪಸಮಾಧಿರೂಪ ಸಮುತ್ಪನ್ನ ಪರಮಾನಂದರೂಪ ಸ್ವಸ್ವಭಾವಕ್ಕೆ ಚ್ಯುತಿಯಾಗದಂತೆ ಶೀತದಿಂ ಸಮಾಧಾನಮನರಿದು ಶೀತೋಪಚಾರಮಂ ಉಷ್ಣದಿಂ ಸಮಾಧಾನಮನರಿದು ವಾತೋಪಚಾರಮಂ ಮಾಡಿ ಮತ್ತಂ ಪರ್ಯಂಕಾಸನ ಮುಕ್ತಾಸನಶಯ್ಯೆ ಮೊದಲಾದವುಗಳಲ್ಲಿ ತನಗೆ ಸಮಾಧಾನಮಪ್ಪಂತು ಮಾಡಿಕೊಂಡು ತತ್ಕಾಲೋಚಿತ ಕ್ರಿಯಾವಿಶೇಷಂಗಳಂ ಮಾಡುತ್ತಂ ನಿಃಕ್ರಿಯಾ ಶುದ್ಧಾತ್ಮಭಾವನೆಯೊಳು ಪರಿಣಾಮಮನತಿ ಪ್ರಯತ್ನದಿಂ ಕೂಡುತಂ ಪರಮ ವೈಯ್ಯಾವೃತ್ಯನಿರಾಪೇಕ್ಷೆಯಿಂ ಶರೀರಭಾರಮನಿಳಿಪುವ ಮರಣಂ ಇಂಗಿನೀಮರಣಮೆಂಬುದು ॥ ೨ ॥ ಪರ್ಯಂಕಾಸನಮೇಕಪಾರ್ಶ್ವ ಪಾಗೋಪಾದಾನಮೆಂಬಿವರೊಳಾವುದಾನುಮೊಂದರೊಳು ಶರೀರಮಂ ನಿಯಮಿಸಿ, ಚತುರ್ವಿಂಶತಿ ತೀರ್ಥಕರ ಪರಮದೇವರ ಗುಣಸ್ತವ,

ರೂಪಸ್ತವ, ವಸ್ತುಸ್ತವಂಗಳಂ ಮೊದಲಾಗೊಡೆಯ ಸ್ತವನಂಗಳ ಆಲೋಚನೆ ಪ್ರತಿಕ್ರಮಣ ಪ್ರಾಯಶ್ಚಿತ್ತ ನಿಯಮಾದಿ ದಂಡಕಪರಿವಡಿಯೊಳಂ ವಚನಮಂ ನಿಯಮಿಸಿ, ದರ್ಶನವಿಶುದ್ಧ್ಯಾದಿ ಷೋಡಶಭಾವನೆಗಳಂ ಭಾವಿಸುವ ವಿಷಯದೊಳು ಮನಮಂ ನಿಯಮಿಸಿ, ದೇವ, ಮನುಷ್ಯ, ತಿರ್ಯಂಚರ್ಮಾಳ್ಪ ಚೇತನೋಪಸರ್ಗಮುಂ, ಅಶನಿಪಾತ, ಶಿಲಾಪಾತ, ವಜ್ರಪಾತ, ಭೂಪಾತ, ಗಿರಿಪಾತ, ವೃಕ್ಷಪಾತ, ವಜ್ರಾಗ್ನಿ, ದಾವಾಗ್ನಿ, ವಿಷಭೂಮಿ, ನದಿಪೂರ, ಜಲವರ್ಷಣ, ಶೀತ ವಾತಾತಪಮೆಂದಿವುಮೊದಲಾದವುಗಳಿಂದಾಗುವ ಅಚೇತನೋಪಸರ್ಗಮಾದೊಡಂ, ಪ್ರಬಲವಾದ ಅಗ್ನಿಪುಟಪಾಕದಿಂ ಕಾಂತಿವೆತ್ತ ಕಾಂಚನದಂತೆ ಪರಮೋಪಶಾಂತನಾಗುತ್ತಂ ನಿಜಪರಮಾತ್ಮ ಸ್ವರೂಪದೊಳು ಪರಿಣತಿಯನ್ನವಿಚಲವೃತ್ತಿಯಿಂ ಸಮ್ಯಕ್ಸನ್ಯಸನರೂಪ ವೀರಸನ್ಯಸನಮಂ ಸ್ವೀಕರಿಸಿ ಪರವೈಯ್ಯಾವೃತ್ಯನಿರಾಪೇಕ್ಷೆಯಿಂ ಶರೀರಪರಿತ್ಯಾಗಂಗೆಯ್ದ ಮರಣಂ ಪ್ರಾಯೋಗ ಮರಣಮೆಂಬುದು ‖ ೩ ‖ ಇಂತು ಮೂರು ತೆರದಿಂ ಪಂಡಿತಮರಣಮಂ ಪೇಳಲ್ಪಟ್ಟಿತು ‖ ತದ್ಭವದೊಳು ಸಕಲ ಕರ್ಮಕ್ಷಯಂ ಗೆಯ್ದು ಸಮಯಮಾತ್ರದಿಂ ಲೋಕಾಗ್ರನಿವಾಸಿಗಳಪ್ಪ ವರ್ಗಳ ಮರಣಮಂ ಪಂಡಿತಪಂಡಿತಮರಣಮೆಂಬುದು ಅಥವಾ ಪೂರ್ವಜನ್ಮನಿಬದ್ಧಾಯುಷ್ಯ ಸ್ಥಿತಿಯ ವಿನಾಶಮರಣಮೆಂಬುದು ಮತ್ತು ಸ್ನೇಹಂ, ವೈರಂ, ಮೋಹಂ, ಪರಿಗ್ರಹಂಗಳೆಲ್ಲಮಂ ತೊರೆದು ಬಂಧುಜನಂಗಳಂ ಕ್ಷಮಿಯಿಪುದೆಂದು ನಿಶ್ಶಲ್ಯಂಗೆಯ್ದು ತಾನುಂ ಕ್ಷಮಿಯಿಸಿ ಪ್ರಿಯ ವಚನಂಗಳಂ ನುಡಿದೊಡಂಬಡಿಸಿ ನಿಜನಿವಾಸಮಂ ತ್ಯಜಿಸಿ ಪೊರಮಟ್ಟು ಮುನಿನಿವಾಸಮ ನೆಯ್ದಿ ಸಮಸ್ತ ದೋಷಂಗಳನಾಲೋಚಿಸಿ ಶುದ್ಧಾಂತರಂಗನಾಗಿ ಮಹಾವ್ರತಮನಾಮರ ಣಾಂತ್ಯಮೆನಿಸಿ ಕೈಕೊಂಡು ಗುರುಗಳನುಮತದಿಂ ಚತುರ್ವಿಧಾರಾಧನಪೂರ್ವಕದಿಂ ಸಂಸ್ತ ರಾರೂಢನಾಗಿ ಮುನ್ನಂ ತ್ರಿವಿಧಾಹಾರಮಂ ಪ್ರತ್ಯಾಖ್ಯಾನಮಂ ಕೊಂಡು ಸ್ನಿಗ್ಧಪಾನ ಖರಪಾನ ಮೆಂಬೆರಡರೊಳಗೆ ಮುನ್ನಂ ಸ್ನಿಗ್ಧಪಾನಮಂ ಭಾವಿಸುತಿರ್ದು ಕ್ರಮದಿಂದದುವಂ ಪರಿಹರಿಸಿ ಖರಪಾನಂ ಚಿತ್ತಸಮಾಧಾನನಿಮಿತ್ತಂ ಕೊಂಡು ಕೊಳುತಿರ್ದುಂ ಶಕ್ತಿಯನರಿವಂತಾ ಖರಪಾ ನಮಂ ನಿವೃತ್ತಿಗೆಯ್ದು ನಿರವಧಿಪ್ರತ್ಯಾಖ್ಯಾನಮುಮಪ್ಪುಪವಾಸಮಂ ಕೈಕೊಂಡು ಪಂಚನಮ ಸ್ಕಾರದೊಳಂ ಸ್ವಶುದ್ಧಾತ್ಮಸ್ವರೂಪನೊಳಿಡೆಪಟ್ಟ ಮನಮನೊಡೆಯನಾಗಿ, ಸರ್ವಪ್ರಯತ್ನದಿಂ ಶೀತೋಷ್ಣದಂಶಮಸಕಾದಿ ಪರೀಸಹಂಗಳಂ ಸೈರಿಸುತ್ತಂ, ನಿಬಿಡ ನಿಬದ್ಧ ಪಲ್ಯಂಕಾಸನನಾಗಿ ಮೋಕ್ಷ ಪಟ್ಟಿರ್ದು ಮುನಿಜನಂಗಳೋದುವ ಪಂಚನಮಸ್ಕೃತಿಗಳಂ ಕೇಳುತ್ತಂ,

ಉಕ್ತಂಚ ಗಾಹೆ ‖ ಪಣತಿಸ ಸೋಳ ಛಪ್ಪಂಣ ಚದುದುಗಮೇಗಂ ಚ ಜವಹಝಾಏಹ ।
ಪರಮೇಠ್ಠಿ ವಾಚಯಾಣಂ ಅಂಣಂಚ ಗೂರೂವದೇಸೇಣ ‖ ೪ ‖
ಅರಹಂತಾ ಅಸರೀರಾ ಆಇರಿಯಾ ತಹ ಉವಝ್ಝಾಯಾ- ।
ಮುಣಿಣೋ ಫಡಮಕ್ಕರಣಿಪ್ಪಂಣೋ ಓಂಕಾರಂ ಪಂಚಪರಮೇಠ್ಠೀ ‖ ೫ ‖
ಅರಹಂತ ಸಿದ್ಧ ಆಇರಿಯಾ ಉವಝ್ಝಯಾ ಸಾಹೂ ಪಂಚಪರಮೇಠ್ಠಿ ।
ತೇವಿಹು ಚೇತ್ತಇ ಆದೇತಮ್ಹಾ ಅರಾಹುಮೇಸರಣಂ ‖ ೬ ‖

ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಇರಿಯಾಣಂ, ಣಮೋ ಉವ ಝ್ಝಾಯಾಣಂ, ಣಮೋ ಳೋಏಸವ್ವಸಾಹೂಣಂ ಎಂಬ ಪಂಚನಮಸ್ಕಾರಂಗಳಂ ಸರ್ವಾ

ಕ್ಷರಂಗಳಂ, ಅರಹಂತ ಸಿದ್ಧ ಆಇರಿಯ ಉವಜ್ಝಾಯಾ ಸಾಹೂಯೆಂಬ ಷೋಡಶಾಕ್ಷರಗಳು ಮಂ, ಅರಹಂತ ಸೀಸಾ ಎಂಬ ಷಡಕ್ಷರಂಗಳಂ, ಅಸಿಆಉಸಾ ಎಂಬ ಪಂಚಾಕ್ಷರಂಗಳಂ ಅಸಿಸಾಹೂ ಎಂಬ ಚತುರಕ್ಷರಂಗಳಂ, ಆಸಾ ಎಂಬ ದ್ವಿತೀಯಾಕ್ಷರಂಗಳಂ, ಅ ಎಂಬ ಮೇಣ್ ಅರ್ಹಂ ಎಂಬ ಮೇಣ್ ಓಂ ಎಂಬ ಏಕಾಕ್ಷರಮಂ ಜಿಹ್ವಾಗ್ರಕ್ಕೆ ತರುತಿರ್ದು ಅದು ವಂ ಭಾವಿಸುವ ಶಕ್ತಿಪೋಪುದುಂ, ಮತ್ತೊಂದರದೆಶೆಗೆ ಮನಮಂ ಪರಿಯಲೀಯದೆ ತನ್ನ ನಿರ್ಮಲ ಸ್ವರೂಪಮನೆಯ್ದುತ್ತಂ ಶರೀರಭಾರಮನಿಳಿಪುವುದು.

ಕಂದ ॥ ಸಾರತರನಾತ್ಮನತಿನಿ- ।
ಸ್ಸಾರತರಂ ದೇಹಮೆಂಬ ನಿಶ್ಚಲಮತಿಯಿಂ ॥
ನಾರಯ್ವುಡೆ ಬೆಸಗೊಳ್ವನೆ ।
ಧೀರಂ ತತ್ತನುವನುಳಿವ ಪದದೊಳು ಪೆರರಂ ॥ ೧೯೪ ॥

ದೂರಿಸದೆ ನೆನೆದು ಕೂಳುಂ ।
ನೀರಮನಜ್ಞಾನದಿಂದ ಮಿರುಳುಂ ಪಗಲುಂ ॥
ಸಾರತರ ಪರಮ ಸೌಖ್ಯಸು- ।
ಧಾರಸ ಭರಿತಾತ್ಮತತ್ವಮಂ ನೆನೆ ಮನದೊಳ್ ॥ ೧೯೫ ॥

ಪಟ್ಟಿರ್ಕೆ ಕುಳ್ಳಿರ್ಕೆಮ ।
ನೆಟ್ಟನೆ ನಿಂದಿರ್ಕೆ ಪೊಡಲದೆಂತಿರ್ದೊಡೆ ಮೇಣ್ ॥
ದಿಟ್ಟಿ ನಿಜದಲ್ಲಿ ನಿಲೆ ಹೊಂ- ।
ಗಟ್ಟಿಸನೆ ಮುಕ್ತಿಕನ್ನೆಗಾ ಮುನಿಮಾನ್ಯಂ ॥ ೧೯೬ ॥

ಸುತ್ತಿತೊಳಲಲೀಸದೆ ಮನಮಂ ।
ಮತ್ತೊಂದರೊಳಿರಲುಮೀಯ್ಯದೊಯ್ಯನೆ ತಂದೀ- ॥
ಚಿತ್ತತ್ವದೊಳಿರಸು ನಿಜಾ- ।
ಯತಂ ನಿರ್ಬಾಧಬೋಧಸುಖಮಪ್ಪಿನೆಗಂ ॥ ೧೯೭ ॥

ಭಾವಿಸು ಭಾವಿಸು ಭವ್ಯಮ- ।
ನೋವಚನ ಶರೀರದತ್ತಣಿಂ ಭೇದಿಸಿ ಚಿ- ॥
ದ್ಭಾವಮನೆ ಪಿಡಿದು ನಿಚ್ಚಂ ।
ಭಾವನೆಯಿಂದಲ್ಲದಕ್ಕುಮೆ ಭವನಾಶಂ ॥ ೧೯೮ ॥

## ಸೂತ್ರಂ ॥ ಪಂಚಾತಿಚಾರಾ: ॥ ೩೭ ॥

ತಾ:—ಜೀವಿತಾಶಂಸೆ, ಮರಣಶಂಸೆ, ಭಯ, ಮಿತ್ರ ಸ್ಮೃತಿ, ನಿದಾನಮೆಂದು ಸಲ್ಲೇಖನಾತಿಚಾರಮಯ್ದುತೆರಂ ॥ ೧ ಅದರಲ್ಲಿ ನಿಚ್ಚಲುಮೆನ್ನಬಯಸುವ ಸಮಾಧಿಮರಣಮೆನಗೀಗಳು ದೊರೆಕೊಂಡದೊಳ್ಳಿತ್ತಾದುದೆನ್ನದೆಯುಂ, ಇನ್ನು ಕಿರಿದುದಿವಸಂ ಬದುಕದೀಗಳೇ ಸಾವಾದಪುದೆಂದು ಬಾಳ್ಕೆಯಂ ಬಯಸುವದು ಜೀವಿತಾಶಂಸೆ, ೨ ಈ ಪರೀಷಹಮಂ ಸೈರಿಸಲ್ಕೆ ಅರಿದು ಎನಗೆ ಬೇಗಂ ಮರಣಮೇಕಾಗದೆಂದು ಸಾವಂ ಬಯಸುವದು ಮರಣಶಂಸೆ, ೩ ಇಹ

ಲೋಕಭಯ, ಪರಲೋಕಭಯ, ಅತ್ರಾಣಭಯ, ಅಗುಪ್ತಿಭಯ, ಮರಣಭಯ, ವ್ಯಾಧಿಭಯ, ಆಗಂತುಕಭಯವೆಂದಿವರಿಂದಪ್ಪ ಸಪ್ತಭಯಂಗಳಂ ಮನದೊಳ್ಪುಟ್ಟಿಸುವದು ಭಯವೆಂಬ ತಿಚಾರವಕ್ಕುಂ, ೪ ಪುತ್ರಕಳತ್ರಾದಿ ಬಂಧುಜನಗಳಂ ನೆನೆವುದು ಮಿತ್ರಸ್ಮೃತಿಶಂಸೆ, ೫ ಈ ಸಮಾಧಿಯ ಫಲದಿಂದ ಎನಗಿಂತಪ್ಪ ಐಶ್ವರ್ಯಮಕ್ಕುಮೆಂದು ಸಂಸಾರಭೋಗಮಂ ಬಯಸುವದು ನಿದಾನವೆಂಬುದು ॥ ಇಂತೀ ಸಮಾಧಿಮರಣದ ಫಲದಿಂ ಸೌಧರ್ಮಾದಿ ಕಲ್ಪಂಗಳೊಳು ಇಂದ್ರಾದಿ ಪದವಿಯ ನೆಯ್ದಿ ಸುಖಸುಧಾರಸಮಂ ಪಲವು ಕಾಲಮನುಭವಿಸಿ ಬಂದು ಮನುಷ್ಯಲೋಕದೊಳ್ಪುಟ್ಟ ತೀರ್ಥಕರರ ಪದವಿಯುಮಂ ಚಕ್ರವರ್ತ್ಯಾದಿ ಶ್ರೀಯನನುಭವಿಸಿ ಜಿನದೀಕ್ಷೆಯಿಂ ಸಕಲಕರ್ಮಮಂ ನಿರ್ಮೂಲಂ ಮಾಡಿ ನಿತ್ಯನಿರಾಮಯ ನಿರ್ಮಲ ನಿರ್ವಿಕಾರ ನಿಜಾತ್ಮೋತ್ಥ ಸುಖಾಮೃತದೊಳು ಮುಳಿಗಿ ಮೋಲಾಡುತಿರ್ಪರಿಂತು ಶ್ರಾವಕಾಚಾರಸ್ವರೂಪ ನಿರೂಪಿತಮಾಯ್ತು ॥

---

ಮತ್ತಮಿೂ ಪೆರಗೆ ಪೇಳ್ದ ಶ್ರಾವಕರುಂ, ಮುಂದೆ ಪೇಳ್ವ ಋಷಿಯರುಂ ಭಾವಿಸುವನುಪ್ರೇಕ್ಷೆಗಳೆಂತೆನೆ ॥

## ಸೂತ್ರಂ॥ ದ್ವಾದಶಾನುಪ್ರೇಕ್ಷಾ ॥ ೩೮ ॥

ಗಾಹೆ ॥ ಅದ್ದುವಮಸರಣಮೇಕತ್ತಮಂಣಸಂಸಾರಲೋಕಮಶುಚಿತ್ತಂ ॥
ಆಸವಸಂವರಣಿಜ್ಜರಧಂಮಂ ಬೋಹಿಚ್ಚಚಿತ್ತೇಜ್ಜೋ ॥ ೭ ॥

ತಾ:—೧ ಅಧ್ರುವಾನುಪ್ರೇಕ್ಷೆ, ೨ ಅಶರಣಾನುಪ್ರೇಕ್ಷೆ, ೩ ಏಕತ್ವಾನುಪ್ರೇಕ್ಷೆ, ೪ ಅನ್ಯತ್ವಾನುಪ್ರೇಕ್ಷೆ, ೫ ಸಂಸಾರಾನುಪ್ರೇಕ್ಷೆ, ೬ ಲೋಕಾನುಪ್ರೇಕ್ಷೆ, ೭ ಅಶುಚಿತ್ವಾನುಪ್ರೇಕ್ಷೆ, ೮ ಆಸ್ರವಾನುಪ್ರೇಕ್ಷೆ, ೯ ಸಂವರಾನುಪ್ರೇಕ್ಷೆ, ೧೦ ನಿರ್ಜರಾನುಪ್ರೇಕ್ಷೆ, ೧೧ ಧರ್ಮಾನುಪ್ರೇಕ್ಷೆ, ೧೨ ಬೋಧಿದುರ್ಲಭಾನುಪ್ರೇಕ್ಷೆಗಳೆಂದು ಹನ್ನೆರಡು ಅನುಪ್ರೇಕ್ಷೆಗಳಾಗುವವು. ಅದು ಎಂತೆನೆ—

ಕಂದ ॥ ಘನಬುದ್ಬುದಸದೃಶಂ ಜೀ- ।
ವನ ತನುಧನಪುತ್ರಮಿತ್ರವರ್ಗಂ ಧ್ರುವಮ-॥
ಲ್ತನುಪಮ ಚಿತ್ಕಾಯಂ ಧ್ರುವ- ।
ಮೆನಗೆ ನಿಜಾತ್ಮಾರ್ಥಮೊಂದೇ ನಿಜಗುಣನಿರತಾ ॥ ೧ ॥

ತಾ:—ಗ್ರಾಮನಗರಾದಿ ಸ್ಥಾನಂಗಳುಂ, ದೇವೇಂದ್ರ, ಧರಣೇಂದ್ರ, ಚಕ್ರಧರಾದಿ ಪದವಿಗಳುಂ, ತನುವುಂ, ಮಾತೃ, ಪಿತೃ, ಕಲತ್ರ, ಪುತ್ರಾದಿಗಳು ಜೀವನಿಗೆ ನಿಶ್ಚಯವಲ್ಲವು. ನಿತ್ಯಾನಂದೈಕ ನಿಜಶುದ್ಧಾತ್ಮನೇ ನಿಶ್ಚಯವೆಂದು ಚಿಂತಿಸುವದು ಅಧ್ರುವಾನುಪ್ರೇಕ್ಷೆಯು ॥ ೧ ॥

ಕಂದ ॥ ನರಕಾದಿ ಚತುರ್ಗತಿ ಸಂ- ।
ಸರಣಜನಿತ ದು:ಖಸೇವನಾಸಮಯದೊಳಾ- ॥
ಶ್ಶರಣಂ ನಿನಗೆ ಜಿನಧರ್ಮಂ ।
ಶರಣಲ್ಲದೊಡೆಂದು ನೆನೆ ನಿಜಗುಣರತ್ನಾ ॥ ೨ ॥

ತಾ:— ಎಲೈ ಜೀವನೇ, ಮನುಷ್ಯಗತಿ, ನರಕಗತಿ, ತಿರ್ಯಂಚಗತಿ, ದೇವಗತಿಗಳೆಂಬ ಚತುರ್ಗತಿ ಸಂಸಾರದಲ್ಲಿ ಹುಟ್ಟಿದ ದುಃಖಸೇವನಾಸಮಯದಲ್ಲಿಯೂ, ಮರಣಹೊಂದುವ ಕಾಲದಲ್ಲಿಯೂ ಜಲಗಿರಿವನ ಪಂಕಪ್ರಾಕಾರ ದುರ್ಗವುಂ, ದೇವತೆಗಳುಂ, ಮಂತ್ರೌಷಧಿಗಳುಂ ಗಜ, ತುರಗ, ರಥ, ಪದಾತಿ ಸೈನ್ಯಗಳುಂ, ಧನ, ಕನಕ, ವಸ್ತುಗಳುಂ, ಪತ್ನಿ, ಪುತ್ರ, ಬಂಧು ವರ್ಗಂ ಮೊದಲಾದವುಗಳು ಯಾರೂ ನಿನಗೆ ಶರಣಿಲ್ಲವು. ಪಂಚಪರಮೇಷ್ಠಿಗಳುಂ ಜಿನ ಧರ್ಮವುಂ, ಸ್ವಕೀಯ ಚಿಚ್ಚಮತ್ಕಾರಾತ್ಮದ್ರವ್ಯವೇ ಶರಣೆಂದು ನಂಬುವದು ಅಶರಣಾನು ಪ್ರೇಕ್ಷೆಯು ॥ ೨ ॥

ಕಂದ ॥ ಜನನಮರಣಾದಿ ಗತಿಸಂ- ।
ಜನಿತ ಸುಖಾಸುಖಮನಾತ್ಮರುಚಿವಕ್ಸೇವಾ ॥
ಜನಿತ ಸುಖಮಮೃತ ಸುಖಮು- ।
ಮನನುಭವಿಕುಂ ಜೀವನೊಂದೇ ನಿಜಗುಣರತ್ನಾ ॥ ೩ ॥

ತಾ:—ಹುಟ್ಟುವಾಗಲುಂ, ಬೆಳೆಯುವಾಗಲುಂ, ಸಾಯುವಲ್ಲಿಯುಂ, ಶುಭಾಶುಭಕರ್ಮ ಗಳನ್ನು ಮಾಡುವಕಾಲದಲ್ಲಿಯುಂ, ಅದರ ಫಲವಾದ ಸುಖದುಃಖಗಳನ್ನು ಅನುಭವಿಸುವಾ ಗಲುಂ, ಶುದ್ಧೋಪಯೋಗಯುಕ್ತನಾಗಿ ಸಿದ್ಧರ ಸುಖವನ್ನು ಹೊಂದುವಾಗಲುಂ ಜೀವನೊ ಬ್ಬನೇ, ಬಂಧುವರ್ಗಗಳ ಸಮೂಹವು ಭೋಜನ ಸಹಾಯರಲ್ಲದೆ ತನ್ನ ಸಂಗಡ ಬರುವವ ರಲ್ಲವೆಂದು ಚಿನ್ತಿಸುವದು ಏಕತ್ವಾನುಪ್ರೇಕ್ಷೆಯು ॥ ೩ ॥

ಕಂದ ॥ ಚಿದಮಲಗುಣನಾತ್ಮ ದ್ರವ್ಯ- ।
ದಿಂದ ಭಿನ್ನಂ ಸಮಸ್ತಗುಣ ಪರ್ಯಾಯಂ ॥
ಸದಸದ್ಭೂತ ವ್ಯವಹಾರ- ।
ದಿಂದ ಮನ್ಯಮೆನೆ ಪಡುಗು ನಿಜಗುಣನಿರತಾ ॥ ೪ ॥

ತಾ:—ಜ್ಞಾನ, ದರ್ಶನ, ಸುಖವೀರ್ಯಾದಿಗಳು ಆತ್ಮನ ಸಂಬಂಧಗಳಾದದ್ದರಿಂದ ಅವು ಗಳೆಲ್ಲಾ ತನ್ನವು, ಉಳಿದ ಶರೀರಂ ಮೊದಲಾದ ಭಿನ್ನವಸ್ತುಗಳೆಲ್ಲಾ ಅನ್ಯಗಳೆಂದು ಚಿಂತಿಸು ವದು ಅನ್ಯತ್ವಾನುಪ್ರೇಕ್ಷೆಯು ॥ ೪ ॥

ಕಂದ ॥ ಜಿನವಚನಂ ಪುಸಿಯಲ್ಲೆಂ- ।
ದು ನಂಬಿದಂ ಬಿಡದೆ ಪಂಚಸಂಸಾರ ವಿದೂ- ॥
ರ ನನಾತ್ಮನನಾದರದಿಂ ।
ನೆನೆದೊಡೆ ಸಂಸಾರಮುಂಟೇ ನಿಜಗುಣನಿರತಾ ॥ ೫ ॥

ತಾ:—ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವ ಭೇದವನ್ನುಳ್ಳ ಪಂಚಸಂಸಾರವೆಂಬ ಘೋರಾರಣ್ಯದಲ್ಲಿ ಅನಾದಿವಾಸನಾವಾಸಿತಂಗಳಾದ ಮಿಥ್ಯಾತ್ವ ಅವ್ರತಂಗಳೆಂಬ ಕತ್ತಲೆಯ ಸಮೂಹವನ್ನುಳ್ಳದ್ದರಲ್ಲಿ ಅರ್ಹತ್ಪರಮೇಶ್ವರನಿಂದ ಹೇಳಲ್ಪಟ್ಟ ಪರಮಾಗಮವೆಂಬ ಮಾರ್ಗ ದಪ್ಪಿ ಕಣ್ಣುಕಾಣದೆ ಸಂಚರಿಸುವ ಅಜ್ಞಾನಿಜೀವಗಳೆಂಬ ಮೃಗಗಳನ್ನು, ಜ್ಞಾನಾವರಣಾದಿ ಅಷ್ಟವಿಧಕರ್ಮಗಳೆಂಬ ಬೇಟೆಗಾರರು ಥಕ್ಕನೆ ನೋಡಿ ಸಿಟ್ಟಿನಿಂದ ಹಿಡಿಸಿಕೊಂಡು ಬಂದು

ದುರ್ಮೋಹವೆಂಬ ಕೂರಂಬುಗಳಿಂದ ಹೊಡೆಯಲು ಅವು ಬಂದು ಚುಚ್ಚಿಕೊಂಡು ಮೂರ್ಛೆಯನ್ನು ಹೊಂದಿ ಬಿದ್ದು ಆರ್ತರೌದ್ರ ಪರಿಣಾಮಗಳಿಂದ ಸತ್ತು ನರಕಾದಿ ದುರ್ಗತಿಗಳಿಗೆ ಹೋಗುವವು. ಆ ರೀತಿಯಾಗಿರುವದನ್ನು ತಿಳಿದು, ಸಂಸಾರದಲ್ಲಿ ವಿರಕ್ತರಾಗಿ ವ್ರತಾದಿಗಳನ್ನು ಆಚರಿಸುವ ಜೀವಂಗಳಿಗೆ ಸ್ವಪರ ದ್ರವ್ಯರುಚಿ ಪರಿಚ್ಛಿತ್ತಿ ನಿಶ್ಚಲಾನುಭೂತಿರೂಪ ರತ್ನತ್ರಯಾತ್ಮಕ ದುರ್ಗವನ್ನು ಹೊಂದಲು ಅಪವರ್ಗವು ಪ್ರಾಪ್ತಿಯಾಗುವದೆಂದು ಚಿಂತಿಸುವದು ಸಂಸಾರಾನುಪ್ರೇಕ್ಷೆಯು ॥ ೫ ॥

ಕಂದ ॥ ಸ್ವೀಕೃತರತ್ನತ್ರಯಂ- ।
ಗಾಕಾಶಾದ್ಯಖಿಳ ವಸ್ತು ವಿರಹಿತ ನಿಜ ಚಿ- ॥
ಲ್ಲೋಕಮನಾಲೋಕಿಸುವದೇ ।
ಲೋಕಾನುಪ್ರೇಕ್ಷೆಯಂತೆ ನಿಜಗುಣನಿರತಾ ॥ ೬ ॥

ತಾ:—ಜೀವ, ಪುದ್ಗಲ, ಧರ್ಮಾಧರ್ಮ, ಆಕಾಶ, ಕಾಲಂಗಳೆಂಬ ಷಡ್ದ್ರವ್ಯಗಳು ಯಾವುದರಲ್ಲಿರುತ್ತವೋ ಅದು ಲೋಕವೆನ್ನುವದು, ಆ ಲೋಕವು ಊರ್ಧ್ವಾಧೋಮಧ್ಯಮ ಭೇದವನ್ನುಳ್ಳದ್ದು ಅಕೃತ್ರಿಮ ಸ್ವರೂಪವಾಗಿರುವದು, ಅದಿ, ಅನಂತ್ಯರಹಿತವಾಗಿರುವದು ಕೆಳಗಿಂದಂ ( ತಳದಿಂ ) ಮೊದಲೊಂದು ಸಪ್ತೈಕ ಪಂಚೈಕ ರಜ್ಜುವಿಸ್ತಾರವುಂ ದಕ್ಷಿಣೋತ್ತರಗತ ಸಪ್ತರಜ್ಜ್ವಾಯಾಮವುಂ ಚತುರ್ದಶರಜ್ಜು ಉತ್ಸೇಧವುಂ ಘನೋದಧಿ ಘನಾನಿಲ ತನುವಾತವೆಂಬ ವಾಯುತ್ರಯಂಗಳಿಂದ ಸುತ್ತಲ್ಪಟ್ಟ ಅನಂತಾನಂತವಾದ ಆಕಾಶದ ಮಧ್ಯಭಾಗದಲ್ಲಿರುವದು. ಅದರ ಅಗ್ರಭಾಗದಲ್ಲಿ ಸಿದ್ಧಕ್ಷೇತ್ರವಿರುವದು. ಆ ರೀತಿಯಾದ ಸಿದ್ಧಕ್ಷೇತ್ರವು ಸಕಲ ಕರ್ಮಕ್ಷಯಗಳಿಂದಲ್ಲದೆ ನೋಡಲಸಾಧ್ಯವೆಂದು ತಿಳಿದು ಅಲ್ಲಿಗೆ ಹೋಗಿ ಸೇರುವದಕ್ಕೆ ತಕ್ಕ ಉಪಾಯವನ್ನು ಚಿಂತಿಸುವದು ಲೋಕಾನುಪ್ರೇಕ್ಷೆಯು ॥ ೬ ॥

ಕಂದ ॥ ಶುಚಿಯೆನಿಸಿದ ವಸ್ತುಗಳಮ- ।
ಶುಚಿಯೆನಿಕುಂ ಪೊರ್ದಲೊಡನೆ ಕಾಯಮ್ಮನದರಿಂ ॥
ಶುಚಿಯೆನಿಸದು ಸಂಹನನಂ ।
ಶುಚಿ ನಿಜಚಿತ್ತತ್ತ್ವಮೊಂದೇ ನಿಜಗುಣನಿರತಾ ॥ ೭ ॥

ತಾ:—ಶುಕ್ಲ, ಶೋಣಿತಂಗಳೆಂಬ ಬೀಜಗಳಿಂದ ಕೂಡಿ ಸಪ್ತಧಾತುಮಯವಾಗಿರುವದು. ಯಾವಾಗಲೂ ನವದ್ವಾರಗಳಿಂದ ಬಿಸರ್ಜ ಸುರಿಯುವ ದುರ್ಗಂಧವನ್ನುಳ್ಳದ್ದು ಅನೇಕ ಪ್ರಕಾರವಾದ ವ್ಯಾಧಿಗಳಿಗೆ ಸ್ಥಾನವಾಗಿರುವದು; ಅನಿತ್ಯವಾಗಿರುವದು; ಸೆರೆಮನೆಗೆ ಸಮಾನವಾಗಿರುವದು; ಗಲನ, ಪೂರಣವೇ ಸ್ವರೂಪವಾಗಿರುವದು. ಈ ರೀತಿಯಾದ ಎಲ್ಲಾ ದುರ್ಗುಣಗಳಿಗೆ ಮನೆಯಂತಿರುವ ಈ ಅಶುಚಿಯಿಂದ ತುಂಬಿದ ಶರೀರವನ್ನು ನಂಬಿಕೆಡದೆ, ಹುಳಿತಿರುವ ಕಬ್ಬನ್ನು ಒಳ್ಳೇ ಕ್ಷೇತ್ರದಲ್ಲಿ ಬಿತ್ತಿ ಬೆಳೆದು ಅದರ ಫಲವನ್ನು ಅನುಭವಿಸುವ ಹಾಗೆ ಸುವ್ರತಾಚರಣೆಗಳಿಂದ ಈ ಶರೀರವನ್ನು ಕೃಶಮಾಡಿ ಅವಿನಾಶಿಸುಖವನ್ನು ಕೈಕೊಳ್ಳಬೇಕೆಂದು ಚಿಂತಿಸುವದು ಅಶುಚಿತ್ವಾನುಪ್ರೇಕ್ಷೆಯು ॥ ೭ ॥

ಕಂದ ॥ ಭವವಾರಿಧಿ ಪೋತಮನಾ- ।
ಸ್ರವ ರಹಿತಮನಾತ್ಮತತ್ವಮಂ ಭಾವಿಸುವಂ ॥
ಭವಜಲಧಿಯಂ ದಾಂಟನೇ- ।
ನಮುಮಂ ಸಪ್ರಯುತಯೋಗಿ ನಿಜಗುಣನಿರತಾ ॥ ೮ ॥

ತಾ:—ಕಾದ ಕಬ್ಬಿಣವು ಸರ್ವಾಂಗ ಪ್ರದೇಶದಿಂದ ನೀರನ್ನು ಕುಡಿದುಕೊಳ್ಳುವ ಹಾಗೆ ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ ಮೊದಲಾದ ವಿಭಾವ ಗುಣಗಳೆಂಬ ಕಿಚ್ಚಿನಿಂದ ಬೆಂದು ಜೀವನು ತನ್ನ ಸರ್ವಾಂಗಪ್ರದೇಶದಿಂದ ಕರ್ಮಜಲಗಳನ್ನು ಗ್ರಹಣಮಾಡಿಕೊಳ್ಳುವ ದರಿಂದ ವಿಭಾವಪರಿಣಾಮವು ಕೆಟ್ಟದ್ದೆಂದು ಯಾವಾಗಲೂ ಚಿಂತಿಸುವದು ಆಸ್ರವಾನು ಪ್ರೇಕ್ಷೆಯು ॥ ೮ ॥

ಕಂದ ॥ ಪರಮಾತ್ಮತತ್ವಸೇವಾ- ।
ನಿರತಂ ವ್ರತಸಮಿತಿಗುಪ್ತಿರೂಪ ಸಕಲ ಸಂ- ॥
ವರ್ರೆಯುಕ್ತಂ ಮುಕ್ತಿವಧೂ ।
ವರನಾಗದಿರಂ ವಿವೇಕ ನಿಜಗುಣನಿರತಾ ॥ ೯ ॥

ತಾ:—ಮಿಥ್ಯಾತ್ವವೆಂಬೊರತ್ತೆಯ ದ್ವಾರವನ್ನು ಸಮ್ಯಕ್ತ್ವವೆಂಬ ಬಲವಾದ ಹಲಿಗೆಗ ಳಿಂದ ಮುಚ್ಚುವದು. ಕೊಳೆ, ಹುಸಿ, ಕಳವು, ಅಬ್ರಹ್ಮ ಪರಿಗ್ರಹಕಾಂಕ್ಷೆಗಳೆಂಬ ಅಧರ್ಮ ದೊರತೆಯ ಬಾಗಿಲುಗಳನ್ನು ಪಂಚಾಣುವ್ರತ, ಮಹಾವ್ರತ, ಸಮಿತಿ, ಗುಪ್ತಿರೂಪಗಳಾದ ವಜ್ರದ ಹಲಿಗೆಗಳಿಂದ ಮುಚ್ಚಬೇಕೆಂದು ಚಿಂತಿಸುವದು ಸಂವರಾನುಪ್ರೇಕ್ಷೆಯು ॥ ೯ ॥

ಕಂದ ॥ ಪರಮ ತಪಶ್ಚರಣಾತ್ಮಕ ।
ನಿರಂಜನ ಧ್ಯಾನದಲ್ಲಿ ಸಂವರೆಯಿಂ ॥
ನಿರ್ಜರೆಯು ದೊರೆಕೊಂಡೊಡೆ ಮು ।
ಕ್ತಿರಮಾಪತಿಯಪ್ಪುದರಿದೆ ನಿಜಗುಣನಿರತಾ ॥ ೧೦ ॥

ತಾ:—ವಿಭಾವಪರಿಣತಿಯಿಂದ ಜೀವಪ್ರದೇಶಂಗಳಲ್ಲಿ ಕ್ಷೀರನೀರನ್ಯಾಯದಿಂದ ಬಂದು ಸೇರಿಕೊಂಡಿರುವ ಕರ್ಮಮಲ ಕಲಂಕವನ್ನು ವ್ರತಗುಣಚಾರಿತ್ರಗಳಿಂದ ಕೂಡಿದ ಭೇದ ಜ್ಞಾನವೆಂಬ ಜಲಂಗಳಿಂದ ತೊಳೆಯಬೇಕೆಂದು ಚಿಂತಿಸುವದು ನಿರ್ಜರಾನುಪ್ರೇಕ್ಷೆಯು ॥೧೦॥

ಕಂದ ॥ ಅಮೃತಸುಖನಿಮಿತ್ತಂ ದಶ- ।
ಧರ್ಮಮುಮನಮಲಗುಣರತ್ನತ್ರಯ ॥
ಧರ್ಮಮುಮಂ ನೆನೆವನೇ ।
ನಿರ್ಮಲವಿವೇಕಿ ನಿಜಗುಣನಿರತಾ ॥ ೧೧ ॥

ತಾ:—ರತ್ನತ್ರಯಶುದ್ಧನಾಗಿ ಹನ್ನೊಂದು ಪ್ರಕಾರವಾದ ಗೃಹಸ್ಥಧರ್ಮವನ್ನೂ, ಹತ್ತು ತೆರದ ಯತಿಧರ್ಮವನ್ನೂ, ನಿರತಿಚಾರವೃತ್ತಿಯಿಂದ ಆಚರಿಸದೇ ಹೋದರೆ, ಪರಮೋತ್ಕೃ ವಾದ ಮುಕ್ತಿಸುಖವು ದೊರೆಯುವನು ಅಸಾಧ್ಯವೆಂದು ತಿಳಿದು ಸದಾ ಧರ್ಮಾನುರಾಗವುಳ್ಳವ ನಾಗಿ ಆ ಧರ್ಮವನ್ನೇ ಚಿಂತಿಸುತ್ತಿರುವನು ಧರ್ಮಾನುಪ್ರೇಕ್ಷೆಯು ॥ ೧೧ ॥

ಕಂದ ॥ ಕುಲಕೋಟಿಯೋನಿಮುಖ ಸಂ- ।
ಕುಲದೊಳು ಜಾತ್ಯಾದಿಬೋಧಿದುರ್ಲಭಮದರಿಂ- ॥
ದಲಸದೆ ನೆನೆದುರ್ಲಭ ಬೋ- ।
ಧಿಲಾಭಮಂ ಪಡೆದು ಬಿಡದೆ ನಿಜಗುಣನಿರತಾ ॥

ಅಯದ ನಿಜಶುದ್ಧರತ್ನ- ।
ತ್ರಯಯತ್ನಮೇ ಲಾಭಮೆನಲ್ ಬೋಧಿ ಭಾವಿಸುಗತಿ- ॥
ಶಯುನಾಬೋಧಿಯನೆಯ್ದಿಸುವದಲ್ಲಿ ನಿ- ।
ಶ್ಚಯದ ಸಮಾಧಿಯಲ್ತೆ ನಿಜಗುಣನಿರತಾ ॥ ೧೨ ॥

ತಾ:—ಲೋಕದೊಳು ಎಲ್ಲಿಯುಂ ಸ್ಥಾವರ ಪೃಥ್ವೀಕಾಯಾದಿ ಜೀವಗಳು ಅನಂತಾನಂತಭರಿತವಾಗಿರುವದರಿಂದ ತ್ರಸಜಾತಿಯಲ್ಲಿ ಹುಟ್ಟುವದು ಬಹಳ ದುರ್ಲಭವು; ಅದರಲ್ಲಿಯೂ ವಿಕಲೇಂದ್ರಿಯಗಳು ಅನಂತಾನಂತವಾಗಿರುವದರಿಂದ ಪಂಚೇಂದ್ರಿಯತ್ವವನ್ನು ಪಡೆಯುವದು ಅತ್ಯಂತ ದುರ್ಲಭವಾಗಿರುವದು; ಅದರಲ್ಲಿಯೂ ಮೃಗ, ಪಶು, ಪಕ್ಷಿ ಮೊದಲಾದ ತಿರ್ಯಕ್ ಜೀವಗಳು ಅಸಂಖ್ಯಾತವಾಗಿರುವದರಿಂದ ಮನುಷ್ಯಜನ್ಮವನ್ನು ಪಡೆಯುವದು ಅಸಾಧ್ಯವು; ಅಲ್ಲಿಯೂ ಹಿತಾಹಿತವಿವೇಕವಿಕಲರಾಗಿ ಮ್ಲೇಚ್ಛದೇಶಗಳಲ್ಲಿ ಹುಟ್ಟುವವರು ಅನೇಕರಾಗಿರುವದರಿಂದ ಸೌಜನ್ಯರಾಗಿ ಸುದೇಶಗಳಲ್ಲಿ ಹುಟ್ಟುವದು ಪರಮ ದುರ್ಲಭವು; ಅದರಲ್ಲಿಯೂ ಕುಲಹೀನರಧಿಕರಾಗಿರುವದರಿಂದ ಸತ್ಕುಲವನ್ನು ಪಡೆಯುವದು ಅತ್ಯಂತ ದುರ್ಲಭವು; ಅದರಲ್ಲಿಯೂ ಅಲ್ಪಾಯುಷ್ಯರುಂ ದುರ್ಬಲರುಂ ಕುರೂಪಿಗಳುಂ ಇಂದ್ರಿಯಪಟುತ್ವವಿಲ್ಲದವರುಂ ದರಿದ್ರರುಂ ಸತ್ಸಂಗತಿಯಿಲ್ಲದವರುಂ ಅನೇಕರಾಗಿರುವದರಿಂದ ದೀರ್ಘಾಯುಷ್ಯರಾಗಿಯೂ, ಇಂದ್ರಿಯಪಟುತ್ವವುಳ್ಳವರಾಗಿಯೂ ಸಕಲ ಸಂಪತ್ಸಮೇತರಾಗಿಯೂ ಸತ್ಸಂಗತಿಯುಳ್ಳವರಾಗಿಯೂ ಇರುವಂಥವರನ್ನು ಪಡೆಯಲಸಾಧ್ಯವು. ಮತ್ತಂ ಅತ್ಯಂತ ಪುಣ್ಯಸುಕೃತದಿಂದ ಇವುಗಳೆಲ್ಲಾ ಲಭಿಸಿದರೂ ಸದ್ಧರ್ಮವನ್ನು ಪಡೆಯುವದು ಪರಮ ದುರ್ಲಭವು. ಒಂದುವೇಳೆ ಸದ್ಧರ್ಮವು ದೊರೆಕೊಂಡರೂ ರತ್ನತ್ರಯಶುದ್ಧಿಯುಂ ತತ್ವಶ್ರದ್ಧಾನವುಂ ತಪೋಭಾವನೆಯುಂ ಧರ್ಮಭಾವನೆಯುಂ ಸಂಸಾರಶರೀರಭೋಗಗಳಲ್ಲಿ ವೈರಾಗ್ಯವುಂ ಸಮಾಧಿಮರಣವುಂ ಬೋಧಿದುರ್ಲಭವುಂ ಪ್ರಾಪ್ತಿಯಾಗುವದು ಪರಮ ದುರ್ಲಭವೆಂದು ಚಿಂತಿಸುತ್ತಿರುವದು ಬೋಧಿದುರ್ಲಭಾನುಪ್ರೇಕ್ಷೆಯು ॥ ೧೨ ॥

ಇಂತೀ ಪ್ರಕಾರವಾದ ದ್ವಾದಶಾನುಪ್ರೇಕ್ಷೆಗಳನ್ನು ಭಾವಶುದ್ಧಿಯಿಂದ ನಿರಂತರಂ ಭಾವಿಸುವ ಭವ್ಯರಿಗೆ ಸ್ವರ್ಗಮೋಕ್ಷಾದಿ ಸುಖಗಳು ತಪ್ಪದೆ ಪರಂಪರೆಯಿಂದಾಗುವವು.



ಓಂ ಪರಮಾತ್ಮನೇ ನಮಃ।

# ಯತಿಧರ್ಮವು.

## ಸೂತ್ರ॥ ಯತಿಧರ್ಮಂ ದಶವಿಧಃ ॥ ೭೯ ॥

ತಾಃ—ಯತಿಧರ್ಮವು ಹತ್ತುವಿಧವು. ಅದು ಹ್ಯಾಗೆಂದರೆ—೧ ಉತ್ತಮ ಕ್ಷಮೆಯುಂ, ೨ ಉತ್ತಮ ಮಾರ್ದವಮುಂ, ೩ ಉತ್ತಮ ಆರ್ಜವಮುಂ, ೪ ಉತ್ತಮ ಶೌಚಮುಂ, ೫ ಉತ್ತಮ ಸಂಯಮಮುಂ, ೬ ಉತ್ತಮ ತಪಮುಂ, ೭ ಉತ್ತಮ ತ್ಯಾಗಮುಂ, ೮ ಉತ್ತಮಾಕಿಂಚನ್ಯ ಮುಂ, ೯ ಉತ್ತಮ ಸತ್ಯಮುಂ, ೧೦ ಉತ್ತಮ ಬ್ರಹ್ಮಚರ್ಯಮುಂ ಎಂದಿವು ದಶಧರ್ಮಂಗಳು. ಅವೆಂತೆಂದೊಡೆ—

ತಾಃ—ಬಯ್ದೊಡಂ ಬಯ್ದನಿಲ್ಲ, ಪೊಯ್ದೊಡಂ ಮೇಣಿರಿದನಿಲ್ಲ, ಇರಿದೊಡಂ ಮೇಣ್ಕೊಂದನಿಲ್ಲ, ಕೊಂದಡಮೇನೆನ್ನ ಭೇದಾಭೇದರತ್ನತ್ರಯಂಗಳಿಂದಗಲ್ಚಿದನಿಲ್ಲದೆನ್ನ ಪೂರ್ವೋಪಾರ್ಜಿತ ಕರ್ಮಮೆಂದು ಸೈರಿಸುವದು ಉತ್ತಮಕ್ಷಮೆಯೆಂಬುವದು ॥ ೧ ॥ ಜ್ಞಾನಾದ್ಯಷ್ಟಮದಂಗಳಿಲ್ಲದುದುಂ, ಪೆರರಿಂ ಪರಿಭವಂ ಬಟ್ಟವನೆನ್ನಂ ಪರಿಭವಂ ಬಡಿಸಿದನೆಂಬ ಮಾನಕಷಾಯದಿಲ್ಲಮೆಯು ಉತ್ತಮ ಮಾರ್ದವವು ॥ ೨ ॥ ಮನವಚನಕಾಯಂಗಳೊಳು ವಕ್ರಮಿಲ್ಲದಿರುವದು ಉತ್ತಮ ಆರ್ಜವವು ॥ ೩ ॥ ಆವಾವ ವಸ್ತುವಿನೊಳುಂ ಲೋಭಕಷಾಯಮಿಲ್ಲದಿರುವದು ಉತ್ತಮ ಶೌಚವು ॥ ೪ ॥ ರಾಗದ್ವೇಷಮೋಹಾದಿಗಳಿಂದಾವದೆಶೆಯಿಂ ಸುಳ್ಳು ಹೇಳದಿರುವದು ಉತ್ತಮ ಸತ್ಯಮೆಂಬುವದು. ಅದವುಂ ೧ ನಾಳ್ನುಡಿಯೊಳಪ್ಪ ಸತ್ಯಂ, ೨ ಪೊಡಂಬಡಿಕೆಯೊಳಪ್ಪ ಸತ್ಯಂ, ೩ ಸ್ಥಾಪನೆಯೊಳಪ್ಪ ಸತ್ಯಂ, ೪ ನಾಮದೊಳಪ್ಪ ಸತ್ಯಂ, ೫ ರೂಪಿನೊಳಪ್ಪ ಸತ್ಯಂ, ೬ ಪ್ರತೀತಿಯೊಳಪ್ಪ ಸತ್ಯಂ, ೭ ವ್ಯವಹಾರದೊಳಪ್ಪ, ಸತ್ಯಂ, ೮ ಸಂಭಾವನೆಯೊಳಪ್ಪ ಸತ್ಯಂ, ೯ ಭಾವನೆಯೊಳಪ್ಪ ಸತ್ಯಂ, ೧೦ ಉಪಮೆಯೊಳಪ್ಪ ಸತ್ಯಂ ಎಂದಿಂತು ಹತ್ತು ಭೇದಮಕ್ಕುಂ ॥

ಕನ್ನಡದೇಶದೊಳರಸನೆಂಬುದುಂ ಲಾಳದೇಶದಲ್ಲಿ ರಾಜನೆಂಬುದುಂ ಮೊದಲಾದುದು ನಾಳ್ನುಡಿಯೊಳಪ್ಪ ಸತ್ಯಂ ॥ ೧ ॥ ಸದಾಚಾರಿಯಂ ಕಂಡು ಮನುಷ್ಯರೊಳೀತಂ ದೇವನೆಂದು ಬಲಗೊಂಡು ಆಡುವುದು ಪೊಡಂಬಡಿಕೆಯೊಳಪ್ಪ ಸತ್ಯಂ ॥ ೨ ॥ ಮರ, ಕಲ್ಲು, ಮಂಣು, ಧಾತುಗಳಿಂದ ಮಾಡಿದ ಪ್ರತಿಮೆಗಳಂ ಜಿನನೆಂಬಿವು ಸ್ಥಾಪನೆಯೊಳಾದ ಸತ್ಯಂ ॥ ೩ ॥ ಜಿನದತ್ತಂ, ಧನದತ್ತಮೆಂಬಿವು ಮೊದಲಾದ ನಾಮಗಳನ್ನಿಟ್ಟು ಕರೆಯುವದು ನಾಮದೊಳಪ್ಪ, ಸತ್ಯಂ ॥ ೪ ॥ ರೂಪಂ ನೋಡಿ ಕೆಂಚ ಕರಿಕಂ ಶ್ಯಾಮಾಂಗನೆಂದಿವು ಮೊದಲಾದುವನೆಂಬುದು ರೂಪಿನೊಳಪ್ಪ ಸತ್ಯಂ ॥ ೫ ॥ ಕಿರಿಪಿರಿಯವಪ್ಪ ವಸ್ತುಗಳಂ ನೋಡಿ ಇದಂ ನೋಡಲಿದೋ ಕಿರಿದು ಇದನೋಡಲು ಇದು ಪಿರಿದೆಂಬುದು ಪ್ರತೀತಿಯೊಳಪ್ಪ ಸತ್ಯಂ ॥ ೬ ॥ ಕೂಳುಂ ತೋವೆಯುಮನಟ್ಟಪೆನೆಂಬುದು ವ್ಯವಹಾರದೊಳಪ್ಪ, ಸತ್ಯಂ ॥ ೭ ॥ ಸಾಹಸಮುಳ್ಳನಂ ಕಂಡು ಭೂಮಿಯಂ ತಲೆಕೆಳಗಂ ಮಾಡಬಲ್ಲನೆಂಬುದು ಸಂಭಾವನೆಯೊಳಪ್ಪ ಸತ್ಯಂ ॥ ೮ ॥

ಪರಪೀಡೆಗೆ ಕಾರಣಂಗಳಾದ ಸತ್ಯಮುಂ ಬಿಟ್ಟು ಪರಹಿತಮಪ್ಪ ಪುಸಿಯುಂ ನುಡಿವುದು ಭಾವದೊಳಪ್ಪ ಸತ್ಯಂ ॥ ೯ ॥ ಗಜಗಮನೆ, ಚಂದ್ರವದನೆ, ಕಳಸಕುಚೆಯೆಂದಿವು ಮೊದಲಾದ ಹೋಲಿಕೆಗಳಂ ನುಡಿವುದು ಉಪಮೆಯೊಳಪ್ಪ ಸತ್ಯಂ ॥ ೧೦ ॥ ಇಂತೀ ಸತ್ಯಂ ಪತ್ತುಭೇದಮಕ್ಕುಂ ॥ ೫ ॥ ಸಕಲ ಪ್ರಾಣಿಗಳಿಗೆ ತ್ರಿಕರಣಶುದ್ಧಿಯಿಂ ಪೀಡೆಯಂ ಮಾಡದದು ಉತ್ತಮ ಸಂಯಮಧರ್ಮಂ ॥ ೬ ॥ ೧ ಭಾವಶುದ್ಧಿಯುಂ, ೨ ಶರೀರಶುದ್ಧಿಯುಂ, ೩ ವಿನಯಶುದ್ಧಿಯುಂ, ೪ ಈರ್ಯಾಪಥಶುದ್ಧಿಯುಂ, ೫ ಪ್ರತಿಷ್ಠಾಪನಶುದ್ಧಿಯುಂ, ೬ ಶಯನಾಸನಶುದ್ಧಿಯುಂ, ೭ ವಾಕ್‌ಶುದ್ಧಿಯುಂ, ೮ ಭಿಕ್ಷಾಶುದ್ಧಿಯುಂ ಎಂಬೀ ಅಷ್ಟ ಶುದ್ಧಿಗಳು ಉತ್ತಮ ಸಂಯಮಮುಂ ರಕ್ಷಿಸುವುದಕ್ಕೆ ಕಾರಣಂಗಳಪ್ಪವು; ಅನಶನಾದಿ ದ್ವಾದಶ ಸುತಪದೊಳ್ನೆಗಳುವದು ಉತ್ತಮ ತಪವು ॥ ೭ ॥

ಉಕ್ತಂಚ ॥ ಕಃಪೂರಯತಿ ದುಃಪ್ಪೂರಮಾಶಾಗರ್ತ್ತಂ ಚಿರಾದಹೋ ।
ಚಿತ್ರಯತ್‌ಕ್ಷಣಮಾತ್ರೇಣ ತ್ಯಾಗೇ ನೈಕೇನ ಪೂರ್ಯತೇ ॥ ೨೨ ॥

ಅನೇಕ ಶತಸಹಸ್ರನದಿಗಳಿಂ ಸಮುದ್ರಕ್ಕೆ ತೃಪ್ತಿಯಿಲ್ಲದ ಹಾಗೆ, ಎನಿತಿಂಧನ ಮಾಡೊಡಂ ಕಿಚ್ಚಿಂಗೆ ತಣಿವಿಲ್ಲದಂತೆ, ಎನಿತು ಪರಿಗ್ರಹಮಾಡೊಡಂ ತೃಷ್ಣೆಗೆ ಕಡೆಯಿಲ್ಲೆಂದು ವಿಚಾರಿಸಿ ಬಾಹ್ಯಾಭ್ಯಂತರ ಪರಿಗ್ರಹಂಗಳಂ ಪರಮಾಣು ಮಾತ್ರಮಿಲ್ಲದಂತೆ ತೊರೆಯುವದು ಉತ್ತಮ ತ್ಯಾಗವು ॥ ೮ ॥

ಮತ್ತಂ ಕೈಕೊಳ್ಳಲ್ಪಟ್ಟ ಶರೀರಾದಿಗಳೆನ್ನವು ಇವಕ್ಕೆ ನಾನೇ ಯಜಮಾನ ( ಸ್ವಾಮಿ ) ನೆಂಬ ಮಮತ್ವಮಿಲ್ಲದಿರುವದು ಉತ್ತಮಾಕಿಂಚನ್ಯವು ॥ ೯ ॥

ಗಾಹೆ ॥ ಥಕ್ಕರಣ ಚವುವಿಹಿಂದಿ ಕದಕಾರಿದ ಅಣುಮೋದಿಯಂಚೇವ ।
ಜೋಗೇಥಘ್ಘಣಮೆತ್ತೊ ಬಮ್ಹಾ ಭಂಗಾಹು ಅಖ್ಖುಸಂಚಾರೇ ॥ ೪ ॥

ತಾ:—೧ ದೇವಸ್ತ್ರೀ, ೨ ಮನುಷ್ಯಸ್ತ್ರೀ, ೩ ತಿರ್ಯಂಚಸ್ತ್ರೀ, ಅಚೇತನಸ್ತ್ರೀಯರೆಂಬ ನಾಲ್ವರು ಸ್ತ್ರೀಯರಲ್ಲಿ ಮನ, ವಚನ, ಕಾಯ, ಕೃತಕಾರಿತಾನುಮೋದನದಿಂ ಸ್ಪರ್ಶನ, ರಸನ, ಘ್ರಾಣ, ಚಕ್ಷು, ಶ್ರೋತ್ರಮೆಂಬಾರು ಇಂದ್ರಿಯಂಗಳಿಂದಲಗೆಯಾಡಿಸಲ್ಯೆವತ್ತು ನಾಲ್ಕು (೫೪) ಭಂಗಮಕ್ಕುಂ ಮತ್ತಂ ತಿರ್ಯಂಚ, ಮನುಷ್ಯ, ಅಚೇತನ, ದೇವಸ್ತ್ರೀಯರೊಳಂ, ಪ್ರತ್ಯೇಕಮಯ್ವತ್ತು ನಾಲ್ಕು ಭಂಗವಾಗಲು ಅಂತು ಇನ್ನೂರುಹದಿನಾರು ( ೨೧೬ ) ಭೇದಮನುಳ್ಳ ಬ್ರಹ್ಮಚರ್ಯವ್ರತದಿಂ ನಿರತಿಚಾರ ವೃತ್ತಿಯಿಂ ನಡೆಯುವದು ಉತ್ತಮ ಬ್ರಹ್ಮಚರ್ಯ ಧರ್ಮವು. ಈ ಪ್ರಕಾರವಾದ ಇವುಗಳು ದಶಧರ್ಮಗಳಾಗುವವು ॥ ೧೦ ॥

---

## ಸೂತ್ರಂ॥ ಅಷ್ಟಾವಿಂಶತಿ ಮೂಲಗುಣಾಃ ॥ ೪೦ ॥

ತಾ:—೫ ಐದು ಮಹಾವ್ರತಂಗಳುಂ, ೫ ಪಂಚಸಮಿತಿಯುಂ, ೫ ಪಂಚೇಂದ್ರಿಯ ನಿರೋಧಮುಂ, ೬ ಆರಾವಶ್ಯಕಂಗಳುಂ, ಲೋಚುಂ, ವಸ್ತ್ರವಿಲ್ಲದಿರುವದುಂ, ಸ್ನಾನಮಾಡದಿರುವದುಂ, ನೆಲವಕ್ಕೆಯುಂ, ಹಲ್ಲುಸುಲಿಯದುದುಂ, ನಿಂದುಣಸುಂ, ಏಕಭುಕ್ತಮೆಂದಿವು ಇಪ್ಪತ್ತೆಂಟು ಮೂಲಗುಣಂಗಳಾಗುವವು. ಇವುಗಳ ಭೇದವು ಹ್ಯಾಗಂದರೆ—

ಸ್ಪರ್ಶನಾದಿಂದ್ರಿಯ ಪ್ರಾಣಪಂಚಕಮುಂ, ಮನ, ವಚನ, ಕಾಯಮೆಂಬ ಬಲಪ್ರಾಣ ತ್ರಯಮುಂ, ಉಚ್ಛ್ವಾಸ, ನಿಶ್ವಾಸಪ್ರಾಣಮುಂ, ಆಯು:ಪ್ರಾಣಮುಂ ಎಂದು ದಶಪ್ರಾಣಂಗಳಂ ಪ್ರಾಣಿಯತ್ತಣಿಂ ನಗಲ್ಚುವ ಪ್ರಮಾದಿಯಪ್ಪವನ ಪ್ರಯತ್ನಕೆ ಸಂರಂಭಮೆಂಬುದು ॥ ೧ ॥

ಕೊಲೆಗೆ ಕಾರಣಂಗಳಾದ ಕೈಯ್ದುಗಳಂ ಕೂಡಿಸುವದು ಸಮಾರಂಭಮೆಂಬುದು ॥೨॥ ಪ್ರಾಣಿಗಳನ್ನು ಕೊಲ್ಲುವ ಉದ್ಯೋಗಮನಾರಂಭಮೆಂಬುದು ॥ ೩ ॥ ಕ್ರೋಧ, ಮಾನ, ಮಾಯಾ, ಲೋಭಗಳೆಂಬ ಕಷಾಯಚತುಷ್ಕಮುಂ, ಮನ, ವಚನ, ಕಾಯಮೆಂಬ ಯೋಗ ತ್ರಯಮುಂ, ಕೃತಕಾರಿತಾನುಮೋದಮೆಂಬೀ ತ್ರಯದಿಂದಲಗೆಯಾಡಿಸುವ ( ಗುಣಿಸುವ ) ಕ್ರಮಮೆಂತೆನೆ ॥

ಸಂರಂಭಮುಂ ಕ್ರೋಧದಿಂ ಮನದಿಂ ಮಾಳ್ಪುದುಂ ॥ ೧ ॥
ಸಂರಂಭಮುಂ ಕ್ರೋಧದಿಂ ಮನದಿಂ ಮಾಡಿಸುವದುಂ ॥ ೨ ॥
ಸಂರಂಭಮುಂ ಕ್ರೋಧದಿಂ ಮನದಿನೊಡಂಬಡುವುದುಂ ॥ ೩ ॥
ಸಂರಂಭಮುಂ ಕ್ರೋಧದಿಂ ವಚನದಿಂ ಮಾಳ್ಪುದುಂ ॥ ೧ ॥
ಸಂರಂಭಮುಂ ಕ್ರೋಧದಿಂ ವಚನದಿಂ ಮಾಡಿಸುವುದುಂ ॥ ೨ ॥
ಸಂರಂಭಮುಂ ಕ್ರೋಧದಿಂ ವಚನದಿಂದೊಡಂಬಡುವುದುಂ ॥ ೩ ॥
ಸಂರಂಭಮುಂ ಕ್ರೋಧದಿಂ ಕಾಯದಿಂ ಮಾಳ್ಪುದುಂ ॥ ೧ ॥
ಸಂರಂಭಮುಂ ಕ್ರೋಧದಿಂ ಕಾಯದಿಂ ಮಾಡಿಸುವದುಂ ॥ ೨ ॥
ಸಂರಂಭಮುಂ ಕ್ರೋಧದಿಂ ಕಾಯದಿಂದೊಡಾಬಡುವದುಂ ॥ ೩ ॥

ಮಾನ, ಮಾಯಾ, ಲೋಭಂಗಳುಂ ಈ ಕ್ರಮದಿಂದೊಂಭತ್ತೊಂಭತ್ತಾಗಲು ಅಂತು ಮೂವತ್ತಾರಕ್ಕುಂ ॥ ೩೬ ॥ ಈ ಕ್ರಮದಿಂದ ಸಮಾರಂಭಕ್ಕಂ ಮೂವತ್ತಾರಕ್ಕುಂ ॥ ೩೬ ॥ ಆರಂಭಕ್ಕುಂ ಮೂವತ್ತಾರಕ್ಕುಂ ॥೩೬॥ ಆಗಲಿಂತು ಕೊಲೆಯಭೇದಂ ನೂರೆಂಟಕ್ಕುಂ॥೧೦೮॥ ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ, ಸಂಜ್ವಲನ, ಕ್ರೋಧ, ಮಾನ, ಮಾಯಾ, ಲೋಭಮೆಂಬೀ ಕಷಾಯವಿಶೇಷಂಗಳಿಂ ಗುಣಿಸಲು ನಾನೂರಮೂವತ್ತೆರಡು ( ೪೩೨ ) ಭೇದಮಕ್ಕುಂ.

ಈ ರೀತಿಯಾಗಿ ಹೇಳಿದ ಕೊಲೆಯನ್ನು ತೊರೆಯುವದು ಕೊಲಲಾಗದೆಂಬ ಮೊದಲ ಮೂಲಗುಣಮೆಂಬುದು ॥ ೧ ॥

ರಾಗದ್ವೇಷದಿಂ ಬರುತ್ತಿರ್ದ ಸುಳ್ಳನ್ನು ತೊರೆಯುವದು ಎರಡನೆಯ ಮೂಲಗುಣವು ॥೨॥

ಊರು ಮೊದಲಾದದೊಳು ಬಿರ್ದ ಬಡವೆಯಂ ಕೊಳ್ಳದುದುಂ ( ಅದತ್ತಾದಾನಂ ಸ್ತೇಯಂ ) ಮೂರನೆಯ ಮೂಲಗುಣವು ॥ ೩ ॥

ಪರಸ್ತ್ರೀಯರಂ ತಾಯಿ ತಂಗೆ ಅಕ್ಕ ಮಗಳೆಂಬಿವರಂ ಕಾಣ್ಬಂತೆ ಕಂಡು ಇನ್ನೂರು ಹದಿನಾರು ತೆರದ ಅಬ್ರಹ್ಮವನ್ನು ತೊರೆಯುವದು ನಾಲ್ಕನೆಯ ಮೂಲಗುಣವು ॥ ೪ ॥

ದಶ ( ೧೦ ) ಚತುರ್ದಶ ( ೧೪ ) ಭೇದೋಪೇತಮಪ್ಪ ಬಾಹ್ಯಾಭ್ಯಂತರ ಪರಿಗ್ರಹಮುಂ ಪರಮಾಣುಮಾತ್ರವಿಲ್ಲದೆ ತೊರೆಯುವದು ನಿಷ್ಪರಿಗ್ರಹಮೆಂಬೈದನೆಯ ಮೂಲಗುಣಂ ॥ ೫ ॥

ಹಸ್ತ್ಯಶ್ವರಥಪದಾತಿ ಬಲಂ ಮೊದಲಾದುವು ನಡೆದು ಶುದ್ಧವಾದ ಬಟ್ಟೆಯೊಳು ನೊಗ ಪ್ರಮಾಣದಳತೆಯಂ (೯ ಗೇಣು) ಮುಂದೆ ನೋಡಿ ನಡೆಯುವದೀರ್ಯಾಸಮಿತಿಯೆಂಬಾರ ನೆಯ ಮೂಲಗುಣಂ ॥ ೬ ॥

ಯುದ್ಧ, ಕಾಮ, ಕರ್ಕಶಮಲ್ಲದೆ ಹಿತಮುಂ ಮಿತಮುಂ ನಿಸ್ಸಂದೇಹವಾಗಿ ಆಗಮದೊಳು ಹೇಳಿದ ಹಾಗೆ ನುಡಿಯುವದು ಭಾಷಾಸಮಿತಿಯೆಂಬೇಳನೆಯ ಮೂಲಗುಣಂ ॥ ೭ ॥

ಮನಃಕೃತ, ಮನಃಕಾರಿತ, ಮನಸಾನುಮೋದಿತ, ವಚನಕೃತ, ವಚನಕಾರಿತ, ವಚನಾನುಮೋದಿತ, ಕಾಯಕೃತ, ಕಾಯಕಾರಿತ, ಕಾಯಾನುಮೋದಿತವೆಂಬ ನವವಿಧ ಪರಿಶುದ್ಧಮಪ್ಪನ್ನಮಂ, ರಾಗದ್ವೇಷಗಳಿಲ್ಲದೆ ಸಮಚಿತ್ತದಿಂ ಚರಿಗೆಯಂ ಮಾಡುವದೆಂಟನೇ ಏಷಣಾಸಮಿತಿಯೆಂಬ ಮೂಲಗುಣಂ ॥ ೮ ॥

ಜ್ಞಾನೋಪಕರಣಂ, ಶೌಚೋಪಕರಣಂ, ಸಂಯಮೋಪಕರಣಂಗಳಂ ನೋಡಿ ಪ್ರತಿ ಲೇಖಿಸಿ ಮಡಗುವದುಂ ತೆಗದುಕೊಳ್ಳುವದುಂ ಆದಾನನಿಕ್ಷೇಪಣಾಸಮಿತಿಯೆಂಬ ವೊಂಭತ್ತ ನೆಯ ಮೂಲಗುಣಂ ॥ ೯ ॥

ಏಕಾಂತವಾದ ಸ್ಥಳಗಳಲ್ಲಿ, ಪ್ರಾಣಿಗಳಿಲ್ಲದಲ್ಲಿ, ದೂರಮಪ್ಪಲ್ಲಿ, ಪರರ್ಗುಪರೋಧ (ಬಾಧೆ) ಮಲ್ಲದಲ್ಲಿ, ಮರೆಯಾಗಿರುವಲ್ಲಿ, ವಿಶಾಲವಾಗಿರುವಲ್ಲಿ ಕಾಯಮಲಮೂತ್ರಂ ಮೊದಲಾದುವಂ ಪರಿಹರಿಸುವದು ಪ್ರತಿಷ್ಠಾಪನಾಶುದ್ಧಿಯೆಂಬ ಹತ್ತನೇ ಮೂಲಗುಣಂ ॥ ೧೦ ॥

ಸ್ಪರ್ಶನೇಂದ್ರಿಯ ವಿಷಯದೊಳು ರಾಗದ್ವೇಷಮಂ ತೊರೆಯುವದು ಹನ್ನೊಂದನೇ ಮೂಲಗುಣಂ ॥ ೧೧ ॥

ರಸನೇಂದ್ರಿಯ ವಿಷಯದೊಳು ರಾಗದ್ವೇಷಗಳನ್ನು ತೊರೆಯುವದು ಹನ್ನೆರಡೇ ಮೂಲಗುಣಂ ॥ ೧೨ ॥

ಘ್ರಾಣೇಂದ್ರಿಯ ವಿಷಯದೊಳು ರಾಗದ್ವೇಷಂ ತೊರೆಯುವದು ಹದಿಮೂರನೇ ಮೂಲ ಗುಣಂ ॥ ೧೩ ॥

ಚಕ್ಷುರಿಂದ್ರಿಯ ವಿಷಯಗಳಲ್ಲಿ ರಾಗದ್ವೇಷಮಂ ಬಿಡುವದು ಹದಿನಾಲ್ಕನೇ ಮೂಲ ಗುಣಂ ॥ ೧೪ ॥

ಶ್ರೋತ್ರೇಂದ್ರಿಯ ವಿಷಯದೊಳು ರಾಗದ್ವೇಷಮಂ ತ್ಯಜಿಸುವದು ಹದಿನೈದನೇ ಮೂಲ ಗುಣಂ ॥ ೧೫ ॥

ಸಕಲ ಪ್ರಾಣಿಗಳೊಳಂ ಸಮತಾಭಾವವನ್ನು ಮಾಡುವದು ಸಮತೆಯೆಂಬ ಹದಿನಾರನೇ ಮೂಲಗುಣಂ ॥ ೧೬ ॥

ವಸ್ತುಸ್ತವ, ರೂಪಸ್ತವ, ಗುಣಸ್ತವಗಳಿಂದ ಅರ್ಹತ್ಪರಮೇಶ್ವರನಂ ಸ್ತುತಿಸುವುದು ಸ್ತವನವೆಂಬ ಹದಿನೇಳನೇ ಮೂಲಗುಣಂ ॥ ೧೭ ॥

ದೇವತಾಸ್ತವನಂ ಮಾಡುವಲ್ಲಿ ಶಕ್ತಿಯನ್ನು ಮರೆಸದೆ ನಿಂತಿರ್ದು ಮೇಣ್ಕುಳ್ಳಿರ್ದು ತ್ರಿಕ ರಣಶುದ್ಧಿಯಿಂ ಕೈಗಳಂ ಮುಗಿದು ಕ್ರಿಯೆಗಳಂ ಪೆಸರ್ಗೊಂಡು ಸಾಯಾಯಿಕ ದಂಡಕಮನು

ಚ್ಚರಿಸಿ ಮೂರಾವರ್ತಮುಮೊಂದು ತಲೆಯೆರಕಮುಮಂತೆ ದಂಡಕದಾದ್ಯಂತ್ಯದೊಳಂ ಪೇಳ್ದ ಕಾಯೋತ್ಸರ್ಗಮಿರ್ದು ಪಂಚಗುರುಗಳ ಚರಣಶರಣಮುಂ ಪೇಳ್ವನಿತು ಪೊತ್ತುಮಾಡಿ ದ್ವಿತೀಯ ದಂಡಕಾದ್ಯಂತ್ಯದೊಳಂ ಇಂತೆ ಮಾಡಲೊಂದು ಕಾಯೋತ್ಸರ್ಗಕ್ಕೆ ದ್ವಾದಶಾವರ್ತನ ಮುಂ ಚತುಶ್ಶಿರೋನತಿಯುಮಕ್ಕುಂ ॥ ಮೇಣ್ ಚೈತ್ಯಾಲಯ ಪ್ರದಕ್ಷಿಣದೊಳಂ ಆವರ್ತನ ತ್ರಯಮುಂ ಯೇಕಶಿರೋನತಿಯುಮಾಗೆ ಚತುರ್ದಿಶೆಯೊಳಂ ದ್ವಾದಶಾವರ್ತನಮುಂ ಚತು ಶ್ಶಿರೋನತಿಯುಮಕ್ಕುಂ ॥ ಜಿನಬಿಂಬದೊಳಮಿಕ್ರಮಂ ಮಾಳ್ಪುದು. ಇಂತಿವಂ ಪಲವು ಸೂಳು ಮಾಡಿದೊಡಂ ದೋಷಮಿಲ್ಲ ॥

ಗಾಹೆ ॥ ದುವೋಣ ದಂಜಹಾಜಾದಂಬಾರಸಾ ವದಮೇವಯಂ ।
ಚದುಸ್ಸಿರಂತಿ ಸುದ್ಧಿಂಚ ಕಿರಿಯಕಂಮಪ ಉಜ್ಜಯೇ ॥ ೯ ॥

ನಾಮ, ಸ್ಥಾಪನಾ, ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವಂಗಳು ನಿದಾನದಿಂ ಪುಣ್ಯ ಪಾಪಾಸ್ರವ ಕಾರಣಮಕ್ಕುಮೆಂತೆನೆ ॥ ಚೈತ್ಯ, ಚೈತ್ಯಾಲಯ, ಗುರು, ನಿಷದ್ಯಕಾಸ್ಥಾನಾದಿಗಳು ಸಮ್ಯಗ್ದೃಷ್ಟಿಗಳಿಗೆ ಕ್ರಿಯಾಕಾರಣ ಯೋಗ್ಯಂಗಳಕ್ಕುಮೆಂತೆನೆ—

ಅಚೇತನಾತ್ಮಕಂಗಳಾಗಿಯುಂ, ಕೊಡುವ ಬುದ್ಧಿಯಿಲ್ಲದೆಯುಂ, ಕಲ್ಪವೃಕ್ಷಚಿಂತಾಮಣಿ ಗಳುಂ ಜೀವಂಗಳ ಪುಣ್ಯಾನುಸಾರದಿಂ ಬೇಡಿದ ಫಲಮಂ ಕುಡುಗುಮಂತೆ ಜಿನರುಂ ಜಿನ ಬಿಂಬಗಳುಂ ಭವ್ಯರ ಶಕ್ತ್ಯಾನುಸಾರದಿಂ ಗೀರ್ವಾಣ ನಿರ್ವಾಣ ಫಲಪ್ರದಾಯಿಗಳಕ್ಕುಂ. ಮತ್ತು ಗರುಡನ ಮುದ್ರೆಯಿಂ ವಿಷಾಪಹಾರಮಪ್ಪಂತೆ ಚೈತ್ಯಾಲೋಕನಮಾತ್ರದಿಂದಲೇ ದುರಿತಾ ಪಹಾರಮಕ್ಕುಂ. ಚೈತ್ಯಚೈತ್ಯಾಲಯಂಗಳಂ ಐಹಿಕಫಲನಿರಪೇಕ್ಷಿತರುಂ ಪರಾನುಗ್ರಹಬುದ್ಧಿಗ ಳುಂ ಅಕಾರಣ ಬಂಧುಗಳುಂ ಮೋಕ್ಷಪುರಪಥ ಪರಿಭ್ರಷ್ಟರುಮೆಂದಿವರ್ಗೆ ಮೋಕ್ಷಮಾರ್ಗ ಮನುಪದೇಶಂಗೆಯ್ವರುಂ ಪ್ರತ್ಯಕ್ಷ ನಿಸ್ತಾರರುಮಪ್ಪವರ್ಗಳತ್ತಣಿಂ ಸಮ್ಯಜ್ಞಾನದಾನಾಣುವ್ರತ ಸಂಯಮ ತಪಾದಿಗಳಪ್ಪುದರಿಂದಾ ಗುರುಗಳಿರ್ದ ಸ್ಥಾನಮುಂ ಕ್ರಿಯಾಕರಣಯೋಗ್ಯಂಗಳು; ಪರಾಧೀನನಾಗಿ ಕ್ರಿಯೆಯಂ ಮಾಳ್ಪಂಗೆ ಕರ್ಮಕ್ಷಯಮಾಗದದುಕಾರಣದಿಂದ ಸ್ವಾಧೀನನಾಗಿ ಕ್ರಿಯೆಯಂ ಮಾಳ್ಪಾಗಳು ಚೈತ್ಯಾಲಯಂಗಳಲ್ಲಿಗೆ ಬಂದು ಕಾಲಂ ತೊಳೆದುಕೊಂಡು ಒಳಗಂ ಪೊಕ್ಕು ತ್ರಿಃಪ್ರದಕ್ಷಿಣಂಗೆಯ್ದೊಳಗಂ ಪೊಕ್ಕೀರ್ಯಾಪಥಶುದ್ಧಿ ಕಾಯೋತ್ಸರ್ಗಮಾಡಿ ಮೊದ ಲೊಳ್ಕಳ್ದಿರ್ದಾಳೋಚಿಸಿ ತದನಂತರಂ ಚೈತ್ಯಭಕ್ತಿ ಕಾಯೋತ್ಸರ್ಗಂ ಕರೋಮಿಯೆಂಬೀ ಬಿನ್ನಪಂ ಮಾಡಿ ನಿಂದಿರ್ದು, ಜಿನೇಂದ್ರಚಂದ್ರಕಾಂತೋಪಲದಿಂದೀಗಳಾನಂದಾಶ್ರು ಜಲಧಾ ರಾಪೂರಪರಿಪ್ಲಾವಿತ ಪಕ್ಷಪುಟನಾಗಿ ಅನಾದಿ ಭವದುರ್ಲಭ ಭಗವದರ್ಹತ್ಪರಮೇಶ್ವರ ಪರಮ ಭಟ್ಟಾರಕ ಪ್ರತಿಬಿಂಬದರ್ಶನಜನಿತ ಹರ್ಷೋತ್ಕರುಷ ಪುಳುಕಿತ ಶರೀರನಾಗಿ ಅತ್ಯಂತ ಭಕ್ತಿ ಭರಾನತ ಮಸ್ತಕನ್ಯಸ್ತ ಹಸ್ತಕುಶೇಶಯ ಕುಟ್ಮಲನಾಗಿ ದಂಡಕದ್ವಯದಾದ್ಯಂತ್ಯದೊಳು ಮಾಳ್ಪುದುಂ ಚೈತ್ಯಸ್ತವನದಿಂ ತ್ರಿಃಪ್ರದಕ್ಷಿಣಂ ಮಾಡಿ ದ್ವಿತೀಯ ವಾರದೊಳು ಕುಳ್ಳಿರ್ದು ಆಲೋಚಿಸಿ ತದನಂತರಂ ಪಂಚಗುರುಭಕ್ತಿ ಕಾಯೋತ್ಸರ್ಗಂ ಕರೋಮಿಯೆಂದು ಬಿನ್ನವಿಸಿ ನಿಂದಿರ್ದು ಪಂಚಪರಮೇಷ್ಠಿಗಳಂ ಸ್ತುತಿಸುವನು. ಮತ್ತಂ ಮೂರನೆಯ ವಾರದೊಳು ಕುಳ್ಳಿರ್ದು ಆಲೋಚಿಸುವುದಾತ್ಮಾಧೀನತ್ವಮುಂ, ಪ್ರದಕ್ಷಿಣೀಕರಮುಂ, ವಾರತ್ರಯಮುಂ,

ನಿಷಣ್ಣತ್ರಯಮುಮಂ, ಚತುಶ್ಶಿರೋನತಿಯುಮಂ, ದ್ವಾದಶಾವರ್ತನಮುಮಂ ಎಂದಿಂತು ಕ್ರಿಯಾಕರ್ಮಂ ಷಡ್ವಿಧಮಕ್ಕುಂ ॥ ೬ ॥

ಮೇಣ್ ಪ್ರದಕ್ಷಿಣದೊಳಂ ದಿಕ್ಚತುಷ್ಟಯದೊಳಂ ದ್ವಾದಶಾವರ್ತಮುಮಂ ಚತುಶ್ಶಿರೋನತಿಯುಮಕ್ಕುಂ. ಮೇಣ್ ಶಿರಶ್ಶಬ್ದಂ ಪ್ರಧಾನವಾಚಿಯಕ್ಕುಂ. ವಂದನಾಪ್ರಧಾನಭೂತಾರ್ಹತ್ಸಿದ್ಧಾಸಾಧವೋ ಧರ್ಮಶ್ಚೇತಿಯೆಂದು ಮೇಣ್ ಧರ್ಮಮಕ್ಕುಂ. ಇದು ಅಷ್ಟಾದಶ ಮೂಲಗುಣಂ.

ಮತ್ತಂ ದೇವತಾಸ್ತವನಕ್ಕೆ ಮೂವತ್ತೆರಡು ದೋಷಮಕ್ಕುಂ. ಅದೆಂತೆನೆ—

೧ ಅರ್ಥಿಯಿಲ್ಲದೆ ಮಾಳ್ಪುದುಂ, ೨ ಬೇಸರದಿಂ ಮಾಳ್ಪುದುಂ, ೩ ಪೊಳಪೊಕ್ಕು ಮಾಳ್ಪುದುಂ, ೪ ಪೆರರ ಘರ್ಜಿಸುತ್ತಂ ಮಾಡುವದುಂ, ೫ ಮೈಯ್ಯಂ ತೂಗುತ್ತಂ ಮಾಡುವದುಂ, ೬ ಮೊಗ ಮೇಲೆತ್ತಿ ಮಾಡುವದುಂ, ೭ ತೊಡಲುತ್ತಂ ಮಾಡುವದುಂ, ೮ ಮೀನಿನಂತೆ ಪೊಳೆಯುತ್ತಂ ಮಾಡುವದುಂ, ೯ ಮನದೊಳು ಮುನಿದು ಮಾಡುವದುಂ, ೧೦ ಎರಡು ಕೈಯ್ಯುಮಂ ತಳಗಿಟ್ಟು ಮಾಡುವದುಂ, ೧೧ ಆಚಾರ್ಯಾದಿಗಳಿಗಂಜಿ ಮಾಡುವದುಂ, ೧೨ ಅವರಿಂದಂ ಅಂಜಿಸಲ್ಪಟ್ಟು ಮಾಡುವದುಂ, ೧೩ ಇಡ್ಡಿಗಾರವಕಾರಣವಾಗಿ ಮಾಡುವದುಂ, ೧೪ ರಸಸಾತಗಾರವಕಾರಣವಾಗಿ ಮಾಡುವದುಂ, ೧೫ ಕದ್ದು ಮಾಡುವದುಂ, ೧೬ ಪ್ರತಿಕೂಲವಾಗಿ ಮಾಡುವದುಂ, ೧೭ ಕಾದಿ ಸಿಕ್ಕಲ್ಯಂಗೆಯ್ಯದೆ ಮಾಡುವದುಂ, ೧೮ ಬಳರುತ್ತಂ ಮಾಡುವದುಂ, ೧೯ ನುಡಿವುತ್ತಂ ಮಾಡುವದುಂ, ೨೦ ಪೆರರ ನೇಡಿಸುತ್ತಂ ಮಾಡುವದುಂ, ೨೧ ನೊಸಲ ಮೂರು ರೇಖೆಯಂ ಮಾಡಿ ಮಾಡುವದುಂ, ೨೨ ಅವಯವಂಗಳಂ ನುಡುಗಿ ಮಾಡುವದುಂ, ೨೩ ಆಚಾರ್ಯಾದಿಗಳಂ ಕಂಡು ಮಾಡುವದುಂ, ೨೪ ಅವರ್ಗಳಂ ಕಾಣಲೀಯದೆ ಮಾಡುವದುಂ, ೨೫ ಸವಣಬಿಟ್ಟಿಯ ಕಳಿಪುವೆನೆಂದು ಮಾಡುವದುಂ, ೨೬ ಉಪಕರಣಂಗಳಂ ಪಡೆದು ಮಾಡುವದುಂ, ೨೭ ಉಪಕರಣಗಳಂ ಪಡೆಯಲೆಂದುಂ ಮಾಡುವದುಂ, ೨೮ ತ್ರಿಸಂಧ್ಯೆಯ ಮೂರು ಘಳಿಗೆಯಿಂನಗ್ಗಳ ಮಾಡುವದುಂ, ೨೯ ಅಲ್ಲಿಂದಂ ಕುಂದಿಸಿ ಮಾಡುವದುಂ, ೩೦ ಮೌನವಿಲ್ಲದೆ ಮಾಡುವದುಂ, ೩೧ ಸನ್ನೆದೋರುತ್ತಂ ಮಾಡುವದುಂ, ೩೨ ಹಾಡುತ್ತಂ ಮಾಡುವದುಂ ಯೆಂದಿವು ಮೊದಲಾಗಿ ದ್ವಾತ್ರಿಂಶ ( ೩೨ ) ದೋಷಂಗಳಕ್ಕುಂ.

ಅತೀತದೋಷಂಗಳನ್ನು ಪರಿಹರಿಸಿ ನಿಂಪನೆ ಗರ್ಹನೆಗಳೊಳ್ಕೂಡಿ ತ್ರಿಕರಣಶುದ್ಧಿಯಿಂದ ಮಾಡುವ ಪ್ರತಿಕ್ರಮಣಂ ಹತ್ತೊಂಭತ್ತನೇ ಮೂಲಗುಣಂ ॥ ೧೯ ॥

ಅದುವುಂ ದೈವಸಿಕಮುಂ, ರಾತ್ರಿಕಮುಂ, ಗೋಚರಮುಂ, ಪಾಕ್ಷಿಕಮುಂ, ಚಾತುರ್ಮಾಸಮುಂ, ಸಂವತ್ಸರಿಕಮುಂ, ಯುಗಾಂತರ ಪ್ರತಿಕ್ರಮಣಮುಂ, ಈರ್ಯಾಪಥಶುದ್ಧಿಯುಂ, ಕೇಶಲೋಚಾತಿಚಾರಮುಂ, ಸಂಸ್ತರಾತಿಚಾರಮುಂ, ಪಂಚಾತಿಚಾರಮುಂ, ಸರ್ವಾತಿಚಾರಮುಂ, ಉತ್ತಮಾರ್ಥಪ್ರತಿಕ್ರಮಣಮುಮೆಂದಿವು ಮೊದಲಾದ ಪ್ರತಿಕ್ರಮಣವು ಪ್ರೀತಿಯಿಂ ಮಾಳ್ಪುದುಮೆಂದಿನೆಲ್ಲಂ ಪ್ರತಿಕ್ರಮಣಭೇದಮಕ್ಕುಂ, ಅನಾಗತದೋಷಮಂ ಪರಿಹರಿಸಲಿಕ್ಕೋಸ್ಕರವಾಗಿ ಮಾಡುವ ಪ್ರತ್ಯಾಖ್ಯಾನಂ ವಿಂಶತಿ ( ೨೦ ) ಮೂಲಗುಣಂ ॥ ೨೦ ॥

ಶುಭಪರಿಣಾಮದಿಂದರ್ಹದಾದಿ ಪಂಚಪರಮೇಷ್ಠಿಗಳಂ ನೆನೆವುದು ಕಾಯೋತ್ಸರ್ಗಮೆಂಬಿಪ್ಪತ್ತೊಂದನೆಯ ಮೂಲಗುಣಂ ॥ ಅದೆಂತೆನೆ—ನಿಂದಿರ್ದು ಕಾಯೋತ್ಸರ್ಗಮಿಪ್ಪಡೆ

ಮುಡದೆಡೆ ನಾಲ್ವೆರಳುಂ, ಉಂಗುಟದೆಡೆ ಪನ್ನೀರ್ವೆರಲುಂ ( ೧೨ ), ಕೊರಲಂ ಕುಸಿಯದೆ ಕರ ಮೆತ್ತದೆ ರುಜ್ವಾಕಾರದಿಂ ನಿಂದು ಕೈಯ್ಯನಿಳಿಯಬಿಟ್ಟಪ್ಪುದು, ಅದಕ್ಕಾಗದಿದ್ದರ ಕುಳ್ಳಿರ್ದು ಕಾಯೋತ್ಸರ್ಗಮಿಪ್ಪಡೆ ಪಲ್ಯಂಕಾಸನದೊಳು ಎಡದ ತೊಡೆಯ ಮೇಲೆ ಬಲದ ತೊಡೆಯ ನ್ನಿಟ್ಟು ಜಾನುಯುಗದ ಮೇಲೆ ವಾಮದಕ್ಷಿಣ ಹಸ್ತಾಂಬುಜಂಗಳ ಮೇಲೊಂದರಮೇಲೊಂದನು ತಳಮಾಗಿಡುವುದಂತಾಯಂದದಿಂದಿರ್ದು ॥

ಕಂದ ॥ ಕರಣಂಗಳು ಕುಸಿದಿರೆ ಮನ- ।
ಮಿರೆ ನೊಸಲೊಳು ಲೋಚನಂಗಳುಳ್ಳರೆದುಗುಳ್ದೊ- ॥
ಪ್ಪಿರೆ ದಸನಂದಸನದೊಳೊಂ- ।
ದಿರೆ ಮಂದರದಂತಾಚಾಲ್ಯದಂತಿರೆ ತನುವುಂ ॥ ೧೯೯ ॥

ಅಂತಿರ್ದು ಪಂಚಗುರುಗಳ ಗುಣಸ್ಮರಣಪೂರ್ವಕಂ ಜಪಿಸುವುದು, ಜಪವೊಂದೊಂದಂ ಮೂರುಚ್ಛ್ವಾಸಮಿಕ್ಕಿ ಮನದೊಳು ಜಪಿಸುವದು, ಮುಂಪೇಳ್ದ ಕ್ರಿಯೆಗಳಿಗೆ ಉಚ್ಛ್ವಾಸಕಾಲನಿಯಮಮಂ ಪೇಳ್ವೆಂ—ಅಹಿಂಸಾವ್ರತದೊಳಾವುದಾನುಮೊಂದರೊಳತಿಚಾರಮಾದೊಡೊಂದಕ್ಕೆ ನೂರೆಂಟು, ದೈವಸಿಕಕ್ಕೆ ನೂರೆಂಟು ( ೧೦೮ ), ರಾತ್ರಿಕನಿಯಮಕ್ಕಂ ತದರ್ಧಂ ( ೫೪ ), ಪಾಕ್ಷಿಕಕ್ಕಂ ಮೂನ್ನೂರು ( ೩೦೦ ), ಚಾತುರ್ಮಾಸಿಕಕ್ಕಂ ನಾನೂರು ( ೪೦೦ ), ಸಾಂವತ್ಸಿಕಕ್ಕೆ ಐನೂರುಂ (೫೦೦), ಗೋಚಾರಕ್ಕಂ, ಮತ್ತೊಂದೂರ್ಗೆ ಪೋದುದಕ್ಕಂ, ಅರ್ಹ ಶ್ರವಣದ ನಿಷಿದ್ಧಿಗಳ್ಗಂ ಉಚ್ಚಾರ ಪಸ್ಸವಣಂಗಳ್ಗೆ ಇಪ್ಪತ್ತೈದು ( ೨೫ ), ಗ್ರಂಥಪ್ರಾರಂಭದೊಳಂ, ಪರಿಸಮಾಪ್ತಿಯೊಳಂ, ಸ್ವಾಧ್ಯಾಯಂಗೊಳ್ವಲ್ಲಿಯುಂ ನಿಷ್ಠಾಪನದೊಳಂ, ದೇವತಾಸ್ತವನದೊಳಂ, ಯೇನಾನು ನಿವೃತ್ತಿಯಂ ಕೈಕೊಳ್ವಡಂ ಇಪ್ಪತ್ತೇಳು ಇಪ್ಪತ್ತೇಳು ಉಚ್ಛ್ವಾಸವನ್ನಿಕ್ಕಿ ಮನದೊಳು ಜಪಿಸುವದು. ಈಯಂದದಿಂ ಶೀತೋಷ್ಣದಂಶಮಶಕಾದಿ ಪರೀಷಹಂಗಳಂ ಸೈರಿಸುತ್ತಂ, ತ್ರಿಕರಣಶುದ್ಧಿಯಿಂ ಜಿನಪ್ರತಿಮೆಯಂದದಿಂ ಕಾಯೋತ್ಸರ್ಗಮಿರ್ದು ಅನುಷ್ಠಾನಂಗಳಂ ಪೇಳ್ದ ಪ್ರಮಾಣದ ಕಡೆಯೊಳು ತುರಿಪಂಗೆಯ್ಯದೆ ನಿಜನಿರಂಜನ ನಿತ್ಯಾನಂದಾತ್ಮಸ್ವರೂಪಮಂ, ಧರ್ಮಶುಕ್ಲಧ್ಯಾನಮಂ ಭಾವಿಸುವದು.

ಕಾಯೋತ್ಸರ್ಗಕ್ಕೆ ಮೂವತ್ತೆರಡು ದೋಷಂಗಳಾವವೆಂದೊಡೆ—ಕುದುರೆಗಾಲಿಕ್ಕಿನಿಲ್ಲುವದುಂ, ಮೈಯ್ಯಂ ತೂಗುತ್ತ ನಿಲ್ಲುವದುಂ, ಯೇನಾನುಮಂ ನೆಮ್ಮಿನಿಲ್ಲುವದುಂ, ಮೇಲುದಂ ಪೊತ್ತು ನಿಲ್ವುದುಂ, ತಳರುಟ್ಟಬೇಡತಿಯಂತೆ ಈರಿಂಕಿನಿಲ್ವುದುಂ, ಮೊಗಮನೆತ್ತಿನಿಲ್ಲುವದುಂ, ಮೊಲೆಯಂ ನೋಡುತ್ತಂ ನಿಲ್ವುದುಂ, ಕಡೆಗಂಣೊಳು ನೋಡುತ್ತಂ ನಿಲ್ವುದುಂ, ಬಾಯಂ ಪೊಳಕಿಸುತ್ತ ನಿಲ್ವುದುಂ, ಕೊರಳನೀಡಿ ನಿಲ್ವುದುಂ, ಎರಡುಂ ಕೈಯ್ಯಂ ಪಿಡಿಕಿಸಿ ನಿಲ್ವುದುಂ, ತಲೆಯಂ ತೂಗುತ್ತಂ ನಿಲ್ವುದುಂ, ಸನ್ನೆದೋರುತ್ತಂ ನಿಲ್ವುದುಂ, ಬೆರಳನಾಡಿಸುತ್ತಂ ನಿಲ್ವುದುಂ, ಹುಬ್ಬುಕುಣಿಸುತ್ತಂ ನಿಲ್ವುದುಂ, ಸೊಕ್ಕಿದಂತೆ ನಿಲ್ವುದುಂ, ಮರುಳುಗೊಂಡಂತೆ ನಿಲ್ವುದುಂ, ಎಂಟುದೆಶೆಯಂ ನೋಡುತ್ತಂ ನಿಲ್ವುದುಂ, ಕೊರಳನೆತ್ತಿ ನಿಲ್ವುದುಂ, ಉಗುಳುತ್ತಂ ನಿಲ್ವುದುಂ, ಎರಗುತ್ತಂ ನಿಲ್ವುದುಂ, ಮೈಯ್ಯಂ ಕೈಯ್ಯಂ ತೀಡುತ್ತಂ ನಿಲ್ವುದುಂ, ಲತೆಯಂತೆ ನಿಲ್ವುದುಂ, ಕಂಭದಂತೆ ಬಲಿದು ನಿಲ್ವುದುಂ, ಸಂಕಲೆಯನಿಕ್ಕಿದಂತೆ ಕಾಲನಗಲ್ಚಿ ನಿಲ್ವುದುಂ, ನೇಲ್ದು

ನಿಲ್ವುದುಂ, ತಲೆಯ ಎಂಟುದೆಸೆಗಳಂ ತೂಗುತ್ತಂ ನಿಲ್ವುದುಂ, ಪೊರಗುತ್ತಂ, ನಿಲ್ವುದುಂ, ಮಾತನಾಡುತ್ತಂ ನಿಲ್ವುದುಂ,....................

ಇಂತಿವೆಲ್ಲಮಂ ಪರಿಹರಿಸಿ ಜಿನಪ್ರತಿಮೆಯಂತೆ ನಿಲ್ಲುವದು ಉತ್ತಮ, ಮಧ್ಯಮ, ಜಘನ್ಯ ಮಪ್ಪ ಎರಡು, ಮೂರು, ನಾಲ್ಕು ತಿಂಗಳಿಗೊಮ್ಮೆ ಪ್ರತಿಕ್ರಮಣಪೂರ್ವಕಂ ಉಪವಾಸದೋಳ್ಕುಡಿ ಲೋಚಂ ಮಾಡಿಸಿಕೊಳ್ಳುವದು ಇಪ್ಪತ್ತೆರಡನೆಯ ಮೂಲಗುಣಂ ॥ ೨೨ ॥

ವಸ್ತ್ರ ಅಜಿನ ವಲ್ಕಲಂ ಪತ್ರಾದಿಗಳಿಂ ನಿರ್ಗ್ರಂಥಮಂ ಮರಸದುದು ಇಪ್ಪತ್ಮೂರನೆಯ ಮೂಲಗುಣಂ ॥ ೨೩ ॥

ಪ್ರಾಣೇಂದ್ರಿಯ ಸಂಯಮಕಾರಣಮಾಗಿ ಸ್ನಾನಮಾಡದಿರುವುದು ಇಪ್ಪತ್ತನಾಲ್ಕನೆಯ ಮೂಲಗುಣಂ ॥ ೨೪ ॥

ಸಮಾನಮಪ್ಪ ಶಿಲೆ ಭೂಮಿ ಕಾಷ್ಠಾದಿಗಳೊಳು ಇಕ್ಕಿದ ಕೋಲಂತೆ ಪಟ್ಟಿರ್ಪುದು ಇಪ್ಪತ್ತೈದನೆಯ ಮೂಲಗುಣಂ ॥ ೨೫ ॥

ಅಂಗುಳಿಮೊದಲಾದವರಿಂ ಹಲ್ಲಂ ಸುಲಿಯದುದು ಇಪ್ಪತ್ತಾರನೆಯ ಮೂಲಗುಣಂ॥೨೬॥

ಕೈಯೊಣರಿಂದೇನುಮಂ ನೆಮ್ಮದೆ ನಿಂದಿರ್ದು ಚರಿಗೆಯಂ ಮಾಳ್ಪುದಿಪ್ಪತ್ತೇಳನೆಯ ಮೂಲಗುಣಂ ॥ ೨೭ ॥

ಉದಯಾಸ್ತಮಾನಕಾಲದೊಳು ಮೂರು ಮೂರು ಘಳಿಗೆಯಂ ಕಳೆದು ನಡುವಣ ಪೊತ್ತರೊಳು ಒಂದೆರಡು ಮುಹೂರ್ತದಲ್ಲಿ ಚರಿಗೆಯಂ ಮಾಡುವದು ಅಷ್ಟಾವಿಂಶತಿ ಮೂಲಗುಣಂ ॥ ೨೮ ॥

## ಸೂತ್ರಂ॥ ಪಂಚಮಹಾವ್ರತಸ್ಥೈರ್ಯಾರ್ಥಂ ಭಾವನಾಃಪಂಚ ॥ ೪೧ ॥

ಆ ಭಾವನೆಗಳೆಂತೆನೆ—೧ ವಾಗ್ಗುಪ್ತಿಯುಂ, ೨ ಮನೋಗುಪ್ತಿಯುಂ, ೩ ಈರ್ಯಾಸಮಿತಿಯುಂ, ೪ ಆದಾನನಿಕ್ಷೇಪಣಾಸಮಿತಿಯುಂ, ೫ ಆಲೋಕಿತ ಪಾನಭೋಜನಮೆಂದಿವೈದುಂ ಅಹಿಂಸಾವ್ರತದ ಭಾವನೆಗಳು ॥ ೫ ॥

೧ ಕ್ರೋಧದ ತೊರವಿಯುಂ, ೨ ಲೋಭದ ತೊರವಿಯುಂ, ೩ ಹಾಸ್ಯದ ತೊರವಿಯುಂ, ೪ ಭೀತಿಯ ತೊಗವಿಯುಂ, ೫ ಅನುವೀಚಿಭಾಷಣಮು ಮೆಂದಿವೈದುಂ ಸುಳ್ಳುಹೇಳದ ವ್ರತದ ಭಾವನೆಗಳು ॥ ೫ ॥

ಶೂನ್ಯಾಗಾರದೊಳಿರ್ಪುದುಂ, ಪರಕಿಯೇಷ್ಟಿಮೋಚಿತಾವಾಸಮುಂ, ಪೆರರ್ಗುಪರೋಧಮಂ ಮಾಡುವದುಂ, ಭಿಕ್ಷಾಶುದ್ಧಿಯುಂ, ಸದ್ಧರ್ಮದೊಳು ಬಕ್ಕುಡಿಗುಟ್ಟುದುಮೆಂದಿವಯ್ದುಂ ಅಚೌರ್ಯವ್ರತದ ಭಾವನೆಗಳು ॥ ೫ ॥

ಮತ್ತಿದರಲ್ಲಿ ಭಿಕ್ಷಾಶುದ್ಧಿಯೆಂದರೆ ನಲವತ್ತಾರು ದೋಷಗಳಿಲ್ಲದೆ ಆಹಾರಮಾಡುವದು. ಆ ನಲವತ್ತಾರು ದೋಷಂಗಳು ಯಾವ್ಯಾವವುಗಳೆಂದರೆ— ಉದ್ಗಮದೋಷಂ ಹದಿನಾರು, ಉತ್ಪಾದನದೋಷಂ ಹದಿನಾರು, ಏಷಣಾದೋಷಂ ಹತ್ತು, ಸಂಯೋಜನದೋಷಂ ನಾಲ್ಕು

ಇನ್ನು ಉದ್ಗಮದೋಷಗಳನ್ನು ಹೇಳುವೆನು.—೧ ಷಡ್ಜೀವನಿಕಾಯಮಂ ವಧೆಗೆಯ್ದು ತನ್ನಿಂ ಪೆಱರಿಂ ಮಾಡಿದಾಹಾರದೊಳಪ್ಪ ದೋಷಮಂ, ೨ ತನ್ನಂ ಕುರಿತು ಮಾಡಿದಾಹಾರದೊಳಪ್ಪದೋಷಮಂ, ೩ ಪಿರಿದು ಪ್ರಾಸುಕದೊಳು ಕಿರಿದು ಅಪ್ರಾಸುಕಮಂ ಬೆರಸಿದಾಹಾರದೊಳಪ್ಪ ದೋಷಮಂ, ೪ ಗೃಹಸ್ಥರ ಪಾಷಂಡಿಗಳ ಬೆರಿಕೆಯೊಳು ಮಾಡಿದಾಹಾರದೊಳಪ್ಪ ದೋಷಮಂ, ೫ ಅಟ್ಟಭಾಜನದಿಂ ಮತ್ತೊಂದು ಭಾಜನದೊಳ್ಪೊಯಿದು ತನ್ನಂ ಪೆಱರ ಮನೆಯೊಳಿರ್ದೀ ಆಹಾರದೊಳಪ್ಪ ದೋಷಮಂ, ೬ ಬಲಿಗೆಯ್ದಾಹಾರದೊಳಪ್ಪ ದೋಷಮಂ, ೭ ಪೊತ್ತನತಿಕ್ರಮಿಸಿ ತಂದೀವಾಹಾರದೊಳಪ್ಪ ದೋಷಮಂ, ೮ ಬೆಳಗುಗೆಯ್ದೀವಾಹಾರದೊಳಪ್ಪ ದೋಷಮಂ, ೯ ಬಲಿಗೆ ತಂದೀವಾಹಾರದೊಳಪ್ಪ ದೋಷಮಂ, ೧೦ ಕುದುಗಂಜಿಗೊಂಡೀವಾಹಾರದೊಳಪ್ಪ ದೋಷಮಂ, ೧೧ ಮಗುಳ್ಚಿ ತಂದೀವಾಹಾರದೊಳಪ್ಪ ದೋಷಮಂ, ೧೨ ಎತ್ತಿತಂದೀವಾಹಾರದೊಳಪ್ಪ ದೋಷಮಂ, ೧೩ ಪಡದು ತಂದೀವಾಹಾರದೊಳಪ್ಪ ದೋಷಮಂ, ೧೪ ಅಂಜಿಸೆ ಪಟ್ಟೀವಾಹಾರದೊಳಪ್ಪ ದೋಷಮಂ, ೧೫ ಬಿಡಂಬಡದೆ ಈವಾಹಾರದೊಳಪ್ಪ ದೋಷಮಂ,೧೬ ಅಕ್ಕಿಯುಮಂ ನೀರುಮಂ ಪೆಚ್ಚಿ ಪೊಯ್ದು ಮಾಡಿದಾಹಾರದೊಳಪ್ಪ ದೋಷಮಂ. ಇವು ಉದ್ಗಮದೋಷಂಗಳು.

ಇನ್ನು ಉತ್ಪಾದದೋಷಗಳನ್ನು ಹೇಳುವೆನು—೧ ಆದಿಕರ್ಮದಿಂ ಪುಟ್ಟಿಸಿಕೊಳ್ಳುವದುಂ, ೨ ದೂರ ಹೋಗಿ ಪುಟ್ಟಿಸಿಕೊಳ್ಳುವದುಂ, ೩ ನಿಮಿತ್ತಮಂ ಪೇಳಿ ಪುಟ್ಟಿಸಿಕೊಳ್ಳುವದುಂ, ೪ ತನ್ನನ್ನು ತಾನೇ ಕೊಂಡಾಡಿ ಪುಟ್ಟಿಸಿಕೊಳ್ಳುವದುಂ, ೫ ಇಚ್ಛೆಯನುಡಿದು ಪುಟ್ಟಿಸಿಕೊಳ್ಳುವದುಂ, ೬ ಕ್ರೋಧದಿಂ ಪುಟ್ಟಿಸಿಕೊಳ್ಳುವದುಂ, ೭ ಮಾನದಿಂ ಪುಟ್ಟಿಸಿಕೊಳ್ಳುವದುಂ, ೮ ಮಾಯೆಯಿಂ ಪುಟ್ಟಿಸಿಕೊಳ್ಳುವದುಂ, ೯ ಲೋಭದಿಂ ಪುಟ್ಟಿಸಿಕೊಳ್ಳುವದುಂ, ೧೦ ಉಣ್ಣದ ಮೊದಲೇ ದಾತಾರನಂ ಪೊಗಳಿ ಪುಟ್ಟಿಸಿಕೊಳ್ಳುವದುಂ, ೧೧ ಉಂಡಬಳಿಕ ದಾತಾರನಂ ಹೊಗಳಿ ಪುಟ್ಟಿಸಿಕೊಳ್ಳುವದುಂ, ೧೨ ವಿದ್ಯದಿಂ ಪುಟ್ಟಿಸಿಕೊಳ್ಳುವದುಂ, ೧೩ ಯಂತ್ರದಿಂ ಪುಟ್ಟಿಸಿಕೊಳ್ಳುವದುಂ, ೧೪ ಮಂತ್ರದಿಂ ಪುಟ್ಟಿಸಿಕೊಳ್ಳುವದುಂ, ೧೫ ವೈದ್ಯಂಗೆಯ್ದು ಪುಟ್ಟಿಸಿಕೊಳ್ಳುವದುಂ, ೧೬ ಚೂರ್ಣಪ್ರಯೋಗದಿಂ ಪುಟ್ಟಿಸಿಕೊಳ್ಳುವದುಂ. ಇವು ಉತ್ಪಾದನ ದೋಷಂಗಳು.

೧ ಅನ್ನಪಾನಾದಿಗಳಂ ಶಂಕಿಸಿ ಕೊಡುವಾಹಾರದೊಳಪ್ಪ ದೋಷಮುಂ, ೨ ಅಪ್ರಾಸುಕ ನೀರುವೆರೆದ ಕೈಭಾಜನಗಳಿಂ ಈವಾಹಾರದೊಳಪ್ಪ ದೋಷಮಂ, ೩ ಹಸಿಯುವಪ್ಪವರ ಮೇಲಿಕ್ಕಿ ಈವಾಹಾರದೊಳಪ್ಪ ದೋಷಮಂ, ೪ ಛಿದ್ರಮಪ್ಪವರಿಂ ಮುಚ್ಚಿತಂದೀವಾಹಾರದೊಳಪ್ಪ ದೋಷಮಂ, ೫ ವಸ್ತ್ರ ಮೊದಲಾದವುಗಳಿಂದೆಳತಂದೀವಾಹಾರದೊಳಪ್ಪ ದೋಷಮಂ, ೬ ಬಸಿಱಾಗಿ ಬಂದವಳುಂ, ಮದ್ಯಪಾನದ ಕೊಂಡಾಕೆಯುಂ, ವ್ಯಾಧಿಯುಳ್ಳಾಕೆಯುಂ, ಪೆಱರಿಗಳಪಿ ಬಂದವಳುಂ, ನಪುಂಸಕಿಯುಂ, ಮರುಳಂ ಛಿದ್ರವಸ್ತ್ರ ಉಟ್ಟಾಕೆಯುಂ, ಶುಚಿಯಿಲ್ಲದವಳುಂ, ಬಿರ್ದಳುಂ, ಸೂಳೆಯುಂ, ಪಂಚಸ್ನಾನಿತಿಯುಂ, ಬ್ಯಾಲ್ಯ ಅಭಂಗ ಮಾಡಿಬಂದವಳುಂ, ಎಂಟುವರ್ಷ—ನೆರೆಯದ ಕಿರಿಗೂಸುಂ, ಮತಿಗೆಟ್ಟ ವೃದ್ಧೆಯುಂ, ಅಡಿಕೆ ಎಲೆ ಮೊದಲಾದವಂ ಮೆಲ್ಲುತ್ತ ಬಂದವಳುಂ, ಕೋಪದಿಂ ಬಂದವಳುಂ, ಅಂಗಸೋನೆಯುಂ, ಎಡೆಯಾಡುವಳುಂ, ಕುಳ್ಳಿರ್ದವಳುಂ, ಉನ್ನತದಲ್ಲಿ ಇರ್ದವಳುಂ, ಉಗುಳುವದುಂ, ಸವರುವದುಂ, ಕಿಚ್ಚಿಂಬ

ನುಡಿಯುಂ, ಕೊಳ್ಳಿಗೆ ಕೊಳ್ಳಿಯ ಉದ್ದುವದುಂ, ಸಾರಿಸುವದುಂ, ಕಸಗಳೆವುದುಂ, ಪಲವು ಮಾತಿನೊಳೇನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ( ಶೂದ್ರಜಾತಿಯೆಂಬಿವರು ಪೊರಗಾಗಿ) ಉಳಿದ ವರೆಲ್ಲಂತವರುಳಿದ ದಾತಾರರಿಂದೀವಾಹಾರದೊಳಪ್ಪ ದೋಷಮುಂ, ೭ ಪ್ರಾಣಿಗಳ್ವೆರಸೀವಾಹಾರ ದೊಳಪ್ಪ ದೋಷಮುಂ, ೮ ಅರೆಬೆಂದುದ ಈವಾಹಾರದೊಳಪ್ಪ ದೋಷಮುಂ, ಬಿಳಿಯ ಹಿಟ್ಟಂ ಕೈಭಾಜನಂ ತೊಳೆವುದು ಅದರಿಂದೀವಾಹಾರದೊಳಪ್ಪ ದೋಷಮುಂ, ೧೦ ಉಗುವುತ ಈವಾ ಹಾರದೊಳಪ್ಪ ದೋಷಮುಂ. ಇವು ಏಷಣಾದೋಷಂಗಳು.

೧ ಹಿಂಡಿದ ಕೂಳೊಳಗೆ ( ಹಾಲು ಅನ್ನದಲ್ಲಿ ) ಅಳೆಯಂ ಕಲಸಿ ( ಮಜ್ಜಿಗೆ ಕೂಡಿಸಿ ) ಕೊಳ್ವುದುಂ, ೨ ಹುಗ್ಗಿಯೊಳು ಅಳೆಯಂ ಕಲಸಿಕೊಳ್ವುದುಂ, ೩. ಅಳೆಗೂಳೊಳಗೆ ಎಂಣೆಯ ಕಲಸಿಕೊಳ್ವುದುಂ, ೪ ಅಳೆಗೂಳೊಳಗೆ ಹಪ್ಪಳ ಸಂಡಿಗೆ ಬಾಳುಕಂಗಳಂ ಕೊಳ್ವುದುಂ, ಇವು ಮೊದಲಾದ ಸಂಯೋಜನ ದೋಷಗಳನ್ನು ಪರಿಹರಿಸುವದು.

ಯತಿಗಳ ಭೋಜನಾಂತರಾಯವನ್ನು ಹೇಳುತ್ತೇನೆ—

ಉಕ್ತಂಚ ಶ್ಲೋ—ಮೌನತ್ಯಾಗೇ ಶಿರಸ್ತಾಡೇ ಮಾರ್ಗೇ ಹಿ ಪತಿತೇ ಸ್ವಯಮ್ ॥

ಮಾಂಸಾಮೇಧ್ಯಾಸ್ಥಿರಕ್ತಾದಿ ಸಂಸ್ಪೃಷ್ಟೇ ಶವದರ್ಶನೇ ॥ ೪೮ ॥
ಗ್ರಾಮದಾಹೇ ಮಹಾಯುದ್ಧೇ ಶುನಾದಷ್ಟೇತ್ವಿದಂ ಪಥಿ ॥
ಸಚಿತ್ತೋದೇ ಕರೇ ಕ್ಷಿಪ್ತೇ ಶಂಕಾಯಾಂ ಮಲಮೂತ್ರಯೋಃ ॥ ೪೯ ॥
ಶೋಣಿತ ಮಾಂಸ ಚರ್ಮಾಸ್ಥಿ ರೋಮವಿಟ್ಪೂಯಮೂತ್ರಕೇ ॥
ದಲನಂ ಕುಟ್ಟನಂ ಛರ್ದಿರ್ದೀಪಪ್ರಧ್ವಂಸ ದರ್ಶನೇ ॥ ೫೦ ॥
ಶಿತೌ ಸ್ಪೃಷ್ಟೇ ಚ ನಗ್ನಸ್ತ್ರೀದರ್ಶನೇ ಮೃತಜಂತುಕೇ ॥
ಅಸ್ಪೃಶ್ಯಸ್ಯ ಧ್ವನೌ ಮೃತ್ಯುವಾದ್ಯೇ ದುಷ್ಟವಿರೋದನೇ ॥ ೫೧ ॥
ಕರ್ಕಶಾಕ್ರಂದದುಃಶಬ್ದೇ ಶುನಕಸ್ಯ ಧ್ವನೌ ಶ್ರುತೇ ॥
ಹಸ್ತಮುಕ್ತೇ ವ್ರತೇ ಭಗ್ನೇ ಭಾಜನೇ ಪತಿತೇಽಥವಾ ॥ ೫೨ ॥
ಪಾದಯೋಶ್ಚ ಗತೇ ಮಧ್ಯೇ ಮಾರ್ಜಾರಮೂಷಕಾದಿಕೇ ॥
ಅಸ್ಥ್ಯಾದಿ ಮಲಮಿಶ್ರಾನ್ನೇ ಸಚಿತ್ತವಸ್ತುಭೋಜನೇ ॥ ೫೩. ॥
ಆರ್ತರೌದ್ರಾದಿ ದುರ್ಧ್ಯಾನೇ ಕಾಮಚೇಷ್ಟೋದ್ಭವೇಽಪಿಚ ॥
ಉಪವಿಷ್ಟೇ ಪದಗ್ಲಾನಾತ್ಪತನೇ ಸ್ವಸ್ಯ ಮೂರ್ಛಯಾ ॥ ೫೪ ॥
ಹಸ್ತಾಚ್ಚ್ಯುತೇ ತಥಾ ಗ್ರಾಸೇಽಪ್ರತಿನಃ ಸ್ಪರ್ಶನೇ ಸತಿ ॥
ಇದಂ ಮಾಂಸೋತಿ ಸಂಕಲ್ಪೇಽನ್ತರಾಯಾಶ್ಚ ಮುನೇಃ ಪರೇ ॥ ೫೫ ॥

ತಾ:—ಶಿರಸ್ತಾಡನದಿಂದ ಮೌನತ್ಯಾಗವಾಗುವದು, ಮಾರ್ಗದಲ್ಲಿ ತಾನು ಬೀಳುವದು, ಮಾಂಸ, ಅಪವಿತ್ರ ವಸ್ತು, ಅಸ್ಥಿ, ರಕ್ತ, ಇವುಗಳು ಸ್ಪರ್ಶವಾಗುವದು, ಶವವನ್ನು ಕಾಣು ವದು, ಗ್ರಾಮದಲ್ಲಿ ಬೆಂಕಿಹತ್ತಿ ಉರಿಯುವದು, ಭಯಂಕರ ಯುದ್ಧವಾಗುವದು, ಮಾರ್ಗದಲ್ಲಿ ನಾಯಿಗಳು ತನ್ನನ್ನು ಕಚ್ಚುವದು, ಅಪ್ರಾಸುಕ ನೀರು ಕೈಯಲ್ಲಿ ಬೀಳುವದು, ಆಹಾರಕಾಲ

ದಲ್ಲಿ ತನಗೆ ಮಲಮೂತ್ರ ಶಂಕೆಗಳುಂಟಾಗುವದು, ರಕ್ತ, ಮಾಂಸ, ಚರ್ಮ, ಅಸ್ಥಿ, ಕೇಶ, ವಿಷ್ಠಾ, ಪೂ, ಮೂತ್ರ ಈ ಪದಾರ್ಥಗಳು ಸ್ಪರ್ಶವಾಗುವದು, ಯಾವ ಮನೆಯಲ್ಲಿ ಆಹಾರ ಮಾಡುತ್ತಾರೋ ಆ ಮನೆಯಲ್ಲಿ ಆಹಾರಕಾಲದಲ್ಲಿ ದಲನಂ–ಬೀಸುವದು, ಕುಟ್ಟನಂ–ಕುಟ್ಟು ವದು, ತನಗೆ ಛರ್ದಿಯಾಗುವದು ಅಥವಾ ಬೇರೆ ಯಾರಾದರೂ ಛರ್ದಿಮಾಡುವದನ್ನು ನೋಡು ವದು, ದೀಪನಾಶವಾಗುವದು. ಬೆಕ್ಕುಗಳ ಸ್ಪರ್ಶವಾಗುವದು, ನಗ್ನಸ್ತ್ರೀಯನ್ನು ನೋಡುವದು, ಯಾವದಾದರೂ ಜಂತುಗಳು ಮರಣವಾಗುವದು, ಅಸ್ಪೃಶ್ಯಚಂಡಾಲಾದಿಗಳ ಶಬ್ದವನ್ನು ಕೇಳುವದು, ಮೃತಕ ವಾದ್ಯಗಳನ್ನು ಕೇಳುವದು, ದುಃಖದಿಂದ ಅಳುವದು, ಕರ್ಕಶವಾದ ಕಲಹ ಅಥವಾ ಕೆಟ್ಟ ಶಬ್ದಗಳನ್ನು ಕೇಳುವದು, ನಾಯಿಗಳ ಶಬ್ದವನ್ನು ಕೇಳುವದು, ಕೈಗ ಳನ್ನು ಬಿಡುವದು, ವ್ರತಭಂಗವಾಗುವದು, ಭಾಂಡಗಳು ಬೀಳುವದು, ಬೆಕ್ಕು, ಇಲಿ ಮೊದ ಲಾದವುಗಳು ತನ್ನ ಎರಡು ಕಾಲುಗಳ ನಡುವೆ ಹೋಗುವದು, ಅನ್ನದಲ್ಲಿ ಅಸ್ಥಿ ಅಥವಾ ಕಸ ಮೊದಲಾದ ಮಲಮಿಶ್ರವಾಗಿರುವದು, ಸಚಿತ್ತವಸ್ತುಗಳು (ಬೇಯಿಸದೇ ಇರುವ ಸೊಪ್ಪು ಎಲೆ ಮೊದಲಾದವುಗಳು) ಆಹಾರದಲ್ಲಿರುವದು, ಆರ್ತ, ರೌದ್ರ ಮೊದಲಾದ ದುರ್ಧ್ಯಾನಗ ಳುಂಟಾಗುವದು, ಈ ಪ್ರಕಾರವಾದ ಚಿಂತನೆ ಮನಸ್ಸಿನಲ್ಲಿ ಹುಟ್ಟುವದು, ಕಾಮಚೇಷ್ಟೆಯುತ್ಪ ನ್ನವಾಗುವದು, ಅಶಕ್ತನಾಗಿ ಕೆಳಗೆ ಕೂತುಕೊಳ್ಳುವದು ಅಥವಾ ಮೂರ್ಛೆಯುಂಟಾಗಿ ಕೆಳಗೆ ಬೀಳುವದು, ಕೈಯಿಂದ ಗ್ರಾಸ ಬೀಳುವದು, ಅವ್ರತೀಮನುಷ್ಯರುಗಳ ಸ್ಪರ್ಶನವಾಗು ವದು, ಇದು ಮಾಂಸದ ಹಾಗೆ ಇರುತ್ತದೆಂದು ತನಗೆ ತೋರುವದು, ಈ ಮೂವತ್ತೆರಡು ಯತಿಗಳ ಆಹಾರದ ಅಂತರಾಯಗಳಾಗುತ್ತವೆ. ಇವುಗಳ ಪೈಕಿ ಯಾವದಾದರೂ ಅಂತರಾಯ ಉಂಟಾದರೆ ಮುನಿಗಳು ಆಹಾರವನ್ನು ತ್ಯಾಗಮಾಡತಕ್ಕದ್ದು.

ಈ ವಿಷಯದಲ್ಲಿ ಬೇರೆ ಒಂದು ವಿಧವು—

ಮತಾಂತರಮ್॥ ವಿಣ್ಮೂತ್ರಾಜಿನರಕ್ತಮಾಂಸಮದಿರಾ ಪೂಯಾಸ್ತಿವಾಂತೀ ಕ್ಷಣಾ- ॥
ದಸ್ಪೃಶ್ಯಾಂತ್ಯಜ ಭಾಷಣಶ್ರವಣತಾ ಸ್ವಗ್ರಾಮದಾಹೇ ಕ್ಷಣಾತ್ ॥
ಪ್ರತ್ಯಾಖ್ಯಾನನಿಷೇವಣಾತ್ಪರಿಹರೇದ್ಧ್ಯೋ ವ್ರತೀ ಭೋಜನೇ- ॥
ವ್ಯಾಹಾರಂ ಮೃತಜಂತುಕೇಶಕಲಿತಂ ಜೈನಾಗಮೋಕ್ತಕ್ರಮಮ್ ॥೫೬॥

ತೃತೀಯ (೩) ಮತಮ್—

ಅನ್ಯತ್ ॥ ಕಾಗಾ ಮೇಜ್ಝಾ ಛದ್ದೀ ರೋಹಣ ರುಹಿರಂ ಚ ಅಂಸುಪಾದಂ ಚ ॥
ಜಹ್ಣೂ ಹೇತಾ ಪರಿಸಂ ಜಹ್ಣೂ ವರಿವದಿಕ್ಕಮೋ ಚೇವ ॥ ೫೭ ॥

೧ ಸ್ತ್ರೀರಾಗಕ್ಕೆ ಕಾರಣಮಪ್ಪ ಕಥೆಯ ಕೇಳ್ವೆಯಂ ತೊರೆವುದುಂ, ೨ ಅವರ ಮನೋಹ ರವಾದ ಅವಯವಂಗಳ ನೋಟಮಂ ತೊರೆವುದುಂ, ೩ ಮುನ್ನನುಭವಿಸಿದ ಇಂದ್ರಿಯಂಗಳ ನೆನವಿಯಂ ತೊರೆವುದುಂ, ೪ ತಮ್ಮ ಶರೀರಸಂಸ್ಕಾರಮಂ ತೊರೆವುದುಂ, ೫ ವೃಷ್ಟೇಷ್ಟ ರಸಂಗಳಂ (ಇಂದ್ರಿಯ ವೃದ್ಧಿಯಾಗುವಂಥಾ ರಸಗಳಂ) ತೊರೆಯುವದು ಎಂದಿವಯ್ದುಂ ಬ್ರಹ್ಮಚರ್ಯವ್ರತದ ಭಾವನೆಗಳು. ಇಷ್ಟಾನಿಷ್ಟಫಲಂಗಳಪ್ಪ ಇಂದ್ರಿಯಂಗಳ ರಾಗದ್ವೇಷ ಗಳ ತೊರವಿಯು ಮೆಂದಿವೈದುಂ ನಿಃಪರಿಗ್ರಹವ್ರತದ ಭಾವನೆಗಳು.

## ಸೂತ್ರಂ॥ ಗುಪ್ತಿತ್ರಯಂ ॥ ೪೨ ॥

ಮನೋಗುಪ್ತಿಯುಂ, ವಾಗ್ಗುಪ್ತಿಯುಂ, ಕಾಯಗುಪ್ತಿಯುಂ ಎಂದಿವು ಗುಪ್ತಿತ್ರಯಂಗಳು.

ಗಾಹೆ॥ ಕಾಲುಸ್ಸಮೋಹಸಂಣಾ ರಾಗಂ ದೋಷಾದಿ ಅಸುಹಭಾವಸ್ಸ ।
ಪರಿಹಾರೋ ಮಣೋಗುತ್ತಿ ವವಹಾರಣಯಾದು ಜಿಣಭಣಿಯಂ ॥ ೧೦ ॥

ರಾಜಚೋರಭಂಡಕಹಾದಿವಯಣಸ್ಸ ಪಾವಹೇವುಸ್ಸ ।
ಪರಿಹಾರೋ ವಚಿಗುತ್ತಿ ಅಳಿಯಾಡಿಣಿ ಏತ್ತಿ ವಯಣಂವಾ ॥ ೧೧ ॥

ಛೇದಣ ಬಂಧಣ ಮಾರಣ ತಹಪಸಾರಣಾದಿಯ ।
ಕಾಯಕಿರಿಯಾಣಿಯಟ್ಟೆ ಣಿದ್ದಿಠ್ಠಾ ಕಾಯಗುತ್ತೀತಿ ॥ ೧೨ ॥

ರಾಗಾದಿ ಣಿಯತ್ತಿಂ ವಾ ಮಣಸ್ಸಜಾಣಾಹಿ ತಂ ಮಣೋಗುತ್ತಿಂ ।
ಅಳಿಯಾಣಿಯತ್ತಿಂ ವಾ ಮೋಣಂ ವಾ ಹೋದಿ ವಚೇ ಗುತ್ತಿ ॥ ೧೩ ॥

ಕಾಯಕಿರಿಯಾಣಿಯತ್ತಿ ಕಾವೋ ಸಗ್ಗೋ ಸರೀರಗೇ ಗುತ್ತಿ ।
ಹಿಂಸಾದಿ ಣಿಯತ್ತಿಂ ವಾ ಸರೀರಗುತ್ತಿ ಹವೇ ದಿಠ್ಠೋ ॥ ೧೪ ॥

## ಸೂತ್ರಂ॥ ಅಷ್ಟೌಪ್ರವಚನಮಾತೃಕಾಃ ॥ ೪೩ ॥

ಮುಂಪೇಳ್ದಯ್ದು ಸಮಿತಿಯುಂ, ಮೂರು ಗುಪ್ತಿಯುಂಗೂಡಿ, ಅಷ್ಟಪ್ರವಚನಮಾತೃಕೆಗಳಕ್ಕುಂ ॥ ೮ ॥

## ಸೂತ್ರಂ॥ ಚತುಸ್ತ್ರಿಂಶದುತ್ತರಗುಣಾಃ ॥ ೪೪ ॥

ಇಪ್ಪತ್ತೆರಡು ಪರೀಷಹಂಗಳುಂ, ದ್ವಾದಶವಿಧ ತಪಂಗಳುಂ ಕೂಡಿ, ಮೂವತ್ತು ನಾಲ್ಕು ಉತ್ತರ ಗುಣಂಗಳಾಗುವವು.

## ಸೂತ್ರಂ॥ ದ್ವಾವಿಂಶತಿ ಪರೀಷಹಾಃ ॥ ೪೫ ॥

ಮೋಕ್ಷಮಾರ್ಗಮಂ ಬಿಡದದು ಕಾರಣವಾಗಿಯುಂ, ಸೈರಿಸುವುದಕ್ಕೆ ಕಾರಣಮಪ್ಪ ಪರೀಷಹಂಗಳಾವವುವೆಂದೊಡೆ ॥

೧ ಕ್ಷುತ್ತಿನೊಳಪ್ಪ ಪರೀಷಹಮುಂ, ೨ ನೀರಡಿಕೆಯೊಳಪ್ಪ ಪರೀಷಹಮುಂ, ೩ ಶೀತದೊಳಪ್ಪ ಪರೀಷಹಮುಂ, ೪ ಉಷ್ಣದೊಳಪ್ಪ ಪರೀಷಹಮುಂ, ೫ ಚಿಕ್ಕಡು ಗುಂಗುರಿನೊಳಪ್ಪ ಪರೀಷಹಮುಂ, ೬ ನಿರ್ಗ್ರಂಥದೊಳಪ್ಪ ಪರೀಷಹಮುಂ, ೭ ನೆಚ್ಚದುದರೊಳಪ್ಪ ಪರೀಷಹಮುಂ, ೮ ಸ್ತ್ರೀಯರೊಳಪ್ಪ ಪರೀಷಹಮುಂ, ೯ ಬರುಗಾಲೊಳು ನಡೆವಲ್ಲಿಯೊಳಪ್ಪ ಪರೀಷಹಮುಂ, ೧೦ ಬರುನೆಲದೊಳ್ಕುಳ್ಳಿರ್ಪಲ್ಲಿಯ ಪರೀಷಹಮುಂ, ೧೧ ಬರುನೆಲದೊಳೊರಗುವಲ್ಲಿಯೊಳಪ್ಪ ಪರೀಷಹಮುಂ, ೧೨ ಬಯ್ಗುಳಿನೊಳಪ್ಪ ಪರೀಷಹಮುಂ, ೧೩ ಬಡುಗುಳಿನೊಳಪ್ಪ ಪರೀಷಹಮುಂ, ೧೪ ಬೇಡುವಲ್ಲಿಯೊಳಪ್ಪ ಪರೀಷಹಮುಂ, ೧೫ ಅಲಾಭದೊಳಪ್ಪ ಪರೀಷ

ಹವುಂ, ೧೬ ಕುತ್ತದೊಳಪ್ಪ ಪರೀಷಹವುಂ, ೧೭ ಪುಲ್ಲತೀಟದೊಳಪ್ಪ ಪರೀಷಹವುಂ, ೧೮ ಮಲಧಾರಣದೊಳಪ್ಪ ಪರೀಷಹವುಂ, ೧೯ ಕೊಂಡಾಟ ಮನ್ನಣೆಯೊಳಪ್ಪ ಪರೀಷಹವುಂ, ೨೦ ಅಗಿತದೊಳಪ್ಪ ಪರೀಷಹವುಂ, ೨೧ ಅರಿಯದುದರೊಳಪ್ಪ ಪರೀಷಹವುಂ, ೨೨ ಕ್ಷಾಯಿಕದರ್ಶನಮಿನ್ನೂ ಪುಟ್ಟದೆಂಬಲ್ಲಿಯೊಳಪ್ಪ ಪರೀಷಹವುಂ, ಎಂದಿಪ್ಪತ್ತೆರಡು ಪರೀಷಹಂಗಳು ಕರ್ಮೋದಯಜನಿತಂಗಳಪ್ಪದರಿಂದಾವ ಕರ್ಮೋದಯದಿಂದಾವ ಪರೀಷಹವಾದುದೆಂದೊಡೆ ಪೇಳುವರು—

ಜ್ಞಾನಾವರಣೀಯಕರ್ಮೋದಯದೊಳು— ಪ್ರಜ್ಞೆ, ಅಜ್ಞಾನಂಗಳೆಂಬೆರಡು ಪರೀಷಹಂಗಳಾಗುವವು. ದರ್ಶನಮೋಹನೀಯಾಂತರಾಯದೊಳು, ದರ್ಶನಾಲಾಭಮೆಂಬೆರಡಾಗುವವು. ಮಾನಕಷಾಯೋದಯದೊಳಂ, ನಾಗ್ನ್ಯ, ನಿಷದ್ಯಾ, ಆಕ್ರೋಶ, ಯಾಚನಾ, ಸತ್ಕಾರ ಪುರಸ್ಕಾರಗಳೆಂಬೈಯ್ದುಂ ಪರೀಷಹಂಗಳಕ್ಕುಂ. ಅರತಿ, ಪುಂವೇದಮೆಂಬೆರಡರೊಳು ಅರತಿ ಸ್ತ್ರೀಯೆಂಬೆರಡು ಪರೀಷಹಂಗಳಕ್ಕುಂ. ವೇದನೀಯದೊಳಂ ಕ್ಷುತ್ಪಿಪಾಸಾ, ಶೀತೋಷ್ಣ, ದಂಶಮಸಕ, ಚರ್ಯಾ, ಶಯ್ಯಾ, ವಧ, ರೋಗ, ತೃಣಸ್ಪರ್ಶ, ಮಲಂಗಳೆಂಬ ಹನ್ನೊಂದು ಪರೀಷಹಂಗಳಾಗುವವು. ಒಂದು ಜೀವನೊಳೊಂದು ಕಾಲದಲ್ಲಿ ಎನಿತು ಪರೀಷಹಂಗಳಕ್ಕುಮೆಂದೊಡೆ ಹತ್ತೊಂಭತ್ತು ಪರೀಷಹಂಗಳಕ್ಕುಮೆಂತೆನೆ—

ಶೀತೋಷ್ಣಮೆಂಬೆರಡರೊಳೊಂದು, ನಿಷದ್ಯಾ, ಚರ್ಯಾ ಎಂಬ ಮೂರು ಪರೀಷಹಂಗಳಪ್ಪವುಂ ‖ ಅವುಗಳೊಳಾವುದಾನುಮೊಂದು ಮಿಥ್ಯಾದೃಷ್ಟ್ಯಾದಿ ಸಪ್ತಗುಣಸ್ಥಾನದೊಳೆಲ್ಲಾ ಪರೀಷಹಂಗಳಕ್ಕುಂ. ದರ್ಶನಪರೀಷಹದಿಲ್ಲಮೆಯಿಂದಪೂರ್ವ ಕರಣನೊಳು ಇಪ್ಪತ್ತೊಂದು ಪರೀಷಹಂಗಳಕ್ಕುಂ. ಅರತಿ ಪರೀಷಹದಿಲ್ಲಮೆಯೊಳು ಸವೇದಾನಿವೃತ್ತಿಯೊಳಪ್ಪತ್ತೊಂದು ಪರೀಷಹಂಗಳಕ್ಕುಂ. ಸ್ತ್ರೀಯಪರೀಷಹದಿಲ್ಲಮೆಯೊಳು ಅವೇದಾನಿವೃತ್ತಿಯೊಳು ಹತ್ತೊಂಭತ್ತು. ಪರೀಷಹಂಗಳಕ್ಕುಂ. ಮಾನಕಷಾಯದಿಲ್ಲಮೆಯಿಂ ನಾಗ್ನ್ಯ ನಿಷದ್ಯಾಕ್ರೋಶ ಯಾಚನಾ ಸತ್ಕಾರಪುರಸ್ಕಾರಂಗಳೆಂಬಯ್ದುಂ ಪರೀಷಹಂಗಳು ಮಾಣುತ್ತಿರೆ ಅನಿವೃತ್ತಿ, ಸೂಕ್ಷ್ಮಸಾಂಪರಾಯ, ಉಪಶಾಂತಕಷಾಯ, ಕ್ಷೀಣಕಷಾಯವೆಂಬ ಗುಣಸ್ಥಾನಚತುಷ್ಟಯದೊಳಂ ಹದಿನಾಲ್ಕು ಪರೀಷಹಂಗಳಕ್ಕುಂ ‖

ಪ್ರಜ್ಞೆ, ಅಜ್ಞಾನ, ಅಲಾಭಂಗಳು ಕೆಟ್ಟುವಪ್ಪದರಿಂ ಕ್ಷುತ್ಪಿಪಾಸಾ, ಶೀತೋಷ್ಣ, ದಂಶಮಶಕ, ಚರ್ಯಾ, ಶಯ್ಯಾ, ವಧ, ರೋಗ, ತೃಣಸ್ಪರ್ಶ, ಮಲಂಗಳೆಂಬ ಹನ್ನೊಂದು ಪರೀಷಹಂಗಳು ಸಯೋಗಿಕೇವಲಿ ಭಟ್ಟಾರಕಂಗೆ ಧ್ಯಾನಾನಲನಿರ್ದಗ್ಧಂ ಘಾತಿಕರ್ಮೇಂಧನಂಗೆ ಅನಂತಾಪ್ರತಿಹತ ಜ್ಞಾನಾದಿ ಚತುಷ್ಟಯಂಗೆ ಅಂತರಾಯಕ್ಷಯದಿಂ ನಿರಂತರಂ ನೆರಪಲುಪಟ್ಟ ಶುಭಪುದ್ಗಲಸಮೂಹಮನುಳ್ಳಂಗೆ ವೇದನೀಯಕರ್ಮಮುಂಟಾಗಿಯುಂ ಪ್ರಕ್ಷೀಣ ಘಾತಿಸಹಾಯಬಲಮಪ್ಪದರಿಂ ತನ್ನ ಪ್ರಯೋಜನಮಂ ಪುಟ್ಟಸಲಾರದೆಂತೆನೆ—

ವಿಷದ್ರವ್ಯ ಮಂತ್ರೌಷಧಿಗಳ ಬಲದಿ ಉಪಕ್ಷೀಣ ಮಾರಣ ಶಕ್ತಿಯನ್ನುಳ್ಳುದಾಗಿಯುಂ ಕೊಲಲಾರದುಮಂತೆ, ಛಿನ್ನಮೂಲತರುಂ ಕುಸುಮಂಗಳೆಂತು ಫಲವಾಗಲಾರದಂತೆ, ಉಪೇ

ಕ್ಷಾಸಂಯತರಪ್ಪ, ಅನಿವೃತ್ತಿಕರಣ, ಸೂಕ್ಷ್ಮಸಾಂಪರಾಯರೆಂಬ ಈರ್ವರೊಳಂ ಮೈಥುನ ಪರಿಗ್ರಹ ಸನ್ನೆಗಳು ತೋರೆದದೆಂತುಂ ಕಾರ್ಯಮಂ ಮಾಡಲಾರವಂತೆ, ಪರಿಪೂರ್ಣ ಜ್ಞಾನನೊ ಳೇಕಾಗ್ರಚಿಂತಾನಿರೋಧಮಿಲ್ಲದೊಡಂ, ಕರ್ಮರಜೋವಿಧೂನನ ಫಲಮುಂಟಪ್ಪುದರಿಂ ಧ್ಯಾ ನೋಪಚಾರದಿನಂತೆ, ಕ್ಷುಧಾರೋಗವಿೂವೇದನಾಪರೀಷಹಮಿಲ್ಲದೊಡಂ, ವೇದನೀಯ ಕರ್ಮೋ ದಯ ದ್ರವ್ಯಪರಿಸದನ ಪರೀಷಹ ಸದ್ಭಾವದಿಂ ಜಿನರೊಳುಪಚಾರದಿಂ ಹನ್ನೊಂದು ಪರೀಷ ಹಂಗಳುಮಪ್ಪುವು.

ಘಾತಿಕರ್ಮಬಲಸಹಾಯವೇದನೀಯಂ ಫಲವಂತವಪ್ಪುದರಿಂ ಏಕಾದಶಜಿನೇಸ ರ್ವೇ ಸಸ್ಯಂತಿ ಎಂಬೀ ವಾಕ್ಯವಿಶೇಷದಿಂ ಜಿನರೊಳೊಂದುಂ ಪರೀಷಹಮಿಲ್ಲ, ನರತಿರ್ಯ ಗ್ಗತಿಯೊಳೆಲ್ಲಾ ಪರೀಷಹಂಗಳಕ್ಕುಂ. ಮನುಷ್ಯಗತಿಯೋಗ್ಯೋಗಭಂಗಮಕ್ಕುಂ. ದೇವಗತಿ ಯೊಳು ಕ್ಷುತ್ಪಿಪಾಸಾ, ನಾಗ್ನ್ಯಾರತಿ, ಸ್ತ್ರೀ, ನಿಷದ್ಯಾ, ಆಕ್ರೋಶ, ವಧ, ಯಾಚನಾ, ಅಲಾಭ, ಸತ್ಕಾರಪುರಸ್ಕಾರ, ಪ್ರಜ್ಞೆ, ಅಜ್ಞಾನ, ಅದರ್ಶನಮೆಂಬೀ ಚತುರ್ದಶಪರೀಷಹಂಗಳಕ್ಕುಂ॥೧೪॥ ಇಂದ್ರಿಯ ಕಷಾಯಮಾರ್ಗಣೆಗಳೊಳೆಲ್ಲಾ ಪರೀಷಹಂಗಳಕ್ಕುಂ, ವೈಕ್ರಿಯಕದ್ವಯಕ್ಕೆ ದೇವ ಗತಿಯ ಭಂಗಂ ತಿರ್ಯಗ್ಮನುಷ್ಯಾಪೇಕ್ಷೆಯಿಂದೆಲ್ಲಾ ಪರೀಷಹಂಗಳಕ್ಕುಂ.

## ಸೂತ್ರಂ॥ ದ್ವಾದಶವಿಧಂ ತಪ: ॥ ೪೬ ॥

ಟಾ:—ಭೇದಾಭೇದರತ್ನತ್ರಯಂಗಳಂ ಪ್ರಕಟಂ ಮಾಡಲುಂ ಕರ್ಮಕ್ಷಯಾರ್ಥಂ ಮಾ ರ್ಗಕ್ಕೆ ವಿರೋಧಮಿಲ್ಲದಂತೆ ಇಚ್ಛಾನಿರೋಧಮಂ ತಪಮೆಂಬುದು. ಅದುವುಂ ಬಾಹ್ಯಾಭ್ಯಂತರ ಭೇದದಿಂ ಇತ್ತೆರಂ ೧ ಅನಶನ, ೨ ಅವಮೋದರ್ಯ, ೩ ವೃತ್ತಿಪರಿಸಂಖ್ಯಾನ, ೪ ರಸಪರಿ ತ್ಯಾಗ, ೫ ವಿವಿಕ್ತಶಯನಾಸನ, ೬ ಕಾಯಕ್ಲೇಶಮೆಂದಿವಾರುಂ ಬಾಹ್ಯತಪಂಗಳು. ೧ ಪ್ರಾಯ ಶ್ಚಿತ್ತ, ೨ ವಿನಯ, ೩ ವೈಯ್ಯಾವೃತ್ಯ, ೪ ಸ್ವಾಧ್ಯಾಯ, ೫ ವ್ಯುತ್ಸರ್ಗ, ೬ ಧ್ಯಾನಮೆಂಬಿವಾರುಂ ಅಭ್ಯಂತರ ತಪಂಗಳು. ಇವೆಲ್ಲ ಕೂಡಿ ಹನ್ನೆರಡು ತಪಗಳಾಗುವವು. ೧ ಅದರಲ್ಲಿ ಅನಶನ ಮೆಂಬುದು ಮಂತ್ರಸಾಧನಾದಿ ದೃಷ್ಟಫಲಮನಪೇಕ್ಷಿಸದೆ ಮಾಡುವದುಪವಾಸಂ ಅದು ಪ್ರಾಣೇಂದ್ರಿಯಸಂಯಮಪ್ರಸಿದ್ಧಿಯುಂ, ರಾಗದ್ವೇಷಪರಿಹಾರಾರ್ಥಮುಂ, ಪಿರಿದಪ್ಪ ಕರ್ಮ ನಿರ್ಜರಾರ್ಥಂ, ಶುಭಧ್ಯಾನಾಗಮಾರ್ಥಮುಮಕ್ಕುಂ. ಅದಿತ್ತೆರನದೆಂತೆನೆ—ನಿಯತಕಾಲ, ಅನಿ ಯತಕಾಲಮೆಂದಿತ್ತೆರನಲ್ಲಿ ನಿಯತಕಾಲಂ ಯೇಕಾಂತರ, ತ್ರಿರಾತ್ರೆ, ಮಹಾತ್ರಿರಾತ್ರೆ, ಅಷ್ಟೋ ಪವಾಸ, ಪಕ್ಷೋಪವಾಸ, ಮಾಸೋಪವಾಸ, ಚಾತುರ್ಮಾಸೋಪವಾಸ, ಷಣ್ಮಾಸೋಪವಾಸ, ಸಂವತ್ಸರೋಪವಾಸಮೆಂದೀ ಪ್ರಕಾರವಾಗುವವು. ಅನಿಯತಕಾಲವು ಶರೀರದ ಕಡೇವರ ಮಕ್ಕುಂ. ೨ ಬಸಿರಂ ಪಿರಿದಾಗಿ ತೀವಿದೊಡೆ ಧ್ಯಾನಾಧ್ಯಯನಂಗಳು ಕೆಡುಗುಮೆಂದು ಪೊಂದು ತುತ್ತು ಮೊದಲಾದುವಂ ಕುಂದಿಸಿಯುಣ್ಬುದು ಅವಮೋದರ್ಯವೆಂಬುವದು. ೩ ಇಂತಪ್ಪ ವಸ್ತುಗಳನುಣ್ಬೆ ನಿಂತಪ್ಪವರೀ ತೆರದಿಂದಿರ್ದು ನಿಲಿಸಿದೊಡೆ ನಿಲುವೆ ನಿನಿತೆಡೆಯಿಂದತ್ತಲ್ಪೋಗೆ ನೆಂದು ಮನದೊಳು ನೆನೆದು ಚರಿಗೆಗೆ ಪೋಪುದು ವೃತ್ತಿಪರಿಸಂಖ್ಯಾನವು. ೪ ಹಾಲು, ಮೊಸರು, ತುಪ್ಪ, ಎಣ್ಣೆ, ಕಬ್ಬಿನರಸಂ ಮೊದಲಾದವುಗಳಲ್ಲಿ ಪ್ರೀತಿಯನ್ನು ತೊರೆಯುವದು ರಸಪರಿತ್ಯಾ

ಗಮುಂ. ೫ ಪದ್ಮಾಸನ, ಪಲ್ಯಂಕಾಸನ, ವಜ್ರಾಸನ, ಮಕರಮುಖಾಸನಂ ಮೊದಲಾದುವುಗಳಿಂ ಕುಳ್ಳಿರ್ಪುದುಂ, ಏಕಪಾರ್ಶ್ವ, ದಂಡಶಯನ, ಮೃತಶಯನಾದಿಗಳಿಂ, ಮೋಕ್ಷ ಶುದ್ಧಾತ್ಮಾದಿ ಧ್ಯಾನಾಧ್ಯಯನಕ್ಕೆ ವಿಘ್ನಕರಮಪ್ಪ ಸ್ತ್ರೀ, ಪಶು, ಷಂಡಕ ವರ್ಜಿತಮಪ್ಪ ಸ್ಥಾನದೊಳು ಕುಳ್ಳಿರ್ಪುದುಂ ವಿವಿಕ್ತಶಯನಾಸನಮೆಂಬುದು. ೬ ನಿರುಪಾಧಿಕ ನಿಜಾತ್ಮಭಾವನಾಪೂರ್ವಕಂ ಕಲ್ಲು, ನೆಲ, ಮರ ಮೊದಲು ಬೆಳ್ಳವಾಸ ವೀರಾಸನಾದಿ ಯೋಗದೊಳಂ ಶರೀರಮಂ ದಂಡಿಸುವುದು ಕಾಯಕ್ಲೇಶಮೆಂಬಾರನೆಯ ಬಾಹ್ಯತಪಮಕ್ಕುಂ.

ಈ ಕಾಯಕ್ಲೇಶಮೇನುಕಾರಣಮೆಂದೊಡೆ— ಶುಭಧ್ಯಾನಾಭ್ಯಾಸನಾರ್ಥಂ, ದುಃಖನಾಶನಾರ್ಥಂ, ವಿಷಯಸುಖನಿವೃತ್ತಿಗೆಂದುಂ, ಪರಮಾಗಮ ಪ್ರಭಾವನಾರ್ಥಂ ಮಾಳ್ಪುದಲ್ಲದಂದು ಧ್ಯಾನಾಭ್ಯಾಸಂ ಸುಖಮಾಗದು. ಕ್ಲೇಶಮೆಯ್ದಿದೊಡೆ ಚಿತ್ತಶುದ್ಧಿಯಾಗದು, ಅದುಕಾರಣದಿಂ ಕಾಯಕ್ಲೇಶಮೆಂಬ ತಪಮಂ ಪ್ರಯತ್ನದಿಂ ಮಾಳ್ಪುದೊಳ್ಳಿತ್ತು. ೧ ಪ್ರಮಾದದಿಂ ಕಿರಿಪಿರಿಯ ದೋಷಂಗಳಾದೊಡೆ ದೇಶ, ಕಾಲ ಶಕ್ತಿ, ಸಂಹನನ, ಸಂಯಮಂ ಮೊದಲಾದುವಕ್ಕೆ ಅಳಿವಾಗದಂತು ಉಪವಾಸಮಂ ಮಾಡುವದು ಪ್ರಾಯಶ್ಚಿತ್ತಮೆಂಬುದು. ೨ ಸಮ್ಯಕ್ತ್ವಾದಿ ಗುಣಂಗಳ್ಗಂ ಗುಣಮನುಳ್ಳವರ್ಗಂ ಬೆಸಕೆಯ್ವುದು ವಿನಯವು. ೩ ಗುಣವಂತರ್ಗಂ ಶರೀರ ಪೀಡೆಯಾದೊಡಂ ಔಷಧಾದಿಗಳಂ ತಾಂ ಮಾಳ್ಪುದುಂ ಪೆರರಿಂ ಮಾಡಿಸುವುದುಂ ವೈಯ್ಯಾವೃತ್ಯವು. ೪ ದ್ರವ್ಯ, ಕ್ಷೇತ್ರ, ಕಾಲ, ಭಾವ ಶುದ್ಧಿಗಳಂ ನೋಡಿ ಶ್ರುತಮುಮಂ, ಶ್ರುತಧರರುಮಂ, ಮನ್ನಿಸಿ ಪರಮಾಗಮಮನೋದುವುದು ಸ್ವಾಧ್ಯಾಯಮೆಂಬುದು. ೫ ಕರ್ಮಬಂಧನಕ್ಕೆ ಕಾರಣಂಗಳಪ್ಪೆಲ್ಲಾ ದೋಷಂಗಳಂ ತೊರೆಯುವುದು ವ್ಯುತ್ಸರ್ಗಮೆಂಬುದು. ೬ ಮತ್ತಂ ಮನಮನೆತ್ತಲುಂ ಪರಿಯಲೀಯದೊಂದೇ ವಸ್ತುವಿನೊಳು ನಿಲಿಸಿ ಧ್ಯಾನಿಸುವದು ಧ್ಯಾನಮೆಂಬುದು. ಈ ಧ್ಯಾನವಿಷಯಂಗಳಪ್ಪ ಪಂಚಪದಂಗಳ ಮಹಿಮೆಯೆಂತೆನೆ—

ಕಂದ ‖ ಶ್ರೀಕರಮಭಿಷ್ಟಸಕಲ ।
ಸುಖಾಕರಮಪವರ್ಗಕಾರಣಂ ಭವಹರಣಂ ‖
ಲೋಕಹಿತಂ ಮನ್ಮನದೊ- ।
ಳೇಕಾಗ್ರತೆನಿಲ್ಕೆ ನಿರುಪಮಂ ಪಂಚಪದಂ ‖ ೨೦೦ ‖

ಸೂತ್ರಂ ‖ ದಶವಿಧಂ ಪ್ರಾಯಶ್ಚಿತ್ತಾನಿ ‖ ೪೩ ‖

ತಾ:—ಆಲೋಚನೆಯುಂ, ಪ್ರತಿಕ್ರಮಣಮುಂ, ತದುಭಯಮುಂ, ವಿವೇಕಮುಂ, ವ್ಯುತ್ಸರ್ಗಮುಂ, ತಪಮುಂ, ಛೇದಮುಂ, ಪರಿಹಾರಮುಂ, ಉಪಸ್ಥಾಪನಮುಂ, ಶ್ರದ್ಧಾನಮುಮೆಂದು ಪ್ರಾಯಶ್ಚಿತ್ತಂ ದಶಭೇದಮಕ್ಕುಂ ‖ ಮತ್ತಮೀ ಪ್ರಾಯಶ್ಚಿತ್ತಮುಂ, ಪ್ರಮಾದಪರಿಹಾರಾರ್ಥಮುಂ, ಭಾವಶುದ್ಧ್ಯರ್ಥಮುಂ, ನಿಶ್ಶಲ್ಯಾರ್ಥಮುಂ, ಅನಾವಸ್ಥೆಯಂ ಮಾಣಿಸಲ್ ವೇಡಿಯುಂ, ಮಾರ್ಗಮರ್ಯಾದೆಯಂ ಮಾಡಲ್ವೇಡಿಯುಂ, ಸಂಯಮದೃಢತೆಗೆಂದುಂ, ಚತುರ್ವಿಧಾರಾಧನಾದಿಗಳ ನಿರ್ವರ್ತಿ ಕಾರಣಮಾಗಿಯುಂ, ಪ್ರಾಯಶ್ಚಿತ್ತನಿಪುಣನುಂ, ಕೇಳ್ದ ದೋಷಮಂ ಪ್ರಕಾಶಿಸದವನುಂ, ಪ್ರಸನ್ನಹೃದಯನುಂ, ಏಕಾಂತದೊಳಿರ್ದಂಗೆ, ದೇಶಕಾಲಾದಿ ಭೇದವೇದಿ

ಯಪ್ಪತ್ಯಂತ ವಿನೇಯತನಪ್ಪಶಿಷ್ಯಂ ತನ್ನ ದೋಷಮಂ ಯಥಾವತ್ತಾಗಿ ಆಲೋಚಿಸಲುಂ ಪ್ರಾಯಶ್ಚಿತ್ತದಿಂ ಶುದ್ಧನಾಗಲ್ಕೇ ವೇಳ್ಕುಂ. ಅವರಾರೆಂದೊಡೆ ದರ್ಶನೀಕಾದಿ ಜಘನ್ಯ ಶ್ರಾವಕರ ರುವರುಂ, ಬ್ರಹ್ಮಚರ್ಯಾದಿ ಶ್ರಾವಕತ್ರಯ ಮಧ್ಯಮುಮುಂ, ಅನುಮತಿವಿರತಾದಿ ಉತ್ಕೃಷ್ಟ ಶ್ರಾವಕದ್ವಯಮುಂ, ಅಜ್ಜಿಯರುಂ, ತಪಸ್ವಿಗಳುಂ, ತಮ್ಮ ದೋಷಮಂ ಲಜ್ಜಾಭಿಮಾನಮಂ ಪರಿಹರಿಸಿ, ಪರಪರಿವಾದಾದಿಗಳ್ಗೆ ಯಂಜದಾಳೋಚಿಸುವುದು. ದೋಷಶುದ್ಧಿಯಂ ಮಾಡದಿ ರ್ದೊಡೆ ಕೈಕೊಂಡ ವ್ರತಂಗಳೆಲ್ಲಂ ನಿರರ್ಥಕಮೆಂದರಿವುದು. ಶುದ್ಧಮನಸ್ಕರಾಗಿ ಸ್ವರ್ಗಾಪವ ರ್ಗಂಗಳಂ ಪಡೆವರೆಂಬುದು ಅಭಿಪ್ರಾಯಂ ॥ ಮತ್ತಂ ಮೂಲಮೆಂಬ ಪ್ರಾಯಶ್ಚಿತ್ತಕ್ಕೆ ತಕ್ಕವ ರಾರೆಂದೊಡೆ? ಪಾರ್ಶಸ್ಥನುಂ, ಕುಶೀಲನುಂ, ಸಂಶಕ್ತನುಂ, ಅವಸಂನನುಂ, ಮೃಗಚಾರಿತ್ರನು ಮೆಂದಡಂ ಸ್ವಚ್ಛಂದನೆಂದೊಡಮೇಕಾರ್ಥಂ ಅವರ ಲಕ್ಷಣಮೆಂತೆಂದೊಡೆ? ವಸತಿ ಪ್ರತಿಬ ದ್ಧನುಂ, ಉಪಕರಣೋಪ ಜೀವಿಯುಂ, ಸಮಣರ ಕೆಲದೊಳಿರ್ದನುಂ, ಪಾರ್ಶ್ವಸ್ಥನೆಂಬಂ ಕ್ರೋಧಾದಿಕಷಾಯ ಕಲುಷಿತನುಂ, ವ್ರತಗುಣಶೀಲ ಪರಿಚ್ಯುತನುಂ, ಸಂಘಕ್ಕನಯಕಾರಿಯು ಮಪ್ಪಂ ಕುಶೀಲನೆಂಬ ವೈದ್ಯ, ಮಂತ್ರವಾದ, ಜ್ಯೋತಿಷ, ದಾತುರ್ವಾದ, ಕನ್ಯಾವಾದದೊಳು ಜೀವಿಸುವನುಂ, ರಾಗಾದಿಸೇವೆಗೆಯ್ವಂ ಸಂಶಕ್ತನೆಂಬಂ ಜಿನೇಶವಚನಾನಭಿಜ್ಞನುಂ, ಚಾರಿತ್ರ ಭಾರಮುಕ್ತನುಂ, ಜ್ಞಾನಾಚರಣಭ್ರಷ್ಟನುಂ, ಕರುಣಾಲಶ್ಯನುಮಪ್ಪವಂ ಅವಸಂನನೆಂಬಂ ತ್ಯಕ್ತಗುರುಕುಲನುಂ, ಏಕಾಕಿತ್ವದಿಂ ಸ್ವಚ್ಛಂದ ವೃತ್ತಿಯುಂ, ಜಿನವಚನ ದೂಷಕನುಮಪ್ಪಂ ಮೃಗಚಾರಿತ್ರನು ಮೆಂಬೀಯೆಯ್ವರುಂ, ಜಿನಧರ್ಮಬಾಹ್ಯರುಂ, ಉನ್ಮಾರ್ಗಿಗಳುಂ, ಮಹಾಪ ರಾಧಿಗಳುಮಪ್ಪ ಪಾರ್ಶ್ವಸ್ಥಾದಿಗಳಂ ತಚ್ಛಿಷ್ಯವರ್ಗಕ್ಕಂ ಮುನ್ನಿನ ತಪಮಂ ಕಳೆದುಮಳಿದೀ ಕ್ಷೆಯಂ ಕೊಡುವದು ಮೂಲಮೆಂಬ ಪ್ರಾಯಶ್ಚಿತ್ತಮಕ್ಕುಂ.

## ಸೂತ್ರಂ॥ ಆಲೋಚನಂ ಚ ॥ ೪೭ ॥

ತಾ:—ಅಕಂಪಿತ, ಅನುಮಾನಿತ, ದೃಷ್ಟ, ಬಾದನ, ಸೂಕ್ಷ್ಮ, ಛನ್ನ, ಶಬ್ದಾಕುಲಿತ, ಬಹುಜನ, ಅವ್ಯಕ್ತ, ತತ್ಸೇವಿತಮೆಂದಾಳೋಚನಾದೋಷಂ ಹತ್ತು ಭೇದಮಕ್ಕುಂ ॥ ೧೦॥

## ಸೂತ್ರಂ॥ ಚತುರ್ವಿಧಾವಿನಯಾಃ ॥ ೪೮ ॥

ತಾ:—ಜ್ಞಾನವಿನಯ, ದರ್ಶನವಿನಯ, ಚಾರಿತ್ರವಿನಯ, ಉಪಚಾರವಿನಯಮೆಂದು ನಾಲ್ಕು ತೆರಂ ॥ ೪ ॥ ೧ ಶುದ್ಧಮನದಿಂ ಮೋಕ್ಷಾರ್ಥಂ ಜ್ಞಾನಗ್ರಹಣಾಭ್ಯಾಸ ಸ್ಮರಣಾದಿಗಳು ಜ್ಞಾನವಿನಯಮೆಂಬುದು. ೨ ದ್ವಾದಶಾಂಗ, ಚತುರ್ದಶಪ್ರಕೀರ್ಣಕಾದಿ ಶ್ರುತಸಮುದ್ರದೊಳು ವೊಂದಕ್ಕರಮನಕ್ಕೆ ಪದಮನಕ್ಕೆ ಮೇಣ್ಸಂದೇಹಮಿಲ್ಲಗೆ ನಂಬುವುದು ನಿಃಶಂಕಿತತ್ವಾದಿಗುಣ ಮನುಳ್ಳುದು ದರ್ಶನವಿನಯಮೆಂಬುದು. ೩ ಜ್ಞಾನದರ್ಶನ ತಪೋವೀರ್ಯಚಾರಿತ್ರವಂತರ ದುರ್ಧರ ತಪಶ್ಚರಣ ಶ್ರವಣಾನಂತರಂ ಪುಟ್ಟಿದ ರೋಮಾಂಚದಿಂ ವ್ಯಕ್ತಮಾದ ತದ್ಭಕ್ತಿಯಿಂ ಪ್ರಶಸ್ತ ಮಸ್ತಕಾಂಜಲೀ ಕರಣದಿಂ ಭಾವಿಸುತ್ತಮನುಷ್ಠಾನಮಂ ಮಾಳ್ಪುದು ಚಾರಿತ್ರವಿನಯ ಮೆಂಬುದು. ೪ ಪ್ರತ್ಯಕ್ಷೋಪಚಾರವಿನಯಮುಂ, ಪರೋಕ್ಷೋಪಚಾರವಿನಯಮುಮೆಂದುಪ ಚಾರವಿನಯಮಿತ್ತೆರಂ. ಅದರಲ್ಲಿ ಆಚಾರ್ಯೋಪಾಧ್ಯಾಯಸ್ಥವಿರ ಪ್ರವರ್ತಕಗಣಧರಾದಿ

ಪೂಜ್ಯರ್ಗಿದಿರೇಳ್ವುದುಂ, ಬಳಿಗಳಿಪುವುದುಂ, ವಂದನಾನುಗಮನವುಂ, ರತ್ನತ್ರಯಂಗಳಂ ಮನ್ನಿಸುವದುಂ, ಸರ್ವಕಾಲದ ಯೋಗ್ಯರೂಪಕ್ರಿಯೆಯುಂ, ಸದ್ವಿನಯದಿಂ ಮಾಳ್ಪುದುಂ, ಮನೋವಾಕ್ಕಾಯ ದಂಡತ್ರಯುಮೆಂಬ ನಿಗ್ರಹಮುಂ, ಸುಶೀಲಯೋಗತೆಯುಂ, ಧರ್ಮಾನು ರಾಗದ ಕಥನಶ್ರವಣದೊಳು ಭಕ್ತಿಯುಂ, ಅರ್ಹದಾಯತನ ಗುರುಭಕ್ತಿಯುಂ, ದೋಷಗಳು ಮಂ ದೋಷಮನುಳ್ಳವರುಮಂ ವರ್ಜಿಸುವದುಂ, ಗುರುವೃದ್ಧಸೇವಾಭಿಲಾಷಾನುವರ್ತನ ಪೂ ಜನೆಮಂ ಗುರುಸ್ಥವಿರಾದಿಗಳು ಪೇಳ್ದುದಂತಪ್ಪದೆಂದುಂ ಭಾವಿಸುವದುಂ, ಸಮಾನರೊಳು ಉತ್ಸುಕತ್ವಮಿಲ್ಲದುದುಂ, ಹೀನರ ಪರಿಭವಿಸುವುದುಂ, ಕುಲ, ಜಾತಿ, ಧನೈಶ್ವರ್ಯ, ರೂಪು, ವಿಜ್ಞಾನ, ಬಲ, ಲಾಭ, ವೃದ್ಧಿಗಳೊಳು ಅಭಿಮಾನಮಿಲ್ಲದುದುಂ, ಸರ್ವತ್ರ ಕ್ಷಮಾಭಾವನೆ ಯುಂ, ಹಿತಮಿತದೇಶಕಾಲಾನುಕೂಲವಚನಮಂ ಕಾರ್ಯಾಕಾರ್ಯ, ಸೇವ್ಯಾಸೇವ್ಯ, ಭಾವ್ಯಾ ಭಾವ್ಯ, ವಿವೇಕಮೆಂದಿವು ಮೊದಲಾದವೆಲ್ಲಂ ಪ್ರತ್ಯಕ್ಷೋಪಚಾರವಿನಯಮೆಂಬುದು. ಆಚಾ ರ್ಯಾದಿಗಳು ಸಮೀಪದೊಳಿಲ್ಲದಿರ್ದೊಡಂ ನೆನೆದು ಕೈಮುಗಿವುದುಂ ಗುಣಾನುಕೀರ್ತಾಸ್ಮರಣ ಜ್ಞಾನಾನುಷ್ಠಾನಾದಿಗಳಂ ಮನವಚನಕಾಯದಿಂದೊಡಂಬಡುವದುಂ, ಮರವಿಯೆಂದಾದೊಡಂ ರಾಗಪ್ರಹರ್ಷದಿಂ ಪೃಷ್ಟಮಾಂಸಲಕ್ಷಣಂ ಗೆಯ್ಯದುದು ಮೊದಲಾದುವೆಲ್ಲಂ ಪರೋಕ್ಷೋಪ ಚಾರವಿನಯಮಕ್ಕುಂ. ಈ ಭವದ ಮರುಭವದ ಸಂಸಾರಸುಖಮನಪೇಕ್ಷಿಸದದುಂ, ಅಕ್ಷಯಾ ನಂತಮೋಕ್ಷಫಲಮಂ ಬಯಸಿ ಜ್ಞಾನಲಾಣಾಚಾರವಿಶುದ್ಧಿ ಸಮ್ಯಗಾರಾಧನಾ ಸಿಧ್ಯರ್ಥಂ ವಿನ ಯಂಗೆಯ್ವಂಗೆ ಸ್ವಾತ್ಮೋಪಲಬ್ಧಿಲಕ್ಷಣಮೋಕ್ಷದ್ವಾರಂ ನಿರರ್ಗಳಮಕ್ಕುಮೆಂಬುದರ್ಥಂ.

## ಸೂತ್ರಂ ॥ ದಶವಿಧಾನಿ ವೈಯ್ಯಾವೃತ್ಯಾನಿ ॥ ೫೦ ॥

ತಾ:—ಗುಣವಂತರ್ಗೆ ಶರೀರಪೀಡೆಯಾದೊಡಂ, ದುಷ್ಪರಿಣಾಮಮಾದೊಡಂ ಪರಿಹರಿ ಸಲೆಂದು ಕಾಯಚೇಷ್ಟೆಯಿಂ ಧರ್ಮಕಥನದಿಂ ದ್ರವ್ಯಾಂತರದಿಂ ಉಪದೇಶದಿಂ ಮಾಳ್ಪದೆಲ್ಲಂ ವೈಯ್ಯಾವೃತ್ಯಮೆಂಬುದು. ಅದುವುಂ ಪತ್ತುತೆರಂ ॥೧೦॥ ಎಂತೆನೆ—

೧ ಆಚಾರ್ಯರ್ಗೆ ಮಾಳ್ಪ ವೈಯ್ಯಾವೃತ್ಯಮುಂ, ೨ ಉಪಾಧ್ಯಾಯರ್ಗೆ ಮಾಳ್ಪ ವೈಯ್ಯಾ ವೃತ್ಯವುಂ, ೩ ಸಿಕ್ತ_ಚಾಂದ್ರಾಯಣಂ ಕಬಳಚಾಂದ್ರಾಯಣಮೆಂದಿವು ಮೊದಲಾದ ನೋಂಪಿ ಗಳಂ ನೆಗಳ್ವ ಮಹಾತಪಸ್ವಿಗಳಿಗೆ ಮಾಳ್ಪ ವೈಯ್ಯಾವೃತ್ಯಮುಂ, ೪ ಶ್ರುತಜ್ಞಾನ ಶೀಕ್ಷೆಯ ನೆಡೆವರಿಯದೆ ವ್ರತಭಾವನೆಗಳನ್ನುಳ್ಳ ಶಿಕ್ಷಕರ್ಗೆ ಮಾಳ್ಪ ವೈಯ್ಯಾವೃತ್ಯಮುಂ, ೫ ಕುತ್ತಗುಳಿ ಗಳಪ್ಪಗ್ಲಾನರ್ಗೆ ಮಾಳ್ಪ ವೈಯ್ಯಾವೃತ್ಯಮುಂ, ೬ ಸ್ಥಾವಿರ ಸಂತತಿಯುಪ್ಪ ಗಣಕ್ಕೆ ಮಾಳ್ಪ ವೈಯ್ಯಾವೃತ್ಯಮುಂ, ೭ ಧರ್ಮಸಂತಾನಮುಪ್ಪ ಕುಲಕ್ಕೆ ಮಾಳ್ಪ ವೈಯ್ಯಾವೃತ್ಯಮುಂ, ೮ ಚಾತು ರ್ವರ್ಣಕ್ಕೆ ಮಾಳ್ಪ ವೈಯ್ಯಾವೃತ್ಯಮುಂ, ೯ ಫಲಕಾಲದ ತಪಸ್ವಿಗಳಪ್ಪ ಸಾಧುಗಳಿಗೆ ಮಾಳ್ಪ ವೈಯ್ಯಾವೃತ್ಯಮುಂ, ೧೦ ಆಚಾರ್ಯಾದಿಗಳಲ್ಲಿ ಸಮಶೀಲರಪ್ಪ ಮನೋಜ್ಞರ್ಗೆ ಮಾಳ್ಪ ವೈಯ್ಯಾವೃತ್ಯವುಮೆಂದಿಂತು ವೈಯ್ಯಾವೃತ್ಯಂ ಹತ್ತು ತೆರನಕ್ಕುಂ.

## ಸೂತ್ರಂ ॥ ಪಂಚವಿಧ ಸ್ವಾಧ್ಯಾಯಃ ॥ ೫೧ ॥

ತಾ:—ದ್ರವ್ಯಶುದ್ಧಿ, ಕ್ಷೇತ್ರಶುದ್ಧಿ, ಕಾಲಶುದ್ಧಿ, ಭಾವಶುದ್ಧಿಯಿಂ ಬೆರಸು ಶ್ರುತಮಂ ಶ್ರುತ ಧರರುಮಂ ಮನ್ನಿಸಿ ಪರಮಾಗಮಾಭ್ಯಾಸಮಂ ಮಾಡುವದು ಸ್ವಾಧ್ಯಾಯಮೆಂಬುದು. ಅದು

ವಾಚನೆ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶಮೆಂದಿಂತು ಸ್ವಾಧ್ಯಾಯವು ಐದು ತೆರಂ ॥ ೧ ಕಾರುಣ್ಯಬುದ್ಧಿಯಿಂ ಪೆರರನೋದಿಸುವುದು ವಾಚನೆಯೆಂಬುದು, ೨ ತನ್ನ ಮೆರೆವುದುಂ ಪೆರರಂ ಧಿಕ್ಕರಿಸುವೆದುಂ ಮೊದಲಾದವಗುಣಂಗಳಂ ಬಿಟ್ಟು ತನಗೆ ಸಂದೇಹಮಾದುದಂ ಪೆರರಂ ಬೆಸಗೊಳ್ವುದು ಪೃಚ್ಛನೆಯು. ೩ ತನ್ನೋದಿದುದಂ ಮನದೊಳು ಚಿಂತಿಸುವದು ಅನುಪ್ರೇಕ್ಷೆಯು. ೪ ಪದಾಕ್ಷರಂ ಮಾತ್ರಾದಿಗಳಂ ಕುಂದಲೀಯದೆ ಪರಿವಿಡಿಗೆಯ್ವುದು ಆಮ್ನಾಯಮೆಂಬುದು. ೫ ಪೆರರ ಮನದ ಮಿಥ್ಯಾತ್ವಾದಿಗಳಂ ಕಳೆಯಲೆಂದು ಪೇಳ್ವುದು ಧರ್ಮೋಪದೇಶಮೆಂಬುದು.

## ಸೂತ್ರಂ ॥ ದ್ವಿವಿಧೋ ವ್ಯುತ್ಸರ್ಗಃ ॥ ೫೨ ॥

ತಾ:—ಬಾಹ್ಯೋಪದಿಯೆಂದುಂ, ಅಭ್ಯಂತರೋಪದಿಯೆಂದುಂ ವ್ಯುತ್ಸರ್ಗಮಿತ್ತೆರಂ॥೨॥ ಅಲ್ಲಿ ಬಾಹ್ಯೋಪದಿಯೆಂಬುದು ಕೆಯಿ(ಕ್ಷೇತ್ರ), ಮನೆ, ಗೋಮಹಿಷಿಗಳಾದಿ ಚತುಷ್ಪಾದಿಗಳುಂ, ದಾಸಿದಾಸಾದಿ ದ್ವಿಪದಿಗಳುಂ, ಹೊನ್ನು, ಬೆಳ್ಳಿ, ಧಾನ್ಯ, ಯಾನ, ಶಯನಾಸನ, ಕುಪ್ಯ, ಭಾಂಡಮೆಂದು ಚೇತನಾಚೇತನಂಗಳಪ್ಪಪತ್ತುಂ ಬಾಹ್ಯೋಪದಿಗಳಕ್ಕುಂ ॥ ಮಿಥ್ಯಾತ್ವ, ವೇದ, ರಾಗ, ದ್ವೇಷ, ಹಾಸ್ಯ, ರತಿ, ಅರತಿ, ಭಯ, ಶೋಕ, ಜುಗುಪ್ಸೆ, ಕ್ರೋಧ, ಮಾನ, ಮಾಯಾ ಲೋಭ, ಮೆಂಬೀ ಪದಿನಾಲ್ಕುಮಭ್ಯಂತರೋಪದಿಗಳಕ್ಕುಂ. ಮತ್ತಂ ಕಾಯತ್ಯಾಗಮಭ್ಯಂತರೋಪದಿವ್ಯುತ್ಸರ್ಗಮೆಂಬುದು. ಅದುವುಂ ಆವಜ್ಜೀವಮೆಂದುಂ, ನಿಯತಕಾಲಮೆಂದೆರಡು ತೆರನಕ್ಕುಂ, ಅಲ್ಲಿಂ ಆವಜ್ಜೀವಮಪ್ಪತೊರವಿ ಭಕ್ತಪ್ರತ್ಯಾಖ್ಯಾನಾದಿ ಮರಣಭೇದಮಕ್ಕುಂ. ನಿತ್ಯಮೆಂದುಂ, ನೈಮಿತ್ತಿಕಮೆಂದುಂ, ನಿಯತಕಾಲಮಪ್ಪ ಶರೀರತೊರವಿಯಿತ್ತೆರಂ ॥೨॥ ಅದರಲ್ಲಿ ಆವಸ್ಯಕಾದಿಗಳು ನಿತ್ಯಂ, ಪರ್ವಕ್ರಿಯೆ, ನಿಷದ್ಯಕ್ರಿಯೆ ಮೊದಲಾದವುಗಳು ನೈಮಿತ್ತಿಕಂಗಳು, ಆರನೆಯ ಬಾಹ್ಯದೊಳಂ ಕ್ರಿಯಾಕಾಂಡಂ ಪೇಳಪಟ್ಟುದದೆಂತೆನೆ.

ದೀಕ್ಷೆಯ ಲೋಚಿನೊಳು ಸಿದ್ಧಭಕ್ತಿ ಯೋಗಭಕ್ತಿಗಳಂ ಮಾಡಿ ಲೋಚಿನಂತ್ಯದೊಳು ಸಿದ್ಧಭಕ್ತಿಯಕ್ಕುಂ. ಸಿದ್ಧಯೋಗಭಕ್ತಿಯಂ ಮಾಡಿ ಪ್ರತ್ಯಾಖ್ಯಾನಂಗೊಂಡು ಆಚಾರ್ಯಭಕ್ತಿಯಂ ಪೇಳ್ದು ಗುರುಗಳಂ ವಂದಿಸುಗೆ. ಚರಿಗೆಯ ಮೊದಲೊಳಂ ನಿಷ್ಠಾಪನೆಯ ಮೊದಲೊಳಂ ಸಿದ್ಧಭಕ್ತಿಯಂ ಮಾಳ್ಕೆ, ಸ್ವಾಧ್ಯಾಯಂ ಗೊಳ್ವಾಗಳು ಶ್ರುತಭಕ್ತಿಯಾಚಾರ್ಯಭಕ್ತಿಯಂ ಪೇಳ್ದು ಅಧ್ಯಯನಮಂ ನಿಷ್ಠಾಪಿಸುವಾಗಲು ಶ್ರುತಭಕ್ತಿಯಂ ಮಾಡುವದು. ಸಿದ್ಧಪ್ರತಿಕ್ರಮಣ ಚತುರ್ವಿಂಶತಿ ತೀರ್ಥಕರ ಭಕ್ತಿಯಂ ಮಾಳ್ಕೆಯೊಳು ಗೊಳ್ವಲ್ಲಿಯುಂ ಬರುವಲ್ಲಿಯುಂ ಯೋಗಭಕ್ತಿಯಂ ಮಾಳ್ಕೆ, ಚೈತ್ಯ, ಪಂಚಗುರುಭಕ್ತಿಯಿಂ ದೇವತಾಸ್ತವನವಂ ಮಾಳ್ಕೆ, ಚತುರ್ದಶಿಯೊಳಾ ಕ್ರಿಯೆಯು ನಡುವೆ ಶ್ರುತಭಕ್ತಿಯಂ ಮಾಳ್ಕೆ, ಧರ್ಮವ್ಯಾಸಂಗದಿಂದ ಆ ಚತುರ್ದಶಿಯ ಕ್ರಿಯೆಯಂ ಮರೆಯದೊಡೆ ಪರ್ವದೊಳಷ್ಟಮಿಯ ಕ್ರಿಯೆಯಂ ಮಾಡುವದು. ಸಿದ್ಧ, ಶ್ರುತ, ಚಾರಿತ್ರ ಭಕ್ತಿಯಿಂದಷ್ಟಮಿಯ ಕ್ರಿಯೆಯಂ ಮಾಳ್ಕೆ, ಸಿದ್ಧ, ಚಾರಿತ್ರ ಭಕ್ತಿಯಿಂ ಪಾಕ್ಷಿಕ ಕ್ರಿಯೆಯಂ ಮಾಳ್ಕೆ, ಸಿದ್ಧ ಪ್ರತಿಮಾ ಮಾತ್ರಕ್ಕೆ ಸಿದ್ಧಭಕ್ತಿಯಂ ಮಾಳ್ಕೆ, 'ಜಿನಪ್ರತಿಮೆಗಂಗೂಡಿ ಮಾಳ್ಕೆ ತೀರ್ಥಕರ ಜನ್ಮಕ್ಷೇತ್ರದೊಳಂ ದರ್ಶನವಂದನೆಗಂ ಪಕ್ಷದ ಕ್ರಿಯೆಯಂ ಮಾಳ್ಕೆ, ಅಷ್ಟಮಿ

ಮೊದಲಾದ ಕ್ರಿಯೆಯೊಳು ಪೆರವು ಕ್ರಿಯೆಗಳಂ ಕೂಡಿರ್ದಡೆ ಶಾಂತಿಭಕ್ತಿಯಂ ಮಾಳ್ಕೆ ಸಿದ್ಧ, ಚೈತ್ಯ, ಪಂಚಗುರು, ಶಾಂತಿಭಕ್ತಿಯಿಂದ ಅಪೂರ್ವ ಚೈತ್ಯಾಲಯ ವಂದನೆಯಂ ಕೂಡಿ ಮಾಳ್ಕೆ, ತೀರ್ಥಕರರು ದೀಕ್ಷೆಗೊಂಡ ಕ್ಷೇತ್ರದೊಳಂ ಕಾಲದೊಳಂ ಸಿದ್ಧ, ಚಾರಿತ್ರ, ಯೋಗಭಕ್ತಿಯಿಂ ಬಲಗೊಂಡು ಶಾಂತಿಭಕ್ತಿಯಂ ಮಾಳ್ಕೆ, ಕೇವಲಜ್ಞಾನೋತ್ಪತ್ತಿಯಲ್ಲಿ ಸಿದ್ಧ, ಶ್ರುತ, ಚಾರಿತ್ರ, ಯೋಗಭಕ್ತಿಯಿಂ ಬಲಗೊಂಡು ಶಾಂತಿಭಕ್ತಿಯಂ ಮಾಳ್ಕೆ, ಆ ತೀರ್ಥಕರ ನಿರ್ವಾಣಕ್ಷೇತ್ರದೊಳಂ ಕಾಲದೊಳಂ ಸಿದ್ಧ, ಶ್ರುತ, ಚಾರಿತ್ರ, ಯೋಗ, ನಿರ್ವಾಣಭಕ್ತಿಯಿಂ ಬಲಗೊಂಡು ಶಾಂತಿಭಕ್ತಿಯಂ ಮಾಳ್ಕೆ, ಈ ಮೂರು ಕ್ರಿಯೆಗಳೊಡನೆ ಮತ್ತಾವ ಕ್ರಿಯೆಯಂ ಮಾಡಲಾಗದು. ಸಿದ್ಧಭಕ್ತಿ, ನಂದೀಶ್ವರ ಚೈತ್ಯಭಕ್ತಿ, ಪಂಚಗುರುಭಕ್ತಿ, ಶಾಂತಿಭಕ್ತಿಯಿಂ ನಂದೀಶ್ವರಕ್ರಿಯೆಯಂ ಮಾಳ್ಕೆ, ಅಭಿಷೇಕ ವಂದನೆ ಮಂಗಳಗೋಚಾರದ ಮಧ್ಯಾಹ್ನದೊಳಂ ಈ ಕ್ರಿಯೆಯು ನಂದೀಶ್ವರನಾಮಂ ಪೊರಗಾಗಿ ಮಾಳ್ಕೆ, ಮಂಗಳಗೋಚಾರದ ಪ್ರತ್ಯಾಖ್ಯಾನದ ಕ್ರಿಯೆಗೆ ಪಿರಿಯ ಸಿದ್ಧ, ಯೋಗ, ಆಚಾರ್ಯ, ಶಾಂತಿಭಕ್ತಿಯಂ ಮಾಡಿ ಗುರುಗಳಂ ವಂದಿಸುಗೆ, ವರ್ಷಾಕಾಲ ಯೋಗಂಗೊಳ್ವಲ್ಲಿಯುಂ ಬಿಡುವಲ್ಲಿಯುಂ ಸಿದ್ಧ, ಯೋಗ, ಚೈತ್ಯಭಕ್ತಿ, ಕಾಯೋತ್ಸರ್ಗಂಗೆಯ್ದು ಸ್ವಯಂಭುವಾ ಎಂಬುದು ಮೊಂದುವಂ ಪೇಳ್ದು ಚೈತ್ಯಭಕ್ತ್ಯಾಲೋಚನೆಯಂ ಪೇಳ್ದು ಪೂರ್ವ ದಿಶಾವರ, ದಕ್ಷಿಣದಿಶಾವರ, ಪಶ್ಚಿಮದಿಶಾವರ, ಉತ್ತರದಿಶಾವರ ಚೈತ್ಯಭಕ್ತಿ ಕಾಯೋತ್ಸರ್ಗಂಗೆಯ್ದು ತಂತಮ್ಮಕ್ರಮದ ಸ್ತವನಂಗಳಂ ಪೇಳ್ದು ಅಲ್ಲಿಯೋಗಂ ಗೊಳ್ವಾಗಲು ಇಚ್ಛಾಮಿ ಭತ್ತೇ ವರಿಸ ಜೋಗಭತ್ತಿ ಕಾಟಸಗ್ಗೋ ಕವ್ವೋತಸ್ಸ ಯೆಂಬಾಲೋಚನೆಯಂ ಪೇಳ್ದು ಪಂಚಗುರು, ಶಾಂತಿಭಕ್ತಿಯಂ ಮಾಳ್ಕೆ, ಯೋಗ ಬಿಡುವಲ್ಲಿ ಇಚ್ಛಾಮಿ ಭತ್ತೇ ವ್ಹತ್ಥಿದವರಿಸ ಜೋಗಭತ್ತಿ ಆಲೋಚನೆಯಂ ಪೇಳ್ಗೆ, ಸಿದ್ಧ, ನಿರ್ವಾಣ, ಪಂಚಗುರು, ಶಾಂತಿಭಕ್ತಿಯಿಂ ಶ್ರೀವರ್ಧಮಾನ ಸ್ವಾಮಿಯ ನಿರ್ವಾಣದಿನದೊಳು ಮಾಳ್ಕೆ, ಚಲ ಸ್ಥಿರ ಪ್ರತಿಷ್ಠೆಗೆ ಸಿದ್ಧಶಾಂತಿಭಕ್ತಿಗಳಂ ಮಾಳ್ಕೆ, ಚತುರ್ಥಸ್ನಾನದಂದು ಚಲಪ್ರತಿಷ್ಠೆಗೆ ಅಭಿಷೇಕ ಕ್ರಿಯೆಯಂ ಮಾಳ್ಕೆ, ಸ್ಥಿರಪ್ರತಿಮೆಯ ಚತುರ್ಥ ಸ್ನಾನದೊಳು ಪೀಠಾಲೋಚನೆಯುಮಂ ಶಾಂತಿಭಕ್ತಿಯಂ ಮಾಳ್ಕೆ, ಶ್ರುತಪಂಚಮಿಯೊಳು ಸಿದ್ಧ ಶ್ರುತಭಕ್ತಿಗೆಯ್ದು ವಾಚನೆಯಂದುಚ್ಚರಿಸಿ ಶ್ರುತಭಕ್ತಿ, ಆಚಾರ್ಯಭಕ್ತಿಯಿಂ ಸ್ವಾಧ್ಯಾಯಂಗೊಂಡು ಕಥನಾ ಪ್ರಕಥನಾನಂತರಂ ಶ್ರುತಭಕ್ತಿಯಿಂ ಸ್ವಾಧ್ಯಾಯಮಂ ನಿಷ್ಠಾಪಿಸಿ ಶಾಂತಿ ಭಕ್ತಿಯಂ ಮಾಳ್ಕೆ, ಮತ್ತಂ ಮರುದಿನ ನಿಷ್ಠಾಪನೆಯೊಳುಮಿನ್ತೇಮಾಳ್ಕೆ, ಸಿದ್ಧಾಂತವಾಚನೆ ಗೊಳ್ವಲ್ಲಿಯೊಳಂ ಈಯಂದಮುಕ್ಕುಂ, ಮತ್ತೊಂದರ್ಥಾಧಿಕಾರಕ್ಕಾರಾರು ಕಾಯೋತ್ಸರ್ಗ ಮಕ್ಕುಂ. ಆಚಾರ್ಯವಾಚನೆಗೀಕ್ರಮಮೇಮಕ್ಕುಂ. ಆಯಧಿಕಾರಂಗಳ ಮೊದಲೊಳಂ ಕಡೆಯೊಳಂ ಸಿದ್ಧ ಶ್ರುತ ಆಚಾರ್ಯಭಕ್ತಿಯಂ ಮಾಡುವದು. ಸಾಮಾನ್ಯ ಮುನಿಗೆ ಸಿದ್ಧಭಕ್ತಿಯಿಂ ವಂದಿಸುವದು. ಸಿದ್ಧಾಂತವೇದಿಗೆ ಸಿದ್ಧ ಶ್ರುತಭಕ್ತಿಗೆಯ್ಗೆ, ಆಚಾರ್ಯಂಗೆ ಸಿದ್ಧಾಚಾರ್ಯಭಕ್ತಿಯಂ ಮಾಳ್ಕೆ, ಸಿದ್ಧಾಂತಾಚಾರ್ಯಂಗೆ ಸಿದ್ಧ ಶ್ರುತಾಚಾರ್ಯಭಕ್ತಿಯಂ ಮಾಳ್ಕೆ, ಜ್ಯೇಷ್ಠನಕ್ಕೆ ಕನಿಷ್ಠನಕ್ಕೆ ಪ್ರತಿಮಾಯೋಗದಿಂ ನಿಂದ ಋಷಿಗೆ ಸಮಸ್ತ ಚಾತುರ್ವರ್ಣಂಗಳು ಸಿದ್ಧಭಕ್ತಿ ಯೋಗಭಕ್ತಿಯೊಳು ಬಲಗೊಂಡು ಶಾಂತಿಭಕ್ತಿಯಂ ಪೇಳ್ದು ಕೈಯ್ಯ ನೆತ್ತಿಸುಗೆ, ಆಚಾರ್ಯರನು ಜ್ಞೆಯಿಂ ಗುರುಗಳ ಪಾದಸನ್ನಿಧಿಯೊಳು ಸಿದ್ಧಾಚಾರ್ಯಭಕ್ತಿಯಂ ಮಾಡಿ ಆಚಾರ್ಯಪದವಿ

ಯಂ ಕೈಕೊಂಡು ಶಾಂತಿಭಕ್ತಿಯಂ ಮಾಳ್ಕೆ, ಸಿದ್ಧಭಕ್ತಿಚಾರಿತ್ರ ಪ್ರತಿಕ್ರಮಣನಿಷ್ಠಿತಕರಣ ಚತುರ್ವಿಂಶತಿ ತೀರ್ಥಕರಭಕ್ತಿ ಚಾರಿತ್ರಾಳೋಚನಾಚಾರ್ಯಭಕ್ತಿ ಬೃಹದೊಳಾಳೋಚನಾಚಾರ್ಯಭಕ್ತಿ, ಚಳೀಕಾಚಾರ್ಯಭಕ್ತಿಯಿಂ ಪಾಕ್ಷಿಕ, ಚಾತುರ್ಮಾಸಿಕ, ಸಾಂವತ್ಸರಿಕ, ಯುಗಾಂತಪ್ರತಿಕ್ರಮಣಂಗಳಂ ಮಾಳ್ಕೆ, ಉಳಿದ ಪ್ರತಿಕ್ರಮಣದೊಳು ಚೇತ್ತಾಳೋಚನಾಚಾರ್ಯಭಕ್ತಿಯುಂ ಬೃಹದಾಳೋಚನಾಚಾರ್ಯಭಕ್ತಿಯುಂ ಪೊರಗಾಗಿ ಮುಂಪೇಳ್ದ ಕ್ರಿಯೆಗಳಂ ಮಾಡುವದು. ಸನ್ಯಸನ ಪ್ರಾರಂಭದೊಳು ಪಿರಿಯ ಸಿದ್ಧಭಕ್ತಿ, ಶ್ರುತಭಕ್ತಿಯಂ ಪೇಳ್ದು ಶ್ರುತಾಚಾರ್ಯಭಕ್ತಿಯಿಂ ( ಬಲಗೊಂಡು ) ಸ್ವಾಧ್ಯಾಯಂಗೊಂಡು ಶ್ರುತಭಕ್ತಿಯಿಂ ಸ್ವಾಧ್ಯಾಯಮಂ ನಿಷ್ಠಾಪಿಸುಗೆ, ಸನ್ಯಸನ ಸಮಾಪ್ತಿಯೊಳವೀಕ್ರಿಯೆಯಲ್ಲಿ ಶಾಂತಿಭಕ್ತಿಯಂ ಮಾಳ್ಕೆ, ಸನ್ಯಸನಂ ಪಲವುದಿನಂ ನಿಂದಡೆ ಪಿರಿಯ ಶ್ರುತಾಚಾರ್ಯಭಕ್ತಿಯಿಂ ಸ್ವಾಧ್ಯಾಯಂಗೊಂಡು ನಿಷ್ಠಾಪನೆಯೊಳು ಪಿರಿಯ ಶ್ರುತಭಕ್ತಿಯಂ ಮಾಳ್ಕೆ, ಸ್ವಾಧ್ಯಾಯಮಂ ಕೊಂಡವರುಂ ಕೊಳ್ಳದವರುಂ ಕ್ಷಪಕನ ಸಮೀಪದೊಳಿರ್ದ ಕಡೆಯೊಳೆಲ್ಲರುಂ ಶಾಂತಿಭಕ್ತಿಯಂ ಮಾಳ್ಕೆ, ಸಾಮಾನ್ಯ ಋಷಿಯರ ಮೃತಕಕ್ಕಂ ನಿಸಿದ್ಧಿಗಂ ಸಿದ್ಧಭಕ್ತಿ, ಯೋಗಭಕ್ತಿಯಿಂ ಬಲಗೊಂಡು ಶಾಂತಿಭಕ್ತಿಯಂ ಮಾಳ್ಕೆ, ಸಿದ್ಧಾಂತವೇದಿಗೆ ಸಿದ್ಧ, ಶ್ರುತ, ಯೋಗಭಕ್ತಿಯಿಂ ಬಲಗೊಂಡು ಶಾಂತಿಭಕ್ತಿಯಂ ಮಾಳ್ಕೆ, ಉತ್ತರಯೋಗಿಗೆ, ಸಾಮಾನ್ಯ ಋಷಿಗೆ ಸಿದ್ಧ, ಚಾರಿತ್ರ, ಯೋಗ, ಭಕ್ತಿಯಂ ಬಲಗೊಂಡು ಶಾಂತಿಭಕ್ತಿಯಂ ಮಾಳ್ಕೆ, ಸಿದ್ಧಾಂತಿಕರಪ್ಪ ತ್ರಿಕಾಲಯೋಗಿಗಳಿಗೆ ಸಿದ್ಧ, ಶ್ರುತ, ಚಾರಿತ್ರ, ಯೋಗಭಕ್ತಿಯಿಂ ಬಲಗೊಂಡು ಶಾಂತಿಭಕ್ತಿಯಂ ಮಾಳ್ಕೆ, ಉತ್ತರಯೋಗಾಚಾರ್ಯಂಗೆ ಸಿದ್ಧಚಾರಿತ್ರ ಯೋಗಭಕ್ತಿಯಿಂ ಬಲಗೊಂಡು ಶಾಂತಿಭಕ್ತಿಯಂ ಮಾಳ್ಕೆ, ಉತ್ತರಯೋಗ ಸಿದ್ಧಾಚಾರ್ಯಂಗೆ ಸಿದ್ಧ, ಶ್ರುತ, ಚಾರಿತ್ರ ಯೋಗಭಕ್ತಿಯಿಂ ಬಲಗೊಂಡು ಆಚಾರ್ಯಭಕ್ತಿಯಂ ಮಾಳ್ಕೆ, ಖ್ಯಾತಿಪೂಜಾ ಲಾಭಾದಿಗಳನಪೇಕ್ಷಿಸದೆ ಕರ್ಮಕ್ಷಯಾಪೇಕ್ಷೆಯಿಂದಾವುದೊಂದು ಕ್ರಿಯೆಯಂ ಮಾಳ್ಪಾಗಳು ಅದರ ಪೆಸರನುಚ್ಚರಿಸಿ ಮಾಳ್ಕೆ, ಈ ಪೇಳ್ದ ಕ್ರಿಯೆಗಳಿಗೆ ಉಚ್ಛ್ವಾಸಕಾಲಮಂ ಪೇಳ್ವಂ—

ಶ್ಲೋಕ॥ ಗ್ರಂಥಾರಂಭ ಸಮಾಪ್ತೌ ಚ ಸ್ವಾಧ್ಯಾಯಸ್ತವನಾದಿಷು ।
ಸಪ್ತವಿಂಶತಿರುಚ್ಛ್ವಾಸಾನುತ್ಸರ್ಗೇ ದುರ್ಮನಸ್ಯಪಿ ॥ ೫೭ ॥
ವ್ರತೇಷ್ವನ್ಯತಮಸ್ಯಂತಿ ಚಾರೇ ಶುದ್ಧರ್ವಿನಶ್ಯ ಚ ।
ಸ್ಯಾತ್ಪ್ರತಿಕರಣೇಷ್ವಾಗ್ರರ್ಥತಂ ರಾತ್ರ್ಯಾಸ್ತುತದ್ದಳಂ ॥ ೫೮ ॥
ಪಾಕ್ಷಿಕೇ ತ್ರಿಶತಂ ಚಾತುರ್ಮಾಸಿಕೇಸ್ಯಾಚ್ಚತುಶ್ಶತಂ ।
ಶತಾನಿಪಂಚಸಂವತ್ಸರಪಟ್ಸಕ್ರಿಯಾಂತರೇ ॥ ೫೯ ॥
ಪಂಚವಿಂಶತಿರುಚ್ಛ್ವಾಸೋ ಗೋಚಾರೇರ್ಯಾತಿಚಾರಯೋಃ ।
ಜಿನಸಾಧು ಸಿಸಿದ್ಧಿನಾಂ ವಿಣ್ಮೂತ್ರೋತ್ಸರ್ಜನೇಪಿ ಚ ॥ ೬೦ ॥

ಇಂತು ಕ್ರಿಯಾಕಾಂಡಂ ಪೇಳಲ್ಪಟ್ಟಿತು.

---

॥ ಓಂ ॥

## ಶ್ರೀಪರಮಾತ್ಮನೇ ನಮಃ

ಶ್ರೀ—ಪರಂಪರಾರೂಪವಾದ ಮೋಕ್ಷಕಾರಣ ಸಾಕ್ಷಾನ್ ಮೋಕ್ಷರೂಪವಾದ ನಿಶ್ಚಯ ಕಾರಣವುಂ ನಿತ್ಯಾನಂದೈಕರೂಪವಾದ ಪರಮಾತ್ಮ ಧ್ಯಾನದಿಂದಲ್ಲದೆ ಮೋಕ್ಷವು ದೊರೆಯುವ ದಿಲ್ಲವೆಂದು ಆ ಧ್ಯಾನದ ಭೇದವನ್ನು ಹೇಳುತ್ತಾರೆ—

### ಸೂತ್ರಂ ॥ ಧ್ಯಾನಂ ಚತುರ್ವಿಧಃ ॥ ೫೩ ॥

ತಾ:—ಉತ್ತಮ ಸಂಹನನವನ್ನುಳ್ಳ ಪುರುಷನು ಧ್ಯಾತೃವೆನ್ನುವನು. ಅಂತರ್ಮುಹೂರ್ತಕಾಲದೊಳಗೆ ಒಂದೇ ವಸ್ತುವನ್ನು ಚಿಂತಿಸುವದಕ್ಕೆ ಧ್ಯಾನವೆನ್ನುವರು. ಜೀವಾದಿತತ್ವಂ ಧ್ಯೇಯವೆಂಬುವದು. ಸಂಸಾರಸುಖ, ಮೋಕ್ಷಗಳು ಫಲಗಳೆಂದು ಯೋಚಿಸುವದು.

ಶ್ಲೋಕ ॥ ಆರ್ತಂ ರೌದ್ರಂ ತಥಾ ಧರ್ಮಂ ಶುಕ್ಲಂಚೇತಿ ಚತುರ್ವಿಧಂ ॥
ತತ್ರಾದ್ಯಂ ಸಂಸ್ರುತೇ ರ್ಹೇತು ರ್ದ್ವಯಂ ಮೋಕ್ಷಸ್ಯ ತತ್ಪರಂ ॥ ೧ ॥

ತಾ:—ಧ್ಯಾನವು ಆರ್ತಧ್ಯಾನ, ರೌದ್ರಧ್ಯಾನ, ಧರ್ಮಧ್ಯಾನ, ಶುಕ್ಲಧ್ಯಾನಗಳೆಂದು ನಾಲ್ಕು ಪ್ರಕಾರವು. ಅವುಗಳಲ್ಲಿ ಆರ್ತ, ರೌದ್ರ ಧ್ಯಾನಗಳೆರಡು ನರಕ, ತಿರ್ಯಂಚಗತಿಗೆ ಕಾರಣವಾದವುಗಳು. ಧರ್ಮ, ಶುಕ್ಲಧ್ಯಾನಗಳು ಸ್ವರ್ಗಮೋಕ್ಷಗಳಿಗೆ ಕಾರಣಗಳು.

### ಸೂತ್ರಂ ॥ ಆರ್ತಂಚ ॥ ೫೪ ॥

ತಾ:—೧ ಅಮನೋಜ್ಞಾಸಂಪ್ರಯೋಗಾನ್ಯುತ್ಪತ್ತಿ ಸಂಕಲ್ಪಾಧ್ಯವಸಾನಂ, ೨ ಉತ್ಪನ್ನ ವಿನಾಶ ಸಂಕಲ್ಪಾಧ್ಯವಸಾನಂ, ೩ ಮನೋಜ್ಞಾ ವಿಪ್ರಯೋಗಾನ್ಯುತ್ಪತ್ತಿ ಸಂಕಲ್ಪಾಧ್ಯವಸಾನಂ, ೪ ಉತ್ಪನ್ನಾವಿನಾಶ ಸಂಕಲ್ಪಾಧ್ಯವಸಾನಂಗಳೆಂದು ನಾಲ್ಕುವಿಧ ಆರ್ತಧ್ಯಾನವು.

ತಾ:—೧ ತನಗೆ ವೈರಿಗಳಾದ ದೇವ, ಮನುಷ್ಯ, ತಿರ್ಯಂಚರುಗಳುಂ, ಇಷ್ಟವಲ್ಲದ ಶಸ್ತ್ರ, ಅಗ್ನಿ ಎಂದಿವುಗಳುಂ ದೇಹದಲ್ಲಿ ಹುಟ್ಟುವ ತಲೆವೇಧನೆ, ಹೊಟ್ಟೆನೋವು, ಕಣ್ಣುಬೇನೆ ಮೊದಲಾದ ಅನೇಕ ಪ್ರಕಾರಗಳಾದ ಐದುಕೋಟಿಯರವತ್ತೆಂಟುಲಕ್ಷದ ತೊಂಭತ್ತೊಂಭತ್ತು ಸಾವಿರದೈನೂರೆಂಭತ್ನಾಲ್ಕು ( ೫೬೮೯೯೫೮೪ ) ರೋಗಗಳಲ್ಲಿ ಒಂದು ರೋಗವಾದರೂ ನನಗೆ ಬರದೇ ಇರಬೇಕೆಂದು ಚಿಂತಿಸುವದು ಅಮನೋಜ್ಞಾಸಂಪ್ರಯೋಗಾನ್ಯುತ್ಪತ್ತಿ ಸಂಕಲ್ಪಾಧ್ಯವಸಾನವು, ೨ ತನಗೆ ಅಪ್ರಿಯರಾದ ಶತ್ರುಗಳು ಹೆಂಡತಿ, ಮಕ್ಕಳು, ಬಂಧುಗಳು ಇವೇ ಮೊದಲಾದವರ ಸಂಬಂಧವಾದ ಕಾಲದಲ್ಲಿ ಅವರುಗಳು ನಾಶವಾಗಲೆಂದು ಚಿಂತಿಸುವದು ಉತ್ಪನ್ನ ವಿನಾಶ ಸಂಕಲ್ಪಾಧ್ಯವಸಾನವು, ೩ ಮತ್ತು ತನಗೆ ಇಷ್ಟವಾದ ಧನ, ಧಾನ್ಯ, ಸುವರ್ಣ, ವಸ್ತ್ರ, ವಾಹನ, ಶಯನಾಸನ, ಪುಷ್ಪಮಾಲ್ಯ, ಶ್ರೀಗಂಧ, ಸ್ತ್ರೀಪುತ್ರ, ಕಲತ್ರಾದಿಗಳು ತನಗೆ

ದೊರೆಯಲಿಲ್ಲವೆಂದು ದು:ಖದಿಂದ ಚಿಂತೆಯನ್ನು ಮಾಡುವದು ಮನೋಜ್ಞಾವಿಪ್ರಯೋಗಾನ್ಯುತ್ಪತ್ತಿಸಂಕಲ್ಪಾದ್ಯವಸಾನವು, ೪ ತನಗೆ ಯಾವದಾದರೊಂದು ವಸ್ತುವು ದೊರೆದರೆ ಅದು ಎಂದೆಂದಿಗೂ ಅಗಲದೇ ಇರಬೇಕೆಂದು ಚಿಂತೆಯನ್ನು ಮಾಡುತ್ತಿರುವದು ಉತ್ಪನ್ನಾವಿನಾಶ ಸಂಕಲ್ಪಾದ್ಯವಸಾನವೆಂಬ ಆರ್ತಧ್ಯಾನವಾಗುವದು.

ಮತ್ತೊಂದು ಪ್ರಕಾರ ಆರ್ತಧ್ಯಾನವು—

ಉಕ್ತಂಚ॥ ಶ್ಲೋ॥ ಆರ್ತಧ್ಯಾನಂ ಚತುರ್ಭೇದಮಿಷ್ಟವಸ್ತುವಿಯೋಗಜಮ್ ॥
ಅನಿಷ್ಟವಸ್ತುಯೋಗೋತ್ಥಂ ಕಿಞ್ಚಿದೃಷ್ಟ್ವಾ ನಿದಾನಜಮ್ ॥ ೨೯ ॥
ಕಿಂಚಿತ್ಪೀಡಾದಿಕೇ ಜಾತೇ ಚಿಂತಾಂ ಕುರ್ವಂತಿ ಚೇಜ್ಜಡಾಃ ॥
ತಸ್ಮಾತ್ತ್ಯಾಜ್ಯಂ ತು ಪಾಪಸ್ಯ ಮೂಲಮಾರ್ತಂ ಸುದೂರತ: ॥ ೩೦ ॥

ತಾ:—ಇಷ್ಟವಿಯೋಗಂ, ಅನಿಷ್ಟಸಂಯೋಗಂ, ಲಾಭಜ, ರೋಗಜವೆಂದು ಆರ್ತಧ್ಯಾನವು ನಾಲ್ಕು ವಿಧವಾಗುವದು.

೧ ತನಗೆ ಹಿತರಾದ ಇಷ್ಟರುಂ, ಪ್ರಿಯರುಂ, ಮನೋವಲ್ಲಭೆಯರು ಮೊದಲಾದವರ ಅಗಲಿಕೆಯಾದರೆ ಅವರ ಕೂಟವನ್ನು ಚಿಂತಿಸುವದು ಇಷ್ಟವಿಯೋಗವೆಂಬ ಆರ್ತಧ್ಯಾನವು. ಅದು ಹಾಗೆ ಆರ್ತಧ್ಯಾನವಾಯಿತೆಂದರೆ—ಆ ಕಾಲದಲ್ಲಿ ದೇವರ ಸ್ಮರಣೆಯು ಚಿತ್ತದಲ್ಲಿರುವದಿಲ್ಲ, ಧರ್ಮಂ ಚಿತ್ತದೊಳಿಲ್ಲ, ವ್ರತಂ ಚಿತ್ತದೊಳಿಲ್ಲ, ತಪಂ ಚಿತ್ತದೊಳು ಇಲ್ಲದ್ದರಿಂದ ಅದು ಆರ್ತಧ್ಯಾನವಾಯಿತು. ಅಥವಾ ಹ್ಯಾಗೆ ಚಿಂತಿಸುವನೋ ಹಾಗೆಯೇ ಅವರುಗಳ ಸಂಬಂಧವುಂಟಾದ ಕಾಲದಲ್ಲಿ ರಾಗದಿಂದ ಹರ್ಷವನ್ನು ಹೊಂದಿ ಯಾವಾಗಲೂ ಅದರಲ್ಲಿಯೇ ಮಗ್ನನಾಗಿರುವದರಿಂದ ಅದು ಆರ್ತಧ್ಯಾನವಾಯಿತು.

೨ ತನಗೆ ಬೇಡದಿರುವ ಅನಿಷ್ಟರು, ಅಪ್ರಿಯರು ಮನೋನಯನವಲ್ಲಭೆಯರಲ್ಲದವರು ಇವರುಗಳ ಸಂಬಂಧವಾದರೆ ಅವರ ವಿಯೋಗವನ್ನು ಚಿಂತಿಸುವದು, ಅನಿಷ್ಟಸಂಯೋಗವೆಂಬ ಆರ್ತಧ್ಯಾನವು. ಅದು ಹ್ಯಾಗೆ ಆರ್ತಧ್ಯಾನವಾಯಿತೆಂದರೆ—ದೇವರುಂ, ಗುರುಗಳುಂ, ಧರ್ಮವುಂ, ದಾನವುಂ. ವ್ರತಂ, ತಪಸ್ಸು ಮೊದಲಾದವುಗಳ ಸ್ಮರಣೆಯು ಚಿತ್ತದಲ್ಲಿ ಇಲ್ಲದಿರುವದರಿಂದ ಆರ್ತವಾಯಿತು. ಅಥವಾ ಅವರುಗಳು ವಿಯೋಗವಾದಾಗ ಹರ್ಷಕ್ಕೆ ಸಲ್ಲುವನು. ರಾಗಕ್ಕೆ ಸಲ್ಲುವನು. ಅಂಥಾ ಕಾಲದಲ್ಲಿಯೂ ದೇವರ್ಮೊದಲಾದವುಗಳಲ್ಲಿ ಚಿಂತೆಯಾಗುವದಿಲ್ಲವಾದ್ದರಿಂದ ಎರಡನೇ ಆರ್ತಧ್ಯಾನವಾಯಿತು.

೩ ಲಾಭಜವೆಂಬ ಧ್ಯಾನವು ಹ್ಯಾಗೆಂದರೆ—ಯಾವನೋರ್ವ ವ್ಯವಹಾರಿಯು ಅಧಿಕವಾಗಿ ಭಂಡಗಳನ್ನು ಕೊಂಡು ಅವನ್ನು ಮಾರಲಿಕ್ಕೆ ಹೋಗುವಾಗ ಅವನ ಹೆಂಡತಿ, ಮಕ್ಕಳು, ನೆಂಟರುಗಳು ಈಗ ಮಾರಬೇಡ ಖರೀದಿ ಹೆಚ್ಚಿದಕಾಲದಲ್ಲಿ ಮಾರೋಣವೆಂದು ನಿಲ್ಲಿಸಲು ಯಾವಾಗ ಧಾರಣೆ ಹೆಚ್ಚುವದು ಆಗ ಮಾರಿದರೆ ಬಹಳ ಲಾಭವನ್ನು ಹೊಂದುತ್ತೇನೆಂದು ಯಾವಾಗಲೂ ಚಿಂತಿಸುತ್ತಿರುವ ವ್ಯವಹಾರಿಯು, ಮತ್ತು ಸುಕಾಲದಲ್ಲಿ ಉತ್ತು ಹರಗಿ ಚನ್ನಾಗಿ ವ್ಯವಸಾಯ

ಮಾಡಿ ಬಿತ್ತಿದರೆ ವಿಪುಲ ಫಲವುಂಟಾಗುವದು. ಈ ರೀತಿಯಿಂದ ಒಳ್ಳೇ ಕಾಲದಲ್ಲಿ ಬಿತ್ತದೆ ಕೆಟ್ಟೆನೆಂದು ಚಿಂತಿಸುವ ಆರಂಭಕಾರನುಂ, ಅಂಥಾ ಅವಸರದಲ್ಲಿ ನನ್ನ ಯಜಮಾನನ್ನು ಕಾಣ ಲಿಲ್ಲ ಅವರು ಈ ದೋಷವನ್ನು ಕಂಡಿದ್ದರೆ ಬಹಳ ಕಾರುಣ್ಯವನ್ನು ಮಾಡಿ ಸಹಾಯವನ್ನು ಮಾಡುತ್ತಿದ್ದರು. ಈ ಪ್ರಕಾರವಾಗಿ ಕಾಣದೆ ಕೆಟ್ಟೆನೆಂದು ಚಿಂತಿಸುವ ಓಲಗಿಕಾರನುಂ, ಈ ಪ್ರಕಾರದಿಂದ ಸಮಸ್ತರೂ ತಮ್ಮ ತಮ್ಮ ವ್ಯವಹಾರದಿಂದ ಕೆಟ್ಟೆವೆಂದು ಚಿಂತಿಸುವದು ಆರ್ತ ವೆನಿಸುವದು. ಅದು ಯಾಕೆ ಆರ್ತಧ್ಯಾನವಾಯಿತೆಂದು ಕೇಳಿದರೆ, ಅಂಥಾ ಕಾಲದಲ್ಲಿ ದಾನ, ಧರ್ಮ, ದೇವ, ಗುರು, ವ್ರತ, ತಪಸ್ಸು ಮೊದಲಾದವುಗಳ ವಿಚಾರವು ಚಿತ್ತದಲ್ಲಿಲ್ಲದಿರುವದ ರಿಂದ ಆರ್ತವಾಯಿತು. ಅಥವಾ ಯಾವ ರೀತಿ ಚಿಂತಿಸಿದರೋ ಹಾಗೆ, ವ್ಯಾಪಾರಗಾರನಿಗೂ ವ್ಯವಸಾಯಗಾರನಿಗೂ ಓಲಗಿಕಾರನಿಗೂ ಲಾಭ ಉಂಟಾದ ಕಾಲದಲ್ಲಿ ರಾಗವುಂಟಾಗಿ ಅವು ಗಳನ್ನು ರಕ್ಷಿಸಲಿಕ್ಕೋಸ್ಕರ ಚಿಂತಿಸುವನು. ಅದು ಹ್ಯಾಗಂದರೆ—ಹೆಂಡತಿಯರುಂ, ಮಕ್ಕಳುಂ, ನೆಂಟರುಂ, ದಾಯಾದಿಗಳುಂ, ಅರಸುಗಳುಂ, ಕಳ್ಳರುಂ, ಊರವರುಂ, ತೆಗೆದುಕೊಳ್ಳುವ ರೆಂದೂ ಮತ್ತೂ ಬೆಂಕಿಯಿಂದಾಗಲೀ, ನೀರಿನಿಂದಾಗಲೀ, ಕೆಟ್ಟು ಹೋಗುವದೋ ಎಂದು ಚಿಂತೆ ಯುಂಟಾಗುವದರಿಂದ ಆರ್ತಧ್ಯಾನವಾಯಿತು. ಆ ಕಾಲದಲ್ಲಿಯೂ ದೇವರು ಮೊದಲಾದವುಗಳ ವಿಚಾರವುಂಟಾಗುವದಿಲ್ಲ, ಅದರಿಂದ ಇದು ಲಾಭಜವೆಂಬ ಮೂರನೇ ಆರ್ತಧ್ಯಾನವು.

೪ ಅಸಾತೋದಯ ಕರ್ಮಜನಿತವಾದ ತಲೆಶೂಲೆ, ಕಂಣುಬೇನೆ, ಹೊಟ್ಟೆಬೇನೆ, ಶೂಲೆ, ಭಗಂದರ ಕುಷ್ಠ ಮೊದಲಾದ ( ೫೬೮೯೯೫೮೪ ) ಭೇದದ ರೋಗಗಳಲ್ಲಿ ಬಂದಾದರೂ ತನಗೆ ಉಂಟಾಗಬಾರದೆಂದು ನೆನೆಯುವ ಚಿಂತೆಯು ಆರ್ತವಾಗುವದು. ಅದು ಹ್ಯಾಗಂದರೆ—ಅಂಥಾ ಕಾಲದಲ್ಲಿ ದೇವ, ಗುರು, ಧರ್ಮ ಮೊದಲಾದವುಗಳ ಚಿಂತೆಯು ಮನಸ್ಸಿನಲ್ಲಿ ಇಲ್ಲದಿರುವದ ರಿಂದ ಅದು ರೋಗಜವೆಂಬ ನಾಲ್ಕನೇ ಆರ್ತಧ್ಯಾನವು. ಅದು ಕೃಷ್ಣ, ನೀಲ ಕಾಪೋತವೆಂಬ ಲೇಶ್ಯಾತ್ರಯಂಗಳನ್ನುಳ್ಳದ್ದು, ಮಿಥ್ಯಾದೃಷ್ಟಿ ಆದಿಯಾಗಿ ಆರನೇ ಗುಣಸ್ಥಾನದವರಿಗೂ ಇರು ವದು, ನಿದಾನ ಹೊರಗಾಗಿ ಪ್ರಮತ್ತಸಂಯತನಿಗೆ ಮೂರಾರ್ತಧ್ಯಾನಗಳುಂಟಾಗುವವು; ಬದ್ಧಾ ಯುಷ್ಯರಾದ ಸಮ್ಯಗ್ದೃಷ್ಟಿಯಾದಿಗಳಿಗೂ, ಉಳಿದವರಿಗೂ ತಿರ್ಯಗ್ಗತಿಗೆ ಕಾರಣವಾಗುವದು; ತೀವ್ರ ಸಂಕ್ಲೇಶವನ್ನುಳ್ಳ ಬದ್ಧಾಯುಷ್ಯರ ಹೊರತು ಸಮ್ಯಗ್ದೃಷ್ಟಿಗಳಿಗೆ ತಿರ್ಯಗ್ಗತಿಗೆ ಕಾರ ಣವಲ್ಲದ್ದಾಗಿರುವದು. ಇಂತಾರ್ತಧ್ಯಾನಂ ಸಂಪೂರ್ಣಂ ॥

---

## ಸೂತ್ರಂ ॥ ರೌದ್ರಮಪಿ ಚತುರ್ವಿಧಂ ಚ ॥ ೫೫ ॥

ಶ್ಲೋಕ ॥ ಪ್ರಾಣಿನಾಂ ರೋದನಾದ್ರೌದ್ರಃ ಕ್ರೂರಃ ಸತ್ವೇಷು ನಿರ್ಘೃಣಃ ।
ಪುಮಾನ್‌ಸ್ತತ್ರ ಭವಂ ರೌದ್ರಂ ವಿದ್ಧಿಧ್ಯಾನಂ ಚತುರ್ವಿಧಮ್ ॥ ೩೧ ॥
ಹಿಂಸಾನಂದಾನ್ಮೃಷಾನಂದಾ ಸ್ತೇಯಾನಂದಾತ್ಪ್ರಜಾಯತೇ ।
ಪರಿಗ್ರಹಾಣಾಮಾನಂದಾತ್ತ್ಯಾಜ್ಯಂ ರೌದ್ರಂ ಚ ದೂರತಃ ॥ ೩೨ ॥

ತಾಃ—ಹಿಂಸಾನಂದ, ಮೃಷಾನಂದ, ಸ್ತೇಯಾನಂದ, ( ವಿಷಯ ) ಸಂರಕ್ಷಣಾನಂದ ವೆಂದು ರೌದ್ರಧ್ಯಾನವು ನಾಲ್ಕು ವಿಧವಾಗುವದು.

೧ ಅದರಲ್ಲಿ ಕ್ರೂರವಾಗಿ ಬೈಯ್ಯುವದುಂ, ಕಿನಿಸುವದುಂ, ಘರ್ಜಿಸುವದುಂ, ಹೊಡೆಯು ವದುಂ, ನಿಗ್ರಹಿಸುವದುಂ, ಇರಿಯುವದುಂ, ಕೊಲ್ಲುವದುಂ ಇವೇ ಮೊದಲಾದವುಗಳಿಂದ ಪ್ರಾಣಿಗಳಿಗೆ ಹಿಂಸೆಮಾಡಿ ಸಂತೋಷಪಡುವದು ಹಿಂಸಾನಂದವೆಂಬ ರೌದ್ರಧ್ಯಾನವು.

೨ ಅನ್ಯರಿಗೆ ನಂಬಿಗೆಯುಂಟಾಗುವ ಹಾಗೆ ತನ್ನ ಕುಬುದ್ಧಿಗಳಿಂದ ಸುಳ್ಳನ್ನು ಹೇಳಿ ಮೋಸಪಡಿಸಿ ಸಂತೋಷ ಹೊಂದುವದು ಮೃಷಾನಂದವೆಂಬ ರೌದ್ರಧ್ಯಾನವು.

೩ ಪೌರುಷದಿಂದ ಇತರರ ಮೇಲೆ ದೋಷಾರೋಪಣೆಮಾಡಿ ಅವರಿಂದ ದಂಡ ತೆಗೆದು ಕೊಳ್ಳುವದುಂ ಪರರ ದ್ರವ್ಯಗಳನ್ನು ಕಳ್ಳತನ ಮಾಡಿ ಸಂತೋಷ ಹೊಂದುವದು ಸ್ತೇಯಾ ನಂದವೆಂಬ ರೌದ್ರಧ್ಯಾನವು.

೪ ಧನ, ಧಾನ್ಯ, ದಾಸಿ, ದಾಸ, ಮೊದಲಾದ ತನ್ನ ಸಂಪಾದಿಸಿದ ಪರಿಗ್ರಹಗಳೇ ನನ್ನ ಸ್ವರೂಪವು, ನಾನು ಅವರ ಸ್ವರೂಪು ಇವುಗಳು ಕೆಟ್ಟರೆ ನಾನು ಕೆಡುವೆನೆಂದು ಬಹಳ ಮೋಹ ದಿಂದ ಅವುಗಳನ್ನು ಸಂರಕ್ಷಿಸುವದು ವಿಷಯಸಂರಕ್ಷಣಾನಂದವೆಂಬ ನಾಲ್ಕನೇ ರೌದ್ರಧ್ಯಾನ ವಾಗುವದು. ಈ ರೀತಿಯಾದ ನಾಲ್ಕು ರೌದ್ರಧ್ಯಾನಗಳು ಮನ, ವಚನ, ಕಾಯ, ಕೃತಕಾರಿ ತಾನುಮೋದನದಿಂದ ಆನಂದವನ್ನು ಹೊಂದುವದು ಪ್ರತ್ಯೇಕಂ ನವವಿಧವು. ಹಾಗೆ ನಾಲ್ಕು ಕೂಡಿ ಷಟ್‌ತ್ರಿಂಶ (೩೬) ಭೇದಗಳಾಗುವವು. ಈ ಧ್ಯಾನವು ಅತಿಕೃಷ್ಣ, ನೀಲ, ಕಾಪೋತ ಲೇಶ್ಯಗಳನ್ನುಳ್ಳದ್ದು. ಮಿಥ್ಯಾದೃಷ್ಟ್ಯಾದಿ, ಪಂಚಗುಣಸ್ಥಾನ ಭೂಮಿಕವಾಗಿರುವದು. ನರಕಗತಿ ಯನ್ನು ಮಾಡುವದು ಅತಿ ತೀವ್ರ ಸಂಕ್ಲೇಶವನ್ನುಳ್ಳದ್ದರಿಂದ ಬದ್ಧಾಯುಷ್ಯರ ಹೊರಗಾಗಿ ಸಮ್ಯಗ್ದೃಷ್ಟಿಗಳಿಗೆ ನರಕಾಯುಷ್ಯವನ್ನು ಮಾಡುವದಿಲ್ಲವು. ಇಂತು ರೌದ್ರಧ್ಯಾನಸ್ವರೂಪಂ ಸಂಪೂರ್ಣಂ ||

---

## ಸೂತ್ರಂ|| ಧರ್ಮಧ್ಯಾನಂ ದಶವಿಧಂ || ೫೬ ||

ತಾ:—೧ ಅಪಾಯವಿಚಯಂ, ೨ ಉಪಾಯವಿಚಯಂ, ೩ ಜೀವವಿಚಯಂ, ೪ ಅಜೀವ ವಿಚಯಂ, ೫ ವಿಪಾಕವಿಚಯಂ, ೬ ವಿರಾಗವಿಚಯಂ, ೭ ಭವವಿಚಯಂ, ೮ ಸಂಸ್ಥಾನವಿ ಚಯಂ, ೯ ಆಜ್ಞಾವಿಚಯಂ, ೧೦ ಕಾರಣವಿಚಯಂ, ಎಂದಿನ್ತು ಧರ್ಮಧ್ಯಾನವು ಹತ್ತುಭೇದಗ ಳಾಗುವವು. ಹ್ಯಾಗಂದರೆ—

೧ ಮೊದಲಿಲ್ಲದ ಸಂಸಾರದಲ್ಲಿ ಅಶುಭಮನೋವಾಕ್ಕಾಯಗಳಿಂದ ಸಂಪಾದಿಸಿದ ಕರ್ಮ ಗಳ ನಾಶವು ಹ್ಯಾಗಾಗುವದೆಂದು ಸದಾ ಚಿನ್ತಿಸುವದು ಅಪಾಯವಿಚಯ ಧರ್ಮಧ್ಯಾನವು.

೨ ಪ್ರಶಸ್ತ ಮನೋವಾಕ್ಕಾಯಗಳಿಂದಲ್ಲದೆ ಅಶುಭ ಕರ್ಮವು ನಾಶವಾಗುವದಿಲ್ಲವೆಂದು ಚಿಂತಿಸುವದು ಉಪಾಯವಿಚಯ ಧರ್ಮಧ್ಯಾನವು.

೩ ಜೀವನು ಜ್ಞಾನದರ್ಶನೋಪಯೋಗಗಳನ್ನೇ ಲಕ್ಷಣವಾಗುಳ್ಳ ದ್ರವ್ಯಾರ್ಥಿಕ ನಯದಿಂ ಮೊದಲೂ ಅಂತ್ಯವೂ ಇಲ್ಲದ ಅಸಂಖ್ಯಾತ ಪ್ರದೇಶವನ್ನುಳ್ಳವನುಂ, ತಾನು ಸಂಪಾದಿಸಿದ ಶುಭಾಶುಭ ಕರ್ಮಂಗಳ ಫಲಗಳನ್ನು ತಾನೇ ಭೋಗಿಸುವನುಂ, ತನ್ನಿಂದ ಮಾಡಿ ಕೈಕೊಳ್ಳ

ಲ್ಪಟ್ಟ ( ಕಿರಿವಿರಿಯವಪ್ಪ )' ಸೂಕ್ಷ್ಮ, ಸ್ಥೂಲಗಳಾದ ಶರೀರಪ್ರಮಾಣ ಪ್ರದೇಶಗಳನ್ನು ಉಡುಗುವ ಪಸರಿಸುವ ಸ್ವರೂಪವನ್ನುಳ್ಳವನುಂ, ಊರ್ಧ್ವಗತಿ ಸ್ವಭಾವನಾದವನುಂ, ಕರ್ಮಗಳೊಡನೆ ಮೊದಲಿಲ್ಲದ ಸಂಬಂಧಗಳನ್ನುಳ್ಳವನುಂ, ಕರ್ಮಗಳ ಕ್ಷಯದಿಂದುಂಟಾದ ಮೋಕ್ಷಸುಖವುಳ್ಳವನುಂ, ಅಶುದ್ಧ ನಿಶ್ಚಯನಯದಿಂದ ಚತುರ್ದಶ ಗುಣಸ್ಥಾನಂ, ಚತುರ್ದಶ ಮಾರ್ಗಣಸ್ಥಾನಂ, ಚತುರ್ದಶ ಜೀವಸಮಾಸೆಗಳು ಮೊದಲಾದವುಗಳನ್ನುಳ್ಳ ನಿಶ್ಚಯನಯದಿಂದ ಅಮೂರ್ತಸ್ವರೂಪನುಂ, ಎಂದಿವು ಮೊದಲಾದ ಜೀವನ ಸ್ವಭಾವವನ್ನು ಚಿಂತಿಸುವದು ಜೀವವಿಚಯ ಧರ್ಮಧ್ಯಾನವು.

೪. ಅಚೇತನಗಳಾದ ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲಗಳೆಂಬೀ ಅಜೀವದ್ರವ್ಯಗಳ ಸ್ವರೂಪವನ್ನು ಚನ್ನಾಗಿ ತಿಳಿದು ಈ ಐದು ದ್ರವ್ಯಗಳು ಅಜೀವಗಳೆಂದು ಸಂಶಯರಹಿತನಾಗಿ ನಂಬಿ ಚಿಂತಿಸುವದು ಅಜೀವವಿಚಯ ಧರ್ಮಧ್ಯಾನವು.

೫ ವಿಜ್ಞಾನ, ಚರಣಾಧ್ಯಕ್ಷ, ಅಷ್ಟವಿಧ ಕರ್ಮಂಗಳುಂ, ನಾಮಸ್ಥಾಪನಾದ್ರವ್ಯಭಾವಂಗಳುಂ, ಮೂಲಪ್ರಕೃತಿ, ಉತ್ತರಪ್ರಕೃತಿ ಭೇದವನ್ನುಳ್ಳವುಗಳುಂ, ಗುಡ, ಖಂಡಶರ್ಕರೆ, ಅಮೃತಮೆಂದಿವುಗಳ ನಾಮಾನುಭವವನ್ನುಳ್ಳದುಂ, ನಿಂಬ, ಕಾಂಜೀರ, ವಿಷ, ಹಾಲಾಹಲವೆಂಬಿವುಗಳಿಗೆ ಸಮಾನವಾದ ಉದಯವನ್ನುಳ್ಳವು, ಪ್ರಕೃತಿಸ್ಥಿತ್ಯನುಭಾಗಪ್ರದೇಶಬಂಧಸ್ವರೂಪದಿಂದ ಜೀವನಲ್ಲಿರುವವು, ಲತೆ, ದಾರು, ಅಸ್ಥಿ, ಶೈಲವೆಂಬಿವುಗಳಿಗೆ ಸಮನಾಗಿರುವವು. ಯಾವ್ಯಾವ ಗತಿಗಳಲ್ಲಿ, ಯಾವ ಯಾವ ಯೋನಿಗಳಲ್ಲಿ ಯಾವ ಯಾವ ಅವಸ್ಥೆಯನ್ನು ಹೊಂದಿಸವೆಂದಿಂತು ಚಿಂತಿಸುವದು ವಿಪಾಕವಿಚಯ ಧರ್ಮಧ್ಯಾನವು.

೬ ಈ ಶರೀರವು ಅನಿತ್ಯವಾದದ್ದು. ಶರಣಿಲ್ಲದಿರುವದು ವಾತ, ಪಿತ್ತ, ಶ್ಲೇಷ್ಮಗಳೆಂಬ ತ್ರಿದೋಷಗಳಿಂದ ಕೂಡಿರುವದು. ರಸ, ರುಧಿರ, ಮಾಂಸ, ಮೇದೋಸ್ಥಿ, ಮಜ್ಜ, ಶುಕ್ಲಗಳೆಂಬ ಸಪ್ತಧಾತುಮಯವಾದದ್ದು. ಮಲ, ಮೂತ್ರ, ಕ್ರಿಮಿಗಳಿಂದ ಭರಿತವಾಗಿ ಎಡೆಬಿಡದೆ ಬಿಸರ್ತು ಸುರಿಯುವ ದುರ್ಗಂಧವನ್ನುಳ್ಳದ್ದು. ಸಮ್ಯಜ್ಞಾನಿಯ ವೈರಾಗ್ಯಕ್ಕೆ ಕಾರಣವಾದದ್ದು. ಇದರ ಸಂಬಂಧಗಳಾದ ಇಂದ್ರಿಯ ಸುಖಗಳು ರುಚಿಕರವಲ್ಲವು. ಕಡೆಯಲ್ಲಿ ವಿರಸಗಳಾಗುವವು. ನಂಜಿನ ಮರದ ಹಣ್ಣುಗಳಿಗೆ ( ವಿಷ ) ಸಮಾನವಾದವುಗಳು. ಸಂಸಾರದುಃಖಕ್ಕೆ ಕಾರಣಗಳು. ಎಷ್ಟು ಸೇವಿಸಿದರೂ ತೃಪ್ತಿಯಿಲ್ಲದವುಗಳು ಹೇಸಿಗೆಗೆ ಸಮಾನವಾದವುಗಳು. ಆದರಿಂದ ಇವರ ಅನುಭವವು ಒಳ್ಳೇದಲ್ಲವೆಂದು ಸರ್ವದಾ ಚಿಂತಿಸುವದು ವಿರಾಗವಿಚಯ ಧರ್ಮಧ್ಯಾನವು.

೭ ( ೧ ) ಸಚಿತ್ತಯೋನಿ, ( ೨ ) ಅಚಿತ್ತಯೋನಿ, ( ೩ ) ಸಚಿತ್ತಾಚಿತ್ತಮಿಶ್ರಯೋನಿ, (೪)ಶೀತಯೋನಿ, (೫) ಉಷ್ಣಯೋನಿ, (೬) ಶೀತೋಷ್ಣಮಿಶ್ರಯೋನಿ, (೭) ಸಮ್ವೃತ್ತಯೋನಿ, (೮) ನಿವೃತ್ತಯೋನಿ, (೯) ಸಮ್ವೃತ್ತನಿವೃತ್ತಮಿಶ್ರಯೋನಿಗಳೆಂಬ ಜೀವೋತ್ಪತ್ತಿನಿಮಿತ್ತವಾದ ನವಯೋನಿಗಳಲ್ಲಿ ಮಾಸಿನಿಂದ (ಜರೆ) ಆವರಿಸಿ ಹುಟ್ಟುವ, ತತ್ತಿಯಾಗಿ ಹುಟ್ಟುವ, ಕರುಣಿಯಾಗಿ ಹುಟ್ಟುವಗರ್ಭಜಂಗಳುಂ, ಸ್ವರ್ಗದಲ್ಲಿ ಉಪಪಾದಶೆಯ್ಯೆಯು (ಅಮಳ್ವಾಸಿನ) ಮಧ್ಯದಲ್ಲಿ ಹುಟ್ಟು

ವಪರುಂ, ನರಕಗಳಲ್ಲಿ ಜೇನುಹುಳುವಿನ ಗೂಡಿಗೆ ಸಮಾನವಾಗಿರುವ ಬಿಲಗಳ ನಡುವೆ ಗದು ಗಿನ ಕಾಯನ್ನು ಮೊಗುಚಿದ ಹಾಗೆ ಇರುವ ಯೋನಿಗಳಲ್ಲಿ ಹುಟ್ಟುವ ಉಪಪಾದಿಕಗಳುಂ; ಸುತ್ತಲೂ ಇರುವ ಪುದ್ಗಲಗಳ ಸಮೂಹವನ್ನೇ ಶರೀರವುಳ್ಳದ್ದಾಗಿ ಅದರಲ್ಲಿ ಹುಟ್ಟುವ ಸಮ್ಮೂರ್ಛನ ಪ್ರಾಣಿಗಳುಂ ಎಂದಿವುಗಳು ಭವದಿಂದ ಭವಾಂತರಕ್ಕೆ ಹೋಗುವ ಕಾಲದಲ್ಲಿ ಒಂದೇ ಸಮಯದಲ್ಲಿ ಬಿಟ್ಟ ಅಂಬಿನ ಹಾಗೆ ನೆಟ್ಟಗೆ ಹೋಗುವ ಇಷು ಗತಿಯುಂ, ಎರಡು ಸಮಯದಲ್ಲಿ ಹೊಡೆದ ಗುಂಡಿನ ಹಾಗೆ ಒಂದು ಕೊಂಕಿನಿಂದ ಹೋಗುವ ಪಾಣಿಮುಕ್ತಗತಿಯುಂ, ಮೂರು ಸಮಯದಲ್ಲಿ ನೇಗಿಲಿನ ಹಾಗೆ ಎರಡು ಕೊಂಕಿನಿಂದ ಹೋಗುವ ಲಾಂಗಲಗತಿಯುಂ, ನಾಲ್ಕು ಸಮಯದಲ್ಲಿ ಗೋಮೂತ್ರದ ಹಾಗೆ ಮೂರು ಕೊಂಕಿನಿಂದ ಹೋಗುವ ಗೋಮೂತ್ರಗತಿಯುಂ ಎಂದಿವುಗಳಿಂದ ಅಂತ್ಯವಿಲ್ಲದಿರುವ ಸಂಸಾರವೆಂಬ ಘೋರಾರಣ್ಯದಲ್ಲಿ ತೊಳಲಿ ಬಳಲುತ್ತಿರುವ ಜೀವನಿಗೆ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳು ದೊರೆಕೊಳ್ಳದಿದ್ದರೆ ಪಡೆದ ಮನುಷ್ಯಜನ್ಮವು ನಿರರ್ಥಕವೆಂದು ಸದಾ ಚಿಂತಿಸುವದು ಭವವಿಚಯ ಧರ್ಮಧ್ಯಾನವು.

೮ ವಸ್ತುವು ಹ್ಯಾಗಿರುತ್ತದೋ ಹಾಗೇಯೇ ಚಿಂತಿಸುವದು ಮತ್ತು ಅದು ದ್ವಾದಶಾನು ಪ್ರೇಕ್ಷಾರೂಪವಾಗಿರುವದು.

ಗಾಹೆ ॥ ಅದ್ದುವಮಸರಣಮೇಕತ್ತಮ್ಮಂಣಸಂಸಾರಲೋಕಮಶುಚಿತ್ತಂ ॥
ಆಸವಸಂವರಣಿಜ್ಜರಧಂಮಂ ಬೋಹಿಜ್ಜ ಚಿತ್ತೇಜ್ಜೋ ॥ ೭ ॥

ತಾ:—೧ ಅಧ್ರುವಾನುಪ್ರೇಕ್ಷೆ, ೨ ಅಶರಣಾನುಪ್ರೇಕ್ಷೆ, ೩ ಏಕತ್ವಾನುಪ್ರೇಕ್ಷೆ, ೪ ಅನ್ಯತ್ವಾನುಪ್ರೇಕ್ಷೆ, ೫ ಸಂಸಾರಾನುಪ್ರೇಕ್ಷೆ, ೬ ಲೋಕಾನುಪ್ರೇಕ್ಷೆ, ೭ ಅಶುಚಿತ್ವಾನುಪ್ರೇಕ್ಷೆ, ೮ ಆಸ್ರವಾನುಪ್ರೇಕ್ಷೆ, ೯ ಸಂವರಾನುಪ್ರೇಕ್ಷೆ, ೧೦ ನಿರ್ಜರಾನುಪ್ರೇಕ್ಷೆ, ೧೧ ಧರ್ಮಾನುಪ್ರೇಕ್ಷೆ, ೧೨ ಬೋಧಿದುರ್ಲಭಾನುಪ್ರೇಕ್ಷೆ ಈ ದ್ವಾದಶಾನುಪ್ರೇಕ್ಷೆಗಳನ್ನು ಭಾವಶುದ್ಧಿಯಿಂದ ಭಾವಿಸುವದು ಸಂಸ್ಥಾನವಿಚಯ ಧರ್ಮಧ್ಯಾನವು.

೯ ಜೀವಾದಿ ಪದಾರ್ಥಗಳು ಅತಿ ಸೂಕ್ಷ್ಮಗಳಾದುದರಿಂದ ಪರೋಕ್ಷಜ್ಞಾನಗಳಿಂದ ಅವುಗಳ ಸ್ವರೂಪವನ್ನು ತಿಳಿಯಲಸಾಧ್ಯವಾಗಿರುವದು. ಅದರಿಂದ ಸರ್ವಜ್ಞರ ವಚನವೇ ಪ್ರಮಾಣವೆಂದು ಶ್ರದ್ಧೆಯನ್ನಿಟ್ಟು ಸರ್ವದಾ ಚಿಂತಿಸುತ್ತಿರುವದು ಆಜ್ಞಾ ವಿಚಯ ಧರ್ಮಧ್ಯಾನವು.

೧೦ ಶ್ಲೋಕ॥ ಸೂಕ್ಷ್ಮಂ ಜಿನೋದಿತಂ ತತ್ವಂ ಹೇತುಭಿರ್ಯನ್ನಹನ್ಯತೇ ॥
ಆಜ್ಞಾಸಿದ್ಧಂ ತು ತದ್ಗ್ರಾಹ್ಯಂ ನಾನ್ಯಥಾ ವಾದಿನೋ ಜಿನಾಃ ॥ ೩೩ ॥

ಎನ್ನುವದು ಮತ್ತಂ ಸೂಕ್ಷ್ಮವಾದ ಪರಮಾಗಮದ ಅರ್ಥದಲ್ಲಿ ಎಲ್ಲಿಯಾದರೂ ಮರೆವೆಯಾದರೆ ನಯನಿಕ್ಷೇಪ ಪ್ರಮಾಣಗಳಿಗೆ ವಿರೋಧವಿಲ್ಲದ ಹಾಗೆ ವಿಚಾರಿಸಿ ಸ್ಯಾದ್ವಾದಮತಾನುಸಾರಿಯಾಗಿ ಸ್ವಸಮಯಭೂಷಣವುಂ, ಪರಸಮಯ ದೂಷಣವುಂ ಎಂದಿವುಗಳ ಭೇದಗಳನ್ನು ತಿಳಿದು ಚಿಂತಿಸುವದು ಕಾರಣವಿಚಯ ಧರ್ಮಧ್ಯಾನವು. ಈ ದಶಭೇದವನ್ನುಳ್ಳ ಧರ್ಮಧ್ಯಾನವು ಪೀತ, ಪದ್ಮ, ಶುಕ್ಲ ಲೇಶ್ಯೆಗಳನ್ನುಳ್ಳದ್ದು ॥ ಅಸಂಯತ ಸಮ್ಯಗ್ ದೃಷ್ಟ್ಯಾದಿ, ಅಪ್ರಮತ್ತರೆಂಬ ೪-೫-೬-೭ ನಾಲ್ಕು ಗುಣಸ್ಥಾನಗಳವರಿಗೂ ವರ್ತಿಸುವದು ಅಥವಾ

ಶ್ಲೋಕ ॥ ಜಿನಾಜ್ಞಾಕಲ್ಮಷಾಪಾಯ ಕರ್ಮಪಾಕ ವಿಚಾರಣಾ ।
ಲೋಕಸಂಸ್ಥಾವಿಚಾರಶ್ಚ ಧರ್ಮೋ ದೇವತ್ವಯೋದಿತಃ ॥ ೩೪ ॥

ಮತ್ತೂ ಧರ್ಮಧ್ಯಾನವು ಬಾಹ್ಯಾಭ್ಯಂತರ ಭೇದದಿಂದ ಎರಡು ಪ್ರಕಾರವಾಗುವದು. ಅದರಲ್ಲಿ ಸೂತ್ರಾರ್ಥವಿಚಾರ:- ದೃಢವ್ರತಾದಿಗಳುಂ ಸಂಭೃತ ಚರಣವದನಕಾಯಂ ಪರಿಸ್ಪಂದ ವಾಗ್ವ್ಯಾಪಾರ ಜಂಭಜೃಂಭೋದ್ಗಾರ ಮೋಹೋದಯದಿಂ ಪ್ರಾಣಾಪಾನಾದಿಗಳುದ್ರೇಕವಿರ ಮಣಲಕ್ಷಣಂ ಅನ್ಯರಿಂದ ತಿಳಿಯಲ್ಪಡುವುದರಿಂದ ಬಾಹ್ಯಧರ್ಮಧ್ಯಾನವಾಗುವದು.

ತನ್ನಿಂದರಿಯಲ್ಪಡುವ ಅಭ್ಯಂತರ ಧರ್ಮಧ್ಯಾನವು ಹ್ಯಾಗಂದರೆ—ಶಲ್ಯತ್ರಯಾದಿ ವಿರ ಹಿತಂ ಮಾಯಾಶಲ್ಯ, ಮಿಥ್ಯಾಶಲ್ಯ, ನಿದಾನಶಲ್ಯವೆಂದು ಮೂರುವಿಧವು. ಅದು ಹ್ಯಾಗಂದರೆ—

೧ ಚಾರಿತ್ರ ಪರಕಳತ್ರಾದಿ ವಾಂಛಾರೂಪರಾಗವಿಕಾರವುಂ, ಪರಬಂಧ, ವಧಭೇದಾದಿ ವಾಂಛಾರೂಪ ದ್ವೇಷವಿಕಾರವುಂ ಮನಸ್ಸಿನಲ್ಲಿ ಯಾವಾಗಲಾದರೂ ಒಂದುಸಾರಿ ಹುಟ್ಟಿದರೆ ಕೊಕ್ಕರಿಸಿ ತನ್ನನ್ನು ತಾನೇ ನಿಂದಿಸುತ್ತಾ ಆ ಕ್ಷಣದಲ್ಲಿಯೇ ನಿಜಶುದ್ಧ ಪರಮಾತ್ಮಭಾವನಾಭಿ ಮುಖನಾಗಿ ಪರಮ ಸಮರಸಿಭಾವ ನಿರ್ಮಲ ಜಲದಿಂದ ವಿಭಾವಮಲಕಲಂಕವನ್ನು ತೊಳೆದು ಪರಿಶುದ್ಧಾತ್ಮನಾಗುವದನ್ನು ಬಿಟ್ಟು ತನ್ನ ಅಂತರಂಗದಲ್ಲಿರುವ ವಿಕಾರಗಳನ್ನು ಅನ್ಯರು ಯಾರೂ ತಿಳಿಯುವದಿಲ್ಲವೆಂದು ಉದಾಸೀನವನ್ನು ಮಾಡಿ ಬಹಿರಂಗ ಬಕವೇಷದಿಂದ ಲೋಕ ರಂಜನೆಯನ್ನು ಮಾಡಿಕೊಂಡಿರುವದು ಮಾಯಾಶಲ್ಯವಾಗುವದು.

೨ ಸ್ವಶುದ್ಧಾತ್ಮಸ್ವರೂಪವೇ ಸಾಕ್ಷಾತ್ ಉಪಾದೇಯವೆಂದು ತಿಳಿಯದೆ ಅದರಲ್ಲಿ ರುಚಿ ಯಿಲ್ಲದಿರುವದುಂ ಮಿಥ್ಯಾತ್ವವೆಂಬ ಸುಳಿಯ ಕುಳಿಯಲ್ಲಿ ಮುಳುಗಿ ಬಿದ್ದಿರುವದರಲ್ಲಿ ಉಂಟಾ ಗಿರುವ ರಾಗವುಂ ಮಿಥ್ಯಾಶಲ್ಯವಾಗುವದು.

೩ ನಿತ್ಯಾನಂದಾತ್ಮಭಾವನಾಸಂಜಾತ ಪರಮಾನಂದಾಮೃತ ಸೇವೆಯಿಲ್ಲದೆ, ದೃಷ್ಟಶ್ರು ತಾನು ಭೂತಗಳಾದ ಪಂಚೇಂದ್ರಿಯ ವಿಷಯಗಳೆನಿಸುವ ಭೋಗೋಪಭೋಗ ಸುಖಗಳನ್ನು ಬಯಸಿ ನೆನೆಯುವದು ನಿದಾನಶಲ್ಯವು. ಈ ರೀತಿಯಾಗಿರುವ ಶಲ್ಯತ್ರಯಾದಿ ಸಮಸ್ತ ವಿಭಾವ ಗಳನ್ನು ಪರಿಹರಿಸಿ ಪರಮ ಸ್ವಾಸ್ಥ್ಯ ಸಂವಿತ್ತಿಯಲ್ಲಿ ಹುಟ್ಟಿದ ಪರಮಾನಂದೈಕ ಲಕ್ಷಣಸುಖಾ ಮೃತವನ್ನನುಭವಿಸುತ್ತಿರುವ ವೀತರಾಗ ನಿರ್ವಿಕಲ್ಪ ಸ್ವಸಂವೇದನ ಭಾವನೆಯು ಅಭ್ಯಂತರ ರೂಪ ನಿಶ್ಚಯಧರ್ಮಧ್ಯಾನವು.

ಶ್ಲೋಕ ॥ ಪಿಂಡಸ್ಥಂ ಚ ಪದಸ್ಥಂ ಚ ರೂಪಸ್ಥಂ ರೂಪವರ್ಜಿತಮ್ ।
ಚತುರ್ಧಾಧ್ಯಾನಮಾಮ್ನಾತಂ ಭವ್ಯರಾಜೀವ ಭಾಸ್ಕರೈಃ ॥ ೩೫ ॥

ತಾಃ—ಪದಸ್ಥ, ಪಿಂಡಸ್ಥ, ರೂಪಸ್ಥ, ರೂಪಾತೀತವೆಂದು ಧ್ಯಾನವು ಭವ್ಯಜೀವರುಗ ಳೆಂಬ ಕಮಲಗಳನ್ನು ಅರಳಿಸುವಂಥಾ ಸೂರ್ಯನೋಪಾದಿಯಲ್ಲಿರುವ ಯೋಗೀಶ್ವರರಿಂದ ನಾಲ್ಕು ಪ್ರಕಾರವಾಗಿ ಹೇಳಲ್ಪಟ್ಟಿರುತ್ತದೆ ॥ ೪ ॥

ಶ್ಲೋಕ ॥ ಪದಸ್ಥಂ ಮಂತ್ರವಾಕ್ಯಸ್ಥಂ ಪಿಂಡಸ್ಥಂ ಸ್ವಾತ್ಮಚಿಂತನಮ್ ।
ರೂಪಸ್ಥಂ ಸರ್ವಚಿದ್ರೂಪಂ ರೂಪಾತೀತಂ ನಿರಂಜನಮ್ ॥ ೩೬ ॥

ಶುದ್ಧಸ್ಫಟಿಕ ಸಂಕಾಶಂ ಸ್ಫುರಂತಂ ಜ್ಞಾನತೇಜಸಮ್ ।
ಗಣೈರ್ದ್ವಾದಶಭಿರ್ಯುಕ್ತಂ ಧ್ಯಾಯೇದರ್ಹಂತಮಕ್ಷಯಮ್ ॥ ೩೭ ॥

ಕಂದ॥ ತಾರಗೆಯಂ ಕ್ಷೀರಾಬ್ಧಿಯ ।
ವಾರಿಯೊಳಿರದೊರಸಿ ಕರ್ಚದಂತೆ ಯೋಲೆಸೆವಾ- ॥
ಕಾರದ ಪಂಚಪದಂಗಳ ।
ನಾರ್ಕೈದತಿ ಶುದ್ಧಮನದೊಳಿರಿಸೆ ಪದಸ್ಥಂ ॥ ೨೦೧ ॥

ತಾ:—ಚಂದ್ರನನ್ನು ಕ್ಷೀರಸಮುದ್ರದ ಮಧ್ಯದಲ್ಲಿ ಸ್ಥಾಪಿಸಿದ ಪ್ರಕಾಶದೋಪಾದಿಯಲ್ಲಿ ಕಾಣುವ ಆಕಾರವನ್ನುಳ್ಳ ಪಂಚಪರಮೇಷ್ಠಿಗಳ ಮಂತ್ರಗಳನ್ನು ಬಹಳ ಪ್ರೀತಿಯಿಂದ ಶುದ್ಧವಾಗಿ ಮನಸ್ಸಿನಲ್ಲಿ ಧರಿಸುವದು ಪದಸ್ಥಧ್ಯಾನವು.

ಕಂದ॥ ಪಳುಕಿನ ಕೊಡದೊಳು ಸಹಜಂ ।
ಬೆಳಗುವ ಶಶಿಕಾಂತದೆಸೆವ ಬಿಂಬಾಕೃತಿ ತಂ- ॥
ನೊಳಗೊಳಗೆ ತೊಳಗಿ ಬೆಳಗುವ ।
ಬೆಳಗಂ ನಿಜಮಾಗಿ ಕಂಡೊಡದು ಪಿಂಡಸ್ಥಂ ॥ ೨೦೨ ॥

ತಾ:—ಸ್ಫಟಿಕದ ಪಾತ್ರದಲ್ಲಿ ಸಹಜವಾಗಿ ಪ್ರಕಾಶಿಸುವ ಚಂದ್ರಕಾಂತಿಯೋಪಾದಿಯಲ್ಲಿರುವ ಆಕೃತಿಯ ಪ್ರಕಾಶವನ್ನು ತನ್ನ ಹೃದಯ ಕಮಲದಲ್ಲಿ ಥಳಥಳಿಸಿ ಹೊಳೆಯುತ್ತಿರುವ ಹಾಗೆ ನಿಶ್ಚಯವಾಗಿ ಕಂಡರೆ ಅದು ಪಿಂಡಸ್ಥಧ್ಯಾನವು.

ಕಂದ॥ ದ್ವಾದಶಗಣಪರಿವೃತನಂ ।
ದ್ವಾದಶಕೋಟ್ಯರ್ಕತೇಜ ವಿಭ್ರಾಜಿತನಂ ॥
ಆದರದಿಂ ಮನದೊಳು ನಿಲಿಸು- ।
ವಂದಮೇ ರೂಪಸ್ಥಮಪ್ಪ ಪರಮಧ್ಯಾನಂ ॥ ೨೦೩ ॥

ತಾ:—ದ್ವಾದಶ (೧೨) ಗಣಗಳಿಂದ ಕೂಡಿದ ಸಮವಸರಣವಿರಾಜಮಾನರಾಗಿ ಹನ್ನೆರಡುಕೋಟಿ ಸೂರ್ಯನ ಪ್ರಕಾಶಕ್ಕಿಂತಲೂ ಅಧಿಕವಾದ ದೇಹಕಾಂತಿಯಿಂದ ವಿರಾಜಿಸುವ ಅರ್ಹತ್ಪರಮೇಶ್ವರನ ರೂಪವನ್ನು ಮನಸ್ಸಿನಲ್ಲಿ ನಿಲ್ಲಿಸುವ ರೀತಿಯೇ ರೂಪಸ್ಥಧ್ಯಾನವು.

ಕಂದ॥ ಸಹಜಸುಖ ಸಹಜಬೋಧಂ ।
ಸಹಜಾತ್ಮಕನೆನಿಪ ಕಾಣ್ಕೆ ಎಂಬೀ ನಲವಿಂ ॥
ಸಹಜಮೆನೆ ನೆಲಸಿನಿಂದೀ ।
ಬಹಳತೆಯಿಂದಘವಿನಾಶ ರೂಪಾತೀತಂ ॥ ೨೦೪ ॥

ತಾ:—ಸಹಜಸುಖ, ಸಹಜಜ್ಞಾನ, ಸಹಜವಾದ ಆತ್ಮದರ್ಶನವೆಂಬೀ ಪ್ರೀತಿಯಿಂದ ಸಹಜವಾಗಿ ತನ್ನಲ್ಲಿ ತಾನೇ ನೆಲಸಿ ತನ್ನ ಪರಮಾತ್ಮನನ್ನು ಧ್ಯಾನಮಾಡುವದೇ ಪಾಪವನ್ನು ನಾಶಮಾಡುವಂಥಾ ರೂಪಾತೀತಧ್ಯಾನವು.

ಕಂದ॥ ಶ್ರೀಕರಮಭಿಷ್ಟ ಸಕಲ ।
ಸುಖಾಕರಮಪವರ್ಗ ಕಾರಣಂ ಭವಹರಣಂ ॥

ಲೋಕಹಿತಂ ಮನ್ಮನದೊ- ।
ಳೇಕಾಗ್ರತೆ ನಿಲ್ಕೆ ನಿರುಪಮಂ ಪಂಚಪದಂ ॥ ೨೦೫ ॥

ತಾ:—ಸಂಪದ್ಯುಕ್ತವಾದ ಸಮಸ್ತ ಇಷ್ಟಾರ್ಥಸುಖಗಳನ್ನು ಕೊಡುವಂಥಾ ಮೋಕ್ಷಕ್ಕೆ ಕಾರಣವಾದಂಥಾ ಚತುರ್ಗತಿಭ್ರಮಣ ಸಂಸಾರ ದುಃಖವನ್ನು ಅಪಹರಿಸುವಂಥಾ ಲೋಕಗಳಲ್ಲಿ ಹಿತವಾದಂಥಾ ಉಪಮಾರಹಿತವಾದ ಪಂಚಪರಮೇಷ್ಠಿಗಳ ಮಂತ್ರವು ನನ್ನ ಮನಸ್ಸಿನಲ್ಲಿ ಏಕಾಗ್ರತೆಯಿಂದ ನಿಲ್ಲಲಿ.

ಕಂದ॥ ಪಂಚಪದಂ ಭವಭವದೊಳ್ ।
ಸಂಚಿತ ಪಾಪಮನೇ ಕೆಡಿಸಲಾಕ್ಕುಮಮೋಘಂ ॥
ಪಂಚಮಗತಿಗಿರದೊಯ್ಗುಂ ।
ಪಂಚಪದಾಕ್ಷರದ ಮಹಿಮೆ ಸಾಧಾರಣಮೇ ॥ ೨೦೬ ॥

ತಾ:—ಈ ಪಂಚಪರಮೇಷ್ಠಿಗಳ ಪದವು ಅನಂತಾನಂತ ಜನ್ಮಗಳಿಂದ ಸಂಪಾದನೆ ಮಾಡಿದ ಪಾಪಗಳನ್ನೆಲ್ಲಾ ನಾಶಮಾಡುವದು. ಐನೇ ಗತಿಯಾದ ಮೋಕ್ಷಗತಿಗೆ ಬಿಡದೆ ಕರೆದು ಕೊಂಡು ಹೋಗುವದು. ಆದ್ದರಿಂದ ಈ ಪಂಚಪರಮೇಷ್ಠಿಗಳ ಮಂತ್ರದ ಮಹಿಮೆಯು ಸಾಧಾರಣವಾದದ್ದಲ್ಲವು.

ಕಂದ॥ ಮಾರಿರಿಪುವಹ್ನಿ ಜಲನೃಪ ।
ಚೋರರುಜಾಘೋರದುಃಖಮಂ ಪಿಂಗಿಸುವೀ- ॥
ಸಾರಾಯದ ಪಂಚಪದವ- ।
ನ್ನೇರಿದಮಕ್ಕೆಮಗೆ ಮುಕ್ತಿಯಪ್ಪಂನೇವರಂ ॥ ೨೦೭ ॥

ತಾ:—ಮಾರಿ, ಶತ್ರು, ಬೆಂಕಿ, ನೀರು, ರಾಜ, ಕಳ್ಳರು, ರೋಗ ಇವೇ ಮೊದಲಾದ ಘೋರವಾದ ದುಃಖಗಳನ್ನು ನಾಶಮಾಡುವಂಥಾ ಸಾರವಾದ ಪಂಚಪದವು ನಮಗೆ ಮೋಕ್ಷವನ್ನು ಹೊಂದುವವರಿಗೂ ಒಂದು ಕಲ್ಪವೃಕ್ಷವು.

ಕಂದ॥ ಭೋಂಕನೆ ಕಳೆಗುಂ ಭವದುಃ- ।
ಪಂಕಮನುಗ್ರಾಹಿ ಶಾಕಿನೀಗ್ರಹಭೂತಾ- ॥
ತಂಕಮನಸುರಪಿಶಾಚಾ ।
ಶಂಕೆಯನಖಿಳೈಕಮಂಗಳಂ ಪಂಚಪದಂ ॥ ೨೦೮ ॥

ತಾ:—ಈ ಪಂಚಮಂತ್ರವು ಸಂಸಾರವೆಂಬ ಕೆಸರನ್ನು ಶೀಘ್ರದಿಂದ ನಾಶಮಾಡುವದು. ಮತ್ತು ಶಾಕಿನೀ ಗ್ರಹ ಭೂತಗಳ ಆತಂಕವನ್ನೂ ರಾಕ್ಷಸ, ಪಿಶಾಚಗಳ ಭಯವನ್ನೂ ನಾಶಮಾಡುವದು. ಮತ್ತು ಸಮಸ್ತ ಮಂಗಳಗಳಿಗೂ ಇದೊಂದು ಮುಖ್ಯ ಕಾರಣವಾಗಿರುವದು.

ಕಂದ॥ ಆಪೊತ್ತುಂ ಸದ್ಭಕ್ತಿಯೊ- ।
ಳೀಪಂಚಪದಾಕ್ಷರಂಗಳಂ ಜಪಿಯಿಸುವಂ- ॥
ಗಾಪೊತ್ತುಂ ಭವತಾಪಂ ।
ಪಾಪಮುಂ ನೆರೆ ಕೆಟ್ಟು ಮುಕ್ತಿಯಕ್ಕುಮಮೋಘಂ ॥ ೨೦೯ ॥

ತಾ:—ಯಾವಾಗಲೂ ಸದ್ಭಕ್ತಿಯಿಂದ ಈ ಪಂಚಪರಮೇಷ್ಠಿಗಳ ಮಂತ್ರವನ್ನು ಜಪ ಮಾಡುವವರಿಗೆ ಸಮಸ್ತವಾದ ಆಪತ್ತುಗಳೂ, ಸಂಸಾರಸಂತಾಪಗಳೂ, ಪಾಪವೂ ಚನ್ನಾಗಿ ನಾಶವನ್ನು ಹೊಂದಿ ಉತ್ಕೃಷ್ಟವಾದ ಮೋಕ್ಷವುಂಟಾಗುವದು.

ಕಂದ॥ ಮಂಗಳಕಾರಣ ಪಂಚಪ- ।
ದಂಗಳನಪವರ್ಗವಿರಚಿತ ಸೋಪಾ- ॥
ನಂಗಳನಕ್ಷಯ ಮಂತ್ರಪ- ।
ದಂಗಳ ನೋದೂದುನೇರ್ರೈಯ್ಯ ನಿಶ್ಚಲಮತಿಯಿಂ ॥ ೩೧೦ ॥

ತಾ:—ಸಮಸ್ತ ಸುಖಗಳಿಗೆ ಕಾರಣವಾದಂಥಾ ನಾಶವಿಲ್ಲದಿರುವ ಮೋಕ್ಷಕ್ಕೆ ಸೋಪಾನದೋಪಾದಿಯಲ್ಲಿರುವಂಥಾ ಪಂಚಮಂತ್ರಗಳನ್ನು ನಿಶ್ಚಲವಾದ ಬುದ್ಧಿಯಿಂದ ಜಪಿಸ ತಕ್ಕದ್ದು.

ವೃತ್ತ॥ ಬಲವದ್ಭೂತ ಪಿಶಾಚ ರಾಕ್ಷಸ ವಿಷಂ ವ್ಯಾಳ್ಬಾಧೆಯುಂ ಪಿಂಗುಕುಂ ।
ದಳಿಯಿಕ್ಕುಂ ರಿಪುರಾಜಚೋರಭಯಮುಂ ದುಃಖಾಗ್ರಶೋಕಂಗಳಂ ॥
ಗಳಿಯಿಕ್ಕುಂ ಘಳಿಯಿಕ್ಕುಮೆಲ್ಲದೆಶೆಯಿಂದೊಳ್ಪಂ ಜಗನ್ಮುಖ್ಯ ಮಂ- ।
ಗಳಮೀಪಂಚಗುರುಸ್ತವಂ ಶುಭಕೃತಿಂ ಪ್ರತ್ಯೂಹವಿಧ್ವಂಸನಂ ॥ ೩೧೧ ॥

ತಾ:—ಈ ಪಂಚಪರಮೇಷ್ಠಿಗಳ ಸ್ಮರಣೆಯು ಬಲಿಷ್ಠವಾದ ಭೂತ, ಪಿಶಾಚ, ರಾಕ್ಷಸ, ವಿಷಸರ್ಪಗಳ ಬಾಧೆಯನ್ನು ನಾಶಪಡಿಸುವದು. ಮತ್ತು ಶತ್ರು ರಾಜ ಕಳ್ಳರ ಭಯವನ್ನೂ ದುಃಖದಿಂದುಂಟಾದ ಸಮಸ್ತ ಶೋಕಂಗಳನ್ನೂ ನಾಶಮಾಡುವದು. ಮತ್ತೂ ಸಮಸ್ತವಾದ ಕರ್ಮಗಳನ್ನೂ ಧ್ವಂಸಮಾಡುವದು. ಎಲ್ಲಾ ದೆಶೆಯಿಂದಲೂ ಲೋಕಕ್ಕೆ ಮುಖ್ಯ ಮಂಗಳ ಕರವಾದದ್ದು.

ವೃತ್ತ॥ ತ್ರೈಲೋಕ್ಯಕ್ಷೋಭಮಂತ್ರಂ ತ್ರಿಜಗದಧಿಪಕೃತ್ಪಂಚಕಲ್ಯಾಣಲಕ್ಷ್ಮೀ ।
ಸಾಮ್ರಾಜ್ಯಾಕರ್ಷಣಮಂತ್ರಂ ನಿರುಪಮಂ ಪರಮ ಶ್ರೀವಧೂವಶ್ಯಮಂತ್ರಂ ॥
ವಾಕ್ಸ್ಯೋಮಾಹ್ವಾನಮಂತ್ರಂ ತ್ರಿಭುವನಜನಸಂಮೋಹಮಂತ್ರಂ ।
ಜಿಹ್ವಾಗ್ರೇ ಸಂತತಂ ಪಂಚಗುರುನಮಸ್ಕಾರಮಂತ್ರಂ ಮಮಾಸ್ತು ॥ ೩೧೨ ॥

ತಾ:—ಈ ಪಂಚಮಂತ್ರವು ಮೂರು ಲೋಕವನ್ನೂ ನಡಗಿಸುವದು. ಮೂರು ಲೋಕ ದಲ್ಲಿಯೂ ಅಧಿಕವಾದ ಗರ್ಭಾವತರಣ, ಜನ್ಮಾಭಿಷೇಕ, ದೀಕ್ಷಾಕಲ್ಯಾಣ, ಕೇವಲಜ್ಞಾನ, ಮೋಕ್ಷಕಲ್ಯಾಣ ಲಕ್ಷ್ಮೀಸಂಪತ್ತುಗಳನ್ನು ಆಕರ್ಷಣೆ ಮಾಡಿಕೊಡುವದು. ಉಪಮಾರಹಿತ ವಾದ ಉತ್ಕೃಷ್ಟವಾದ ಮೋಕ್ಷಲಕ್ಷ್ಮಿಯನ್ನು ವಶ್ಯಮಾಡಿಕೊಡುವ ಮಂತ್ರವು. ಜ್ಞಾನವೆಂಬ ಚಂದ್ರೋದಯವನ್ನುಂಟು ಮಾಡುವದು. ಮೂರು ಲೋಕದಲ್ಲಿರುವ ಜನಗಳನ್ನು ಮೋಹಿಸ ಲ್ಪಡುವದು. ಈ ಪ್ರಕಾರವಾದ ಅರಹಂತ, ಸಿದ್ಧರಾಚಾರ್ಯ, ಉಪಾಧ್ಯಾಯ, ಸರ್ವಸಾಧುಗ ಳೆಂಬ ಪಂಚಗುರು ನಮಸ್ಕಾರ ಮಂತ್ರವು ನನ್ನ ನಾಲಿಗೆಯ ತುದಿಯಲ್ಲಿ ನಿರಂತರದಲ್ಲಿಯೂ ವಾಸಮಾಡಲಿ.

ವೃತ್ತ॥ ಘನಕರ್ಮದ್ವಿಧಿಮಾರಣಂ ಪ್ರಬಲ ಮಿಥ್ಯಾತ್ವೋಗ್ರಹೋಚ್ಚಾಟನಂ ।
ಕುನೆಯಾಶೀರ್ವಿಷನಿರ್ವಿಷೀಕರಣಮಾ ಪಾಪಾಸ್ರವಸ್ತಂಭನಂ ॥
ವಿನುತಾಹಿಂದ್ರ ಸುರೇಂದ್ರ ಮುಕ್ತಿಲಲನಾ ಸಂಮೋಹನಂ ಭಾರತೀ- ।
ವನಿತಾವಶ್ಯಮಿದಲ್ತೆ ಪಂಚಪರಮೇಷ್ಠಿನಾಮಮಂತ್ರಾಕ್ಷರಂ ॥ ೨೧೩ ॥

ತಾ:—ಈ ಪಂಚಪರಮೇಷ್ಠಿಗಳ ನಾಮವಾದ ಮಂತ್ರಾಕ್ಷರವು ಘನವಾದ ಕರ್ಮಗಳೆಂಬ ವಿಧಿಯನ್ನು ಕೊಲ್ಲುವದು. ಪ್ರಬಲವಾದ ಮಿಥ್ಯಾತ್ವವೆಂಬ ಗ್ರಹವನ್ನು ಬಿಟ್ಟೋಡಿಸುವದು. ದುಷ್ಟಮಾರ್ಗಗಳೆಂಬ ಸರ್ಪನ ವಿಷವನ್ನು ನಿರ್ವಿಷವಾಗಿ ಮಾಡುವದು. ಪಾಪಗಳ ಬರುವಿಕೆಯನ್ನು ನಿಲ್ಲಿಸುವದು. ಶ್ರೇಷ್ಠವಾದ ಧರಣೇಂದ್ರ ದೇವೇಂದ್ರ ಪದವಿಗಳನ್ನು ಹೊಂದಿಸುವದು. ಮೋಕ್ಷಲಕ್ಷ್ಮಿಯನ್ನು ಮೋಹಿಸಲ್ಪಡುವದು. ಮತ್ತು ಸರಸ್ವತಿಯನ್ನು ವಶಮಾಡಿಕೊಡುವದು.

## ಮತ್ತು ಪದಸ್ಥಧ್ಯಾನದ ವರ್ಣನೆ ಹ್ಯಾಗೆಂದರೆ—



ಗಾಹೆ ॥ ಪಣತಿಸಸೋಳಛಪ್ಪಣಚದುದುಗಮೇಗಚ್ಛ ಜವಹಝಾಏಹ ॥
ಪರಮೇಠ್ಠಿವಾಚಯಾಣಂ ಅಂಣಂಚಗೂರೂವದೇಶೇಣ ॥ ೧೦ ॥

ತಾ:—ಪಣತಿಸ–ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಇರಿಯಾಣಂ, ಣಮೋ ಉವಝ್ಝಾಯಾಣಂ, ಣಮೋ ಳೋಯೇ ಸವ್ವಸಾಹೂಣಂ ಎಂಬೀ ಪಂಚಪದದ ೩೫ ಅಕ್ಷರಗಳನ್ನೂ, ಸೋಳ–ಅರಹಂತ ಸಿದ್ಧಾ ಆಇರಿಯ ಉವಝ್ಝಯಾ ಸಾಹು ಎಂಬ ಪದದ ಷೋಡಶಾಕ್ಷರಗಳನ್ನೂ, ಛ–ಅರಹಂತ ಸೀಸಾ ಎಂಬ ಷಡಾಕ್ಷರಗಳನ್ನೂ, ಪಣ–ಅಸಿಆಉಸಾ ಎಂಬ ಪಂಚಾಕ್ಷರಿಮಂತ್ರವನ್ನೂ, ಚದು–ಅಸಿಸಾಹೂ ಎಂಬ ನಾಲ್ಕಕ್ಷರ ಮಂತ್ರವನ್ನೂ, ದುಗ–ಆಸಾ ಎಂಬೆರಡಕ್ಷರ ಮಂತ್ರವನ್ನೂ, ಏಗಂಚ–ಅ ಎಂಬ ಮೇಣ್ ಹ್ರಂ ಎಂಬ ಮೇಣ್ ಓಂ ಎಂಬ ಅಕ್ಷರವನ್ನೂ, ಜವಹ–ಜಪವನ್ನು ಮಾಡುವದು, ಝಾಏಹ–ಧವಲವರ್ಣವಾಗಿ ಲಲಾಟಾದಿ ಪ್ರದೇಶದಲ್ಲಿ ಸ್ಥಾಪಿಸಿ ಧ್ಯಾನಮಾಡತಕ್ಕದ್ದು. ಮತ್ತು ಗುರೂವದೇಸೇಣ–ಅವಂಚಕರಾದ ಪರಮ ಗುರುವಿನ ಉಪದೇಶದಿಂದಂ ಪರಮೇಠ್ಠಿವಾಚಯಾಣಂ–ಪರಮೇಷ್ಠಿವಾಚಕಗಳನ್ನೂ ಅಂಣಂಚ–ಲಘು ಬೃಹತ್ಸಿದ್ಧಚಕ್ರಚಿಂತಾಮಣಿದೇಹಾರಕ್ರಮದೊಳಂ ದ್ವಾದಶಸಹಸ್ರಸಂಖ್ಯೆಯನ್ನುಳ್ಳ ಪಂಚಪರಮೇಷ್ಠಿಗ್ರಂಥದಲ್ಲಿ ಹೇಳಲ್ಪಟ್ಟವುಗಳನ್ನು ನಿರ್ಭರಭಕ್ತಿಯಿಂದ ನಿರ್ವಾಣಸುಖಾಪೇಕ್ಷೆಗಾಗಿ ಜಪಮಾಡತಕ್ಕದ್ದು. ಅಥವಾ ಧ್ಯಾನಿಸತಕ್ಕದ್ದು. ಅರ್ಹಂ ಎಂಬ ಪದದ ಅರ್ಥವನ್ನು ವ್ಯಾಖ್ಯಾನಮಾಡುತ್ತಾರೆ—

ಶ್ಲೋಕ॥ ಅಕಾರಃ ಪರಮೋ ಬೋಧೋ ರೇಫೋ ವಿಶ್ವಾವಲೋಕದೃಕ್ ॥
ಹಕಾರೋನಂತವೀರ್ಯಾತ್ಮಾ ಬಿಂದುಸ್ಯಾದುತ್ತಮಂ ಸುಖಂ ॥ ೩೮ ॥

ಮತ್ತು ಓಂಕಾರವು ಹ್ಯಾಗೆ ಪಂಚಪರಮೇಷ್ಠಿವಾಚಕವಾಯಿತೆಂದರೆ—

ಗಾಹೆ ॥ ಅರಹಂತಾ ಅಸರೀರಾ ಆಇರಿಯಾ ತಹ ಉವಝ್ಝಾಯಾ ಮುಣಿಣೋ ॥
ಪಢಮಖ್ಖರಣಿಪ್ಪಂಣೋ ಓಂಕಾರಂ ಪಂಚಪರಮೇಠ್ಠಿ ॥ ೧೧ ॥

ತಾ:—ಎಂಬೀ ಸೂತ್ರಾಭಿಪ್ರಾಯದ ಪಂಚಪರಮೇಷ್ಠಿನಾಮ ಪ್ರಥಮಾಕ್ಷರ ಸಂಧಿ ಲಕ್ಷಣದಿಂದಂ ಸಮಾನಸವರ್ಣೇದೀರ್ಘೀಭವತಿಯೆಂದು ಆಕಾರವಾಯಿತು. ಉವರ್ಣೇ ಓ ಎಂಬೀ ಸೂತ್ರದಿಂದ ಓಂಕಾರವಾಯಿತು. ಈ ರೀತಿಯಿಂದ ಓಂಕಾರವು ಸಿದ್ಧವಾಗುವದೆಂದರಿ ಯುವದು. ಸಮಸ್ತ ಮಂತ್ರವಾದ ಗ್ರಂಥಸಾರಸರ್ವಂಗಳುಂ ಪುಣ್ಯಬಂಧಸಂಪಾದಿಗಳುಂ ಪಾಪಬಂಧವಿಚ್ಛೇದಿಗಳಾದಂಥಾ ಪಂಚಪದಂಗಳನ್ನು ಪಂಚಪರಮೇಷ್ಠಿಗಳ ಗುಣಸ್ಮರಣ ಪೂರ್ವಕಂ ಅಧಿಕಭಕ್ತಿಯಿಂದ ಜಪಿಸುತ್ತಲೂ ಧ್ಯಾನಿಸುತ್ತಲೂ ಇರುವವನಿಗೆ ಭಾವಶುದ್ಧಿಯು ಪ್ರಾಪ್ತಿಯಾಗುವದು. ಅಪ್ರಾರ್ಥಿತವೃಂ ಉಭಯ ಭವಸಫಲವಾಗುವದೆಂದರಿದು ಗುಣಸ್ಮರಣೆ ಯನ್ನು ಮಾಡುವ ಕ್ರಮವು ಹ್ಯಾಗೆಂದರೆ—

## ಪದಸ್ಥ, ಪಿಂಡಸ್ಥ, ರೂಪಸ್ಥಧ್ಯಾನವಿಷಯರಾದ
## ಅರ್ಹದ್ದೇವರ ಸ್ವರೂಪವು ಹ್ಯಾಗೆಂದರೆ—



ಘಾತಿಚತುಷ್ಟಯರಹಿತರುಂ ॥ ೪ ॥ ಅಷ್ಟಾದಶ ದೋಷರಹಿತರುಂ ॥ ೧೮ ॥ ಪಂಚ ಮಹಾಕಲ್ಯಾಣಾಂಕಿತರುಂ ॥ ೫ ॥ ಅಷ್ಟಮಹಾಪ್ರಾತಿಹಾರ್ಯವಿಶಿಷ್ಟರುಂ ॥ ೮ ॥ ಚತುಸ್ತ್ರಿಂಶದತಿಶಯಸಮೇತರುಂ ॥ ೩೪ ॥ ಶತೇಂದ್ರವೃಂದವಂದ್ಯಪಾದಾರವಿಂದದ್ವಂದ್ವ ರುಂ ॥ ೧೦೦ ॥ ವಿಶಿಷ್ಟಾನಂತಚತುಷ್ಟಯ ಸಮವಸರಣಾದಿ ವಿಭೂತಿರೂಪಾಂತ ರಂಗ ಬಹಿರಂಗ ಶ್ರೀಯೋಳ್ಕೂಡಿ ಪರಿವೇಷ್ಠಿಸಿರ್ದ ದ್ವಾದಶಗಣಕ್ಕೆ ಪರಮ ಕಾರುಣ್ಯರಸಂ ಬೊರಪೊಣ್ಮುತ್ತಿರೆ ಸರ್ವಭಾಷಾತ್ಮಕವಾದ ದಿವ್ಯಧ್ವನಿಯಿಂದ ಸಜೀವಾದಿ ಸಕಲ ಪದಾರ್ಥಂಗಳಂ ಯಥಾ ಸ್ವರೂಪದಿಂದುಪದೇಶನನ್ನು ಮಾಡುವರುಂ, ಕೋಟ್ಯಾದಿತ್ಯ ಪ್ರಭಾಸಂಕಾಶಪರಮೌದಾರಿಕಶರೀರರುಂ, ಪರಮ ಪವಿತ್ರರುಂ, ಪರಮ ಮಂಗಳರುಂ, ತ್ರಿಜ ಗದ್ಗುರುಗಳುಂ, ಸ್ವಯಂಭುಗಳುಂ, ಶಾಶ್ವತರುಂ, ಪರಮ ಕಾರುಣ್ಯಮೂರ್ತಿಗಳುಂ ಆದಂಥಾ ಅರ್ಹತ್ಪರಮೇಷ್ಠಿಗಳ ಗುಣಸ್ಮರಣೆಯೇ ದುರಿತಾಪಹರಣವೆಂದು ತಿಳಿದು ಏನನ್ನು ಮಾಡ ಬೇಕೆಂದರೆ—

ಘಾತಿಚತುಷ್ಟಯರಹಿತೋಹಂ, ಅಷ್ಟಾದಶದೋಷರಹಿತೋಹಂ, ಪಂಚಮಹಾ ಕಲ್ಯಾಣಾಂಕಿತೋಹಂ, ಅಷ್ಟಮಹಾಪ್ರಾತಿಹಾರ್ಯವಿಶಿಷ್ಟೋಹಂ, ಚತುಸ್ತ್ರಿಂಶದತಿಶಯಸಮೇ ತೋಹಂ, ಶತೇಂದ್ರವೃಂದವಂದ್ಯಪಾದಾರವಿಂದದ್ವಂದ್ವೋಹಂ, ವಿಶಿಷ್ಟಾನಂತಚತುಷ್ಟಯ ಸಮವಸರಣಾದಿ ವಿಭೂತಿರೂಪಾಂತರಂಗ ಬಹಿರಂಗ ಶ್ರೀಸಮೇತೋಹಂ, ಪರಮ ಕಾರುಣ್ಯ ರಸೋಪೇತ ಸರ್ವಭಾಷಾತ್ಮಕ ದಿವ್ಯಧ್ವನಿಸ್ವರೂಪೋಹಂ, ಕೋಟ್ಯಾದಿತ್ಯ ಪ್ರಭಾಸಂಕಾಶ ಪರಮೌದಾರಿಕ ದಿವ್ಯಶರೀರೋಹಂ, ಪರಮ ಪವಿತ್ರೋಹಂ, ಪರಮ ಮಂಗಳೋಹಂ, ತ್ರಿಜ ಗದ್ಗುರು ಸ್ವರೂಪೋಹಂ, ಸ್ವಯಂಭೂರಹಂ, ಶಾಶ್ವತೋಹಂ, ಜಗತ್ರಯ ಕಾಲತ್ರಯವರ್ತಿ ಸಕಲ ಪದಾರ್ಥಯುಗಪದಾವಲೋಕನಸಮರ್ಥ ಸಕಲ ವಿಮಲ ಕೇವಲಜ್ಞಾನಸ್ವರೂಪೋಹಂ, ವಿಶದಾಖಂಡೈಕ ಪ್ರತ್ಯಕ್ಷ ಪ್ರತಿಭಾಸಮಯ ಸಕಲ ವಿಮಲ ಕೇವಲದರ್ಶನಸ್ವರೂಪೋಹಂ,

ಅತೀಂದ್ರಿಯಾತಿಶಯ ಮೂರ್ತಾನಂತಸುಖಸ್ವರೂಪೋಹಂ, ಅವಾರ್ಯವೀರ್ಯಾನಂತಬಲ ಸ್ವರೂಪೋಹಂ, ಅಚಿಂತ್ಯಾನಂತಗುಣಸ್ವರೂಪೋಹಂ, ನಿರ್ದೋಷಪರಮಾತ್ಮಸ್ವರೂಪೋಹಂ, ಸೋಹಂ ಎಂಬಿದು ಮೊದಲಾದುದು ಸವಿಕಲ್ಪ ನಿಶ್ಚಯಭಕ್ತಿಯೆಂದು ತಿಳಿದು ನಿರ್ವಿಕಲ್ಪ ಸ್ವಸಂವೇದನ ಜ್ಞಾನದಿಂ ಸ್ವಶುದ್ಧಾತ್ಮಭಾವಾರ್ಹತ್ಪರಮೇಶ್ವರಾರಾಧನೆಯು ವಿನಯಭವ್ಯ ಜನಂಗಳಿಂದ ನಿರಂತರಂ ಮಾಡಲ್ಪಡಬೇಕೆನ್ನುವದು ಶ್ರೀಕುಂದಕುಂದಾಚಾರ್ಯ ದೇವರಭಿಪ್ರಾಯವು ॥ ೧ ॥

---

## ಸಾಲಂಬನವೆನಿಪ ರೂಪಾತೀತ ಧ್ಯಾನವಿಷಯರಾದ ಸಿದ್ಧಪರಮೇಷ್ಠಿಗಳ ಸ್ವರೂಪವು ಯಾವ ಪ್ರಕಾರವೆಂದರೆ—



ಜ್ಞಾನಾವರಣಾದಿ ಮೂಲೋತ್ತರ ರೂಪ ಸಕಲ ಕರ್ಮವಿನಿರ್ಮುಕ್ತರುಂ, ಸಕಲ ವಿಮಲ ಕೇವಲಜ್ಞಾನಾದಿಗುಣಸಮೇತರುಂ, ನಿಷ್ಕ್ರಿಯ ಟಂಕೋತ್ಕೀರ್ಣಜ್ಞಾಯಕೈಕ ಸ್ವರೂಪರುಂ, ಕಿಂಚಿನ್ನ್ಯೂನಾಂತ್ಯ ಚರಮಶರೀರಪ್ರಮಾಣರುಂ, ಅಮೂರ್ತರುಂ, ಅಖಂಡ ಶುದ್ಧಚಿನ್ಮೂರ್ತಿಗಳುಂ, ನಿರ್ವ್ಯಗ್ರಸಹಜಾನಂದಸುಖಮಯರುಂ, ಶುದ್ಧಜೀವಘನಾಕಾರರುಂ, ನಿತ್ಯರುಂ, ನಿರಂಜನರುಂ, ನಿರ್ಮಲರುಂ, ನಿಷ್ಕಲಂಕರುಂ, ಉರ್ಧ್ವಗತಿಸ್ವಭಾವರುಂ, ಉತ್ಪಾದ ವ್ಯಯ ಧ್ರೌವ್ಯಸಂಯುಕ್ತರುಂ, ಜಗತ್ರಯಸ್ವಾಮಿಗಳುಂ, ಲೋಕಾಗ್ರನಿವಾಸಿಗಳುಂ, ತ್ರಿಜಗದ್ವಂದಿತರಾದ ಸಿದ್ಧಪರಮೇಷ್ಠಿಗಳನ್ನು ಧ್ಯಾನಮಾಡುವವರಿಗೆ ನಿತ್ಯ ಸುಖವು ದೊರೆಯುವದೆಂದರಿದು ಏನು ಮಾಡಬೇಕೆಂದರೆ—

ಈ ಪ್ರಕಾರವಾದ ವ್ಯವಹಾರಭಕ್ತಿಯನ್ನು ಮಾಡಿ ತದನಂತರಂ ಜ್ಞಾನಾವರಣಾದಿ ಮೂಲೋತ್ತರರೂಪ ಸಕಲ ಕರ್ಮವಿನಿರ್ಮುಕ್ತೋಹಂ, ಸಕಲ ವಿಮಲ ಕೇವಲಜ್ಞಾನಾದಿ ಗುಣಸಮೇತೋಹಂ, ನಿಷ್ಕ್ರಿಯಟಂಕೋತ್ಕೀರ್ಣಜ್ಞಾಯಕೈಕ ಸ್ವರೂಪೋಹಂ, ಕಿಂಚಿನ್ನ್ಯೂನಾಂತ್ಯ ಚರಮಶರೀರಪ್ರಮಾಣೋಹಂ, ಅಮೂರ್ತೋಹಂ, ಅಖಂಡ ಶುದ್ಧ ಚಿನ್ಮೂರ್ತೋಹಂ, ನಿರ್ವ್ಯಗ್ರಸಹಜಾನಂದಸುಖಮಯೋಹಂ, ಶುದ್ಧಜೀವಘನಾಕಾರೋಹಂ, ನಿತ್ಯೋಹಂ, ನಿರಂಜನೋಹಂ, ನಿರ್ಮಲೋಹಂ, ನಿಷ್ಕಲಂಕೋಹಂ, ಊರ್ಧ್ವಗತಿಸ್ವಭಾವೋಹಂ, ಜಗತ್ರಯ ಪೂಜ್ಯೋಹಂ, ಲೋಕಾಗ್ರನಿವಾಸೋಹಂ, ತ್ರಿಜಗದ್ವಂದಿತೋಹಂ, ಅನಂತಜ್ಞಾನ ಸ್ವರೂಪೋಹಂ, ಅನಂತದರ್ಶನಸ್ವರೂಪೋಹಂ, ಅನಂತವೀರ್ಯಸ್ವರೂಪೋಹಂ, ಅನಂತ ಸುಖಸ್ವರೂಪೋಹಂ, ಅನಂತಗುಣಸ್ವರೂಪೋಹಂ, ಅನಂತಶಕ್ತಿಸ್ವರೂಪೋಹಂ, ಅನಂತಾನಂತಸ್ವರೂಪೋಹಂ, ನಿರ್ವೇದಸ್ವರೂಪೋಹಂ, ನಿರ್ಮೋಹಸ್ವರೂಪೋಹಂ, ನಿರಾಮಯ ಸ್ವರೂಪೋಹಂ, ನಿರಾಯುಷ್ಕಸ್ವರೂಪೋಹಂ, ನಿರಾಯುಧಸ್ವರೂಪೋಹಂ, ನಿರ್ನಾಮಸ್ವರೂಪೋಹಂ, ನಿರ್ಗೋತ್ರಸ್ವರೂಪೋಹಂ, ನಿರ್ವಿಘ್ನಸ್ವರೂಪೋಹಂ, ನಿರ್ಗತಿಸ್ವರೂಪೋಹಂ, ನಿರಿಂದ್ರಿಯಸ್ವರೂಪೋಹಂ, ನಿಷ್ಕಾಯಸ್ವರೂಪೋಹಂ, ನಿರ್ಯೋಗಸ್ವರೂಪೋಹಂ, ನಿಜ

ಶುದ್ಧಾತ್ಮಸ್ಮರಣ ನಿಶ್ಚಯ,ಸಿದ್ಧೋಹಂ, ಪರಂಜ್ಯೋತಿಸ್ವರೂಪೋಹಂ, ನಿಜನಿರಂಜನಸ್ವರೂಪೋಹಂ, ಚಿನ್ಮಯಸ್ವರೂಪೋಹಂ, ಜ್ಞಾನಾನಂದಸ್ವರೂಪೋಹಂ ಎಂದಿವು ಮೊದಲಾದ ನಿಜಶುದ್ಧಾತ್ಮಗುಣಸ್ಮರಣರೂಪಂ ನಿಶ್ಚಯ ಸಿದ್ಧಭಕ್ತಿಯೆಂಬುವದು. ನಿಜನಿರಂಜನ ಚಿತ್ಸ್ವರೂಪದೊಳವಿಚಲಾವಸ್ಥಾನಂ ನಿರ್ವಿಕಲ್ಪ ನಿಶ್ಚಯಸಿದ್ಧಭಕ್ತಿಯಾಗುವದು. ಈ ರೀತಿಯಾಗಿ ಸವಿಕಲ್ಪ ನಿರ್ವಿಕಲ್ಪಸ್ವರೂಪ ಭೇದಾಭೇದ ಸಿದ್ಧಭಕ್ತಿಯ ಭಾವನಾಬಲದಿಂದ ರಾಜಾಧಿರಾಜಾಭ್ಯುದಯ ಸುಖಪೂರ್ವಕಂ ನಿಶ್ರೇಯಸಸುಖವು ದೊರೆಯುವದು. ಚರಮಾಂಗಾಪೇಕ್ಷೆಯಿಂದ ವೀತರಾಗ ನಿರ್ವಿಕಲ್ಪ ನಿಶ್ಚಯ ನಿಜಸಿದ್ಧಭಕ್ತಿಯಾಗಿ ತದ್ಭವ ಕರ್ಮಕ್ಷಯವನ್ನು ಮಾಡುವದೆಂದರಿದು ನಿಜ ಪರಮಾತ್ಮಾರಾಧನೆಯನ್ನು ನಿರಂತರವೂ ಮಾಡಬೇಕೆಂಬುವದು ಶ್ರೀಯೋಗೀಂದ್ರ ದೇವರಭಿಪ್ರಾಯವು ॥ ೨ ॥

---

## ರೂಪಾತೀತ ಧ್ಯಾನಹೊರತಾಗಿ ಶೇಷಧ್ಯಾನತ್ರಯ ವಿಷಯರಾದ ಆಚಾರ್ಯಪರಮೇಷ್ಠಿಗಳ ಸ್ವರೂಪವು ಹ್ಯಾಗೆಂದರೆ---



ನಿಶ್ಚಯನಯ, ವ್ಯವಹಾರನಯದಿಂದ ದರ್ಶನಾಚಾರ, ಜ್ಞಾನಾಚಾರ, ಚಾರಿತ್ರಾಚಾರ, ತಪಾಚಾರ, ವಿನಯಾಚಾರಗಳೆಂಬ ಪಂಚಾಚಾರದಲ್ಲಿ ತಾವು ಆಚರಿಸುತ್ತಲೂ ಪರಮದಯಾರಸ ಪರಿಣತಿಯಿಂದ ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವಗಳೆಂಬ ಪಂಚಪ್ರಕಾರ. ಸಂಸಾರ ಸಾಗರೋತ್ತರಣ, ಕಾರಣಭೂತ, ಪೂತ, ಪೋತ, ಪಾತ್ರರೂಪ, ನಿಜ, ನಿರಂಜನ, ಚಿತ್ ಸ್ವಭಾವನಾ ಪ್ರಿಯರಾದ ಸಕಲ ಭವ್ಯ ಜನಂಗಳಂ ನೆಗಳ್ಚಿಸುವ ಚಾತುರ್ವರ್ಣ ಚಕ್ರವರ್ತಿಗಳಾದ ಆಚಾರ್ಯಪರಮೇಷ್ಠಿಗಳನ್ನು ಗುಣಾನುರಾಗದಿಂದ ಸ್ಮರಿಸುವ ಭವ್ಯರಿಗೆ ಭಾವಶುದ್ಧಿಯು ದೊರೆಯುವದೆಂದು ತಿಳಿದು ಏನನ್ನು ಮಾಡಬೇಕೆಂದರೆ---

ವ್ಯವಹಾರನಿಶ್ಚಯನಯ ಪಂಚಾಚಾರ ಪರಮ ದಯಾರಸ ಪರಿಣತಿ ಪಂಚಪ್ರಕಾರ ಸಂಸಾರ ಸಾಗರೋತ್ತರಣ ಕಾರಣಭೂತ ಪೂತ ಪೋತ ಪಾತ್ರರೂಪ ನಿಜ ನಿರಂಜನ ಚಿತ್ ಸ್ವಭಾವನಾಪ್ರಿಯಃ ಚಾತುರ್ವರ್ಣ ಚಕ್ರವರ್ತಿನಃ ಆಚಾರ್ಯಪರಮೇಷ್ಠಿಸ್ವರೂಪೋಹಂ, ನಿಜನಿತ್ಯಾನಂದೈಕತತ್ವಭಾವಸ್ವರೂಪೋಹಂ, ಸಕಲ ವಿಮಲ ಕೇವಲಜ್ಞಾನ ದರ್ಶನಸ್ವರೂಪೋಹಂ, ದಂಡತ್ರಯಖಂಡಿತಾಖಂಡ ಚಿತ್ಪಿಂಡಸ್ವರೂಪೋಹಂ, ಚತುರ್ಗತಿ ಸಂಸಾರದೂರಸ್ವರೂಪೋಹಂ, ನಿಶ್ಚಯ ಪಂಚಾಚಾರ ಸ್ವರೂಪೋಹಂ, ಭೂತಾರ್ಥ ಷಡಾವಶ್ಯಕ ಸ್ವರೂಪೋಹಂ, ಸಪ್ತಭಯ ವಿಪ್ರಮುಕ್ತ ಸ್ವರೂಪೋಹಂ, ವಿಶಿಷ್ಟಾಷ್ಟಗುಣ ಪುಷ್ಟಸ್ವರೂಪೋಹಂ, ನವಕೇವಲಲಬ್ಧಿಸ್ವರೂಪೋಹಂ, ಅಷ್ಟವಿಧ ಕರ್ಮಮಲಕಲಂಕರಹಿತ ಸ್ವರೂಪೋಹಂ, ಅಷ್ಟಾದಶ ದೋಷರಹಿತ ಸ್ವರೂಪೋಹಂ, ಸಪ್ತನಯ ವ್ಯತಿರಿಕ್ತಸ್ವರೂಪೋಹಂ, ಎಂಬಿವು ಮೊದಲಾದ ಅನುಷ್ಠಾನಂ ಸವಿಕಲ್ಪ ನಿಶ್ಚಯ ಭಾವನೆಯಾಗುವದು. ನಿಜನಿರಂಜನ ಪರಮ ಪಾರಿಣಾಮಿಕ ಭಾವದ ಭಾವನೆಯಲ್ಲಿ ಅವಿಚಲವಾಗಿ ನಿಂತಿರುವ ನೆಲೆಯು ನಿರ್ವಿಕಲ್ಪಭಾವನೆ ಎನ್ನುವದು. ಅದೇನೆ ನಿಖಿಳಗುಣೋಪೇತ ನಿಶ್ಚಯಾಚಾರಾಚಾ

ರ್ಯಭಕ್ತಿಯೆಂದು ನಿಶ್ಚೈಸಿ ಪರಮಾನಂದ ಸುಖನಿಮಿತ್ತವಾಗಿ ಶುದ್ಧಾತ್ಮಭಾವನೆಯನ್ನು ನಿರಂತರದಲ್ಲಿಯೂ ಮಾಡಬೇಕೆನ್ನುವದು ಶ್ರೀಬ್ರಹ್ಮದೇವರ ಅಭಿಪ್ರಾಯವು ॥ ೩ ॥

## ಪದಸ್ಥಾದಿ ಧ್ಯಾನತ್ರಯ ವಿಷಯರಾದ ಉಪಾಧ್ಯಾಯ ಪರಮೇಷ್ಠಿಗಳ ಸ್ವರೂಪವು ಹ್ಯಾಗೆಂದರೆ---



ನಿಶ್ಚಯವ್ಯವಹಾರವಾದ ೧ ಕಾಲಾಚಾರ, ೨ ವಿನಯಾಚಾರ, ೩ ಉಪಾದಾನಾಚಾರ, ೪ ಬಹುಮಾನಾಚಾರ, ೫ ಅನಿಹ್ನವಾಚಾರ, ೬ ವ್ಯಂಜನಾಚಾರ, ೭ ಅರ್ಥಾಚಾರ, ೮ ವ್ಯಂಜನಾರ್ಥಾಚಾರವೆಂಬ ಎಂಟು ತೆರದ ಜ್ಞಾನಾಚಾರವುಂ. ೧ ನಿಶ್ಶಂಕೆ, ೨ ನಿಃಕಾಂಕ್ಷೆ, ೩ ನಿರ್ವಿಚಿಕಿತ್ಸೆ, ೪ ಅಮೂಢದೃಷ್ಟಿ, ೫ ಉಪಗೂಹನ, ೬ ಸ್ಥಿತೀಕರಣ, ೭ ವಾತ್ಸಲ್ಯ, ೮ ಮಾರ್ಗಪ್ರಭಾವನಾಚಾರಗಳೆಂಬ ಎಂಟು ಪ್ರಕಾರದ ದರ್ಶನಾಚಾರವುಂ, ದ್ವಾದಶವಿಧ (೧೨) ಬಾಹ್ಯಾಭ್ಯಂತರ ತಪಾಚಾರವುಂ, ಪಂಚ (೫) ಪ್ರಕಾರದ ವೀರ್ಯಾಚಾರವುಂ, ತ್ರಯೋದಶ (೧೩) ಭೇದಚಾರಿತ್ರಾಚಾರವುಂ ಎಂದೀ ಪ್ರಕಾರವಾದ ಪಂಚಾಚಾರದಲ್ಲಿ ತಾವು ನಡೆಯುತ್ತಲೂ, ಪರಮಜಿನಗದಿತವಾದ ಪರಮಾಗಮದಲ್ಲಿ ಹೇಳಿರುವ ಷಡ್ದ್ರವ್ಯ, (೬), ಪಂಚಾಸ್ತಿಕಾಯ (೫), ಸಪ್ತತತ್ವ (೭), ನವ (೯) ಪದಾರ್ಥಂಗಳುಂ, ಅವುಗಳಲ್ಲಿ ಸಾರವಾದ ಭೇದಾಭೇದ ರತ್ನತ್ರಯಾತ್ಮಕಕಾರಣ ಸಮಯಸಾರದ ಬಲದಿಂದ ಅನಂತಚತುಷ್ಟಯಾತ್ಮಕ ಕಾರ್ಯಸಮಯಸಾರವನ್ನು ಭವ್ಯಜನಗಳು ಬೆಸಗೊಳ್ಳುತ್ತಿರಲು ಉಪದೇಶಿಸುವ ಉಪಾಧ್ಯಾಯ ಪರಮೇಷ್ಠಿಗಳ ಗುಣಸ್ಮರಣೆಯಿಂದ ಮೋಕ್ಷಕ್ಕೆ ಕಾರಣವಾದ ಪುಣ್ಯಾಭಿವೃದ್ಧಿಯಾಗುವದೆಂದು ತಿಳಿದು ಏನನ್ನು ಮಾಡಬೇಕೆಂದರೆ—

ನಿಶ್ಚಯವ್ಯವಹಾರ ಅಷ್ಟ (೮) ವಿಧ ಜ್ಞಾನಾಚಾರಸ್ವರೂಪೋಹಂ, ಅಷ್ಟ (೮) ವಿಧ ದರ್ಶನಾಚಾರಸ್ವರೂಪೋಹಂ, ದ್ವಾದಶ (೧೨) ವಿಧ ತಪಾಚಾರಸ್ವರೂಪೋಹಂ, ಪಂಚ (೫) ವಿಧ ವೀರ್ಯಾಚಾರಸ್ವರೂಪೋಹಂ, ತ್ರಯೋದಶ (೧೩) ಚಾರಿತ್ರಾಚಾರಸ್ವರೂಪೋಹಂ, ಕ್ಷಾಯಿಕಜ್ಞಾನಸ್ವರೂಪೋಹಂ, ಕ್ಷಾಯಿಕದರ್ಶನಸ್ವರೂಪೋಹಂ, ಕ್ಷಾಯಿಕ ಚಾರಿತ್ರ ಸ್ವರೂಪೋಹಂ, ಕ್ಷಾಯಿಕಸಮ್ಯಕ್ತ್ವ ಸ್ವರೂಪೋಹಂ, ಕ್ಷಾಯಿಕಪಂಚಲಬ್ಧಿ ಸ್ವರೂಪೋಹಂ, ಪರಮ ಶುದ್ಧಚಿದ್ರೂಪಸ್ವರೂಪೋಹಂ, ವಿಶುದ್ಧಚೈತನ್ಯಸ್ವರೂಪೋಹಂ, ಶುದ್ಧ ಚಿತ್ಕಾಯಸ್ವರೂಪೋಹಂ, ನಿಜ ಜೀವತತ್ವಸ್ವರೂಪೋಹಂ, ಶುದ್ಧ ಜೀವಪದಾರ್ಥಸ್ವರೂಪೋಹಂ, ಶುದ್ಧ ಜೀವದ್ರವ್ಯ ಸ್ವರೂಪೋಹಂ, ಶುದ್ಧ ಜೀವಾಸ್ತಿಕಾಯ ಸ್ವರೂಪೋಹಂ ಎಂದಿವು ಮೊದಲಾದ ಭಾವನೆಯು ನಿಶ್ಚಯ ಸವಿಕಲ್ಪಾರಾಧನೆಯಾಗುವದು. ನಿಜನಿತ್ಯಾನಂದ ಶುದ್ಧಾತ್ಮಸ್ವರೂಪದೊಳು ನಿರಂತರವಸ್ಥಾನಂ ನಿರ್ವಿಕಲ್ಪಾರಾಧನೆಯಾಗುವದೆಂದು ತಿಳಿದು ಅನಂತ ಸುಖಾವಾಪ್ತಿ ನಿಮಿತ್ತಕ್ಕಾಗಿ ನಿರುಪಾಧಿಕ ಸಹಜಾತ್ಮತತ್ವಾನುಷ್ಠಾನವನ್ನು ನಿರಂತರದಲ್ಲಿಯೂ ಮಾಬೇಕೆನ್ನುವದು ಶ್ರೀನಿತ್ಯಾನಂದ ಬಾಲಚಂದ್ರದೇವರ ಅಭಿಪ್ರಾಯವು ॥ ೪ ॥

## ಪದಸ್ಥಾದಿ ಧ್ಯಾನತ್ರಯ ವಿಷಯರಾದ ಸರ್ವಸಾಧುಪರಮೇಷ್ಠಿಗಳ ಸ್ವರೂಪವು ಯಾವ ಪ್ರಕಾರವೆಂದರೆ—



೧. ಶುದ್ಧ ಚೈತನ್ಯವಿಲಾಸಿತಲಕ್ಷಣ ನಿಜಾತ್ಮತತ್ವರುಚಿ ಸಮ್ಯಗ್ದರ್ಶನವೆಂಬುವದರಲ್ಲಿ ವರ್ತಿಸುವದು ನಿಶ್ಚಯದರ್ಶನಾಚಾರವಾಗುವದು. ೨. ನಿರ್ವಿಕಾರ ಪರಮಾನಂದಮಯವಾದ ತನ್ನಂದವನ್ನು ಭೇದ ವಿಜ್ಞಾನದಿಂದಂ ರಾಗಾದಿ ಪರಭಾವಗಳ ಸಂಬಂಧದಿಂದ ಬೇರೆಮಾಡಿ ತಿಳಿಯುವದು ಸಮ್ಯಜ್ಞಾನವು. ಅದರಲ್ಲಿ ವರ್ತಿಸುವದು ನಿಶ್ಚಯಸಮ್ಯಜ್ಞಾನಾಚಾರವಾಗುವದು. ೩. ಶುದ್ಧಾತ್ಮಭಾವನಾಜನಿತ ಸ್ವಭಾವಿಕ ಸುಖಾನುಭೂತಿಯಲ್ಲಿ ನಿಶ್ಚಲವಾಗಿರುವ ಪರಿಣತಿಯು ಸಮ್ಯಕ್ಚಾರಿತ್ರವು. ಅದರಲ್ಲಿ ನಿರಂತರಂ ವರ್ತಿಸುವದು ನಿಶ್ಚಯ ಚಾರಿತ್ರಾಚಾರವಾಗುವದು. ೪. ಸಮಸ್ತ ಪರದ್ರವ್ಯೇಚ್ಛಾನಿರೋಧದಿಂದ ನಿರ್ಮಲ ನಿಜಾತ್ಮಭಾವನಾನುಷ್ಠಾನವನ್ನು ಮಾಡುವದು ಉತ್ತಮ ತಪಸ್ಸು. ಅದರಲ್ಲಿ ಸದಾ ವರ್ತಿಸುವದು ನಿಶ್ಚಯತಪಾಚಾರವಾಗುವದು. ೫. ಈ ಪ್ರಕಾರವಾಗಿರುವ ಚತುರ್ವಿಧಾರಾಧನೆಯೊಳು ಶಕ್ತಿಯನ್ನು ಮರೆಸದೆ ಮಾಡುವದು ನಿಶ್ಚಯ ವೀರ್ಯಾಚಾರವಾಗುವದು. ಈ ಪ್ರಕಾರವಾಗಿರುವ ಪಂಚಾಚಾರಂಗಳೋಳ್ ಚರಣಾಗ್ರಸಾಭಿಪ್ರಾಯದ ವ್ಯವಹಾರಪಂಚಾಚಾರದೊಳು ತಾವು ಮುಂಕೊಡಿ ಶುದ್ಧ ರತ್ನತ್ರಯಾತ್ಮಕಕಾರಣಸಮಯಸಾರದ ಬಲದಿಂದ ಅನಂತ ನಿಶ್ಚಯ ಮೋಕ್ಷ ಮಾರ್ಗಕ್ಕೆ ಚತುಷ್ಟಯಾತ್ಮಕಕಾರ್ಯ ಸಮಯಸಾರವನ್ನು ವೀತರಾಗ ನಿರ್ವಿಕಲ್ಪ ಸಮಾಧಿಯೊಳ್ನಿಂದು ಸಾಧಿಸುವ ಸರ್ವ ಸಾಧುಪರಮೇಷ್ಠಿಗಳನ್ನು ನಿರ್ಭರಭಕ್ತಿಯಿಂದ ಸ್ಮರಿಸುವ ಭವ್ಯಾತ್ಮನಿಗೆ ಆ ಸ್ಮರಣೆಯು ನಿಜ ಶುದ್ಧ ರತ್ನತ್ರಯಾತ್ಮಕವಾದ ನಿಶ್ಚಯಮೋಕ್ಷಮಾರ್ಗಕ್ಕೆ ಸಹಕಾರಿ ಕಾರಣವಾಗುವದೆಂದರಿದು ಏನು ಮಾಡಬೇಕೆಂದರೆ—

ಅಖಂಡಶುದ್ಧಜ್ಞಾನೈಕೈಕಸ್ವರೂಪೋಹಂ, ಸ್ವಭಾವಿಕ ಜ್ಞಾನದರ್ಶನಸ್ವರೂಪೋಹಂ, ಅಂತರಂಗ ರತ್ನತ್ರಯಸ್ವರೂಪೋಹಂ, ಅನಂತಚತುಷ್ಟಯಸ್ವರೂಪೋಹಂ, ಪಂಚಮಭಾವಸ್ವರೂಪೋಹಂ, ನಯನಿಕ್ಷೇಪಪ್ರಮಾಣವಿದೂರಸ್ವರೂಪೋಹಂ, ಸಪ್ತಭಯ ವಿಪ್ರಮುಕ್ತಸ್ವರೂಪೋಹಂ, ಅಷ್ಟ (೮) ವಿಧ ಕರ್ಮವಿನಿರ್ಮುಕ್ತಸ್ವರೂಪೋಹಂ, ಅವಿಚಲಿತ ಶುದ್ಧ ಚಿದಾನಂದಸ್ವರೂಪೋಹಂ, ಅದ್ವೈತ ಪರಮಾಹ್ಲಾದಸುಖಸ್ವರೂಪೋಹಂ, ಎಂಬಿವು ಮೊದಲಾದ ಸವಿಕಲ್ಪ ಗುಣಸ್ಮರಣ ಸ್ವಶುದ್ಧಾತ್ಮಸ್ವರೂಪದೊಳು ನಿಶ್ಚಲಾವಸ್ಥಾನಂ ನಿರ್ವಿಕಲ್ಪ ಗುಣಸ್ಮರಣೆಯೆಂದರಿದು ಸರ್ವಸಾಧುಪದಪ್ರಾಪ್ತ್ಯರ್ಥಂ ಸ್ವಶುದ್ಧಾತ್ಮಭಾವನೆಯು ವಿವೇಕಿ ಜನಂಗಳಿಂದ ನಿರಂತರದಲ್ಲಿಯೂ ಮಾಡಲ್ಪಡಬೇಕೆನ್ನುವದು ಶ್ರೀಕುಮುದಚಂದ್ರಭಟ್ಟಾರಕ ದೇವರಭಿಪ್ರಾಯವು ॥ ೫ ॥

———

## ಇವರ್ಯೈವರು ಪಂಚಪರಮೇಷ್ಠಿಗಳು ಹ್ಯಾಗಾದರೆಂದರೆ—



ಸಿದ್ಧರು ಸಾಕ್ಷಾತ್ಪರಮೇಷ್ಠಿಗಳುಂ, ಅರಹಂತರೇಕದೇಶಪರಮೇಷ್ಠಿಗಳುಂ, ಆಚಾರ್ಯರು ಉಪಾಧ್ಯಾಯರು ಸರ್ವಸಾಧುತ್ರಯರುಂ ತತ್ಪದ ಸಾಧಕತ್ವದಿಂದ ಭಾವಿನೈಗಮನಯದಿಂದ ಪರಮೇಷ್ಠಿಗಳೆನ್ನಲ್ಪಡುವರು ॥ ೫ ॥ ಮತ್ತಂ ಪ್ರಾಥಮಿಕಾಪೇಕ್ಷೆಯಿಂ ಚಿತ್ತಸ್ಥಿರೀಕರಣಾರ್ಥಮುಂ ದುರ್ಧ್ಯಾನವಂಚನಾರ್ಥಕ್ಕೋಸ್ಕರವಾಗಿ ವ್ಯವಹಾರನಿಶ್ಚಯನಯಭೇದಾಭೇದ ಧ್ಯಾನವಿಷಯರೆನಿಸಿದ ಪಂಚಪರಮೇಷ್ಠಿಭಕ್ತ್ಯಾದಿರೂಪಪರಾಶ್ರಿತವಾದ ಬಹಿರಂಗ ಧರ್ಮಧ್ಯಾನದ ಬಲದಿಂ ನಿಶ್ಚಯ ಧರ್ಮಧ್ಯಾನಮಂ ಮತ್ತೆಯುಂ ಹೇಳುವ—

ಪ್ರಸ್ತುತ ಶ್ಲೋಕ॥ ವೈರಾಗ್ಯಂ ತತ್ವವಿಜ್ಞಾನಂ ನೈರ್ಗ್ರಂಥ್ಯಂ ವಶ್ಯಚಿತ್ತತಾ ॥
ಜಿತಂ ಪರೀಷಹತ್ವಂಚ ಪಂಚೈತೇ ಧ್ಯಾನಹೇತವಃ ॥ ೩೯ ॥
ನಿಮಿತ್ತಂ ಶರಣಂ ಪಂಚಗುರವೋ ಗೌಣಮುಖ್ಯತಃ ॥
ಶರಣ್ಯಂ ಶರಣಂ ಸ್ವಸ್ಯ ಸ್ವಯಂ ರತ್ನತ್ರಯಾತ್ಮಕಂ ॥೪೦॥

ವ್ಯವಹಾರನಿಶ್ಚಯಮೋಕ್ಷಕಾರಣಂಗಳುಂ ಧ್ಯಾನದಿಂದ ದೊರೆಕೊಳ್ಳುವದೆಂಬುವದನ್ನು ಹೇಳುತ್ತಾರೆ.

ಶ್ಲೋಕ॥ ಸ ಚ ಮುಕ್ತಿಹೇತು ರಿದ್ಧೋಧ್ಯಾನೇ ಯಸ್ಮಾದವಾಪ್ಯತೇ ದ್ವಿವಿಧೋಪಿ ॥
ತಸ್ಮಾದಭ್ಯಸ್ಯಂತು ಧ್ಯಾನಂ ಸುಧಿಯೋ ಸದಾಪ್ಯಪಾಲಸ್ಯಂ ॥ ೪೧ ॥
ವಜ್ರಸಂಹನನೋಪೇತಾ: ಪೂರ್ವಶ್ರುತ ಸಮನ್ವಿತಾಃ ॥
ದಧ್ಯುಃ ಶುಕ್ಲಮಿಹಾತೀತಾ: ಶ್ರೇಣ್ಯಾರೋಹಣ ಕ್ಷಮಾ: ॥ ೪೨ ॥
ತಾದೃಕ್ ಸಾಮಗ್ರ್ಯಭಾವೇತು ಧ್ಯಾತುಂ ಶುಕ್ಲಮಿಹಾಕ್ಷಮಾನ್ ॥
ಧರಾಯುಗೇನಾನುದ್ದಿಶ್ಯ ಧರ್ಮಧ್ಯಾನಂ ಪ್ರಚಕ್ಷ್ಮಹೇ ॥ ೪೩ ॥

ಕಂದ॥ ಧ್ಯಾನಂ ಪುಸಿ ನಿಜತತ್ವ ।
ಧ್ಯಾನಂ ದೊರೆಕೊಳ್ಳದೆಂಬನಜ್ಞಾಂ ಗರುಡ ॥
ಧ್ಯಾನದಿ ನಹಿಗರಳಕ್ಷಯ- ।
ಮೇನಾಗದೇ ಲೋಕಮರಿಯೋ ನಿಜಗುಣನಿರತಾ ॥ ೨೧೪ ॥

ಜ್ಞಾನಾನಂದನಿಜಾತ್ಮಂ ।
ಜ್ಞಾನಿಗೇಕೆನ್ನಂ ಪ್ರತಿಕ್ರಮಣಮುಂ ಪ್ರತ್ಯಾ- ॥
ಖ್ಯಾನಮುಮಾಳೋಚನೆಯುಂ ।
ಧ್ಯಾನಾಂತರ್ಗತಮೇ ಶೀಲಗುಣಮುಂ ತಪಮುಂ ॥ ೨೧೫ ॥

ಜ್ಞಾನಿಗೆ ದೊರೆಕೊಳ್ಗುಂ ನಿ- ।
ತ್ಯಾನಂದಂ ಸನ್ಮತಿಶ್ರುತಾದಿಕ ಪಂಚ ॥
ಜ್ಞಾನೈಕತ್ವ ಸ್ಥಿತಿಯಿಂದಂ ।
ಧ್ಯಾನಿಸೆ ಸಂಚಲಿಸದಧಿಕದೇಕಾಗ್ರತೆಯಿಂ ॥ ೨೧೬ ॥

ಗಾಹೆ ॥ ಜಇಣಿಮಿಸಧ್ಧ ವಿಕಾಇಕಯಿಣಿಯಅಪ್ಪೆಅಣುವಾವೂ ॥
ಅಗ್ಗಿಕಣಜ್ಜೇವಕಠ್ಠ ಗಿರಿದಹಯಿಸೇಸುವಿಹಾವೂ ॥ ೧೨ ॥

ತಾ॥—ತೃಣ, ಕಾಷ್ಠಪುಂಜವನ್ನು ಕ್ಷಣಿಕಾಗ್ನಿ ಕ್ಷಣಮಾತ್ರಕಾಲದಲ್ಲಿ ಸುಡುವ ಹಾಗೆ ವೀತರಾಗ ನಿರ್ವಿಕಲ್ಪ ಸ್ವಸಂವೇದನ ಜ್ಞಾನಭಾವನಾಬಲದಿಂದ, ನಿಜಶುದ್ಧಾತ್ಮನನ್ನು ನಿಮಿಷಾರ್ಧಕಾಲಂ ಏಕಾಗ್ರಧ್ಯಾನದಿಂದ ಧ್ಯಾನಿಸಲು ಅನಂತಭವದಿಂದ ಸಂಪಾದನೆ ಮಾಡಿದ ಕರ್ಮಗಳೆಲ್ಲವೂ ನಿರ್ಮೂಲವಾಗುವವು. ಈ ಕಾಲಂ ಈ ಕ್ಷೇತ್ರದಲ್ಲಿ ಮುಕ್ತಿಯಿಲ್ಲದಿದ್ದರೂ ಪರಂಪರಯಿಂದ ಮುಕ್ತಿಯುಂಟಾಗುವದೆಂದು ನಂಬಿ ನಿಜಾತ್ಮಭಾವನೆಯನ್ನು ಮಾಡಲ್ಪಡಬೇಕು. ಮುಂತೀಗಳೂ ಭರತ, ಸಗರ, ರಾಮ, ಪಾಂಡವಾದಿಗಳು ಪರಮಾತ್ಮಭಾವನೆಯಿಂದ ಸಂಸಾರಸ್ಥಿತಿಯನ್ನು ಸ್ತೋಕ ( ಕಡಿಮೆ ) ಮಾಡಿ ಸ್ವರ್ಗದಲ್ಲಿ ಹುಟ್ಟಿ ಅಲ್ಲಿಯ ಸುಖವನ್ನು ಭೋಗಿಸಿ ಬಂದು ಜನ್ಮವನ್ನೆತ್ತಿ ಪೂರ್ವಭವ ಭಾವಿತ ಭೇದಾಭೇದ ರತ್ನತ್ರಯಭಾವನಾಸಂಸ್ಕಾರ ಬಲದಿಂದ ಪುನಃ ಸ್ವಶುದ್ಧಾತ್ಮನನ್ನು ಭಾವಿಸಿ ಘೋರೋಪಸರ್ಗಂಗಳನ್ನು ಗೆದ್ದು ಮುಕ್ತಿಸುಖವನ್ನು ಪಡೆದರೆಂದುತಿಳಿದು, ಅಭ್ಯುದಯ ನಿಃಶ್ರೇಯಸ ಸುಖದಾಯಕವಾದ ಸ್ವಶುದ್ಧಾತ್ಮಭಾವನೆಯನ್ನು ನಿರಂತರವೂ ಮಾಡತಕ್ಕದ್ದು.

ಕಂದ॥ ಮನಮಿರೆ ಪುರ್ವಿನಮೊದಲೊಳು ।
ಮನದೊಳಗಿರೆ ವಾಯುಕರಣ ತತಿವಾಯುವಿನೋ- ॥
ಳ್ಮನಿದಿರೆ ಪದ್ಮಾಸನದೊ- ।
ಳನುವಿರೆ ಏಕಾಗ್ರನಾತ್ಮಚಿಂತೆಯೊಳಿರ್ದಂ ॥ ೩೧೭ ॥

ಪುನಃ ಅಪ್ರಶಸ್ತ ವಿಷಯಕಷಾಯಾದಿ ದುಷ್ಪರಿಣಾಮವನ್ನು ಪರಿಹರಿಸಲಿಕ್ಕೋಸ್ಕರ ಸವಿಕಲ್ಪಾವಸ್ಥೆಯಲ್ಲಿ ಪಂಚಪರಮೇಷ್ಠಿಧ್ಯಾನಾದಿ ಪ್ರಶಸ್ತ ಪರಿಣಾಮದಲ್ಲಿ ಪ್ರವರ್ತಿಸುವಂಥಾ ಅಂತರಾತ್ಮನಿಗೆ ಯಾವದೊಂದು ಸಮಯದಲ್ಲಿ ನಿಜದೇಹಾದಿಗಳಲ್ಲಿ ಪರೀಷಹವೃತ್ತಿಯಾಗುವದು ( ಮಮತ್ವವು ಬಿಡಲ್ಪಡುವದು ) ಆಗಲೇ ಏಕಾಗ್ರತೆ ದೊರೆಯುವದು ಅದೇ ನಿಶ್ಚಯಧ್ಯಾನವಾಗುವದು.

ಕಂದ॥ ಹೊರಹೊರಗೆ ಸುಳಿವ ಮನಮಂ ।
ನಿರಿಸುವುದೇನಾನುಮೊಂದುರೂಪಂ ಕುರುಪಿಂದೊಳಗಾ ॥
ಕುರುಪುವನುಳಿದು ಬಳಿಕ್ಕಂ ।
ನಿರಿಸುವುದು ನಿಜನಿರ್ವಿಕಲ್ಪ ನಿಜಚಿದ್ರೂಪಕದೊಳ್ ॥ ೩೧೮ ॥

ಗಾಹೆ। ಅರುಹಾಸಿದ್ಧಾ ಆಇರಿಯಾ ಉವಝ್ಝಾಯಾ ಸಾಹುಪಂಚಪರಮೇಠ್ಠಿ ।
ತೇವಿಹುಚೇಠ್ಠಇ ಆದೇತಮ್ಹಾ ಆದಾಹು ಮೇ ಶರಣಂ ॥ ೧೩ ॥

ತಾ॥—ಯಾವುದೊಂದು ಕಾರಣದಿಂದ ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯ ಸರ್ವಸಾಧುಪರಮೇಷ್ಠಿಗಳು ನಿಶ್ಚಯನಯದಿಂದ ಅನಂತಗುಣಸ್ವರೂಪ, ಸ್ವಶುದ್ಧ ಚಿದ್ರೂಪದೊಳು ವರ್ತಿಸುವರದುಕಾರಣದಿಂದ ಅಲ್ಪಸಂಹನನದಿಂ ಅಲ್ಪಶ್ರುತದಿಂ ಅಥವಾ ಅಲ್ಪಚಾರಿತ್ರದಿಂದಾದರೂ ನಿಜಾತ್ಮಧ್ಯಾನವನ್ನು ಮಾಡತಕ್ಕದ್ದು.

ಗಾಹೆ॥ ಭರಹೇ ದುಸ್ಸಮಕಾಲೇ ಧಂಮಝ್ಝಾಣಂ ಹವೇಣ್ಣಿಣಾಣಿಸ್ಸ ।
ತಂ ಅಪ್ಪಸಾವರಿದೇಣಹುಮಣಯಿ ಸೋಹು ಅಂಣಾಣಿ ॥ ೧೪ ॥
ಅಂಜಲಿತೇಯರಣ ಸುದ್ಧಾ ಅಪ್ಪಝ್ಝಿವೂಣ ।
ಆಹಇ ಇದುದ್ದತ್ತಂ ತಥ್ಥಚುದಾಣಿಬ್ಬುದಿಜ್ಜೊತ್ತಿ ॥ ೧೫ ॥

ಶ್ಲೋಕ॥ ಆರ್ತಧ್ಯಾನಂ ನಿಷೇಧಂತಿ ಶುಕ್ಲಧ್ಯಾನಂ ಜಿನೋತ್ತಮಾ: ॥
ಧರ್ಮಧ್ಯಾನಂ ಪುನ: ಪ್ರಾಹು: ಶ್ರೇಣಿಭ್ಯಾಂ ಪ್ರಾಗ್ವಿವರ್ತಿನಾಮ್ ॥ ೪೪ ॥
ಯತ್ಪುನ: ವಜ್ರಿಕಾಯಸ್ಯ ಧ್ಯಾನಮಿತ್ಯಾಗಮೇನ ಚ ॥
ಶ್ರೇಣ್ಯೋ ಧ್ಯಾನಂ ಪ್ರತಿತ್ಯುಕ್ತಂ ತನ್ನಾವಸ್ತಾಂ ನಿಷೇಧಕಮ್ ॥ ೪೫ ॥
ಯತ್ರಾಹುರ್ನಹಿಕಾಲೋಯಂ ಧ್ಯಾನಸ್ಯಾಧ್ಯಾಯತಾಮಿತಿ ॥
ಅರ್ಹನ್ಮತಾನಭಿಜ್ಞತ್ವಂ ಖ್ಯಾಪಯಂತ್ಯಾತ್ಮನಾ ಸ್ವಯಮ್ ॥ ೪೬ ॥

ತಾ:—ಈ ಭರತಕ್ಷೇತ್ರದ ಹುಂಡಾವಸರ್ಪಿಣಿಯ ದುಷಮಕಾಲದಲ್ಲಿ ಕ್ಷಪಕೋಪಶಮ ಶ್ರೇಣಿಗಳಿಂದ ಕೆಳಗೆ ವರ್ತಿಸುವ ಭವ್ಯರಿಗೆ ಸ್ವಶುದ್ಧಾತ್ಮಾಶ್ರಿತ ಧರ್ಮಧ್ಯಾನವನ್ನು ಯಾರು ಕೆಲವರು ಒಡಂಬಡುವದಿಲ್ಲವೋ ಅಂಥಾವರು ಜಿನಮತಕ್ಕತ್ಯಂತ ದೂರರೆಂದು ತಿಳಿದು ಶ್ರೀಜಿನಮತಾವಲಂಬಿಗಳು ಏನು ಮಾಡುವರೆಂದೊಡೆ—

ರಾಗ, ದ್ವೇಷ, ಮೋಹ, ಕ್ರೋಧ, ಮಾನ, ಮಾಯಾ, ಲೋಭ, ಪಂಚೇಂದ್ರಿಯ ವಿಷಯವ್ಯಾಪಾರ, ಮನೋವಚನ, ಕಾಯಕರ್ಮ, ಭಾವಕರ್ಮ, ದ್ರವ್ಯಕರ್ಮ, ನೋಕರ್ಮ, ಖ್ಯಾತಿ, ಪೂಜಾ, ಲಾಭ, ದೃಷ್ಟಶ್ರುತಾನುಭೂತ, ಭೋಗಕಾಂಕ್ಷಾರೂಪ ನಿದಾನ ಮಾಯಾ ಮಿಥ್ಯಾತ್ವ ಶಲ್ಯತ್ರಯ, ಗಾರವತ್ರಯ, ದಂಡತ್ರಯಾದಿ ವಿಭಾವಪರಿಣಾಮಶೂನ್ಯೋಹಂ, ನಿಜನಿರಂಜನ ಸ್ವಶುದ್ಧಾತ್ಮಸಮ್ಯಕ್‌ಶ್ರದ್ಧಾನ ಜ್ಞಾನಾನುಷ್ಠಾನರೂಪಾಭೇದ ರತ್ನತ್ರಯಾತ್ಮಕ ನಿರ್ವಿಕಲ್ಪ ಸಮಾಧಿ ಸಂಜಾತ ವೀತರಾಗಸಹಜಾನಂದಸುಖಾನುಭೂತಿರೂಪಮಾತ್ರಲಕ್ಷಣೇನ, ಸ್ವಸಂವೇದನಜ್ಞಾನಸಮ್ಯಕ್ಪ್ರಾಪ್ತ್ಯೋಭರಿತಾವಜ್ಞಾನೇನಗಮ್ಯ ಪ್ರಾಪ್ತ್ಯೋಭರಿತಾವಸ್ಥೋಹಂ, ನೈಜಶುದ್ಧಾತ್ಮ ಟಂಕೋತ್ಕೀರ್ಣಜ್ಞಾಯಕೈಕಸ್ವಭಾವೋಹಂ, ಸಹಜಶುದ್ಧಪಾರಿಣಾಮಿಕಭಾವ ಸ್ವಭಾವೋಹಂ, ಸಹಜಶುದ್ಧಜ್ಞಾನಾನಂದೈಕಸ್ವಭಾವೋಹಂ, ಭೇದಚ್ಚಲನನಿರ್ಭರಾನಂದಸ್ವರೂಪೋಹಂ, ಚಿತ್ಕಳಾಸ್ವರೂಪೋಹಂ, ಚಿನ್ಮುದ್ರಾಂಕಿತ ನಿರ್ವಿಭಾಗಸ್ವರೂಪೋಹಂ, ಚಿನ್ಮಾತ್ರಮೂರ್ತಿಸ್ವರೂಪೋಹಂ, ಚೈತನ್ಯರತ್ನಾಕರಸ್ವರೂಪೋಹಂ, ಚೈತನ್ಯಾಮರದ್ರುಮಸ್ವರೂಪೋಹಂ, ಚೈತನ್ಯಾಮೃತಾಹಾರಸ್ವರೂಪೋಹಂ, ಚೈತನ್ಯರಸರಸಾಯನಸ್ವರೂಪೋಹಂ, ಚೈತನ್ಯಚಿಹ್ನಸ್ವರೂಪೋಹಂ, ಚೈತನ್ಯಕಲ್ಯಾಣವೃಕ್ಷಸ್ವರೂಪೋಹಂ, ಜ್ಞಾನಪುಂಜಸ್ವರೂಪೋಹಂ, ಜ್ಞಾನಜ್ಯೋತಿಸ್ವರೂಪೋಹಂ, ಜ್ಞಾನಾಮೃತಪ್ರವಾಹಸ್ವರೂಪೋಹಂ, ಜ್ಞಾನಾರ್ಣವಸ್ವರೂಪೋಹಂ, ನಿರುಪಮಲೇಪಸ್ವರೂಪೋಹಂ, ನಿರವದ್ಯಸ್ವರೂಪೋಹಂ, ಶುದ್ಧಚಿನ್ಮಾತ್ರಸ್ವರೂಪೋಹಂ, ಶುದ್ಧಾಖಂಡೈಕಮೂರ್ತಿಸ್ವರೂಪೋಹಂ, ಅನಂತಜ್ಞಾನಸ್ವರೂಪೋಹಂ, ಅನಂತದರ್ಶನಸ್ವರೂಪೋಹಂ, ಅನಂತಸುಖಸ್ವರೂಪೋಹಂ, ಅನಂತಶಕ್ತಿಸ್ವರೂಪೋ

ಹಂ, ಸಹಜಾನಂದಸ್ವರೂಪೋಹಂ, ಪರಮಾನಂದಸ್ವರೂಪೋಹಂ, ಪರಮಜ್ಞಾನಾನಂದ ಸ್ವರೂಪೋಹಂ, ಸದಾನಂದಸ್ವರೂಪೋಹಂ, ಚಿದಾನಂದಸ್ವರೂಪೋಹಂ, ನಿಜಾನಂದಸ್ವರೂ ಪೋಹಂ, ನಿಜನಿರಂಜನಸ್ವರೂಪೋಹಂ, ಸಹಜಸುಖಾನಂದಸ್ವರೂಪೋಹಂ, ನಿತ್ಯಾನಂದ ಸ್ವರೂಪೋಹಂ, ಶುದ್ಧಾತ್ಮಸ್ವರೂಪೋಹಂ, ಪರಂಜ್ಯೋತಿಸ್ವರೂಪೋಹಂ, ಸ್ವಾತ್ಮೋಪ ಲಬ್ಧಿಸ್ವರೂಪೋಹಂ, ಶುದ್ಧಾತ್ಮಾನುಭೂತಿಸ್ವರೂಪೋಹಂ, ಶುದ್ಧಾತ್ಮಸಂವಿತ್ತಿಸ್ವರೂಪೋಹಂ, ಭೂತಾರ್ಥಸ್ವರೂಪೋಹಂ, ಪರಮಾರ್ಥಸ್ವರೂಪೋಹಂ, ನಿಶ್ಚಯಪಂಚಾಚಾರಸ್ವರೂಪೋ ಹಂ, ಸಮಯಸಾರಸಮೂಹಸ್ವರೂಪೋಹಂ, ಅಧ್ಯಾತ್ಮಸಾರಸ್ವರೂಪೋಹಂ, ಪರಮಮಂಗಲ ಸ್ವರೂಪೋಹಂ, ಪರಮೋತ್ತಮಸ್ವರೂಪೋಹಂ, ಪರಮಶರಣೋಹಂ, ಪರಮಕೇವಲಜ್ಞಾ ನೋತ್ಪತ್ತಿಕಾರಣಸ್ವರೂಪೋಹಂ, ಸಕಲಕರ್ಮಕ್ಷಯಕಾರಣಸ್ವರೂಪೋಹಂ, ಪರಮಾ ದ್ವೈತಸ್ವರೂಪೋಹಂ, ಶುದ್ಧೋಪಯೋಗಸ್ವರೂಪೋಹಂ, ನಿಶ್ಚಯಷಡಾವಶ್ಯಕಸ್ವರೂಪೋ ಹಂ, ಪರಮಸ್ವಾಧ್ಯಾಯಸ್ವರೂಪೋಹಂ, ಪರಮಸಮಾಧಿಸ್ವರೂಪೋಹಂ, ಪರಮಸ್ವಾಸ್ಥ್ಯ ಸ್ವರೂಪೋಹಂ, ಪರಮಭೇದಜ್ಞಾನಸ್ವರೂಪೋಹಂ, ಪರಮಸ್ವಸಂವೇದನಸ್ವರೂಪೋಹಂ, ಪರಮಸಮರಸಿಭಾವಸ್ವರೂಪೋಹಂ, ಕ್ಷಾಯಿಕಸಮ್ಯಕ್ತ್ವಸ್ವರೂಪೋಹಂ, ಕೇವಲಜ್ಞಾನ ಸ್ವರೂಪೋಹಂ, ಕೇವಲದರ್ಶನಸ್ವರೂಪೋಹಂ, ಅನಂತವೀರ್ಯಸ್ವರೂಪೋಹಂ, ಪರಮ ಸೂಕ್ಷ್ಮಸ್ವರೂಪೋಹಂ, ಅವಗಹನಸ್ವರೂಪೋಹಂ, ಅಗುರುಲಘುಸ್ವರೂಪೋಹಂ, ಅವ್ಯಾ ಬಾಧಸ್ವರೂಪೋಹಂ, ಅಷ್ಟವಿಧಕರ್ಮರಹಿತೋಹಂ, ನಿರಂಜನಸ್ವರೂಪೋಹಂ, ನಿತ್ಯೋ ಹಂ, ಅಷ್ಟಗುಣಸಹಿತೋಹಂ, ಕೃತಕೃತ್ಯೋಹಂ, ಲೋಕಾಗ್ರವಾಸಿನೋಹಂ, ಅನುಪ ಮೋಹಂ, ಅಚಿಂತ್ಯೋಹಂ, ಅತರ್ಕ್ಯೋಹಂ, ಅಪ್ರಮೇಯಸ್ವರೂಪೋಹಂ, ಅತಿಶಯಸ್ವರೂ ಪೋಹಂ, ಅಕ್ಷಯಸ್ವರೂಪೋಹಂ, ಶಾಶ್ವತೋಹಂ, ಶುದ್ಧಸ್ವರೂಪೋಹಂ, ಸಿದ್ಧಸ್ವರೂಪೋ ಹಂ, ಸೋಹಂ ಎಂದೀ ಪ್ರಕಾರವಾಗಿ ಜಗತ್ರಯ ಕಾಲತ್ರಯಗಳಲ್ಲಿ ಮನೋವಾಕ್ಕಾಯಕೃತ ಕಾರಿತಾನುಮೋದದಿಂದ ಶುದ್ಧನಿಶ್ಚಯನಯದಿಂದೆಲ್ಲಾ ಭವ್ಯಾತ್ಮರುಗಳು ನಿರಂತರವೂ ನಿಜಾ ತ್ಮನನ್ನು ಸವಿಕಲ್ಪ ನಿರ್ವಿಕಲ್ಪ ರೂಪದಿಂದ ಭಾವಿಸುವದು ಸಾಕ್ಷಾದಭ್ಯುದಯ ನಿಃಶ್ರೇಯಸ ಸುಖಪ್ರದ ನಿಶ್ಚಯಧರ್ಮಧ್ಯಾನವಾಗುವದು. ಈ ಧ್ಯಾನದಿಂದ ಅಭ್ಯುದಯ ನಿಃಶ್ರೇಯಸ ಸುಖಪ್ರಾಪ್ತಿಯಾಗುವದು.

ಪುನಃ ಶಕ್ತಿನಿಷ್ಟನಿಶ್ಚಯನಯದಿಂದ ಅನಂತಗುಣ ಚಿಂತಾಮಣಿಯ ಕಣಿಯೆನಿಸುವ ಸ್ವಾತ್ಮತತ್ವಾದಿಪದಾರ್ಥಪರಿಜ್ಞಾನಾರ್ಥಂ ತತ್ವವೇದಿಗಳನ್ನು ಹೊಂದಿ ಆರಾಧಿಸುವ ಶಿಶ್ರೂಷೆ ಯುಂ, ಆ ಪರಮಾತ್ಮಜ್ಯೋತಿಯೆನಿಸುವ ತತ್ವವನ್ನು ಅತ್ಯಾದರದಿಂದ ಕೇಳುವ ಶ್ರವಣವುಂ, ಆ ಪರಮಾತ್ಮತತ್ವವನ್ನು ಭೇದವಿಜ್ಞಾನಪೂರ್ವಕಂ ಕೈಕೊಳ್ಳುವ ಗ್ರಹಣವುಂ, ಆ ನಿತ್ಯಾನಂದೈ ಕಸ್ವಭಾವವನ್ನು ಕಾಲಾಂತರದಲ್ಲಿಯೂ ಮರೆಯದ ಧಾರಣೆಯುಂ, ಆ ಪರಮಪಾರಿಣಾಮಿಕ ಭಾವವನ್ನು ಸಕೃತ್ ನೆನೆಯುವ ಸ್ಮೃತಿಯುಂ, ಆ ಪರಮಾನಂದಮಯ ಸಹಜಾತ್ಮನನ್ನು ಅಡಿ ಗಡಿಗೆ ಚಿಂತಿಸುವ ಅನುಸ್ಮೃತಿಯುಂ, ಆ ಪರಮಭಾವದ ಭಾವನೆಯನ್ನು ನಿರಂತರಂ ಮಾಡು ವ ಭಾವನೆಯುಂ, ಆ ಪರಮನಿಷ್ಕ್ರಿಯಟಂಕೋತ್ಕೀರ್ಣಜ್ಞಾನೈಕ ಸ್ವಭಾವದೊಳೇಕಾಗ್ರತೆ ಯನ್ನುಳ್ಳ ಧ್ಯಾನವುಂ ಆಗುವದು.

ಶ್ಲೋ॥ ಸ್ಮೃತಿಸ್ತತ್ವೇ ಸಕೃಚ್ಚಿತ್ತಾಮುಹುರ್ಮುಹುರನುಸ್ಮೃತಿಃ ।
ಭಾವನಾಸ್ಸಪ್ರಬಂಧಾಸ್ಯಾ ಧ್ಯಾನಮೇಕಾಗ್ರನಿಷ್ಠಿತಾ ॥ ೪೭ ॥
ಅಸಂಯುತಸ್ಮೃತಿರ್ದೇಶಸಂಯತೇನುಸ್ಥಿತಿಸ್ಮೃತಾ ।
ಪ್ರಮತ್ತೇ ಭಾವನಾಪ್ರಾಹು ಧ್ಯಾನಂ ಸ್ಯಾದಪ್ರಮತ್ತಕೇ ॥ ೪೮ ॥

ತಾಃ—ಇದರಲ್ಲಿ ಅಸಂಯುತನಿಗೆ ಸ್ಮೃತಿಯುಂ, ದೇಶಸಂಯತನಲ್ಲಿ ಅನುಸ್ಮೃತಿಯುಂ, ಪ್ರಮತ್ತನಲ್ಲಿ ಭಾವನೆಯುಂ, ಅಪ್ರಮತ್ತನಲ್ಲಿ ಧ್ಯಾನವುಂ ಆಗುವದು. ಈ ಧರ್ಮಧ್ಯಾನಂ ಪೀತ, ಪದ್ಮ, ಶುಕ್ಲಲೇಶ್ಯೆಯನ್ನುಳ್ಳದ್ದಾಗುವದು.

ಇಂತೀ ಧರ್ಮಧ್ಯಾನಂ ಸಂಪೂರ್ಣಂ.

---

## ಸೂತ್ರಂ ॥ ಶುಕ್ಲಧ್ಯಾನಂ ಚತುರ್ವಿಧಃ ॥ ೫೭ ॥

ತಾ:—೧ ಪೃಥಕ್ತ್ವವಿತರ್ಕವಿಚಾರಂ, ೨ ಏಕತ್ವವಿತರ್ಕವಿಚಾರಂ, ೩ ಸೂಕ್ಷ್ಮಕ್ರಿಯಾಪ್ರತಿಪಾತಿಯುಂ, ೪ ವ್ಯುಪರತಕ್ರಿಯಾನಿವೃತ್ತಿಯುಂ ಎಂದು ಶುಕ್ಲಧ್ಯಾನವು ನಾಲ್ಕುಭೇದವಾಗುವದು. ಅವುಗಳಲ್ಲಿ ಪೃಥಕ್ತ್ವವು ನಾನಾವಿಧವು, ವಿತರ್ಕವೆನ್ನುವದು ಮತಿಪೂರ್ವಕವಾದ ಶ್ರುತಜ್ಞಾನದೋಳ್ಕೂಡಿದ ಊಹೆಯು, ವಿಚಾರವೆನ್ನುವದು ಧ್ಯಾನಿಸಲ್ಪಡುವ ದ್ರವ್ಯವುಂ, ಗುಣವುಂ, ಪರ್ಯಾಯವುಂ, ಆಗಮವಚನವುಂ, ಮನೋವಚನಕಾಯಮೆಂದಿವುಗಳ ಪರಿವರ್ತನೆಯದರಿಂ ಶ್ರುತಕ್ಕರ್ಥವಿಲ್ಲಂ; ವ್ಯಂಜನಯೋಗಂಗಳೊಳು ಪರಿವರ್ತನವು ಯಾವುದೊಂದಕ್ಕುಂಟು. ಅದು ಪೃಥಕ್ತ್ವವಿತರ್ಕವಿಚಾರವೆಂದು ಹ್ಯಾಗಾಯಿತೆಂದರೆ—ಈ ಮೊದಲಿಲ್ಲದ ಸಂಸಾರವೆಂಬ ಸಮುದ್ರವನ್ನು ದಾಟಬೇಕೆನ್ನುವ ಪರಮ ಯತೀಶ್ವರರೂಪದಿಂದಾದ ಪುರುಷಾಕಾರ ಸಾಮರ್ಥ್ಯದಿಂ ದ್ರವ್ಯಪರಮಾಣುವಂ ಭಾವಪರಮಾಣುವುಮಂ ಮೇಣೊಂದನವಲಂಬಿಸಿ ಉಳಿದ ಸಮಸ್ತವಸ್ತು ಚಿಂತಾವ್ಯಾಪಾರಗಳನ್ನು ಬಿಟ್ಟು ಮಹಾಸಂಸಾರಾವೃತಂ ಕರ್ಮಪ್ರಕೃತಿಗಳ ಸ್ಥಿತ್ಯನುಭಾಗಂಗಳನ್ನು ಕುಂದಿಸುತ್ತಂ ಉಪಶಮಿಸುತ್ತಂ ಪಿರಿದಪ್ಪ ಕರ್ಮನಿರ್ಜರೆಯನುಳ್ಳಂ ಮನ, ವಚನ, ಕಾಯವೆಂಬ ಮೂರು ಯೋಗಗಳಲ್ಲಿ ಯಾವುದಾದರೊಂದು ಯೋಗದಿಂದೊಂದು ದ್ರವ್ಯದ ಗುಣವನ್ನಾಗಲಿ, ಪರ್ಯಾಯವನ್ನಾಗಲಿ, ಹಲವು ನಯಂಗಳ ಇಟ್ಟೆಡೆಯೊಳಿದ್ದದ್ದನ್ನು ಶ್ರುತಜ್ಞಾನವೆಂಬ ಸೂರ್ಯನ ಬೆಳಕಿನ ಬಲದಿಂದ ಅಂತರ್ಮುಹೂರ್ತಕಾಲಂ ಧ್ಯಾನಿಸುವದು. ಅಲ್ಲಿಂ ಮೇಲೆ ಅರ್ಥಾಂತರಕ್ಕೆ ಸಲ್ಗುಂ ಮೇಣಾಯರ್ಥದ ಗುಣಕ್ಕೆ ಮೇಣಾಪರ್ಯಾಯಕ್ಕೆ ಮೇಣ್ ಸಂಕ್ರಮಿಸುಗುಂ ಪೂರ್ವಯೋಗದಿಂ ಯೋಗಾಂತರಕ್ಕೆ ವ್ಯಂಜನದಿಂ ವ್ಯಂಜನಾಂತರಕ್ಕೆ ಸಂಕ್ರಮಿಸುಗುಮೆಂದಾ ಧ್ಯಾನಕ್ಕೆ ನಲವತ್ತೆರಡು ವಿಕಲ್ಪಗಳಾಗುವವು ॥ ೪೨ ॥ ಅದು ಹ್ಯಾಗೆಂದರೆ—ಜೀವಾದಿ ಷಡ್ದ್ರವ್ಯಗಳ ಗುಣಗಳ್ಯಾವವೆಂದರೆ—ಜೀವಕ್ಕೆ=ಜ್ಞಾನಾದಿಗಳುಂ, ಪುದ್ಗಲಕ್ಕೆ=ವರ್ಣಾದಿಗಳುಂ, ಧರ್ಮದ್ರವ್ಯಕ್ಕೆ=ಗತ್ಯಾದಿಗಳುಂ, ಅಧರ್ಮದ್ರವ್ಯಕ್ಕೆ=ಸ್ಥಿತ್ಯಾದಿಗಳುಂ, ಆಕಾಶಕ್ಕೆ=ಅವಗಹನತ್ವಂಗಳುಂ, ಕಾಲದ್ರವ್ಯಕ್ಕೆ=ವರ್ತನೆ ಮೊದಲಾದುವುಂ, ಅವುಗಳ ವಿಕಲ್ಪಂಗಳುಂ ಪರ್ಯಾಯಗಳುಂ ಬಂದರ್ಥಮುಂ ನೋಡಲು ಉಳಿದರ್ಥಂ ಅರ್ಥಾಂತರವೆಂಬು

ವದು, ಒಂದು ಗುಣದಿಂದ ಬೇರೆಯಾದ ಗುಣವು ಗುಣಾಂತರವೆಂಬುವದು, ಒಂದು ಪರ್ಯಾಯ ದಿಂದ ಬೇರೆಯಾದ ಪರ್ಯಾಯವು ಪರ್ಯಾಯಾಂತರವೆಂಬುವದು. ಇಂತು ಅರ್ಥ ಅರ್ಥಾಂತರಂ, ಗುಣಂ ಗುಣಾಂತರಂ, ಪರ್ಯಾಯಂ ಪರ್ಯಾಯಾಂತರಂ, ಎಂಬೀ ಆರರಲ್ಲಿ ಯೋಗತ್ರಯ ಸಂಕ್ರಮಣದಿಂದ ಅಷ್ಟಾದಶ (೧೮) ಭಂಗಗಳಾಗುವವು. ಈ ತತ್ವದ ಗುಣಂ ಗುಣಾಂತರಂ ಪರ್ಯಾಯಂ ಪರ್ಯಾಯಾಂತರವೆಂಬೀ ನಾಲ್ಕರಲ್ಲಿ ಯೋಗತ್ರಯ ಸಂಕ್ರಮಣದಿಂದ ದ್ವಾದಶ (೧೨) ಭಂಗವು ಸ್ಥಿರವಾಗಿರುವವು. ಇವೆಲ್ಲಾ ಕೂಡಿ ನಲವತ್ತೆರಡು (೪೨) ಭಂಗಗಳಾಗುವವು. ಹ್ಯಾಗೆಂದರೆ—ಏಕಾಗ್ರ ಚಿಂತಾನಿರೋಧರೂಪವಾದ ಧ್ಯಾನದೊಳೀ ವಿಕಲ್ಪಗಳು ಹ್ಯಾಗೆ ಕೂಡುವವೆಂದರೆ—ಧ್ಯಾನಿಸುವ ದಿವ್ಯಜ್ಞಾನಿ ನಿಜಶುದ್ಧಾತ್ಮಸಂವಿತ್ತಿಯನ್ನು ಬಿಟ್ಟು ಬಾಹ್ಯಚಿಂತೆಯನೆಂತುಂ ಮಾಡುವವನಲ್ಲಂ ಮಾಡದಿದ್ದರೂ ಪ್ರಾರಂಭಕಾಲದಲ್ಲಿ ಧ್ಯಾನಮಂಶದಿ ಸ್ಥಿರವಾಗಿರುವದು. ಅಲ್ಲಿಯವರೆಗೆ ಎನಿತಂಗದಿನ್ನೇನರಮೆನಿತಂ ಅನ್ನೇವರಮೆನಿತಂಶದಿಂದ ಅನಿಹಿತವೃತ್ತಿಯಿಂ ವಿಕಲ್ಪಂಗಳ್ತೋರುಗುಂ ಆದುಕಾರಣದಿಂದ ಆ ಧ್ಯಾನವು ಪೃಥಕ್ತ್ವವಿತರ್ಕವಿಚಾರವೆಂಬ ಪ್ರಥಮ ಶುಕ್ಲಧ್ಯಾನವಾಗುವದು. ಅದರಲ್ಲಿ ಮುಂಚೆ ಹೇಳಿದ ದ್ರವ್ಯ, ಭಾವ, ಪರಮಾಣುಗಳ ಅರ್ಥವು ಹ್ಯಾಗಂದರೆ---ದ್ರವ್ಯಶಬ್ದದಿಂದಾತ್ಮದ್ರವ್ಯಂ ಹೇಳಲ್ಪಡುವದು. ಅದಕ್ಕೆ ಅರ್ಥಂ ಅರ್ಥಾಂತರದಿಂದ ಗುಣಂ ಗುಣಾಂತರ ಪರ್ಯಾಯ ಪರ್ಯಾಯಾಂತರವೆಂಬೀ ನಾಲ್ಕರಲ್ಲಿ ಯೋಗತ್ರಯ ಸಂಕ್ರಮಣದಿಂದ ಹನ್ನೆರಡು ಭಂಗಗಳಾಗುವವು. ಹ್ಯಾಗಂದರೆ—

ಪರಮಾಣುವೆನ್ನುವದೇನೆಂದರೆ--ರಾಗಾದ್ಯುಪಾದಿರಹಿತ ಸೂಕ್ಷ್ಮವಾದ ನಿರ್ವಿಕಲ್ಪ ಸಮಾಧಿಗೆ ವಿಷಯವಾದುದರಿಂದ ಇಂತು ದ್ರವ್ಯಪರಮಾಣುಗಳ ಶಬ್ದಾರ್ಥವು ಹೇಳಲ್ಪಟ್ಟಿತು. ಭಾವ ಶಬ್ದದಿಂದ ಆತ್ಮದ್ರವ್ಯದ ಸ್ವಸಂವೇದನಜ್ಞಾನಪರಿಣಾಮದಿಂದ ಕೈಕೊಳ್ಳಲ್ಪಡುವದು. ಅದಕ್ಕೆ ಪರಮಾಣುವೆಂಬುವದೇನಂದರೆ—ರಾಗಾದಿವಿಕಲ್ಪರಹಿತ ಸೂಕ್ಷ್ಮಾವಸ್ಥೆ. ಅದಕ್ಕೆ ಸೂಕ್ಷ್ಮತ್ವವು ಹ್ಯಾಗಂದರೆ—ಇಂದ್ರಿಯ ಮನೋವಿಕಲ್ಪಂಗಳೇ ವಿಷಯವಾಗುವದರಿನಿಂತು ಭಾವಪರಮಾಣುಶಂವೇದವ್ಯಾಖ್ಯಾನಮರಿಯಲ್ಪಡುವದು. ಈ ಧ್ಯಾನವನ್ನು ಅನಾದಿಕೃತ ಸಂಹನನವನ್ನುಳ್ಳ ಉಪಶಮಶ್ರೇಣಿಯ ನಾಲ್ವರುಮಂ ಧ್ಯಾನಿಸುವರು. ಆದರ ಫಲಂ ಏಕವಿಂಶತಿ (೨೧) ಚಾರಿತ್ರಮೋಹನೀಯಕರ್ಮೋಪಶಮವನ್ನೂ ಮೋಕ್ಷ ವಜ್ರವೃಷಭನಾರಾಚಸಂಹನನ ಚರಮೋತ್ತಮಶರೀರವನ್ನುಳ್ಳ ಅಪೂರ್ವಕರಣಾದಿ ಕ್ಷೀಣಕಷಾಯನ ಪ್ರಥಮಭಾಗದವರಿಗೂ ಕ್ಷಪಕಶ್ರೇಣಿಯ ನಾಲ್ವರುಂ ಧ್ಯಾನಿಸುವರು. ಆದರ ಫಲಂ ಏಕವಿಂಶತಿ (೨೧) ಚಾರಿತ್ರಮೋಹನೀಯಾದಿ ಕರ್ಮಕ್ಷಪಣಂ ಮೋಕ್ಷಾಗುವದು. ಅದು ಶುಕ್ಲತರಲೇಶ್ಯೆಯನ್ನುಳ್ಳದ್ದು. ಶ್ರೇಣಿದ್ವಯಾಪೇಕ್ಷೆಯಿಂದ ಸ್ವರ್ಗಾಪವರ್ಗಗತಿಗೆ ಕಾರಣವಾಗುವದು. ಮತ್ತಂ ಪೂರ್ವಶ್ರುತಜ್ಞಾನಿಗಳುಂ ಯಥಾಖ್ಯಾತ ಶುದ್ಧಸಂಯಮೋಪೇತರಾದ ಕ್ಷೀಣಕಷಾಯಮನುಳಿದ ಭಾಗದಲ್ಲಿ ಏಕತ್ವದಿಂ ನಿರ್ವಿಕಾರ ಸಹಜಸುಖಮಯವಾದ ನಿಜಶುದ್ಧ ಚಿದಾನಂದಸ್ವರೂಪವೊಂದನ್ನೇ ಭಾವಿಸುತ್ತಿರುವ ನಿರುಪಾಧಿ ಸ್ವಸಂವೇದನ ಜ್ಞಾನದಿಂದವಲಂಬಿಸಿ ಶ್ರುತಕ್ಕರ್ಥವ್ಯಂಜನ ಯೋಗಂಗಳ ಪರಾವರ್ತನವಿಲ್ಲದಿರುವದು ಏಕತ್ವವಿತರ್ಕವಿಚಾರವೆಂಬೆರಡನೆಯ ಶುಕ್ಲಧ್ಯಾನವು. ಅದರಿಂದ ಅಸಂಖ್ಯಾತ ಗುಣಶ್ರೇಣಿ ಕರ್ಮನಿರ್ಜರೆಯಾಗುವದು. ದ್ರವ್ಯ ಭಾವ ಸ್ವರೂಪ

ವಾದ ಜ್ಞಾನದರ್ಶನಾವರಣೀಯಾಂತರಾಯವೆಂಬ ಘಾತಿತ್ರಯಂಗಳುಂ ಅಸಾತಾವೇದನೀಯಂ ಮೊದಲಾದ ಅಪ್ರಶಸ್ತ ಘಾತಿಕರ್ಮಗಳುಂ ನಾಶವಾಗಲು ಕೂಡಲೇ ನವಕ್ಷಾಯಿಕಲಬ್ಧಿಗಳೆಂಬ ಕಿರಣಂಗಳಿಂದ ಬೆಳಗುತ್ತಿರುವ ಸಯೋಗಿಕೇವಲಿ ಜಿನಭಾಸ್ಕರಂ ತೀರ್ಥಕರರಾಗುವನು. ಇತರ ಕೇವಲಿಗಳಾಗುವರು. ಕೃತಕೃತ್ಯಂ, ಸಿದ್ಧಸಾಧ್ಯಂ, ಬುದ್ಧಬೋಧ್ಯಂ, ಅತ್ಯಂತಾಪುನರ್ಭವಲಕ್ಷ್ಮೀಸಂಗತಸಚಿಂತ್ಯ ಜ್ಞಾನವೈರಾಗ್ಯೈಶ್ವರ್ಯಮಾರ್ಹಂತ್ಯಮನೊಡೆಯಂ ತ್ರಿಲೋಕೇಶ್ವರನಾಗಿಯುಂ ಅಭ್ಯರ್ಚನೀಯನುಂ ಅಭಿವಂದ್ಯನುಮಾಗಿ ಧರ್ಮಾಮೃತಸಾರದಿಂದ ಭವ್ಯಸಸ್ಯಸಂಪತ್ತಿಯನ್ನು ಮಾಡುತ್ತಂ ಉತ್ಕೃಷ್ಟದಿಂದಿಶೋನಪೂರ್ವಕೋಟಿಕಾಲಂ ವಿಹಾರಿಸುವರು. ನವಕೇವಲಲಬ್ಧಿಗಳ್ಯಾವುವೆಂದರೆ—

ಶ್ಲೋಕ॥ ಅನಂತಜ್ಞಾನದೃಗ್ವೀರ್ಯವಿರತಿ ಶುದ್ಧದರ್ಶನಂ ॥
ದಾನಲಾಭೌ ಚ ಭೋಗೋಪಭೋಗಾವಾನಂತ್ಯಮಾಶ್ರಿತಾಃ ॥ ೪೯ ॥

ತಾಃ—ಅನಂತಜ್ಞಾನ, ದರ್ಶನ, ವೀರ್ಯ, ಚಾರಿತ್ರ, ದಾನ, ಲಾಭ, ಭೋಗ, ಉಪಭೋಗ, ಕ್ಷಾಯಿಕಸಮ್ಯಕ್ತ್ವ ಮೊದಲಾದ ನವಕೇವಲಲಬ್ಧಿಯನ್ನು ಹೊಂದುವರು; ಅಂದರೆ ಅರ್ಹತ್ಪರಮೇಶ್ವರರಾಗುವರು. ಬಳಿಕ್ಕಂ ವಿಹರಣಾದಿ ಕ್ರಿಯೆಯನ್ನು ಅಂತರ್ಮುಹೂರ್ತಕ್ಕೆ ಶೇಷಾಯುಷ್ಯದಲ್ಲಿ ಸಂಸಾರಸ್ಥಿತಿಯು ಸಮಾನವಾದರೆ ಬಾದರಕಾಯಯೋಗದಿಂ ಬಾದರಮನೋವಚನೋಚ್ಛ್ವಾಸ ಬಾದರಕಾಯಯೋಗವನ್ನು ಸೂಕ್ಷ್ಮಮಾಡಿ ಸೂಕ್ಷ್ಮಮನೋವಚನೋಚ್ಛ್ವಾಸವನ್ನೂ ನಾಶಮಾಡಿ ಸೂಕ್ಷ್ಮಕಾಯಯೋಗವಾಗುವದು, ಅದೇ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ತೃತೀಯ ಶುಕ್ಲಧ್ಯಾನವಾಗುವದು. ಮತ್ತಂ ಘೋರೋರ್ವರ ಆಯುಷ್ಯಸ್ಥಿತಿಯಂ ನೋಡಿ ವೇದನೀಯ ನಾಮ ಗೋತ್ರಂಗಳ ಸ್ಥಿತಿಗಳ್ಮಿಕ್ಕಿರ್ದುವಾದಡವರು ಆತಪಯೋಗಾತಿಶಯನೊಡೆಯರು ಕರ್ಮಾರಾತಿಸಾತನ ಸಮರ್ಥಸಾಮಾಯಿಕ ಖಡ್ಗ ಸಹಾಯಮಿಶಿಷ್ಟರುಂ ಮಹಾಸಂವರಸಂವೃತ್ತರುಂ ಲಘುಕರ್ಮಪರಿಪಾತನುಮಾಗಿ ಶೇಷ ಕರ್ಮರೇಣುಪರಿಪಾತನ ಶಕ್ತಿ ಸ್ವಭಾವದಿಂ ನಾಲ್ಕು ಸಮಯದಿಂ ದಂಡ, ಕವಾಟ, ಪ್ರತರ, ಲೋಕಪೂರಣಂಗಳಿಂದ ಆತ್ಮಪ್ರದೇಶ ವಿಸರ್ಪಣವಾದರೆ ಅನಿತೇಸಮಯಂಗಳಿಂ ಪ್ರದೇಶವಿಸರ್ಪಣಮನುಪಸಂಹರಿಸುವರು. ಎಂತೆಂದೊಡೆ—ಪ್ರಥಮ ಸಮಯದಲ್ಲಿ ನಿಂತಿದ್ದರೆ, ಶರೀರಬಾಹಲ್ಯದಿಂ ಕುಳಿತಿದ್ದರೆ ಶರೀರತ್ರಿಗುಣಬಾಹಲ್ಯದಿಂ ಲೋಕದತಳದಿಂದ್ಧಿಡಿದು ಏಳು ಮೇಲೇಳುರಜ್ಜೋತ್ಸೇದದೊಳು ಆತ್ಮಪ್ರದೇಶಂಗಳಂ ನಿಮಿರ್ಚಿ ದಂಡಾಕಾರಮಂ ಕೈಕೊಂಡಾಗಲು ದಂಡಸಮುದ್ಘಾತವೆಂಬುವದಾಗುವದು. ದ್ವಿತೀಯ ಸಮಯದಲ್ಲಿ ಪೂರ್ವಾದಿಮುಖದಿಂದಿದ್ದರೆ ದಕ್ಷಿಣೋತ್ತರದೊಳು, ಉತ್ತರಾಭಿಮುಖವಾಗಿರ್ದೊಡೆ ಪೂರ್ವಾಪರದೊಳು ಪೂರ್ವಸೂಚಿತ ಬಾಹಲ್ಯಾಯಾಮಸಹಿತವಾಗಿ ಹಬ್ಬಿದ ಪ್ರದೇಶದಿಂದ ಅಮಳ್ವಡಿಯಾಕಾರವನ್ನು ಧರಿಸುವದು ಕವಾಟಸಮುದ್ಘಾತವೆಂಬುವದು. ತೃತೀಯ ಸಮಯದಲ್ಲಿ ವಾತವಲಯತ್ರಯಂ ಪೊರಗಾಗಿ ಉಳಿದ ಲೋಕಾಕಾಶವೆಲ್ಲವನ್ನೂ ತುಂಬಿಸುವದು ಪ್ರತರವಾಗುವದು. ನಾಲ್ಕನೆಯ ಸಮಯದಲ್ಲಿ ಲೋಕಮೆನಿತುಂಟು ಅನಿತುಮನೆಯ್ದೆ ವ್ಯಾಪಿಸುವುದುಂ ಲೋಕಪೂರಣ ಸಮುದ್ಘಾತವಾಗುವದು. ಇವರೊಳು ಒಂದೊಂದು ಸಮಯದಲ್ಲಿ ಶುಭಪ್ರಕೃತಿಗಳ ಅನುಭಾಗಮನಂತ ಗುಣ

ಹೀನವೊಂ, ಒಂದೊಂದೇ ಸ್ಥಿತಿಕಾಂಡಕ ಘಾತವಾಗುವದು. ಅಲ್ಲಿಂದ ಮೇಲೆ ಅಂತರ್ಮುಹೂರ್ತಕ್ಕೊಂದೇ ಸ್ಥಿತಿಕಾಂಡಕ ಘಾತವಾಗುವದು. ಲೋಕಪೂರಣದೊಳು ಆಯುಸ್ಥಿತಿಯೊಳು ಸಂಸಾರಸ್ಥಿತಿ ಸಮಾನಮಲ್ಲಿಯಾಯುಸ್ಥಿತಿಯಂ ನೋಡೆ ಶೇಷಕರ್ಮಸ್ಥಿತಿ ಸಂಖ್ಯಾತ ಗುಣಮುಂ ಯೋಗಕ್ಕೊಂದವರ್ಗಣೆಯುಮಕ್ಕುಂ ಉಳಿದೈದನೆಯ ಸಮಯದಲ್ಲಿ ವಾತವಾಲಯದಿರೆ ಜೀವಪ್ರದೇಶಮನುಪಸಂಹರಿಸಿ ಪ್ರತರೆಗೆ ಬರುವದು. ಆರನೆಯ ಸಮಯದಲ್ಲಿ ಪ್ರತರೆಯನುಡುಗಿ ಕವಾಟ ಸಮುದ್ಘಾತವಾಗುವದು. ಏಳನೆಯ ಸಮಯದಲ್ಲಿ ಕವಾಟಮನುಡುಗಿ ದಂಡ ಸಮುದ್ಘಾತವಾಗುವದು. ಎಂಟನೆಯ ಸಮಯದಲ್ಲಿ ದಂಡಮನುಪಸಂಹರಿಸಿ ಜೀವಪ್ರದೇಶಂ ನಿಜಶರೀರಪ್ರಮಾಣಕ್ಕೆ ಬರುವದು. ಇಂತೀ ಸಮುದ್ಘಾತಂಗಳಂ ಸಯೋಗಿಕೇವಲಿ ಗುಣಸ್ಥಾನದೋಳ್ಮಾಡಿ ನಾಲ್ಕು ಅಘಾತಿಕರ್ಮಗಳಿಗೂ ಸ್ಥಿತಿಸಮಾನವಾಗುವದು. ಅಲ್ಲಿಂದ ಬಳಿಕ ಯೋಗ ನಿರೋಧ ಮಾಡಲಿಕ್ಕೆ ಯೋಚಿಸಿ ಮುನ್ನಂ ಪ್ರತ್ಯೇಕಂ ಅಂತರ್ಮುಹೂರ್ತಕಾಲದಿಂ ಪೂರ್ವದಹಾಗೆ ಬಾದರಮನೋವಚನೋಚ್ಛ್ವಾಸಂಗಳನ್ನು ಬಾದರಕಾಯಯೋಗದಿಂ ನಿರೋಧಿಸಿದ ಬಳಿಕಂ ಬಾದರಕಾಯಯೋಗ ಸೂಕ್ಷ್ಮ ಮನೋವಚನೋಚ್ಛ್ವಾಸಮೆಂದಿವಂ ಸೂಕ್ಷ್ಮಕಾಯ ಯೋಗದಿಂ ಕ್ರಮದಿಂ ನಿರೋಧಿಸಿ ಸೂಕ್ಷ್ಮಕಾಯಯೋಗದಿಂ ಸೂಕ್ಷ್ಮಕ್ರಿಯಾ ಪ್ರತಿಪಾತಿ ಯೆಂಬ ಮೂರನೇ ಶುಕ್ಲಧ್ಯಾನವಾಗುವದು. ಅದು ಉಪಚಾರ ಧ್ಯಾನಮದೆಂತೆಂದೊಡೆ—

ಜ್ಞಾನಲಕ್ಷಣದಿಂ ಪಿಂಗಿತಪ್ಪುದರಿಂದಂ ಅಂತಃಧ್ಯಾನದ ಫಲದಿಂದ ಸೂಕ್ಷ್ಮಕಾಯಯೋಗವಾಗುವದು. ಅವುಗಳನ್ನು ಕೆಡಿಸಿದನಂತರಸಮಯದೊಳಂ ಅಯೋಗಿಕೇವಲಿ ಗುಣಸ್ಥಾನವಾಗುವದು. ಪಂಚಹ್ರಸ್ವಾಕ್ಷರೋಚ್ಚಾರಣ ( ಅ, ಇ, ಉ, ಋ, ಌ ) ಪ್ರಮಾಣಕಾಲವಾದ ತದ್ಗುಣಸ್ಥಾನದಲ್ಲಿ ನಿಶ್ಶೇಷ ನಿರಾಸ್ರವದ್ವಾರನುಂ ಸಂಪೂರ್ಣಸಮಸ್ತ ಶೀಲಗುಣನುಮಾಗಿ ತನ್ನ ದ್ವಿಚರಮಸಮಯದಲ್ಲಿ ಹದಿಮೂರು ಪ್ರಕೃತಿಗಳನ್ನು ನಿರವಶೇಷವಾಗಿ ಕೆಡಿಸುವನು. ಈ ರೀತಿಯಾಗಿ ಎಂಭತ್ತೈದು ( ೮೫ ) ಪ್ರಕೃತಿಗಳು ಅಯೋಗಿಕೇವಲಿಗುಣಸ್ಥಾನದಲ್ಲಿ ವ್ಯುಪರತ ಕ್ರಿಯಾನಿವೃತ್ತಿಯೆಂಬ ನಾಲ್ಕನೆಯ ಶುಕ್ಲಧ್ಯಾನದಿಂದ ನಾಶವಾಗುವವು. ಅದು ಉಪಚಾರ ಧ್ಯಾನವೆಂದು ಹೇಳಲ್ಪಡುವದು. ಅದರಿಂದ ಸಂಸಾರದುಃಖವೆಲ್ಲವನ್ನೂ ನಾಶಮಾಡಿ ಧ್ಯಾನಾನಲ ನಿರ್ದಗ್ಧಂ ಸರ್ವಮಲಕಳಂಕೇಂಧನಂ ನಿರಸ್ತ ಕಿಟ್ಟ ಪಾಷಾಣ ಜಾತ್ಯಂಧಕನಂ ಕಂಡಂತೆ ಲಬ್ಧಾತ್ಮಭಾವನಾಗಿ ತದನಂತರಂ ಲೋಕಾಗ್ರಕ್ಕೆ ಸಲ್ಲುವನು. ಇದು ತನಗರಿಯಲ್ಪಡುವ ಅಭ್ಯಂತರ ಶುಕ್ಲಧ್ಯಾನಂಗಳಿಗೆ ಲಕ್ಷಣವು. ಗಾತ್ರ ನೇತ್ರ ಪರಿಸ್ಪಂಧ ರಹಿತಂ ಜಂಭ ಜೃಂಭೋದ್ಗಾರಾದಿ ವರ್ಜಿತಂ ಅನಭಿವ್ಯಕ್ತ ಪ್ರಾಣಾಪಾನ ಪ್ರಚಾರಿತ್ವ ಎಂಬಿವುಗಳು ಪೆರರ್ಗರಿಯಲು ಬಪ್ಪುದರಿಂ ಶುಕ್ಲಧ್ಯಾನದ ಬಾಹ್ಯಲಕ್ಷಣವೆಂಬುವದಾಗುವದು. ಈ ರೀತಿಯಾಗಿ ಹೇಳಿದ ಧರ್ಮ, ಶುಕ್ಲ, ಧ್ಯಾನಂಗಳಿಗೆ ಮುಖ್ಯವೃತ್ತಿಯಿಂದ ಸ್ವಶುದ್ಧಾತ್ಮದ್ರವ್ಯವೇ ಧ್ಯೇಯವಾಗುವದು. ಶೇಷವಿಕಲ್ಪಂ ಗೌಣವೆಂದರಿಯುವದು. ಸಿದ್ಧಾಂತಾಭಿಪ್ರಾಯದಿಂದೆರಡಕ್ಕಂ ವಿಷಯಭೇದಮಿಲ್ಲಾಗಿಯುಂ ಧರ್ಮಧ್ಯಾನಂ ಸಕಷಾಯ ಪರಿಣಾಮಂಗೊಂಡು ವಸ್ತುವಿನೊಳು ಬೀದಿಯಲ್ಲಿರುವ ಸೊಡರಿನ ಹಾಗೆ ಬಹಳ ಕಾಲವಿರುವದಿಲ್ಲಾ, ಶುಕ್ಲಧ್ಯಾನಂ ವೀತರಾಗ ಪರಿಣಾಮಮನೊಡೆಯಂಗೊಂಡು ವಸ್ತುವಿನೊಳು ಧರ್ಮಧ್ಯಾನದಿರವಿನಕಾಲವನ್ನು ನೋಡಲಸಂಖ್ಯಾತ

ಗುಣಕಾಲ ಮಾಣಿಕ್ಯದ ಬೆಳಕಿನ ಹಾಗೆ ಪ್ರಕಾಶವಾಗಿರುವದು. ಅದರಿಂದ ಇವುಗಳೆರಡಕ್ಕೂ ಇದೇ ಭೇದವಾಗುವದು.

ಷಡ್ಗುಣಸ್ಥಾನ ಭೂಮಿಕವಾದ ಆರ್ತಧ್ಯಾನವೆಂ, ಪಂಚಗುಣಸ್ಥಾನ ಭೂಮಿಕವಾದ ರೌದ್ರಧ್ಯಾನವೆಂಬೀ ಎರಡು ಧ್ಯಾನಗಳು ಸರ್ವಪ್ರಕಾರದಿಂದಲೂ ಹೇಯಂಗಳು. ಅಸಂಯತ ಸಮ್ಯಗ್ದೃಷ್ಟ್ಯಾದಿ ಚತುರ್ಗುಣಸ್ಥಾನ ಭೂಮಿಕವಾದ ಧರ್ಮಧ್ಯಾನವು ಕಾರಣರೂಪದಿಂದ ಉಪಾದೇಯವಾಗುವದು. ಅಪೂರ್ವಕರಣಾದ್ಯಯೋಗಿಕೇವಲಿ ಪರ್ಯಂತಂ ವರ್ತಿಸುವ ಶುಕ್ಲಧ್ಯಾನವು ಸಾಕ್ಷಾದುಪಾದೇಯವಾಗುವದು.

|| ಇಂತೀ ಶುಕ್ಲಧ್ಯಾನಂ ಸಂಪೂರ್ಣಂ ||

---

ಕಂದ || ಅಭ್ಯಂತರ ಜಾತಶ್ವದಿ- ।
ನಭ್ಯಂತರಕರ್ಮದೋಷಫಲಮಳಿವುದರಿಂ-||
ದಭ್ಯಂತರ ತಪಮೆಂದು ನ- ।
ಯಾಭ್ಯಾಸರ್ಪೇಳ್ವರೊಳಗಣಾರುಂ ತಪಮುಂ || ೨೧೯ ||

ಈ ರೀತಿಯಾಗಿ ಹೇಳಿದ ದ್ವಾದಶವಿಧ ತಪಸ್ಸಾಮರ್ಥ್ಯದಿಂದ ಹುಟ್ಟುವ ಋದ್ಧಿಗಳ್ಯಾವವು ಗಳೆಂದರೆ—

## ಸೂತ್ರಂ || ಅಷ್ಟೌ ಋದ್ಧಯಃ || ೫೮ ||

ತಾಃ—೧ ಬುದ್ಧಿಋದ್ಧಿಯುಂ, ೨ ಕ್ರಿಯಾಋದ್ಧಿಯುಂ, ೩ ವಿಕ್ರಿಯಾಋದ್ಧಿಯುಂ, ೪ ತಪೋಋದ್ಧಿಯುಂ, ೫ ಬಲೋಋದ್ಧಿಯುಂ, ೬ ಔಷಧಋದ್ಧಿಯುಂ, ೭ ರಸಋದ್ಧಿಯುಂ ೮ ಅಕ್ಷೀಣಋದ್ಧಿಯುಂ ಎಂಬದಾಗಿ ಎಂಟು ಭೇದವಾಗುವದು.

## ಸೂತ್ರಂ || ಬುದ್ಧಿರಷ್ಟಾದಶ ಭೇದಾಃ || ೫೯ ||

ತಾ:—ಬುದ್ಧಿಋದ್ಧಿಯು ಹದಿನೆಂಟು ಭೇದವಾಗುವದು. ಹ್ಯಾಗೆಂದರೆ—೧ ಕೇವಲಜ್ಞಾನಂ, ೨ ಅವಧಿಜ್ಞಾನಂ, ೩ ಮನಃಪರ್ಯಾಯಜ್ಞಾನಂ, ೪ ಬೀಜಬುದ್ಧಿಯುಂ, ೫ ಕೋಷ್ಠಬುದ್ಧಿಯುಂ, ೬ ಪದಾನುಸಾರಿತ್ವಂ, ೭ ಸಂಭಿನ್ನಶ್ರೋತ್ರುತ್ವಂ, ೮ ದೂರಾಸ್ವಾದನಂ, ೯ ದೂರದರ್ಶನಂ, ೧೦ ದೂರಶ್ರವಣಂ, ೧೧ ದೂರಘ್ರಾಣಮುಂ ೧೨ ದಶಪೂರ್ವತ್ವಂ, ೧೩ ಚತುರ್ದಶಪೂರ್ವತ್ವಂ, ೧೪ ಅಷ್ಟಾಂಗಮಹಾನಿಮಿತ್ತಜ್ಞಾನತ್ವಮುಂ, ೧೫ ಪ್ರಜ್ಞಾಶ್ರವಣತ್ವಮುಂ ೧೬ ಪ್ರತ್ಯೇಕಬುದ್ಧಿತ್ವಮುಂ, ೧೭ ದೂರಸ್ಪರ್ಶನತ್ವಮುಂ, ೧೮ ವಾದಿತ್ವಮುಂ ಎಂದಿಂತು ಬುದ್ಧಿಋದ್ಧಿಯು ಹದಿನೆಂಟು ಭೇದವಾಗುವದು.

೧ ಸಮಸ್ತವಸ್ತುಗಳನ್ನೂ ಯುಗಪತ್ ಅರಿಯುವದು ಕೇವಲಜ್ಞಾನವು. ೨ ಪುದ್ಗಲಮಂ ಮೇರೆಮಾಡಿ ತಿಳಿಯುವದು ಅವಧಿಜ್ಞಾನವು. ೩ ಅನ್ಯರ ಮನಸ್ಸಿನಲ್ಲಿರುವ ಅರ್ಥವನ್ನು ತಿಳಿಯುವದು ಮನಃಪರ್ಯಾಯವು. ೪ ಏಕಬೀಜದಿಂದ ಅನೇಕಾರ್ಥವನ್ನು ತಿಳಿಯುವದು ಬೀಜಬುದ್ಧಿಯು. ೫ ಕೋಠಾರದ ಮನೆಯಲ್ಲಿದ್ದ ಫಲತೆರದ ಧಾನ್ಯಂಗಳಲ್ಲಿ ಕೇಳಿದದ್ದನ್ನು ಕೊಡುವ ಹಾಗೆ ಪೆರರುಪದೇಶದಿಂ ಫಲವುಂ ಕಲಿತು ಬೆಸಗೊಂಡದ್ದನ್ನೇ ಹೇಳುವದು ಕೋಷ್ಠಬುದ್ಧಿಯು.

೬ ಕಲ್ತುದಂ ಕಲಿತಂತೆ ಹೇಳುವ ಪ್ರತಿಸಾರಿಯುಂ ಕಲ್ತುದರ ಮುಂದಣರ್ಥಮಂ ಅನುಮಾನಿಸಿ ಹೇಳುವ ಅನುಸಾರಿಯುಂ. ಕಲ್ತಪದದ ಮುಂದಣಹಿಂದಣ ಅರ್ಥಮಂ ಅನುಮಾನಿಸಿ ಹೇಳುವ ಭಯಾನುಸಾರಿಯುಂ. ಎಂದಿಂತು ಮೂರು ಭೇದವನ್ನುಳ್ಳದ್ದು ಪದಾನುಸಾರಿತ್ವವೆಂಬುವದು. ೭ ಹನ್ನೆರಡು ಯೋಜನ ನೀಳಂ ಒಂಭತ್ತುಯೋಜನದಗಲವನ್ನುಳ್ಳ ಚಕ್ರವರ್ತಿಯ ಕಟಕದೊಳಿರುವ ಎಲ್ಲಾ ಜೀವಂಗಳ ಸಮಸ್ತ ಭಾಷೆಗಳನ್ನೂ ಒಂದೇ ಸಾರಿ ಕೇಳಿ ಅರಿಯುವದು ಸಂಭಿನ್ನಶ್ರೋತ್ರುತ್ವವು. ೮ ಪಂಚವಿಧ ರಸದೊಳಾವುದೊಂದು ರಸಂ ದೂರದಿಂ ಬಂದದನ್ನು ಇಂತುಟೆಂದರಿಯುವದು ದೂರಾಸ್ವಾದನವು. ೯ ಅಷ್ಟಸ್ಪರ್ಶನಂಗಳೊಳು ಆವುದೊಂದು ದೂರದಿಂ ಬಂದುದನಿಂತಾದ್ದೆಂದರಿಯುವದು ದೂರಸ್ಪರ್ಶನವು. ೧೦ ಪಂಚವರ್ಣಂಗಳೊಳು ಯಾವುದಾದರೊಂದು ದೂರದಿಂ ಬರುವದನ್ನು ಇಂಥಾ ವರ್ಣವೆಂದು ತಿಳಿಯುವದು ದೂರದರ್ಶನವು. ೧೧ ದೂರದಿಂ ಬಂದ ಗಂಧವನ್ನು ಇಂಥಾದ್ದೆಂದು ತಿಳಿಯುವದು ದೂರಘ್ರಾಣವು. ೧೨ ದೂರದಲ್ಲಿ ಉಂಟಾದ ಶಬ್ದವನ್ನು ಕೇಳಿ ಇಂಥಾದ್ದೆಂದು ಅರಿಯುವದು ದೂರಶಬ್ದವೆಂಬುವದು. ೧೩ ರೋಹಿಣಿ ಮೊದಲಾದೈನೂರು ( ೫೦೦ ) ಮಹಾವಿದ್ಯಾದೇವತೆಗಳುಂ ಅಂಗುಷ್ಠಪ್ರಸೇನೆ ಮೊದಲಾದ ಏಳುನೂರು ( ೭೦೦ ) ಕ್ಷುಲ್ಲಕ ವಿದ್ಯಾದೇವತೆಗಳುಂ ಬೆಸಗೆಯ್ವುತ್ತಿರಲುಂ ಅಚಲಿತ ಚಾರಿತ್ರಮನುಳ್ಳನು ದಶಪೂರ್ವದರಿತಂ ದಶಪೂರ್ವತ್ವವುಂ. ೧೪ ಹದಿನಾಲ್ಕು ಪೂರ್ವಮಂ ಬಲ್ಲುದು ಚತುರ್ದಶಪೂರ್ವತ್ವವು. ೧೫ ಅಂತರಿಕ್ಷನಿಮಿತ್ಯ, ಭೌಮನಿಮಿತ್ಯ, ಅಂಗನಿಮಿತ್ಯ, ಸ್ವರನಿಮಿತ್ಯ, ವ್ಯಂಜನನಿಮಿತ್ಯ, ಲಕ್ಷಣನಿಮಿತ್ಯ, ಛಿನ್ನನಿಮಿತ್ಯ, ಸ್ವಪ್ನನಿಮಿತ್ಯ ಎಂದಿವು ಅಷ್ಟಾಂಗನಿಮಿತ್ಯಂಗಳು ಎಂಬುದುಂ, ೧ ಚಂದ್ರಾದಿತ್ಯ ಗ್ರಹನಕ್ಷತ್ರಂಗಳಂ ನೋಡಿ ನಯಾನಯಂಗಳನ್ನು ಹೇಳುವದು ಅಂತರಿಕ್ಷನಿಮಿತ್ಯವು. ೨ ಭೂಮಿಯಕುಳಿತೇವರಂ ನೋಡಿ ನಯಾನಯಂಗಳನ್ನು ಹೇಳುವದು ಭೌಮನಿಮಿತ್ತವು. ೩ ತಿರ್ಯಂಚರುಂ ಮನುಷ್ಯರು ಎಂದಿವರುಗಳ ರಸರುಧಿರ ವರ್ಣಂಗಳನ್ನು ನೋಡಿ ಅಂಗಪ್ರತ್ಯಂಗಗಳಂ ಮುಟ್ಟ ನೋಡಿ ಶುಭಾಶುಭಂಗಳನ್ನು ಹೇಳುವದು ಅಂಗನಿಮಿತ್ತವು. ೪ ಸ್ವರವನ್ನು ಕೇಳಿ ಫಲವನ್ನು ಹೇಳುವದು ಸ್ವರನಿಮಿತ್ತವು. ೫ ಮೈಯ್ಯ ಕಾರೆಳ್ಳು ಮೊದಲಾದವುಗಳನ್ನು ನೋಡಿ ಫಲಾಫಲವನ್ನು ಹೇಳುವದು ವ್ಯಂಜನನಿಮಿತ್ಯವು. ೬ ಶರೀರದ ಹಲ, ಕುಲಿಶ, ದ್ವೀಪ, ಸಮುದ್ರ, ಭವನ, ವಿಮಾನ, ಬಾಣ, ಪುರ, ಗೋಪುರ, ಇಂದ್ರಕೇತು, ಶಂಖ, ಪತಾಕೆ, ಮುಸಲ, ಹಯ, ರವಿ, ಶಶಿ, ಸ್ವಸ್ತಿಕ, ದಾರು, ಕೂರ್ಮ, ಅಂಕುಶ, ಸಿಂಹ, ಗಜ, ವೃಷಭ, ಮತ್ಸ್ಯ, ಛತ್ರ, ಶಯ್ಯೆ, ಆಸನ, ವರ್ಧಮಾನ, ಶ್ರೀವತ್ಸ, ಚಕ್ರ, ಅನಲ, ಕುಂಭ ಎಂಬ ದ್ವಾತ್ರಿಂಶತ್ಶುಭಲಕ್ಷಣ ( ೩೨ )ಗಳನ್ನು ನೋಡಿ ಶುಭಾಶುಭಗಳನ್ನು ಹೇಳುವದು ಲಕ್ಷಣನಿಮಿತ್ಯವು. ೭ ಶಸ್ತ್ರ, ಕಂಟಕ, ಮೂಷಕಂ ಮೊದಲಾದವುಗಳಿಂದ ಮಾಡಲ್ಪಟ್ಟ ಛೇದನಮಂ ಕಂಡು ನೋಡಿ ನಯಾನಯಂಗಳನ್ನು ಪೇಳುವದು ಛಿನ್ನನಿಮಿತ್ಯವು. ೮ ಕನಸುಗಳಂ ಪೇಳಿ ಕೇಳ್ದು ನಯಾನಯಂಗಳನ್ನು ಹೇಳುವದು ಸ್ವಪ್ನನಿಮಿತ್ಯವು. ೧೬ ದ್ವಾದಶಾಂಗ, ಚತುರ್ದಶ ಪೂರ್ವಂಗಳನ್ನು ನೋಡದೆ ಶ್ರವಣಮಾತ್ರದಿಂದಲೇ ಸೂಕ್ಷ್ಮಾರ್ಥವನ್ನು ಅರಿಯುವದು ಪ್ರಜ್ಞಾಶ್ರವಣತ್ವವು. ೧೭ ಪರೋಪದೇಶಮಿಲ್ಲದೆಯುಂ ತನ್ನ ಸಂಯಮೋತ್ಕರ್ಷದಿಂ ಸಕಲವನ್ನೂ ತಿಳಿಯುವದು ಪ್ರತ್ಯೇಕ ಬುದ್ಧಿತ್ವವು. ೧೮ ದೇವೇಂದ್ರಾದಿಗಳಂ ಹತಪ್ರಭಂ ಮಾಡುವ ಪ್ರತಿಭೆಯನ್ನುಳ್ಳದು ವಾದಿತ್ವವೆಂಬುವದು. ಇಂತಿನಿತುಂ ಬುದ್ಧಿಋದ್ಧಿಯ ಭೇದಗಳಾಗುವವು.

---

## ಸೂತ್ರಂ ॥ ಕ್ರಿಯಾಋದ್ಧಿರ್ದ್ವಿವಿಧಾಃ ॥ ೬೦ ॥

ತಾ:—ಚಾರಣತ್ವಂ, ಆಕಾಶಗಾಮಿತ್ವಮೆಂದು ಕ್ರಿಯಾಋದ್ಧಿ ಎರಡುವಿಧವು. ಅದು ಹ್ಯಾಗಂದರೆ--ಜಲಚಾರಣತ್ವಂ, ಜಂಘಾಚಾರಣತ್ವಂ, ತಂತುಚಾರಣತ್ವಂ, ಪತ್ರಚಾರಣತ್ವಂ, ಫಲಚಾರಣತ್ವಂ, ಪುಷ್ಪಚಾರಣತ್ವಂ ಮೊದಲಾದ ಅನೇಕ ಭೇದಗಳನ್ನುಳ್ಳದ್ದು ಚಾರಣತ್ವವೆಂಬುವದು ॥ ೧ ॥ ಕುಳ್ಳಿರ್ದುಂ ನಿಂದಿರ್ದು ಪದವಿನ್ಯಾಸದಿಂ ಪದವಿನ್ಯಾಸಮಿಲ್ಲದೆಯುಂ ಆಕಾಶದಲ್ಲಿ ಸಂಚರಿಸುವದು ಆಕಾಶಗಾಮಿತ್ವವೆಂಬುವದು ॥ ೨ ॥

---

## ಸೂತ್ರಂ ॥ ವಿಕ್ರಿಯೈಕಾದಶವಿಧಾ: ॥ ೬೧ ॥

ತಾ:—ವಿಕ್ರಿಯಾಋದ್ಧಿಯು ಹನ್ನೊಂದು ಭೇದವು. ಹ್ಯಾಗಂದರೆ--೧ ಅಣಿಮಾ, ೨ ಮಹಿಮಾ, ೩ ಲಘಿಮಾ, ೪ ಗರಿಮಾ, ೫ ಪ್ರಾಪ್ತಿ, ೬ ಪ್ರಾಕಾಮ್ಯ, ೭ ಈಶಿತ್ವ, ೮ ವಶಿತ್ವ, ೯ ಅಪ್ರತಿಘಾತ, ೧೦ ಅಂತರ್ಧಾನ, ೧೧ ಕಾಮರೂಪಿತ್ವಮೆಂದಿವು ಮೊದಲಾದ ಭೇದಗಳನ್ನುಳ್ಳದ್ದು ವಿಕ್ರಿಯಾಋದ್ಧಿಯು.

೧ ಅದರಲ್ಲಿ ಸಣ್ಣದಾದ ಶರೀರವನ್ನು ಕೈಕೊಳ್ಳುವದು ಅಣಿಮಾ, ೨ ದೊಡ್ಡದಾದ ಶರೀರವನ್ನು ಕೈಕೊಳ್ಳುವದು ಮಹಿಮಾ, ೩ ಲಘುಶರೀರವನ್ನು ಧರಿಸಿಕೊಳ್ಳುವದು ಲಘಿಮಾ, ೪ ಬಿಣ್ಪಿತಪ್ಪದೇಹಮಂ ಕೈಕೊಳ್ಳುವದು ಗರಿಮಾ, ೫ ನೆಲದಲ್ಲಿದ್ದು ಬೆರಳತುದಿಯಿಂದ ಮೇರುವನ್ನು ಮುಟ್ಟುವ ಶಕ್ತಿಯು ಪ್ರಾಪ್ತಿ, ೬ ನೀರೊಳಗೆ ಭೂಮಿಯ ಮೇಲೆ ಹೋಗುವ ಹಾಗೆ ಹೋಗುವದು ಪ್ರಾಕಾಮ್ಯ, ೭ ಮೂರು ಲೋಕಕ್ಕೆ ಪ್ರಭುವಾಗುವ ಶಕ್ತಿಯು ಈಶಿತ್ವವು, ೮ ಎಲ್ಲರನ್ನೂ ವಶಮಾಡಿಕೊಳ್ಳುವದು ವಶಿತ್ವಂ, ೯ ಬೆಟ್ಟದೊಳಗೆ ಆಕಾಶದಲ್ಲಿ ಹೋಗುವ ಹಾಗೆ ಹೋಗುವದು ಅಪ್ರತಿಘಾತವು, ೧೦ ಅದೃಶ್ಯವಾದ ರೂಪಂ ಅಂತರ್ಧಾನಂ, ೧೧ ಅನೇಕ ರೂಪುಗಳನ್ನು ಒಂದೇಸಾರಿ ಉಂಟುಮಾಡಿತೋರಿಸುವದು ಕಾಮರೂಪಿತ್ವವು.

---

## ಸೂತ್ರಂ ॥ ತಪ: ಸಪ್ತವಿಧಂ ॥ ೬೨ ॥

ತಾ:—ಉಗ್ರತಪ, ದೀಪ್ತತಪ, ತಪ್ತತಪ, ಮಹಾತಪ, ಘೋರತಪ, ಘೋರವೀರಪರಾಕ್ರಮತಪ, ಘೋರಗುಣ ಬ್ರಹ್ಮಚರ್ಯವಿಕಲ್ಪದಿಂ ತಪೋಋದ್ಧಿಗಳೇಳು ವಿಧವಾಗುವವು. ಅದರಲ್ಲಿ ಉಗ್ರೋಗ್ರತಪಮುಂ, ಅನವಸ್ಥಿತೋಗ್ರತಪಮುಮೆಂದುಗ್ರತಪವು ಇತ್ತೆರಂ ॥೨॥ ಒಂದು ಉಪವಾಸವನ್ನು ಮಾಡಿ ಪಾರಣೆಯಂ ಮಾಡಿ, ಮತ್ತೆರಡು ಉಪವಾಸವನ್ನು ಮಾಡಿ ಪಾರಣೆಯಂ ಮಾಡಿ, ಮೂರುಪವಾಸವನ್ನು ಮಾಡಿ ಪಾರಣೆಯಂ ಮಾಡಿ, ಇಂತೀ ಕ್ರಮದಿಂ ಏಕೋತ್ತರ ವೃದ್ಧಿಯಿಂದ ಯಾವಜ್ಜೀವಂ ಉಪವಾಸಮಂ ಹೆಚ್ಚಿಸುವದು ಉಗ್ರೋಗ್ರ ತಪಸ್ಸೆಂಬುವದು.

೧ ದೀಕ್ಷೋಪವಾಸವನ್ನು ಮಾಡಿ ಪಾರಣೆ ಮಾಡಿ ಏಕಾಂತರಮಂ ಮಾಡುತ್ತಿರ್ದು ಏನಾನುನಿಮಿತ್ತದಿಂ ಬಂದೊಡಾ ಉಪವಾಸಮಂ ಮಾಡಿ ಕೂಡಿ ತ್ರಿರಾತ್ರ ಮಾಡುವುದು ಇಂತೀ ಕ್ರಮದಿಂ ಯಾವಜ್ಜೀವಂ ಹೆಚ್ಚಿಸುವದು ಅನವಸ್ಥಿತೋಗ್ರತಪವೆಂಬುವದು.

೨ ಅನೇಕ ಉಪವಾಸಂಗಳಾದರೂ, ಸುರಭಿನಿಶ್ವಾಸತ್ವಂ, ಶರೀರದ ಕಾಂತಿ ಹೆಚ್ಚುವದು, ದೀಪ್ತತಪವೆಂಬುವದು.

೩ ಕಾದಕಬ್ಬಿಣದ ಮೇಲೆ ಎರೆದ ನೀರಿನ ಕಣಗಳ ಹಾಗೆ ಉಂಡಾಹಾರವು ಮಲರುಧಿರಂಗಳಾಗದೆ ತಪ್ತವಾಗುವದು, ತಪ್ತತಪವೆಂಬುವದು.

೪ ಅಣಿಮಾದ್ಯಷ್ಟಗುಣಂಗಳನುಳ್ಳದುಂ, ಶರೀರದ ಕಾಂತಿಯನ್ನುಳ್ಳದುಂ, ಸರ್ವೌಷಧಿಯನ್ನುಳ್ಳದುಂ, ಅನಂತಬಲವನ್ನುಳ್ಳದುಂ, ತ್ರಿಭುವನವ್ಯಾಪಕತ್ವಮುಳ್ಳುದು ಮಹಾತಪವೆಂಬುವದು.

೫ ವಾತಪಿತ್ತಶ್ಲೇಷ್ಮದಿಂದ ಹುಟ್ಟಿದ ಮಹಾಜ್ವರ ಮೊದಲಾದ ರೋಗಂಗಳಿದ್ದರೂ ಅನಶನಾದಿ ಬಾಹ್ಯತಪಸ್ಸುಗಳನ್ನು ಮಾಡುವದು ಘೋರತಪವೆಂಬುವದು.

೬ ಕೈಕೊಂಡ ತಪೋಯೋಗವನ್ನು ವೃದ್ಧಿಮಾಡುವದುಂ, ಮೂರುಲೋಕವನ್ನುಪಸಂಹರಿಸುವದುಂ, ಸಕಲ ಸಮುದ್ರಂಗಳಂ ಶೋಷಿಸುವದುಂ, ಜಲಾಗ್ನಿಶಿಲಾದಿಗಳಿಂದ ಮಳೆಗರೆವುದುಂ ಮೊದಲಾದ ಶಕ್ತಿಯನ್ನುಳ್ಳದ್ದು ಘೋರವೀರಪರಾಕ್ರಮತಪವೆಂಬುವದು.

೭ ಅಖಂಡಿತ ಬ್ರಹ್ಮಚರ್ಯಮುಳ್ಳುದುಂ, ದುಃಸ್ವಪ್ನವಿಲ್ಲದಿರುವುದುಂ ಮೊದಲಾದ ಗುಣಂಗಳುಳ್ಳದ್ದು ಘೋರಗುಣ ಬ್ರಹ್ಮಚರ್ಯತಪವೆಂಬುವದು.

---

## ಸೂತ್ರಂ ॥ ಬಲಸ್ತ್ರಿಧಾಃ ॥ ೬೩ ॥

ತಾಃ—ಮನ, ವಚನ, ಕಾಯಭೇದದಿಂ ಬಲಋದ್ಧಿ ಮೂರುಭೇದವಾಗುವದು ॥ ೩ ॥ ಅದು ಹ್ಯಾಗೆಂದರೆ—

೧ ದೊಡ್ಡದಾದ ಆಗಮಾರ್ಥವನ್ನು ಮನದಿಂ ಚಿಂತಿಸಿದೊಡಂ ಶ್ರಮವಿಲ್ಲದಿರುವದು ಮನೋಬಲವು. ೨ ಸಕಲಶ್ರುತಮಂ ಪಠಿವಡಿಗೆಯ್ವಲ್ಲಿ ಶ್ರಮವಿಲ್ಲದುದು ವಾಗ್ಬಲವು. ೩ ಮಾಸಿಕ, ಚಾತುರ್ಮಾಸಿಕ, ಸಾಂವತ್ಸರಿಕ ಮೊದಲಾದ ಪ್ರತಿಮಾಯೋಗದೊಳಿರ್ದೊಡಂ ಶ್ರಮವಿಲ್ಲದಿರುವದು ಕಾಯಬಲವು.

---

## ಸೂತ್ರಂ ॥ ಭೇಷಜಮಷ್ಟಧಾ ॥ ೬೪ ॥

ತಾಃ—೧ ಆಮೌಷಧಋದ್ಧಿ, ೨ ಖೇಳೌಷಧಋದ್ಧಿ, ೩ ಜಲ್ಲೌಷಧಋದ್ಧಿ, ೪ ಮಲೌಷಧಋದ್ಧಿ, ೫ ವಿಷ್ಟೌಷಧಋದ್ಧಿ, ೬ ಸರ್ವೌಷಧಋದ್ಧಿ, ೭ ಆಸ್ಯಾವಿಷಋದ್ಧಿ ದೃಷ್ಟಿವಿಷಋದ್ಧಿಭೇದದಿಂದ ಔಷಧಋದ್ಧಿಯು ಎಂಟು ಭೇದವಾಗುವದು.

೧ ಆರ್ಕೆಲಂಬರು ಮಹಾತಪೋಧನರ ಕರಚರಣಾದ್ಯವಯವಂಗಳಂ ಸ್ಪರ್ಶನಮಾಡಿದ ಕೂಡಲೇ ಮಹಾವ್ಯಾಧಿಗಳನ್ನು ಉಪಶಮಿಸುವ ಶಕ್ತಿಯನ್ನುಳ್ಳದ್ದು ಆಮೌಷಧಿಋದ್ಧಿಯುಂ, ೨ ಆರ್ಕೆಲಂಬರುಗುಳು ಮೊದಲಾದುವಂ ಪೊರ್ದಲು ವ್ಯಾಧಿಗಳು ಉಪಶಮ ಹೊಂದುವದು, ಅದು ಖೇಳೌಷಧಿಋದ್ಧಿಯು. ೩ ಆರ್ಕೆಲಂಬರ ಬೆವರಿನಿಂದ ಹುಟ್ಟಿದ ಮಲದಿಂದ ವ್ಯಾಧಿಗಳು

ಉಪಶಮಹೊಂದುವವು, ಅದು ಜಲ್ಲೌಷಧಿಯು. ೪ ಮತ್ತೆ ಕೆಲವರ ಕರ್ಣ ದನ್ತ ನಾಸಿಕ ಅಕ್ಷಿ ಮೊದಲಾದವುಗಳ ಮಲವು ಔಷಧವಾಗುವದು, ಅದು ಮಲೌಷಧಿಋದ್ಧಿಯು. ೫ ಮತ್ತೆ ಕೆಲವರ ಮಲಮೂತ್ರಾದಿಗಳು ಔಷಧಿಗಳಾಗುವವು, ಅದು ವಿಷ್ಟೌಷಧಿಋದ್ಧಿಯು. ೬ ಬೇರೆ ಕೆಲವರ ಶರೀರಸ್ಪರ್ಶದಿಂದ ಬಂದಗಾಳಿ ಬೀಸಲು ವ್ಯಾಧಿನಾಶಹೊಂದುವದು, ಅದು ಸರ್ವೌಷಧಿಋದ್ಧಿಯು. ೭ ಮತ್ತೆ ಕೆಲವರ ಮುಖಕ್ಕೆ ಬರಲು ವಿಷವು ಅಮೃತವಾಗಿ ಪರಿಣಮಿಸುವದು, ಅದು, ಆಸ್ಯಾವಿಷಋದ್ಧಿಯು, ೮ ಆರ್ಕೆಲವರ ನೋಟದಿಂದಲೇ ವಿಷ ನಿರ್ವಿಷವಾಗುವದು ಅದು ದೃಷ್ಟಿವಿಷಋದ್ಧಿಯು. ಇಂತೀ ಔಷಧಋದ್ಧಿ ( ೮ ) ಭೇದವು.

---

## ಸೂತ್ರ॥ ರಸಃಷಡ್ವಿಧಃ ॥ ೬೫ ॥

ತಾಃ—೧ ಆಸ್ಯಾವಿಷತ್ವಮುಂ, ೨ ದೃಷ್ಟಿವಿಷತ್ವಮುಂ, ೩ ಕ್ಷೀರಾಸ್ರವಿತ್ವಮುಂ, ೪ ಮಧ್ವಾಸ್ರವಿತ್ವಮುಂ, ೫ ಆಜ್ಯಾಸ್ರವಿತ್ವಮುಂ, ೬ ಅಮೃತಾಸ್ರವಿತ್ವಮುಂ ಎಂದು ರಸಋದ್ಧಿ ಆರು ಭೇದವಾಗುವದು. ಅದು ಹ್ಯಾಗೆಂದರೆ—

೧ ಯಾರು ಕೆಲವರು ತಪೋಧನರು ಯಾವನೊಬ್ಬನನ್ನು ಶಿಟ್ಟಿನಿಂದ ಸಾಯಿಯೆಂದು ಬೈದರೆ ಆಕ್ಷಣದಲ್ಲಿಯೇ ಸಾಯುವದು ಆಸ್ಯಾವಿಷತ್ವವು. ೨ ಆವನೋರ್ವನಂ ಮುನಿದು ನೋಡಿದ ತಕ್ಷಣದಲ್ಲಿಯೇ ಮರಣಹೊಂದುವನು ಅದು ದೃಷ್ಟಿವಿಷವು. ೩ ಆರ್ಕೆಲಂಬರು ಮಹಾ ತಪೋಧನರ ಪಾಣಿಪುಟದಲ್ಲಿ ನಿರಸವಾದ ಅನ್ನವನ್ನಿಕ್ಕಿದರೆ ಅದು ಕ್ಷೀರಾನ್ನವಾಗಿ ಪರಿಣಮಿಸುವದು, ಅದು ಕ್ಷೀರಾಸ್ರವಿತ್ವವೆಂಬ ಋದ್ಧಿಯು. ೪ ಮತ್ತೆ ಕೆಲವು ತಪೋಧನರ ಪಾಣಿಪುಟದಲ್ಲಿಟ್ಟ ನಿರಸವಾದ ಅನ್ನವು ಮಧುರವಾಗಿ ಪರಿಣಮಿಸುವದು, ಅದು ಮಧ್ವಾಸ್ರವಿತ್ವಋದ್ಧಿಯು. ೫ ಮತ್ತೆ ಕೆಲವು ತಪೋಧನರ ಪಾಣಿಪುಟದಲ್ಲಿರಿಸಿದ ಶುಷ್ಕವಾದನ್ನವು ತುಪ್ಪದ ಸವಿಯುಳ್ಳದ್ದಾಗುವದು ಆಜ್ಯಾಸ್ರವಿತ್ವವೆಂಬ ಋದ್ಧಿಯು. ೬ ಇನ್ನೂ ಕೆಲವು ಮಹಾತಪೋಧನರ ಪಾಣಿಪುಟದೊಳಿದ್ದಾಹಾರವು ಕೃಪೆಯಾಗಿದ್ದರೂ ಅಮೃತದ ಸವಿಯನ್ನು ಹೊಂದುವದು ಅದು ಅಮೃತಾಸ್ರವಿತ್ವವೆಂಬ ಋದ್ಧಿಯಾಗುವದು.

---

## ಸೂತ್ರ॥ ಅಕ್ಷೀಣಋದ್ಧಿರ್ದ್ವಿವಿಧಾ ॥ ೬೬ ॥

ತಾಃ—೧ ಅಕ್ಷೀಣಮಹಾಶನತ್ವಮುಂ, ೨ ಅಕ್ಷೀಣಮಹಾಲಯತ್ವಮುಂ ಎಂದು ಅಕ್ಷೀಣಋದ್ಧಿಯು ಎರಡು ಭೇದವು. ಹ್ಯಾಗೆಂದರೆ—

೧ ಆರ್ಕೆಲಂಬರು ಮಹಾ ತಪೋಧನರು ಚರಿಗೆಯನ್ನು ಮಾಡಿದ ಬಳಿಕ್ಕಂ ಚಕ್ರವರ್ತಿಯ ಕಟಕಮುಂಡೊಡಂ ಅಟ್ಟಭಾಜನದ ಆಹಾರವು ಕುಂದದಿರುವುದು ಅಕ್ಷೀಣಮಹಾಶನತ್ವವು. ೨ ಆರ್ಕೆಲಂಬರು ತಪೋಧನರು ನಾಲ್ಕು ಹಸ್ತಪ್ರಮಾಣಮಪ್ಪೋವರಿಯೊಳಿರ್ದಡೆ ಅವರ ಸಮೀಪದೊಳು ಸಮಸ್ತ ದೇವರ್ಕಳುಂ, ಮನುಷ್ಯರುಂ, ತಿರ್ಯಂಚರುಮಿರ್ದೊಡೊರೋರ್ವರಂ ಮುಟ್ಟದಿರುವದು ಅಕ್ಷೀಣಮಹಾಲಯತ್ವಮೆಂಬುವದು.

ಇಲ್ಲಿಗೆ ಪ್ರಸ್ತುತ ಗಾಹೆ—

ಬುದ್ಧಿ ತವಾದಿಯ ಅಥ್ಥಿದಿಯಂ ವಣಲದ್ದಿತಹೇವ ಓಸಹಿಯಾ ॥
ರಸಬಲ ಅಖ್ಖಿಯಾವಿಯಲದ್ದಿಓ ಸತ್ತಪಣ್ಣತ್ತಾ ॥ ೧೬ ॥

---

## ಸೂತ್ರಂ॥ ಪಂಚವಿಧಾನಿರ್ಗ್ರಂಥಾ: ॥ ೬೭ ॥

ತಾ:—ಪುಲಾಕರುಂ, ವಕುಶರುಂ, ಕುಶೀಲರುಂ, ನಿರ್ಗ್ರಂಥರುಂ, ಸ್ನಾತಕರುಮೆಂದು ನಿರ್ಗ್ರಂಥರೈದು ಭೇದವಾಗುವರು. ಅದು ಹ್ಯಾಗಂದರೆ—

೧ ಉತ್ತರಗುಣಭಾವನೆಯಿಲ್ಲದೆ ಮೂಲಗುಣಂಗಳೊಳಲ್ಲಿಯಾನುಂ ಸಂಪೂರ್ಣರಲ್ಲದ ಪುಲಾಕರುಂ, ೨ ಅಖಂಡಿತ ಬ್ರಹ್ಮಚರ್ಯವ್ರತಿಗಳಾಗಿಯುಂ, ಶರೀರೋಪಕರಣ ಸಂಸ್ಕಾರ ಯಶೋವಿಭೂತಿಗಳೊಳಾಶಕ್ತರುಂ, ಶಬಲಚಾರಿತ್ರರುಮಪ್ಪ ವಕುಶರುಂ, ೩ ಸಂಪೂರ್ಣ ಮೂಲೋತ್ತರಗುಣಂಗಳನುಳ್ಳವರಾಗಿಯುಂ ಅವಿವಿಕ್ತಪರಿಗ್ರಹರುಮೆಲ್ಲಿಯಾನುಮುತ್ತರಗುಣ ವಿನಾಶರುಮಪ್ಪ ಪ್ರತಿಸೇವನಾಕುಶೀಲರುಂ, ಉಳಿದ ಕಷಾಯಗಳನ್ನು ಗೆದ್ದು ಸಂಜ್ವಲನ ಕಷಾಯಮಾತ್ರವನ್ನುಳ್ಳ ಕಷಾಯಕುಶೀಲರುಂ ಎಂಬೀ ಎರಡು ತೆರದ ಕುಶೀಲರುಂ, ೪ ಅಂತ ರ್ಮುಹೂರ್ತದಿಂ ಮೇಲೆ ಕೇವಲಜ್ಞಾನಾದಿಗಳನೆಯ್ದಲಿರ್ದ ಕ್ಷೀಣಕಷಾಯರಪ್ಪ ನಿರ್ಗ್ರಂಥರುಂ, ೫ ಜ್ಞಾನಾವರಣಾದಿ ಘಾತಿಕರ್ಮಕ್ಷಯದಿಂದುಂಟಾದ ನವಕೇವಲಲಬ್ಧಿಯನ್ನುಳ್ಳ ಸಯೋಗಾ ಯೋಗಕೇವಲಿಗಳಾದ ಸ್ನಾತಕರುಮೆಂದೀ ಐವರುಂ ಜಘನ್ಯ ಮಧ್ಯಮೋತ್ತಮ ಉತ್ಕೃಷ್ಟ ಚಾರಿತ್ರಭೇದವನ್ನುಳ್ಳವರಾಗಿಯುಂ ನೈಗಮನಯಾಪೇಕ್ಷೆಯಿಂ ನಿರ್ಗ್ರಂಥರೆನ್ನಲ್ಪಡುವರು. ನಾನಾವರ್ಣಂಗಳಪ್ಪ ಸುವರ್ಣಂಗಳಿಗೆ ಸುವರ್ಣನಾಮದಂತೆ ಸಮ್ಯಗ್ದರ್ಶನಮುಂ ಭೂಷಾ ವೇಷಾಯುಧ ವಿರಹಿತತ್ವಮುಂ ಸರ್ವಸಾಮಾನ್ಯರಪ್ಪುದರಿಂ ನಿರ್ಗ್ರಂಥನಾಮುಮೆಲ್ಲರೊಳಂ ವರ್ತಿಸುವದು. ಮತ್ತವರಿಗೆ ವಿಶೇಷ ವ್ಯಾಖ್ಯಾನಮುಕ್ಕುಮದೆಂತೆನೆ—

ಪುಲಾಕ, ವಕುಶ, ಪ್ರತಿಸೇವನಾಕುಶೀಲರೆಂಬೀ ಮೂವರಿಗೂ ಸಾಮಾಯಿಕ, ಛೇದೋ ಪಸ್ಥಾಪನಾ ಸಂಯಮಂಗಳಾಗುವವು. ಕಷಾಯಕುಶೀಲರಿಗೆ ಸಾಮಾಯಿಕ, ಛೇದೋಪಸ್ಥಾ ಪನ, ಪರಿಹಾರವಿಶುದ್ಧಿ, ಸೂಕ್ಷ್ಮಸಾಂಪರಾಯ ಸಂಯಮಂಗಳು ನಾಲ್ಕಾಗುವವು. ನಿರ್ಗ್ರಂ ಥರ್ಗಂ ಯಥಾಖ್ಯಾತ ಶುದ್ಧಸಂಯಮವೊಂದೇ ಆಗುವದು. ಶ್ರುತದೊಳು ಪುಲಾಕರುಂ, ವಕು ಶರುಂ, ಪ್ರತಿಸೇವನಾಕುಶೀಲರುಂ, ಉತ್ಕೃಷ್ಟದಿಂದ ಅಭಿನ್ನಾಕ್ಷರವಶಪೂರ್ವಧಾರಿಗಳುಂ, ಕಷಾಯಕುಶೀಲರುಂ, ನಿರ್ಗ್ರಂಥರುಂ, ಚತುರ್ದಶಪೂರ್ವಧರರುಂ, ಜಘನ್ಯದಿಂ ಪುಲಾಕಂಗೆ ಶ್ರುತಮಾಚಾರವನ್ತು ವಕುಶ, ಕುಶೀಲ, ನಿರ್ಗ್ರಂಥರ್ಗಂ, ಶ್ರುತಮಷ್ಟಪ್ರವಚನಮಾತೃಕೆ ಗಳು. ಸ್ನಾತಕರಪಗತಶ್ರುತಕೇವಳಿಗಳು ನಡೆವ ಗುಣಂಗಳಿವಾದಡೆ ಮಗುಳೆಯವಂ ಸೇವಿಸು ವದು ಪ್ರತಿಸೇವನೆಯೆಂಬುದು. ಪುಲಾಕರ್ಗೆ ಐದು ಮೂಲಗುಣಂಗಳೊಳಂ ರಾತ್ರಿಭೋಜನ ವರ್ಜನದೊಳಮುಕ್ಕುಂ. ಉಪಕರಣ ಶರೀರಕಾಂಕ್ಷೆ ಪ್ರತಿಸೇವನೆ, ಪ್ರತಿಸೇವನಾಕುಶೀಲರ್ಗೆ ಉತ್ತರಗುಣಂಗಳೊಳಲ್ಲಿಯಾನುಮುಕ್ಕುಂ, ಉಳಿದವರಿಗೆ ಪ್ರತಿಸೇವನೆಯಿಲ್ಲ, ತೀರ್ಥದೊಳೆ ಲ್ಲರುಂ ಎಲ್ಲಾ ತೀರ್ಥಕರ ತೀರ್ಥಂಗಳೊಳಪ್ಪರು. ದ್ರವ್ಯ, ಭಾವ ವಿಕಲ್ಪದಿಂ ಲಿಂಗಮಿತ್ತೆರಂ,

ಅಲ್ಲಿ ಭಾವಲಿಂಗಮಂ ಕುರುತ್ತೆಲ್ಲಾ ನಿರ್ಗ್ರಂಥರುಂ, ಲಿಂಗಿಗಳುಂ, ದ್ರವ್ಯಲಿಂಗಮೆಂದು ಕುರುತ್ತು ವಿಕಲ್ಪಿಸಲ್ಪಡುವರು. ಲೇಶ್ಯಗಳಲ್ಲಿ ಪುಲಾಕರ್ಗೆ ಮೇಗಣ ಮೂರು ಲೇಶ್ಯೆಗಳಾಗುವವು. ವಕುಶ, ಪ್ರತಿಸೇವನಾಕುಶೀಲರ್ಗೆ ಆರು ಲೇಶ್ಯೆಗಳಾಗುವವು. ಕಷಾಯಕುಶೀಲರ್ಗೆ ಪರಿಹಾರ ವಿಶುದ್ಧಿಸಂಯತರ್ಗೆ ಶುಭಲೇಶ್ಯಾತ್ರಯಂಗಳು. ಸೂಕ್ಷ್ಮಸಾಂಪರಾಯರ್ಗಂ, ನಿರ್ಗ್ರಂಥ ಸ್ನಾತಕರ್ಗಂ ಶುಕ್ಲಲೇಶ್ಯೆಯೇ, ಅಯೋಗಿಕೇವಲಿಗಳಿಗೆ ಲೇಶ್ಯೆಯಿಲ್ಲ, ಉಪವಾದದೊಳು ಪುಲಾಕಂಗೆ ಉತ್ಕೃಷ್ಟ ಉಪವಾದಂ ಅಷ್ಟಾದಶಸಾಗರೋಪಮ ಉತ್ಕೃಷ್ಟಸ್ಥಿತಿಯನ್ನುಳ್ಳ ಸಹಸ್ರಾರಕಲ್ಪದೊಳು, ವಕುಶ, ಪ್ರತಿಸೇವನಾ ಕುಶೀಲರ್ಗಂ, ದ್ವಾವಿಂಶತಿ (೨೨) ಸಾಗರೋಪಮಸ್ಥಿತಿಯನ್ನುಳ್ಳ ಆರಣಾಚ್ಯುತ ಕಲ್ಪದೊಳು, ಕಷಾಯಕುಶೀಲರ್ಗಂ, ನಿರ್ಗ್ರಂಥರ್ಗಂ, ತ್ರಯಸ್ತ್ರಿಂಶ (೩೩) ಸಾಗರೋಪಮಸ್ಥಿತಿಯನ್ನುಳ್ಳ ಸರ್ವಾರ್ಥಸಿದ್ಧಿಯೊಳು, ಜಘನ್ಯ ಉಪವಾದಕಮೆಲ್ಲರ್ಗಂ ದ್ವಿಸಾಗರೋಪಮಸ್ಥಿತಿಯನ್ನುಳ್ಳವು. ಸೌಧರ್ಮಕಲ್ಪದೊಳು, ಸ್ನಾತಕರ್ಗೆ ನಿರ್ವಾಣಸ್ಥಾನದಲ್ಲಿ ಸಂಯಮುಸ್ಥಾನಂಗಳು ಕಷಾಯನಿಮಿತ್ಯಾಂಗ ಸಂಖ್ಯಾತಗಳಲ್ಲಿ ಸರ್ವಜಘನ್ಯ ಸಂಯಮಲಬ್ಧಿ ಸ್ಥಾನಂಗಳು ಪುಲಾಕ ಕಷಾಯಕುಶೀಲರೆಂಬವರಿಗೆ ಆಗುವವು. ಆ ಇಬ್ಬರು ಜೊತೆಯಲ್ಲಿ ಅಸಂಖ್ಯಾತಸ್ಥಾನಂಗಳ್ಗಂ ಸಂದು ಪುಲಾಕಂ ಮಾಣ್ಗುಂ. ಕಷಾಯಕುಶೀಲನಲ್ಲಿಂ ಮೇಲೆ ಅಸಂಖ್ಯಾತ ಸಮಯಸ್ಥಾನಂಗಳಿಗೋರ್ವನೇ ಸಲ್ಗುಂ. ಅಲ್ಲಿಂ ಮೇಲೆ ಕಷಾಯಕುಶೀಲ, ಪ್ರತಿಸೇವನಾಕುಶೀಲ, ವಕುಶರೆಂಬೀ ಮೂವರುವೊಡನೆ ಅಸಂಖ್ಯಾತ ಗುಣಸ್ಥಾನಂಗಳಿಗೆ ಸಂದು ಬಳಿಕ್ಕಂ ವಕುಶಂ ಮಾಣ್ಗುಂ. ಅಲ್ಲಿಂ ಮೇಲೆ ಅಸಂಖ್ಯಾತಗುಣಸ್ಥಾನಂ ಪೋಗಿ ಪ್ರತಿಸೇವನಾಕುಶೀಲಂ ಮಾಣ್ಗುಂ. ಅಲ್ಲಿಂ ಮೇಲೆ ಅಸಂಖ್ಯಾತಗುಣಸ್ಥಾನಂಗಳ್ಪೋಗಿ ಕಷಾಯಕುಶೀಲಂ ಮಾಣ್ಗುಂ. ಅಲ್ಲಿಂ ಮೇಲೆ ಅಕಷಾಯಸ್ಥಾನಂಗಳಂ ನಿರ್ಗ್ರಂಥರುಗಳು ಪೊರ್ದುಗುಂ ಆ ನಿರ್ಗ್ರಂಥನುಮಸಂಖ್ಯಾತಸ್ಥಾನಂಗಳ್ಗಂ ಸಂದು ಮಾಣ್ಗುಂ. ಅಲ್ಲಿಂ ಮೇಲೆ ಒಂದುಸ್ಥಾನಮಂ ಸ್ನಾತಕನುಂ ಸಂದು ನಿರ್ವಾಣಮನೆಯ್ದುಗುಮೆಂದಿಂತಿವರ ಸಂಯಮಲಬ್ಧಿ ನವನಂತಗುಣಂಗಳಕ್ಕುಂ.

---

## ಸೂತ್ರಂ. ॥ ಆಚಾರಕ್ಕ ॥ ೬೮ ॥

ತಾ:—ಜ್ಞಾನಾಚಾರ, ದರ್ಶನಾಚಾರ, ತಪಾಚಾರ, ವೀರ್ಯಾಚಾರ, ಚಾರಿತ್ರಾಚಾರ, ಎಂದಿವು ಪಂಚಾಚಾರವಾಗುವವು. ಹ್ಯಾಗಂದರೆ—ಕಾಲಶುದ್ಧಿಯುಂ, ವಿನಯಶುದ್ಧಿಯುಂ, ಅವಗ್ರಹಮುಂ, ಪಿರಿದಪ್ಪ ಮನ್ನಣೆಯುಂ ಪೇಳ್ವಪ್ಪಾಚಾರ್ಯಾದಿಗಳಂ ಮರಸದದುಂ, ಶಬ್ದಮುಂ, ಅರ್ಥಮುಂ, ಆ ಎರಡವುಮೆಂದಷ್ಟವಿಧ ಜ್ಞಾನಾಚಾರಮುಂ, ೧ ನಿಃಶಂಕಾದ್ಯಷ್ಟಾಂಗಮನುಳ್ಳ ದರ್ಶನಾಚಾರಂ ನಿಶ್ಶಂಕೆಯ ಸ್ವರೂಪಮೆಂತೆನೆ—

ಕಂದ॥ ಇದು ದೈವಮಿದಾಗಮಮಿಂ- ।
ತಿದು ತಪಮೆಂದರಿದು ನಂಬಿ ತಳರದೆ ಮನಮಂ ॥
ಕದಡದೆ ಬೆದರದೆ ಬೆಳ್ಕದ- ।
ದದಿರದೆ ನಿಲ್ವಮಲಗುಣಮೇ ನಿಶ್ಶಂಕಾಂಗಂ ॥ ೨೨೦ ॥

ತಾ:–೧ ಆಪ್ತಾಗಮ ಪದಾರ್ಥ ತಪಸ್ವಿಗಳನರಿದು ನಂಬಿ ಕಬ್ಬಿಣಮುಂಡನೀರಂತೆ ಪೊರ ಪೊಣ್ಮದಿರ್ಪುದು ನಿಃಶಂಕೆ, ೨ ಎರಡನೆಯ ನಿಃಕಾಂಕ್ಷಾಂಗಮೆಂತೆನೆ, ಸ್ಥಿರಮಲ್ಲ ಬಹುಬಾಧಾಕರಂಗಳಾಸ್ರವ ಪಥಂಗಳತಿ ವಿಷಮಂಗಳು, ಪರಿಪಾಕದೊಳೆಂದಿಗಂ ಶರಣ ಸುಖಾಶಕ್ತನಾಗದದು ನಿಃಕಾಂಕ್ಷಾಂಗಂ, ೩ ಸುಕಾಲದೊಳು ಸುಕ್ಷೇತ್ರಮಪ್ಪೆಡೆಯೊಳು ಬಿತ್ತವಿಕ್ಕಿರಕ್ಷಿಸುರ್ತಿರ್ದೆನ್ನ ಮುತ್ತರ ಲೋಕಾದಿ ಬೆಳೆಗೆಂನದೆಯುಂ ಬೆಳೆವಂತೆ ಬೆಳೆಗೆಂದಾತಂ ಪಾಪಭೀರುವಾಗಿ ಒಳ್ಳಿತಪ್ಪನೆಗಳ್ತೆಯೊಳು ನೆಗಳುತ್ತಿರ್ದು ಇಂದ್ರಾದಿಭೋಗಂಗಳಂ ಬಯಸದೆಯುಂ, ಅವು ತಮಗೆ ತಾವೇ ಇದಿರ್ಚ್ಛಿಗುಮದರಿಂ ಬಯಸಲ್ವೇಡ ಅವು ಶಾಸ್ವತ ಸುಖಂಗಳಲ್ಲವು, ಸಮ್ಯಗ್ದೃಷ್ಟಿಗಳಿಂ ಬಯಸಲ್ಪಡುವ ಮೋಕ್ಷಸುಖಕ್ಕೆ ದೊರೆಯಲ್ಲವು, ಮೋಕ್ಷಮಂ ಪೇಳ್ದಡೆ ತ್ರಿಲೋಕೋದರವರ್ತಿಗಳಪ್ಪ ದೇವೇಂದ್ರಾದಿ ಸುಖಂಗಳನ್ನೆಲ್ಲವನ್ನೊಂದುಮಾಡಿ ಅದಂ ತ್ರಿಗುಣಂಗೆಯ್ದು ಮತ್ತಂ ಅನಂತಗುಣಂಗೆಯ್ದಡಂ ಸಿದ್ಧರೊಂದು ಕ್ಷಣದ ಸುಖಕ್ಕೆ ಸಮನಲ್ಲೆಂದು ತಿಳಿಯದೆ ದರ್ಶನಮೋಹನೀಯದ ಕರ್ಮದುದಯದಿಂದೆನಗೆ ಮಕ್ಕಳು ಪಲಂಬರಕ್ಕುಂ ಅರ್ಥಂ ಪಿರಿದಕ್ಕು ಷಟ್ಖಂಡ ಸಾಮ್ರಾಜ್ಯಮಕ್ಕೆಂದಿಹಲೋಕದ ಸುಖಮಂ ಇಂದ್ರ ಪ್ರತೀಂದ್ರ, ಬಲದೇವ, ವಾಸುದೇವರಾದಿ ಸಂಸಾರವರ್ಧನೀಯಮಪ್ಪ ಪರಲೋಕ ಸುಖಮುಮಂ ಬಯಸಿ ನಿದಾನಪೂರ್ವಕಮಪ್ಪಲ್ಪಸುಖಕ್ಕಳಿಪಿ ಮುಕ್ತಿಯ ಸುಖಸಾಧನವಾದ ತನ್ನ ತಪಮಂ ನೆಗಳ್ತೆಯುಮಂ ಇಂದ್ರಿಯ ಸುಖಕ್ಕೆ ಮಾರುವಾತಂ ಆರಂ ಪೋಲ್ಕುಮೆಂದೊಡೆ, ಮಾಣಿಕಮಂತವುಡಿಂಗೆ ಮಾರುವಾತನಂ ಪೋಲ್ಕುಂ, ಅದರಿಂದ ಬಯಸದಿರುವದು ನಿಃಕಾಂಕ್ಷೆಯು॥.

೩ ಇನ್ನು ನಿರ್ವಿಚಿಕಿತ್ಸೆಯೆಂಬ ಮೂರನೇಯಂಗದ ಲಕ್ಷಣಮೆಂತೆನೆ––

ಕಂದ॥ ನಯದಿಂದಮೊಪ್ಪೆ ರತ್ನ- ।
ತ್ರಯದಿ ಕಯಿಗೆಯ್ಸಿ ಶೋಭಿಸುತಿರ್ಪ ॥
ಶರೀರದೊಳಿಂತುಜುಗು- ।
ಪ್ಸೆಯನಾಗಿಸದಿರ್ಪ ರುಚಿಯೇ ನಿರ್ವಿಚಿಕಿತ್ಸಂ ॥ ೨೨೧ ॥

ತಾ:—ಗುಣಮಿಲ್ಲದವು ಗುಣಮುಳ್ಳವಂ ಪೊರ್ದಿಯುಂ ಗುಣಕ್ಕೆ ಕಾರಣಮಪ್ಪವೆಂತೀಗಳು, ತೊಡವು ಕಾರಣಮಾಗಿ ನೂಲು, ಪುಷ್ಪಕಾರಣವಾಗಿ ನಾರು, ಅಮೃತಕಾರಣವಾಗಿ ಭಾಜನಮುಂ, ಪೂಜ್ಯವಾದಪುವಂತೆ, ಶುಚಿಯಲ್ಲದ ಶರೀರಂ ಶುಚಿಯಪ್ಪ ಜೀವನಂ ಪೊರ್ದಿ ಪೂಜ್ಯಮಾದುದಪ್ಪಕಾರಣದಿಂ ರತ್ನತ್ರಯಂಗಳಪ್ಪ ಸದನಂಗೊಳಿಸಲುಪಟ್ಟ ಚಾತುರ್ವರ್ಣಂಗಳ ಶರೀರಂಗಳೆಲ್ಲಂ ಪೂಜ್ಯಂಗಳು ಅವರ್ಗಳಮೇದ್ಯಾದಿಗಳಿಗೆ ಪೇಸುವಾತಂ ತನ್ನ ಗುಣಂಗಳಿಗೆ ಪೇಸನಕ್ಕುಮೆಂತೆಂಗೊಡೆ, ಗುಣಂಗಳುಂ ಗುಣಿಗಳ ಮೈಯ್ಯೊಳಿಪ್ಪವಾಕಾಶದೊಳಿವಪ್ಪುದರಿಂ ಪೇಸದದು ನಿರ್ವಿಚಿಕಿತ್ಸೆ ॥ ೪ ಇನ್ನು ಅಮೂಢದೃಷ್ಟಿತ್ವಮೆಂಬ ನಾಲ್ಕನೆಯಂಗದ ಲಕ್ಷಣವೆಹ್ಯಾಗೆಂದರೆ—ಚಾತುರ್ಗತಿಗಳಂ ಶ್ರುತಿಗೆಂ, ಹೇತುಗಳಾಗಿರ್ದ ಪಂಚಮಿಥ್ಯಾತ್ವದೊಳಂ, ಪ್ರೀತಿಯನಾಗಿಸದಿರ್ಪುದು ಭೂತಳದೊಳಂ ಅಮೂಢಮೆಂಬ ನಂಬುಗೆಯಕ್ಕುಂ ಆ ಪಂಚಮಿಥ್ಯಾತ್ವಂಗಳಾವುವೆಂದೊಡೆ–೧ಏಕಾಂತ ಪಕ್ಷವನ್ನೇ ಹಿಡಿದು ಶರೀರೇಂದ್ರಿಯ ಬುದ್ಧಿಗಳು ಕ್ಷಣದಿಂ ಮೇಲೆ ನಿಲ್ಲುವದಲ್ಲೆಂದು ಕುಹೇತು ದೃಷ್ಟಾಂತಂಗಳಂ ತೋರಿ ಮೂಢಜನಂಗಳನ್ನು ಮೋಹಿಸುವ

ಬದ್ಧಿನೇಕಾಂತಮಿಥ್ಯಾತ್ವಮುಂ, ೨ ಯಜ್ಞವಿಧಿಯೊಳಂ, ಮಹಳಪಕ್ಷದೊಳಂ, ಪಿತೃಕಾರ್ಯದೊಳಂ ವಿವಾಹೋತ್ಸವದೊಳಂ, ಪಶುಮೊದಲಾದ ಪ್ರಾಣಿಗಳಂ ಕೊಂದು ಅವಶ್ಯಂ ತಿನ್ನವೇಳ್ಕುಮಲ್ಲಿ ಮತ್ತಾಪ್ರಾಣಿಗಳಂ ಕೊಂದವರ್ಗಳುಂ ಸ್ವರ್ಗಕ್ಕೆ ಪೋಪರೆಂದು ಪೇಳ್ವ ಬ್ರಾಹ್ಮಣರ ವಿಪರೀತಮಿಥ್ಯಾತ್ವಮುಂ, ೩ ಪೆರತೊಂದು ನೆಗಳ್ತೆಯುಂ ಬೇಡ, ವಿನಯವೇ ಮೋಕ್ಷಮಾರ್ಗಮೆಂಬ ತಾಪಸರ ವಿನಯಮಿಥ್ಯಾತ್ವಮುಂ, ೪ ಜ್ಞಾನಮೇ ಮುಕ್ತಿಪಥಮೆಂಬ ಮಸ್ಕರಿಪೂರಣರಜ್ಞಾನಮಿಥ್ಯಾತ್ವಮುಂ, ೫ ಬಂಧ, ಬಂಧಕಾರಣಮುಂ, ಸಂಸಾರಫಲವುಂ, ಮೋಕ್ಷ, ಮೋಕ್ಷಕಾರಣವುಂ, ಮೋಕ್ಷಫಲಮುಮೆಂಬೀ ವಸ್ತುಗಳುಮಂ ಕೇವಲಿಗೆ ಕಬಳಾಹಾರಮುಂ, ಸ್ತ್ರೀಗೆ ನಿರ್ವಾಣಮುಮೆಂಬಿದು ಮೊದಲಾದುದಾರ್ಗಂ ನಿಶ್ಚಯಿಸಲಿಕ್ಕಾಗುವದಿಲ್ಲವೆಂದು ಹೇಳುವ ಇಂದ್ರವಾದಿಗಳ ಮತಂ ಸಂಶಯಮಿಥ್ಯಾತ್ವವೆಂದಾಗುವದು. ಅವಂ ನಂಬದುದುಂ ನಂಬಿದವರೊಳು ಕೂಡದುದುಂ, ಅವಂ ಪೊಗಳದುದುಂ, ಅನ್ಯದೈವಂಗಳಂ, ಅನ್ಯಲಿಂಗಿಗಳಂ, ಭಯದಿಂದಲಾನುಂ, ಮೋಹದಿಂದಲಾನುಂ, ಆಶೆಯಿಂದಲಾನುಂ, ಲೌಕೀಕದಿಂದಲಾನುಂ, ಪೊಡಮಡದುದು, ವಿನಯಂಗೆಯ್ಯದುದು, ಇದೇ ಅಮೂಢದೃಷ್ಟಿತ್ವವೆಂಬುದಕ್ಕುಂ.

ಶ್ಲೋಕ ॥ ಭಯಾಶಾಸ್ನೇಹಲೋಭಾಚ್ಚ ಕುದೇವಾಗಮಲಿಂಗಿನಾಂ ॥
ಪ್ರಣಾಮಂ ವಿನಯಂ ಚೈವ ನ ಕುರ್ಯುಃ ಶುದ್ಧದೃಷ್ಟಯಃ ॥ ೫೦॥

ಇನ್ನು ಉಪಗೂಹನಮೆಂಬೈದನೇಯಂಗದ ಲಕ್ಷಣಮೆಂತೆನೆ—ಆರಾನುಂ ಸ್ವಸಂಯಮಿಗಳು ಚಾರಿತ್ರವಿಹೀನರಾಗಿ ನಡೆಯುತ್ತಿರೆ ಕಂಡಾರಾನುಂ ಪಳಿವೊಡದಂಬಾರಿಪುದುಪಗೂಹನಂ ಜಿನೇಂದ್ರಾಗಮದೊಳೂ ಧರ್ಮದೊಳೂ ನಡೆಯುತಿರ್ದು ಕೆಲರ್ಚಾರಿತ್ರಮೋಹನೀಯದುದಯದಿಂ ಕ್ಷುತ್ಪಿಪಾಸಾದಿ ಬಾಧೆಗೆ ಚಳಿತು ವಿರುದ್ಧವೃತ್ತಿಯೋಳ್ ನೆಗಳೆಯದಂ ಕಂಡು ರಾಗದ್ವೇಷಂಗಳಿಂ ಕೆಲರಿನ್ನರೆಂದು ಪೊರಗೊಂದು ನುಡಿಯುತ್ತಿರೆ ಯದಂತಾನೊರ್ಕೊಂಡು ಅಂತಿಂತೆಂಬುದೇನಾಧರ್ಮದೊಳು ಕ್ಷೂಣಮಿಡಲುಂಟೆ ಶೀಲವಂತರಪ್ಪ ದಿವ್ಯತಪೋಧನರ್ಕಳವರಿಂತಪ್ಪ ಮಹಾಪುರುಷರಲ್ತೆಯೆಂದು ಅವರ ಪೇರ್ಮೆಯಂ ತೋರಿ ಅಧಮಪುರುಷರ್ಕಳಾನೀಚತ್ವಮಂ ಪ್ರಕಟಿಸದೆ ಮುಚ್ಚಿಕಳೆವುದು ಉಪಗೂಹನಮೆಂಬುದಕ್ಕುಂ. ೬ ಸ್ಥಿತೀಕರಣಮೆಂಬಾರನೆಯಂಗದ ಲಕ್ಷಣಮೆಂತೆನೆ—ಧರ್ಮದೊಳು ನೆಗಳುತ್ತಂ ಕೆಲವರ್ಮನುಜರು ತ್ಯಜಿಸುತ್ತಿರೆ ಮುಗುಳ್ದವರಂ, ಧರ್ಮದೊಳೇನಿರಿಪುವದುಂ, ಜಿನಧರ್ಮದ ಸಂಸ್ಥಾಪನಾಂಗಮೆಂಬವರ್ಮನಿಪರೂ, ಲೋಕದವರ್ಗಳ ಪ್ರೇರಣೆಯಿಂದಲಾನುಂ, ಇಂದ್ರಿಯಂಗಳ ವಿಷಯದ ಪ್ರೇರಣೆಯಿಂದಲಾನುಂ, ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳತ್ತಣಿಂದಲ್ಲಾಡುತ್ತಿರ್ದವನನ್ನು ಅಧ್ರುವಾದಿ ದ್ವಾದಶಾನುಪ್ರೇಕ್ಷೆಯುಮಂ ಪಂಚಮಿಥ್ಯಾತ್ವಮುಮಂ, ತೊರೆಯಿನ್ನವೆಂಬದನರಿಯುತ್ತಿರ್ದು ಪಡೆಯಲ್ಬಾರದ ರತ್ನತ್ರಯಮಂ ಪಡೆದು ಮಹಾ ಸಮುದ್ರದೊಳಗಿಕ್ಕಿ ಕೆಡಿಸುವಂತೆ ಎತ್ತಾನುಂ ಪಡೆಯಲ್ಬಾರದ ಮನುಜತ್ವದೊಳು ತ್ರೈಲೋಕ್ಯದುರ್ಲಭಮಪ್ಪ ಸಮ್ಯಜ್ಞಾನಚಾರಿತ್ರಂಗಳು ದೊರೆಕೊಂಡಡಂ ಕೆಡಿಸಿ ಮತ್ತೆಂದಿಗೂ ಪಡೆಯಲಾರೆಯೆಂದು ಹೇತುದೃಷ್ಟಾಂತಮಂ ತೋರಿ ತನ್ನ ಬಲ್ಲಿಂದದೊಳು ಆ ಪ್ರಾಣಿಯಂ ಧರ್ಮಕ್ಕೆ ತರುವದು ಸ್ಥಿತೀಕರಣಮೆಂಬುವದು.

೭ ಇನ್ನು ವಾತ್ಸಲ್ಯವೆಂಬೇಳನೆಯಂಗದ ಲಕ್ಷಣಮೆಂತೆಂದೊಡೆ—

ಕಂದ॥ ಚಾತುರ್ವರ್ಣಂಗಳೊಳಂ ।
ಪ್ರೀತಿಯೊಳಿದಿರೆರ್ದು ಕಂಡು ಧರ್ಮಸಹಾಯಂ ॥
ಮಾತಾಪಿತರರ್ನೀಮೆಮಗೆಂಬುದು ।
ಭೂತಲದೊಳ್ನೆಗಳ್ದ ಧರ್ಮವಾತ್ಸಲ್ಯಗುಣಂ ॥ ೨೨೨ ॥

ಅದೆಂತೆಂದೊಡೆ—ಬಡವಂ ವಿರೂಪಿ ದೇಶಾಂತರಿಗನೆನ್ನದೆ ತನ್ನ ಸಮಯದವರ್ಗಳಂ ಕಂಡಾಗಳು ಯೆಳಗಂದಿಯಾವೆಂತು ತನ್ನ ಕರುವಂ ಕಂಡಾಗಳು ರಾಗಿಸುವಂತೆ ರಾಗಿಸಿ, ಅವರೊಳು ವಿದ್ಯೆಗಲಿವೆನೀತನೆನಗೇನಾನುಮನುಪಕರಿಸುಗುಮೆನ್ನುಮಂ ಮನ್ನಿಸುಗಮೆಂಬ ಮಿಥ್ಯಾತ್ವವಿನಯಮಂ ಪತ್ತುವಿಟ್ಟು ಧರ್ಮವಿನಯದಿಂ, ಚಾತುರ್ವರ್ಣಂಗಳಂ ಯಥೋಚಿತ ಕ್ರಮದಿಂ ಮನ್ನಿಸುವುದುಂ, ತನ್ನ ಶಕ್ತಿಗೆ ತಕ್ಕಂದದಿನುಪಚರಿಸುವದುಂ, ಸ್ನೇಹಂಗೆಯ್ವುದು ಮೆಂದಿದು ಧರ್ಮವಾತ್ಸಲ್ಯವೆಂಬುವದು.

೮ ಇನ್ನು ಧರ್ಮಪ್ರಭಾವನೆಯೆಂಬ ಎಂಟನೆಯಂಗದ ಲಕ್ಷಣಮೆಂತೆನೆ—

ಕಂದ॥ ಜಿನಶಾಸನಮಾಹಾತ್ಮ್ಯ- ।
ಮನನವರತಂ ತನ್ನ ಶಕ್ತಿಯಿಂ ಬೆಳಗಿಕರಂ ॥
ಮನದ ತಮಮಂ ಕಳಲ್ಬುವು- ।
ದನುದಿನಮಿದು ಶಾಸನಂ ಪ್ರಭಾವನೆಯಕ್ಕುಂ ॥ ೨೨೩ ॥

ಅದೆಂತೆಂದೊಡೆ—ಶ್ರುತಜ್ಞಾನದಿವಾಕರ ಕಿರಣಂಗಳಿಂ ಪರಸಮಯ ಖದ್ಯೋತಾವರಣ ಮಂ ಮಾಳ್ಪುದುಂ, ದೇವೇಂದ್ರವಿಸ್ಮರ ಪ್ರಕಂಪನಸಮರ್ಥ ಮಹಾದುರ್ಧರ ತಪಂಗಳಿಂ ಸ್ವಸಮಯ ಪ್ರಕಟಂ ಗೆಯ್ವುದುಂ, ಕಲ್ಪವೃಕ್ಷಚತುರ್ಮುಖಾದಿ ಮಹಾ ಪೂಜಾವಿಧಾನಂಗ ಳಿಂದಮುತ್ತಮ ಪಾತ್ರಾದಿ ಮಹಾ ದಾನಂಗಳಿಂದ ಜಿನಶಾಸನಮಂ ಬೆಳಗುವದು ಧರ್ಮಪ್ರಭಾ ವನೆಯೆಂಬುದು. ಅಂತಾ ಎಂಟಂಗಮಂ ನೆರೆಯುಳ್ಳ ಸಮ್ಯಕ್ತ್ವಮುತ್ತಮಂ, ಒಂದಂಗವಿಲ್ಲ ದಿರ್ದೊಡಂ, ಅಂಗಹೀನನಪ್ಪರಸನ ರಾಜ್ಯದಂತೊಳ್ಳಿತಲ್ತು. ಮತ್ತಂ—

ಕಂದ॥ ನೂನಾಂಗದೃಷ್ಟಿಭವಸಂ- ।
ತಾನಮನಳರಲುಕದಾರದೆಂತೆನೆ ಮಂತ್ರಂ ॥
ತಾನಕ್ಷರಮೊಂದಿಲ್ಲದೊ- ।
ಡೇನದು ಕೆಡಿಸುಗುಮೇ ವಿಷಮವಿಷವೇದನೆಯಂ ॥ ೨೨೪ ॥

ಅದರಿಂ ಸರ್ವಾಂಗಸಂಪೂರ್ಣಮಪ್ಪ ಸಮ್ಯಗ್ದರ್ಶನಂ ನಿರ್ಘರ್ಷನ ಛೇದನ ಭೇದನ ತಾ ಡನ ತ್ರಾಸನ ತಾಪನ ವಿಯೋಗ ಸಂಯೋಗ ರೋಗ ದುಃಖ ಜನ್ಮ ಜರಾದಿ ನಿರಾವರಣ ಮರಣ ಶೋಕ ಭಯ ವೇದನಾಬಹಳಮಪ್ಪ ಸಂಸಾರಮಂ ಕೆಡಿಸಲಾಕ್ಕುಂ. ಒಂದಂಗವಿಲ್ಲದಿರ್ದೊಡಂ ಸಂಪೂರ್ಣಾಕ್ಷರಮಿಲ್ಲದಿರ್ದೊಡೆ ಮಂತ್ರಮದೆಂತು ವಿಷದೊಳಾದವೇದನೆಯಂ ಕೆಡಿಸಲ್ನೆರಿಯ ದಂತೆ, ಇಂತೆಂಟಂಗಮುಂ ನೆರೆಯುಳ್ಳ ಸದ್ದೃಷ್ಟಿಯೆಯ್ದುವ ಫಲಮನೇ ಪೇಳ್ವುದೊಂದೊಂದು ಗುಣದೊಳೀಲೋಕ ಪರಲೋಕಂಗಳೊಳಂ ಪಲವುಮತಿಶಯಂಗಳ ನೆಯ್ದಿದರೊಳವರಾ ರೆಂದೊಡೆ—

ನಿಃಶಂಕಿತತ್ವದಿನಂಜನಚೋರಂ, ನಿಃಕಾಂಕ್ಷಿತತ್ವದಲ್ಲಿ ಅನಂತಮತಿ ಕನ್ನೆಯುಂ, ನಿರ್ವಿ ಚಿಕಿತ್ಸೆಯಲ್ಲಿ ಓದ್ದಾಯನ ಮಹಾರಾಜನುಂ, ಅಮೂಢದೃಷ್ಟಿತ್ವದಿಂ ರೇವತಿ ಮಹಾದೇವಿಯುಂ, ಉಪಗೂಹನದಿಂ ಜಿನೇಂದ್ರಭಕ್ತನುಂ, ಸ್ಥಿತೀಕರಣದಿಂ ವಾರಿಷೇಣ ಕುಮಾರನುಂ, ವಾತ್ಸಲ್ಯ ಗುಣದಿಂ ವಜ್ರಕುಮಾರನುಂ, ಧರ್ಮಪ್ರಭಾವನಾಂಗದಿಂ ವಿಷ್ಣುಮುನಿಯುಂ ಎಂದೀ ಪೇಳ್ದೆ ಣ್ಬರುಂ ದೃಷ್ಟಾಂತಮಾದರಿಂತಿವರ ಕಥೆಗಳಂ ಗ್ರಂಥಾಂತರದಿಂದರಿದುಕೊಳ್ಗೆ, ಮತ್ತಂ ಧರ್ಮಮುಮಂ ಧರ್ಮದ ಫಲಮುಮಂ ಕಂಡು ಹರುಷವನೆಯ್ದುವ ಸಂವೇಗಮುಂ, ಸಂಸಾರ ಶರೀರ ಭೋಗದ ಮೇಗಣ ನಿರ್ವೇಗಮುಂ, ಆತ್ಮನಿಂದೆಯುಂ, ತಾಂ ಮಾಡಿದ ದೋಷಂಗಳಂ ಗುರುಗಳೊಳಾಲೋಚಿಸಿ ಪ್ರಾಯಶ್ಚಿತ್ತಮಂ ಕೈಕೊಳ್ವಗರ್ಹಣಮುಂ, ಉಪಶಮಮುಂ, ಅರ್ಹ ದಾಚಾರ್ಯ ನಿಜಶುದ್ಧಾತ್ಮಾದಿಗಳೊಳಪ್ಪ ನಿರ್ಭರಭಕ್ತಿಯುಂ, ಪ್ರಾಣಿಗಳೊಳಪ್ಪನುಕಂಪೆ ಯುಂ, ಜೈನಸಂಘದೊಳಪ್ಪ ವಾತ್ಸಲ್ಯಮುಂ ಎಂದಿಂತು ಸಮ್ಯಕ್ತ್ವದೆಂಟುಗುಣಂಗಳಕ್ಕುಂ.

ಕಂದ ॥ ಅಷ್ಟಾಂಗದರ್ಶನಮ- ।
ಮಷ್ಟರ್ದಿಯುನಷ್ಟಗುಣಮನಧಿಕಸ್ಥಾನಾ- ॥
ದ್ಯಷ್ಟಾತಿಶಯ ವಿಶೇಷಮ- ।
ನಷ್ಟಮಹಾಸಿದ್ಧಿಗುಣಮನೀಗುಮಮೋಘಂ ॥ ೨೨೫ ॥

ಮತ್ತಾವಕುಲದೊಳು ಪುಟ್ಟಿದೊಡಂ ಗುಣಮೇ ಪ್ರಧಾನಂ, ಮತ್ತಂ ಜೀವನಪ್ಪೊಡೆ ದೇವ ನುಂ ಮನುಷ್ಯನುಂ ತಿರ್ಯಂಚನುಂ ನಾರಕನುಮಲ್ಲಿ ಗತಿ ಜಾತಿ ಶರೀರಾದಿಗಳು ಸ್ತ್ರೀಪುಂನ ಪುಂಸಕ ವೇದಾದಿಗಳುಮುಚ್ಚ ನೀಚಕುಲಾಕುಲಂಗಳುಮೆಂದಿವಂ ವ್ಯವಹಾರನಯದಿಂ ಕರ್ಮ ನಿರ್ಮಿತಂಗಳು. ಶಕ್ತಿನಿಷ್ಠ ನಿಶ್ಚಯನಯದಿಂದಾತ್ಮಂ ಶುದ್ಧಂ. ಸಿದ್ಧರಸಮಾನನೆಯದರಿಂ ದರ್ಶನ ಶುದ್ಧನಂ ಭಾವಿನಯದಿನನಾಗತ ಸಿದ್ಧನೆಂದು ಬಗೆವುದೇಕೆಂದೊಡೆ ॥ ಸಮ್ಯಕ್ತ್ವಪೂರ್ವಕಂ ಜ್ಞಾನಚಾರಿತ್ರಂಗಳಂ ಪಡೆದು ಸಿದ್ಧನಾಗುವನೆಂದರ್ಥಂ. ಸಂಸಾರದೊಳಗೆ ಕೀಳುಮೇಲಕ್ಕು ಮೇಲುಕೀಳಕ್ಕುಮೆಂತೆನೆ—

ಕಂದ ॥ ದುರಿತದುಪಶಮದಿನಾಯುಂ ।
ಸುರನಕ್ಕುಂ ಧರ್ಮದಳಿವಿನಿಂ ನಾಯಕ್ಕುಂ ॥
ಸುರನುಮೆನೆ ಧರ್ಮದಿಂದಂ ।
ದೊರಕೊಳ್ಳದುದೇನಧರ್ಮದಿಂದಳಿಯದುದೇಂ ॥ ೨೨೬ ॥

ಅದುಕಾರಣದಿಂ ಜೀವಕ್ಕೆ ಧರ್ಮಮೇ ಸಮಸ್ತಾಭ್ಯುದಯ ನಿಃಶ್ರೇಯಸ ಸುಖಂಗಳಂ ಕೊಡಗುಂ. ಮತ್ತಮಾತ್ಮಂಗೆ ಕರ್ಮಕ್ಷಯಮಪ್ಪಾಗಳಿನ ಕಾರ್ಯಸಿದ್ಧಿಯುಂ ನೋಡೆ ಸಮ್ಯ ಕ್ತ್ವಂ ದೊರಕೊಳ್ವಾಗಳಿನ ಕಾರ್ಯಸಿದ್ಧಿ ಪಿರಿದೇಕೆಂದೊಡೆ—ಸಮ್ಯಕ್ತ್ವಂ ದೊರಕೊಂಡೊಡ ಲ್ಲದೆ ಮೇಗಣ ಗುಣಸ್ಥಾನನೊಂದುಮನೆಯ್ದನಪ್ಪದರಿಂ ಮತ್ತಂ ದರ್ಶನಮೋಹನೀಯಮಿಲ್ಲದ ಗೃಹಸ್ಥಂ ವ್ರತಮಿಲ್ಲದಿರ್ದೊಡಮಾತಂ ಮೋಕ್ಷಮಾರ್ಗದೊಳಿರ್ದಂ ಮಿಥ್ಯಾತ್ವಮುಳ್ಳ ಮುನಿ ಯೆನಿತು ತಪಂಗೆಯ್ದೊಡಂ ಮೋಕ್ಷದ ಬಟ್ಟೆಯೊಳಿರ್ದನಲ್ಲನದರಿಂ ಸಮ್ಯಗ್ದೃಷ್ಟಿಯಪ್ಪ ಗೃಹ ಸ್ಥನುತ್ತಮಂ. ಸಮ್ಯಕ್ತ್ವಮಿಲ್ಲದ ಮುನಿಯಂ ನೋಡಲು, ಮತ್ತಂ ಸಮ್ಯಕ್ತ್ವಪೂರ್ವಕ ಅಣು

ವ್ರತ ಮಹಾವ್ರತಂ ನೆಗಳ್ವರುಂ ಸಮ್ಯಕ್ತ್ವವೊಂದನೆ ತಾಳ್ದಗೆ ಇಂತಾ ಮೂವರುಂ ಸಂಸಾರಸಾಗರದೊಳಾಳರುಂ ಸಮ್ಯಕ್ತ್ವವಿಕಲವಾದ ಅಣುವ್ರತ ಮಹಾವ್ರತಮುಮೆಂಬ ಪೆಸರುಮಿಲ್ಲನಿತು ಶಾಸ್ತ್ರಮುಂ ನೋಡಿದೊಡಂ ದ್ರವ್ಯಶ್ರುತಮೇ ಜ್ಞಾನಿಯಲ್ಲಂ ಅಂತಾತನಜ್ಞಾನಿ ಏಕೆಂದೊಡೆ—ಅಭವ್ಯನುಂ ಬಹುಶ್ರುತನುಂ ದುರ್ಧರಕಾಯಕ್ಲೇಶಂಗಳಿಂದುಪರಿಮಗ್ರೈವೇಯಕದುಪರಿಮ ವಿಮಾನಂಬರೆಗಂ ಪುಟ್ಟಿಯುಂ ಮತ್ತಂ ಚತುರ್ಗತಿಗಳೊಳು ಭ್ರಮಿಯಿಸುವನಪ್ಪುದರಿಂ ಮತ್ತಂ ಸಮ್ಯಕ್ತ್ವಮಿಲ್ಲದಲ್ಲಿ ಜ್ಞಾನಚಾರಿತ್ರಂಗಳುತ್ಪತ್ತಿ ಸ್ಥಿತಿವೃದ್ಧಿ ಫಲೋದಯಮಿಲ್ಲೆಂತೆನೆ॥ ಬೀಜಮಿಲ್ಲದಲ್ಲಿ ವೃಕ್ಷಕ್ಕುತ್ಪತ್ತಿ ಸ್ಥಿತಿವೃದ್ಧಿ ಫಲೋತ್ಪತ್ತಿಯುಮಿಲ್ಲದಂತೆ ತ್ರಿಕಾಲ ತ್ರಿಲೋಕದೊಳಂ ಸಮ್ಯಕ್ತ್ವಮೇ ಪರಮಬಂಧು, ಮಿಥ್ಯಾತ್ವಮೇ ಶತ್ರುವೆಂದರಿಯುವದು. ಮತ್ತಂ ಪ್ರಶಮ ಸಂವೇಗಾನುಕಂಪಾಸ್ತಿಕ್ಯಾಭಿವ್ಯಕ್ತಿಯುಂ ಲಕ್ಷಣಮಾಗುಳ್ಳದುಂ ಸಂಸಾರಲತಾಮೂಲವಿಚ್ಛೇದಿಯುಂ ತ್ರೈಜ್ಞಾನಶುದ್ಧಿಕರಂ ಪ್ರಥಮಾರಾಧನೆಯುಂ ಮೋಕ್ಷಪ್ರಾಸಾದಾರೋಹಣ ಪ್ರಥಮಸೋಪಾನಮುಮೆನಿಪ ಸುದರ್ಶನದೊಳು ಕೂಡಿದ ಜ್ಞಾನಚಾರಿತ್ರತಪೋಪಶಾಂತಿಗಳು ಪೂಜ್ಯವಾಗುವವು. ಮತ್ತಂ ಸಂಸಾರಾರ್ಣವದೊಳು ಭವ್ಯನೆಂಬ ಪರದಂ ಸಿದ್ಧಾಷ್ಟಗುಣರತ್ನಂಗಳಂ ಕೊಳ್ಳಲ್ಕೆಂದು ಮೋಕ್ಷವೆಂಬ ದ್ವೀಪಕ್ಕೆ ತೋಪಬಗೆಯಿಂ ಚಾರಿತ್ರಮೆಂಬ ಯಾನಪಾತ್ರಮನೇರಿ ಮೋಕ್ಷಸ್ಥಾನಮುಂ ದೂರದಿಂ ಕಾಣ್ಬಂ ಕಂಡು ಬೇಗಮೆಯ್ದಿಸುವ ಸಮ್ಯಕ್ತ್ವಂ ಕೂವಕಂಬಿಗಂ ಮಾಡಿದೊಡದು ಮಿಥ್ಯಾತ್ವಾದಿ ತಸ್ಕರಪ್ರಭುಗಳುಂ ಗೆಲ್ದು ಕಾರ್ಯಸಿದ್ಧಿಯಂ ಮಾಳ್ಕುಂ.

ವೃತ್ತ ॥ ನೆಗಳ್ದಮಲದರ್ಶನಮೇ ಕಂಠಿಕೆ ನಿರ್ವಾಣಯಿಕ ರಾಜ್ಯಲಕ್ಷ್ಮಿಗೆನಲು ನಂ- ।
ಬುಗೆಯೇ ನಿಮಿತ್ತಂ ಪ್ರಭೃತಿಗಳಗಲ್ಕೆಯಭ್ಯುದಯದೊಳ್ಪಿನೆಸುವೆಯ್ದು- ॥
ಗೆಗಂ ತಲೆಯೂರಿ ತಪಂಗೆಯ್ಗೆ ಯಮಳಸಾಗರೋಕ್ತ ಧರ್ಮದೊಳ್ನೆಗಳ್ಗೆ ಮ- ।
ದ್ದೃಗ್ಬಲಮಿಲ್ಲಂ ಮುಕ್ತಿ ಶ್ರೀಲಲನೆಯುಂ ಅಮರೇಂದ್ರ ಲಕ್ಷ್ಮಿಯುಂ ಕಡುದೂರಂ ॥

ಸಮ್ಯಕ್ತ್ವದ ಮಹಿಮೆಯಂ ಪೇಳ್ವಡೆ ಚತುರ್ಗತಿಗೆ ಬದ್ಧಾಯುಷ್ಕರಂ ಕುರುತ್ತು ಪೇಳ್ವಂ॥ ಅಸಂಯತ ಸಮ್ಯಗ್ದೃಷ್ಟಿಗಳು ಅಪ್ರತ್ಯಾಖ್ಯಾನ ಕಷಾಯಂಗಳುದಯ ಕಾರಣವಾಗಿ ವ್ರತ ನಿಯಮಾನುಷ್ಠಾನಮಿಲ್ಲದವರಾಗಿಯುಂ ಇಂದ್ರಿಯ ವಿಷಯಂಗಳ ತೊರೆಯಲಾರದವರಾಗಿಯುಂ ಸಮ್ಯಕ್ತ್ವಮಹಾತ್ಮ್ಯದಿಂ

ವೃತ್ತ ॥ ವಿಕಲೈಕೇಂದ್ರಿಯ ಜಾತಿಭಾವನವನಜ್ಯೋತಿಷ್ಕತಿರ್ಯಗ್ನಪುಂ- ।
ಸಕ ನಾರೀನಟವಿನ ದುಃಕುಲಸರುಗ್ಮೂಕಾಂಧನಿರ್ಭಾಗ್ಯನಾ- ॥
ರಕ ಹೀನಾಯುಷಕಿಲ್ಬಿಷಾದಿಪದಮಂ ಕೈಕೊಳ್ಳರೆಂದುಂ ಮಹ- ।
ರ್ಧಿಕ ಸಂಸ್ಥಾನಮಲ್ಲದ ವ್ರತಿಗಳುಂ ಸಮ್ಯಕ್ತ್ವಸಾಮರ್ಥ್ಯದಿಂ ॥ ೨೨೭ ॥

ಮತ್ತಂ ಅಪರ್ಯಾಪ್ತಕ ಮನುಷ್ಯರುಂ ಕುಭೋಗಭೂಮಿಜರುಂ ಮ್ಲೇಚ್ಛರುಂ ಬಧಿರ ವಿರೂಪಿ, ಕುಬ್ಜ, ವಾಮನ, ಪಂಗುಳ ಪ್ರಭೃತಿಕುತ್ಸಿತರಾಗಿ ಪುಟ್ಟರು. ಮತ್ತಂ ಅವರೆಂತಪ್ಪವರಾಗಿ ಪುಟ್ಟುವರೆಲ್ಲಿ ಎಲ್ಲಿಯೆಂದೊಡೆ—ದೇವಗತಿಯೊಳಂ ನರಕಗತಿಯೊಳಮಿರ್ದು ಸಮ್ಯಕ್ತ್ವಮಂ ಕೈಕೊಂಡವರ್ಗಳು ಕರ್ಮಭೂಮಿಯೊಳುತ್ಕೃಷ್ಟವಾದ ಪುರುಷರಾಗಿ ಹುಟ್ಟಿ ಆ ಭವ

ದೊಳೇ ಕರ್ಮಕ್ಷಯಂಗೆಯ್ವರು॥ ತಡೆದೊಡೆಂಟುಭವಂ ತಡೆಗುಂ. ಮನುಷ್ಯ ತಿರ್ಯಗ್ಗತಿಗಳೊಳಮಿರ್ದು ಸಮ್ಯಕ್ತ್ವಮಂ ಕೈಕೊಂಡವರ್ಗಳು ಮಹರ್ಧಿಕ ದೇವರಾಗಿ ಪುಟ್ಟಿ ಅಲ್ಲಿಂದ ಬರುತ್ತಲೇ ಕರ್ಮಕ್ಷಯಂಗೆಯ್ವರು. ತಡೆದೊಡೇಳುಭವಮಕ್ಕುಂ. ಮತ್ತಂ—

ಕಂದ ॥ ಹಲಧರ ಕುಲಧರ ಗಣಧರ।
ಕುಲಿಶಧರ ಸುಧರ್ಮತೀರ್ಥಕರ ಚಕ್ರಧರಾ- ॥
ತುಲಕುಸುಮಾಸ್ತ್ರಧರಸಮು- ।
ದ್ವಲ ವಿದ್ಯಾಧರರ ಲಕ್ಷ್ಮಿಸಮ್ಯಕ್ತ್ವಫಲಂ ॥ ೨೨೮ ॥
ದೊರಕೊಳ್ಳದ ಸಮ್ಯಕ್ತ್ವಂ ।
ದೊರಕೊಂಡಡೆ ಗುಡಿಯು ಬದ್ಧವಣದೋಕುಳಿಯಂ ॥
ಸ್ಫುರಿತೋತ್ಸಾಹಪರಂಪರೆ ।
ನಿರಂತರಂ ಭವ್ಯಗ್ರಹದೊಳೊರವಲ್ವೇಡಾ ॥ ೨೨೯ ॥

ಶಂಕೆ, ಕಾಂಕ್ಷೆ, ವಿಚಿಕಿತ್ಸೆ, ಅನ್ಯದೃಷ್ಟಿಪ್ರಶಂಸೆ ಅನ್ಯದೃಷ್ಟಿಸಂಸ್ತವಮಿಂತಿವೈದುಂ ಸಮ್ಯಕ್ತ್ವದತೀಚಾರಂಗಳಕ್ಕುಂ॥ ಅವುಗಳೊಳು ಮನದೊಳು ಮೆಚ್ಚುವದು ಪ್ರಶಂಸೆ, ವಚನದಿಂ ಪೊಗಳ್ವುದು ಸಂಸ್ತವನಂ, ಶೇಷತ್ರಯಂಗಳು ವ್ಯಕ್ತಂಗಳು॥ ಇದು ಜಿನೇಶ್ವರಪ್ರಣೀತ ಪರಮಾಗಮದ ಶ್ರಾವಕಾಚಾರದ ಸಾರದೊಳು ಸಮ್ಯಕ್ತ್ವನಿರೂಪಣಂ ॥

---

## ಸೂತ್ರಂ ॥ ಸಾಮಾಚಾರಂ ದಶವಿಧಂ ॥ ೬೯ ॥

ಇನ್ನು ಹತ್ತುತೆರದ ಸಾಮಾಚಾರಂಗಳ್ಯಾವವೆಂದೊಡೆ—ತನಗೆ ಇಷ್ಟವಾದ ವ್ರತಗುಣಂಗಳಂ ಕೈಕೊಳ್ಳುವದು. ಅಲ್ಲಿಯುಂ ಜ್ಞಾನೋಪಕರಣಂ ಮೊದಲಾದುವಂ ಕೈಕೊಳ್ಳುವದು. ಅಲ್ಲಿಯುಂ ಜ್ಞಾನೋಪಕರಣಂ ಮೊದಲಾದುವಂ ಕೈಕೊಳ್ಳುವಲ್ಲಿಯುಂ, ಗುರುಗಳಂ ನಿಮ್ಮಡಿಯನಗಿದುವೇಳ್ಕುಮೆಂಬ ಸಾಮಾಚಾರವಾಗುವದು. ಗುರುಗಳು ಮೊದಲಾದ ಹಿರಿಯರೊಳಾದ ವಿನಯಮುಂ, ವ್ರತಾದಿಗಳಲ್ಲಾದ ಅತಿಚಾರಮುಮೆಂದಿವು ಮೊದಲಾದ ದೋಷದಲ್ಲಿ ಪೊಲ್ಲಕೆಯ್ದು ಪುಸಿಯಕ್ಕೆಂಬ ಸಾಮಾಚಾರಮಕ್ಕುಂ. ಸೂತ್ರಾರ್ಥಗಳುಂ ಗುರುಗಳ್ಪೇಳುತೆರವು ತಾಂ ಕೇಳುವಲ್ಲಿ ನಿಮ್ಮಡಿಗಳೆಂತು ಪೇಳ್ದಿರೆ ಅಂತೆಯಪ್ಪುದು ಎಂದು ಸಾಮಾಚಾರಮಕ್ಕುಂ. ತಾನಿದ್ದು ಬಸದಿ ಪಟ್ಟಸಾಲಿ ಮೊದಲಾದ ಆಶ್ರಯಂಗಳಂ ಪೊರಮಡುವಲ್ಲಿ ತದಾಶ್ರಿತಂಗಳಪ್ಪ ವ್ಯಂತರಪ್ರಾಣಿಗಳ ಮನದ ಶಂಕೆಯಂ ಬಿಡಿಸಲು, ತನಗಲ್ಲಿಯ ನಿರ್ಮಮತ್ವಮನರಿಪಲುವೆಂದು ಅಸಿಮೆಂಬ ಸಾಮಾಚಾರಮಕ್ಕುಂ. ಬಸದಿ ಮೊದಲಾದಾಶ್ರಯಂಗಳಂ ಪುಗುವಲ್ಲಿರ್ದದೇವತಾದಿಗಳ ಭಯಮಂ ಪಿಂಗಿಸಿ ನಿಮ್ಮೊಡಂಬಡಿಕೆಯಿಂದಿರ್ಪೆವು ನಿಮಗುಪದ್ರಮಂ ಮಾಳ್ಪೆವಲ್ಲೆಂದವನೊಡಂಬಡಿಸಲ್ವೇಳೆ ನಿಸಿದ್ಧಿಯೆಂಬ ಸಾಮಾಚಾರಮಕ್ಕುಂ. ತನ್ನ ಲೋಚನಮಾಡಿಸಿಕೊಳ್ವುವ ಓದುವ ಪೋಪ ಕಲ್ಲು ನೆಲ ಮೊದಲಾದ ಯೋಗಂಗಳಂ ಕೈಕೊಳ್ವಲ್ಲಿ ಆಚಾರ್ಯಾದಿಗಳುಮಂ ಬೆಸಗೊಳ್ವುದು ಯೋಗಸಾಮಾಚಾರಮಕ್ಕುಂ. ತನ್ನ ದೀಕ್ಷಾಶಿಕ್ಷೋಪದೇಶಕಾದಿಗುರುಗಳೆಂದುಂ ಮುನ್ನಿತೊಡಂಬಳಸಲುಪಟ್ಟ ಪುಸ್ತಕಾದ್ಯುಪಕರಣಂಗಳಂ ತೆಗೆದುಕೊಂಡು

ಬಳಸುವಲ್ಲಿ ಮುಗುಳ್ದು ಬೆಸಗೊಳುದೆಂಬ ಸಾಮಾಚಾರಮಕ್ಕುಂ. ಸದ್ಧರ್ಮ ಮೊದಲಾದ ವರ್ಗಳುಪಕರಣಂಗಳನವರ ಬೆಸಗೊಂಡು ಒಡಂಬಡಿಸಿಕೊಂಡು ಬಳಸುವಲ್ಲಿಯವರಿಚ್ಛೆ ವಳಿಯಿಂ ನೆಗಳುವದೆಂಬ ಸಾಮಾಚಾರಮಕ್ಕುಂ. ತನಗಾತುರ ಪ್ರಯೋಜನಮಾಗಲು ಮುನ್ನ ವರಂ ಬೆಸಗೊಳ್ಳದೆ ಪುಸ್ತಕಾದಿ ದ್ರವ್ಯಂಗಳಂ ಕೊಂಡು ಬಳಸುವಲ್ಲಿ ಬಳಕವರ್ಗೆ ನಿಮ್ಮುಪ ಕರಣಂಗಳಂ ಬಳಸಿದೆವೆಂದು ಅರಿಪುವುದೆಂಬ ಸಾಮಾಚಾರಮಕ್ಕುಂ. ನಿಮ್ಮಡಿಗಳ ಶ್ರೀಪಾದದ ಪ್ರಸಾದದಿನ್ನಾಂ ಸುಖಿಯಪ್ಪೆನೆನ್ನನೆಲ್ಲಾ ಪ್ರಕಾರದಿಂ ಶಿಕ್ಷಿಸಿ ಸನ್ಮಾರ್ಗದೊಳು ನೆಗಳ್ವವುದೆಂದು ಶಿಕ್ಷೋಪದೇಶಕ್ಕಾಗಿ ಗುರುಗಳಿಗೆ ತನ್ನನ್ನು ಸಮರ್ಪಿಸುವದು ಪೊರ್ದುಗೆಯೊಳಪ್ಪ ಸಾಮಾಚಾರ ಮುಂ. ಇಂತೀ ಪತ್ತುತೆರದ ಸಾಮಾಚಾರಮಲ್ಲದೆ ಮತ್ತಂ ಗುಣಾಧಿಕರಲ್ಲಿ ವಿನಯವೃತ್ತಿಯಿಂದಾ ಚರಿಸುವದೆಲ್ಲಾ ವಿಸ್ತಾರದೊಳಪ್ಪ ಸಾಮಾಚಾರಮೆಂದರಿಯುವದು. ಜ್ಞಾನವೈರಾಗ್ಯಸಂಪನ್ನನುಂ ಸಂಸಾರಶರೀರಭೋಗ ನಿರ್ವೇಗಪರನುಂ ವಿಕಾರವಿಹೀತನುಂ ಹೇಯೋಪಾದೇಯತತ್ವಕುಶಲ ನುಂ ಅದ್ರುವಾದಿದ್ವಾದಶಾನುಪ್ರೇಕ್ಷೆಯನೆಡೆವರಿಯದೆ ಭಾವಿಸುವವನುಂ ಸಕಲ ಪರೀಷಹಂಗಳಗೆ ಲಲಾರ್ಪನುಂ ಪರಮತಪೋಧನನಾದ ಮಹಾನುಭಾವಂ ಸ್ತ್ರೀಜನಂಗಳಂ ಶಿಕ್ಷಿಸುವದು. ಉಳಿ ದವರು ಶಿಕ್ಷಿಸಲಾಗದು. ಈ ಪೆರಗೆ ಪೇಳ್ದ ಸಾಮಾಚಾರಂಗಳು ಪರತ್ರೇಯಾರ್ಥಿಯಪ್ಪ ಅಜ್ಜಿಯ ರ್ಗುಮಕ್ಕುಂ ಅಜ್ಜಿಯರ್ಗೆ ಕೆಂಪು ಕರಿದು ಮೊದಲಾದ ಅನೇಕ ತೆರದ ಬಣ್ಣವೆಂಬ ವಸ್ತ್ರವಿಕಾ ರಮುಂ ಹಾವಭಾವವಿಲಾಸ ವಿಭ್ರಮಮೆಂಬಿವರಿಂ ಬೆಡಗುವೆರಸಿದ ನಡೆನುಡಿ ಕಣ್ಣುಪುರ್ವಿನ ಜರ್ಬು ಮೊದಲಾದಂಗವಿಕಾರಮಾಗದು. ಮತ್ತಂ ಅಜ್ಜಿಯರ್ಗೆ ತಮ್ಮ ಮುನ್ನಿನ ನೆಂಟವರ್ಗೊ ದಲಾದವರುಗಳ ಸಾವು ಕೇಡುಮಂ ಕಂಡು ಅಳುವದುಂ ಗುಡ್ಡುಗಳ್ಗೆ ಮೀಯಲೆರೆಯುವದುಂ ಮಕ್ಕಳನೂಡುವದುಂ ಹಾಲನ್ನು ಕರೆಯುವದುಂ ಮೊಸರಂ ಕಡೆಯುವದುಂ ನೂಲುವದುಂ ಕುಟ್ಟುವದುಂ ಅಡಿಗೆ ಮಾಡುವದುಂ ಹಾಡುವದುಂ ನೀರು ತರುವದುಂ ಸಗಣಿಯನ್ನಿಡುವದುಂ ಮನೆಯ ಕಸವನ್ನು ಕಳೆಯುವದುಂ ಸಾರಿಸುವದುಂ ಗೋಡೆಯನ್ನಿಕ್ಕುವದುಂ ಮೆತ್ತುವದುಂ ಗೃಹಸ್ಥರ ಮನೆಯೊಳಿರುವದುಂ ಆಗದು. ಇಬ್ಬರು ಮೂವರು ಮೊದಲಾದವರ ಜೊತೆಯಿ ಲ್ಲದೆ ಒಬ್ಬಳೇ ಇರಲಾಗದು, ಒಬ್ಬಳೇ ಮಲಗಬಾರದು, ಮತ್ತು ತಪಗುರು ಶ್ರುತಗುರು ಮೊದ ಲಾದಾಚಾರ್ಯರುಂ, ಉಪಾಧ್ಯಾಯರುಂ, ಸಾಮಾನ್ಯಋಷಿಯರೆಂದಿವರುಗಳಗೆ ವಂದನೆ ಮಾಡ ಬೇಕಾದರೆ ಯಥಾಕ್ರಮದಿಂದ ೫, ೬, ೭ ಹಸ್ತಪ್ರಮಾಣದಲ್ಲಿದ್ದು ಜೀವದನಂ ಮಲಗಿರುವ ರೀತಿಯಿಂದ ವಂದಿಸುವದು.

ಮತ್ತಮೆಂತಪ್ಪಾಚಾರ್ಯರಂ ವಂದಿಸಲಾಗದೆಂದೊಡೆ—ವ್ಯಾಕುಲಿಯಾಗಿರ್ದನುಮಂ ಚ ರಿಗೆಯಂ ಮಾಡುತ್ತಿರ್ದನುಮಂ ವಂದಿಸಲಾಗದು.

ಮತ್ತಮೆಂತಪ್ಪನನ್ನು ವಂದಿಸುವುದೆಂದೊಡೆ—ಆಸನದೊಳಿರ್ದನುಮಂ ರಾಗದ್ವೇಷಗ ಳಿಂದಗಲ್ದವನುಂ ವಂದನೆಗೆ ಒಡಂಬಟ್ಟಿರ್ದವನುಂ ಒಡಂಬಡಿಸಿ ಧ್ಯಾನಮೌನಾನುಷ್ಠಾನಾದಿಗ ಳೊಳು ಕೂಡಿರ್ದನುಮಂ ಕ್ರಿಯಾಧರ್ಮದಿಂ ಮೇಣ್ ಸಾಮಾನ್ಯದಿಂ ಮೇಣ್ ವಂದಿಸುವುದುಂ ಸಾಮಾಚಾರದಿಂ ನೆಗಳ್ವ ಋಷಿಯರುಂ, ಅಜ್ಜಿಯರುಂ, ಭವ್ಯಜನಂಗಳುಂ ಸಮ್ಯಕ್ತ್ವಪೂರ್ವಕ ವ್ರತಂಗಳೊಳಾಚರಿಸಿ ಸಪ್ತಪರಮಸ್ಥಾನಂಗಳಂ ನೆಯ್ದುವರು.

## ಸೂತ್ರಂ ॥ ಸಪ್ತಪರಮಸ್ಥಾನಾನಿ ॥ ೭೦ ॥

ತಾ॥—೧ ಸಜ್ಜಾತಿತ್ವಮುಂ, ೨ ಸದ್ಗೃಹಸ್ಥತ್ವಮುಂ, ೩ ಪಾರಿವ್ರಾಜ್ಯತ್ವಮುಂ, ೪ ದೇವೇಂದ್ರತ್ವಮುಂ, ೫ ಚಕ್ರವರ್ತಿತ್ವಮುಂ, ೬ ಪರಮಾರ್ಹಂತ್ಯತ್ವಮುಂ, ೭ ನಿರ್ವಾಣತ್ವಮುಂ ಮೆಂಬೀ ಸಪ್ತಪರಮಸ್ಥಾನಗಳ ವಿವರವು ಹ್ಯಾಗೆಂದರೆ— ಅದರಲ್ಲಿ ದೇಶಕುಲಜಾತಿಶುದ್ಧತ್ವದಿಂ ಕುಲದೀಪಕನೆನಿಸಿ ಸಮ್ಯಗ್ದೃಷ್ಟಿಗಳಾಗಿ ಹುಟ್ಟುವದು ಸಜ್ಜಾತಿತ್ವಮುಂ ॥೧॥ ಕ್ರಮದಿಂ ವೃದ್ಧಿಗೆ ಬಂದು ಸತ್ಪದವಿಯೊಳ್ನೆಲಸಿ ಲೋಕದೊಳ್ಸನ್ಮಾಜ್ಞೆಯಾಗಿ ಶ್ರಾವಕಾಗ್ರಶಿಖಾಮಣಿಯೆನಿಸಿ ಬಾಳುವದು ಸದ್ಗೃಹಸ್ಥತ್ವಂ॥೨॥ ಆ ಸದ್ಗೃಹಸ್ಥತ್ವಕ್ಕೆ ಪೇಸಿ ಸಂಸಾರಶರೀರಭೋಗ ನಿರ್ವೇಗ ಪರಾಯಣನಾಗಿ ತನ್ನ ಸಂತತಿಗೆ ಸಕಲದತ್ತಿಯನ್ನಿತ್ತು ದಿವ್ಯತಪೋಧನರ ಪಾದಮೂಲದಲ್ಲಿ ಜಾತರೂಪವನ್ನು ಧರಿಸಿ ಬಾಹ್ಯಾಭ್ಯಂತರ ತಪದೊಳು ಉತ್ಕೃಷ್ಟದಿಂ ನೆಗಳ್ದು ಏಕಾದಶಾಂಗಧಾರಿಯಾಗಿ ಷೋಡಶಭಾವನೆಯನ್ನು ಭಾವಿಸಿ ತೀರ್ಥಕರ ಪುಣ್ಯಮಂ ಕಟ್ಟಿ ಬುದ್ಧಿಋದ್ಧಿ, ತಪೋಋದ್ಧಿ, ವೈಕುರ್ವಣಋದ್ಧಿ, ಔಷಧಋದ್ಧಿ, ರಸಋದ್ಧಿ, ಬಲಋದ್ಧಿ, ಅಕ್ಷೀಣಋದ್ಧಿಯೆಂಬ ಸಪ್ತಋದ್ಧಿಗಳೊಳ್ನೆರೆದು ದೀಕ್ಷೆ ಶೀಕ್ಷೆಗಣಪೋಷಣಮಂ, ಆತ್ಮಸಂಸಾರಸಲ್ಲೇಖನೆಯೆಂಬಿವರ ಕಾಲಂಗಳಂ ಕಳಿಪಿ ಉತ್ತಮಾರ್ಥಕಾಲದಲ್ಲಿ ಚತುರ್ವಿಧಾರಾಧನಪುರಸ್ಸರವಾಗಿ ಸಮಾಧಿವಿಧಿಯಿಂ ಪ್ರಾಣಪರಿತ್ಯಾಗಂಗೆಯ್ಯುವದು ಪಾರಿವ್ರಾಜ್ಯತ್ವಂ ॥ ೩ ॥ ತತ್ಫಲದಿಂ ದೇವಲೋಕದೊಳ್ಪುಟ್ಟುವದು ನಿಜಾಂಬರಭೂಷಣಮಾಲ್ಯಂಗಳೆಸೆಯೆ ಶೋಭಿಸುವ ದಿವ್ಯಶರೀರಮನೊಡೆಯ ಮನೇಕ ರತ್ನಾಕರೋಪಮ ಪ್ರಮಿತಜೀವಿತನುಂ, ಮನಸಾಮೃತಾಹಾರನುಂ, ಶುಭಲಕ್ಷಣಲಕ್ಷಿತನುಂ ಆಗಿ ಪ್ರತೀಂದ್ರಾದಿ ದೇವಪರಿವಾರ ಪರಿವೃತನಾಗಿರುವಧು ದೇವೇಂದ್ರತ್ವಂ ॥ ೪ ॥ ಅಲ್ಲಿಂ ಬಂದು ಮರ್ತ್ಯಲೋಕದೊಳ್ನೂಸವಾಸೆಂಬಂತೆ ತ್ರಿಜ್ಞಾನಧರನಾಗಿ ಪುಟ್ಟಿ ಸುರೇಂದ್ರವಂದ್ಯನಾಗಿ ಗರ್ಭಾವತರಣ, ಜನ್ಮಾಭಿಷೇಕಕಲ್ಯಾಣಮನೆಯ್ದಿ ಸ್ವಾಭಾವಿಕಾತಿಶಯಮನೆಯ್ದು ಕುಮಾರಕಾಲಂ ಪೋಗೆ ಷಟ್ಖಂಡಮಂಡಲಾಧಿಪತಿತ್ವಮನೆಯ್ದುವದು ಚಕ್ರವರ್ತಿತ್ವಂ ॥ ೫॥ ಆ ಚಕ್ರವರ್ತಿಪದವಿಯಲ್ಲಿ ವಿರಕ್ತನುತ್ಪನ್ನಬೋಧನಾಗಿ ಲೌಕಾಂತಿಕ ದೇವರ್ಬಂದು ಪ್ರತಿಬೋಧಿಸೆ ದೇವನಿರ್ಮಿತ ಶಿಬಿಕಾರೂಢನಾಗಿ ದೀಕ್ಷಾಗ್ರಹಣಮನೆಯ್ದಿ ಮೂಲೋತ್ತರಗುಣಂಗಳಿಂ ಛದ್ಮಸ್ಥಕಾಲಮಂ ಕಳಿಪಿ ಶುಕ್ಲಧ್ಯಾನದಿಂ ಘಾತಿಚತುಷ್ಟಯಮಂ ಕೆಡಿಸಿ ಅನಂತಚತುಷ್ಟಯಮನೆಯ್ದಿ ಸಮವಸರಣಲಕ್ಷ್ಮಿಯೊಳ್ಕೂಡಿರುವದು ಪರಮಾರ್ಹಂತ್ಯಂ ॥೬ ॥ ಮುನ್ನಂ ಘಾತಿಗಳ ಕೆಡಿಸೊಡನೆ ದಗ್ಧರಜ್ಜುಸಮಾನವಾಗಿರ್ದ ಅಘಾತಿಚತುಷ್ಟಯಮನಾಯುಷ್ಯದೊಳು ಸಮಾನವಾಗದೊಡೆ ದಂಡ ಕವಾಟ ಪ್ರತರ ಲೋಕಪೂರಣಮೆಂಬ ಸಮುದ್ಘಾತಂಗಳಮಾಡಿ ಯೋಗನಿರೋಧಂಗೆಯ್ದು ನಿರವಶೇಷಂ ಕೆಡಿಸಿ ಸಮ್ಯಕ್ತ್ವಾದ್ಯಷ್ಟಗುಣಂಗಳೊಳ್ಕೂಡಿ ಪರಿನಿರ್ವಾಣಮನೆಯ್ದುವುದೇಳನೆಯ ಪರಮಸ್ಥಾನವಾಗುವದು. ॥ ೭ ॥

ಕಂದ ॥ ಭೂನುತರತ್ನತ್ರಿತಯಂ ।
ಮಾನವತಿಲಕಂಗೆ ಸಯ್ಪಿನಿಂ ಸಮನಿಸಿದಂ- ॥
ದೀ ನೆಗಳ್ದ ಸಪ್ತಪರಮ ।
ಸ್ಥಾನಂಗಳ ನೆಯ್ದುಗುಂ ಮನೋಮುದದಿಂದಂ ॥ ೩೩೦ ॥

ಪ್ರಕೀರ್ಣಕವೆಂದೊಡಂ ಜೋಳಿಕೆಯೆಂದೊಡಂ ಏಕಾರ್ಥಂ ||

ಶ್ಲೋಕ || ಪ್ರಕೀರ್ಣಕಾವಾರ್ತವಾಕ್ಯಾನಾಮುಕ್ತಿರುಕ್ತಂ ಪ್ರಕೀರ್ಣಕಂ ||
ಉಕ್ತಾನುಕ್ತಾಮೃತಾಶ್ಯಂದಿ ಬಿಂದುಸ್ವಾದನ ಕೋವಿದೈಃ || ೫೧ ||

ಆಚಾರ್ಯರ ಲಕ್ಷಣವೆಂತೆನೆ—

ಶ್ಲೋಕ || ಪ್ರಾಜ್ಞಃ ಪ್ರಾಪ್ತ ಸಮಸ್ತ ಶಾಸ್ತ್ರಹೃದಯಃ ಪ್ರವ್ಯಕ್ತ ಲೋಕಸ್ಥಿತಿಃ ||
ಪ್ರಾಸ್ತಾಶಃ ಪ್ರತಿಭಾಪರಃ ಪ್ರಶಮವಾನ್ಪ್ರಾಗೇವದೃಷ್ಟೋತ್ತರಃ || ೫೨ ||
ಪ್ರಾಯಃ ಪ್ರಶ್ನಸಹಃ ಪ್ರಭುಃ ಪರಮನೋಹಾರೀ ಪರಾನಿಂದಯಾ ||
ಭೂಯಾದ್ಧರ್ಮಕಥಾಗ್ರಣೀರ್ಗುಣನಿಧೀ ಪ್ರಸ್ಪಷ್ಟಮೃಷ್ಟಾಕ್ಷರಃ || ೫೩ ||

ಹರಿಣೀ ವೃ. || ತಮವಿಕಲಂ ಶುದ್ಧಾ ವೃತ್ತಿಃ ಪರಪ್ರತಿಬೋಧನೇ |
ಪರಿಣತಿರುರುದ್ಯೋಗೋ ಮಾರ್ಗಪ್ರವರ್ತನಸದ್ವಿಧೌ ||
ಬುಧನುತಿರನುತ್ಸೇಕೋ ಲೋಕಜ್ಞತಾ ಮೃದುತಾಸ್ಪೃಹಾ |
ಯತಿಪತಿಗುಣಾ ಯಸ್ಮಿನ್ನನ್ಯೇ ಚ ಸೌ ಚ ಗುರುಸ್ಸತಾಂ || ೧೩೧ ||

ಶ್ಲೋಕ || ಪ್ರಣಮ್ಯತಾನ್ಗುರೂನ್ಭಕ್ತ್ಯಾ ತಸ್ಯಾತ್ಮಾನಂ ಸಮರ್ಪ್ಯಸಃ |
ದ್ರವ್ಯಲಿಂಗಂ ಪ್ರಗೃಹ್ಣೀಯಾದ್ಭಾವಲಿಂಗಾಭಿವೃದ್ಧಯೇ || ೫೪ ||
ದೀಕ್ಷಾಯೋಗ್ಯಾಸ್ತ್ರಯೋ ವರ್ಣಾಃ ಚಾತುರ್ವರ್ಣಾವಿಧೋಚಿತಾಃ |
ಮನೋವಾಕ್ಕಾಯ ಚೇಷ್ಟಾಭಿರ್ಮತಾಃ ಸರ್ವೇಪಿ ಜಂತವಃ || ೫೫ ||
ಸಕಲಂ ವಿಕಲಂ ಚೇತಿ ದ್ವಯಂ ವ್ರತಮುದೀರಿತಂ ||
ತದ್ವಯಂ ಹಿ ತ್ರಿವರ್ಣಾನಾಂ ಶೂದ್ರಾಣಾಂ ವಿಕಲಂ ವ್ರತಂ || ೫೬ ||
ಅಣುವ್ರತಂ ಪುರಾಧೃತ್ವಾ ಪರಾವ್ರತಪದೋದ್ಯತಾಃ |
ದ್ವಿಜಾತಯ ಸ್ತ್ರಿವರ್ಣಾರ್ಥಾಃ ಶೂದ್ರಾಯೋಣುವ್ರತೋಚಿತಾಃ || ೫೭ ||
ಸರ್ವಜ್ಞಾ ದೀಕ್ಷಣ್ಯೈರ್ಯೋಗ್ಯಾ ವಿಪ್ರಕ್ಷತ್ರಿಯವಾಣಿಜಾಃ ||
ಕುಲಜಾತಿವಿಹೀನಾನಾಮ್ ನ ದೀಕ್ಷಾ ಜಿನಶಾಸನೇ || ೫೮ ||
ವಿಪ್ರೋ ವಾ ಕ್ಷತ್ರಿಯೋ ವಿಡ್ವಾಸಂಪೂರ್ಣಾಕ್ಷಃ ಶರೀರಕಃ |
ನಾತಿಬಾಲೋ ನ ವೃದ್ಧೋಯಂ ನಿರ್ವ್ಯಾಧಿಶ್ಚ ತಪಃ ಕ್ಷಮಃ || ೫೯ ||
ಕೇವಲಜ್ಞಾನಸಂಭೂತೇ ಅರ್ಹತ್ಸಕಲಸಂಯಮಃ ||
ತಸ್ಯೋತ್ಪತ್ತಿ ಸ್ತ್ರಿವರ್ಣೋಪಿ ಕ್ರಿಯೋಚ್ಚೈರ್ಗೋತ್ರಕರ್ಮಸು || ೬೦ ||

ವೃತ್ತ|| ಪ್ರಾಜ್ಞಾಲೋಕವ್ಯವಹೃತಮತಿನಾ ತೇನಮೋಹೋಜ್ಝಿತೇನ |
ಪ್ರಾಗ್ವಿಜ್ಞಾತಸ್ಸುದೇಶೋ ದ್ವಿಜನೃಪತಿ ವಣಿಗ್ವರ್ಣವರ್ಣಾಂಗಪೂರ್ಣಾಃ ||
ಭೂಭಿಲೋಕಾವಿರುದ್ಧಃ ಸ್ವಜನಪರಿಜನೋನ್ಮೋಚಿತೋ ವೀತಮೋಹಃ |
ಚಿತ್ತಾಪಸ್ಮಾರರೋಗಾದ್ಯಪಗತ ಇತಿ ಚ ಜ್ಞಾನಿಸಂಕೀರ್ತನಾದ್ಯೈಃ || ೧೩೨ ||

ಗಾಹೆ ॥ ದೇಶಕುಲಜಾಯಿ ಶುದ್ಧಾ ವಿಶುದ್ಧಮಣವಯಣಕಾಯಸಂಜುತ್ತಾ ।
ಲೋಕಜುಗುಚ್ಛಾರಹಿದೋ ಪುರಿಸೋ ಪುರಿಸೋ ಜಿಣರೂವಧಾರಣೆ ಜೊಗ್ಗೋ ॥೧೭॥

ಶ್ಲೋಕ॥ ಅಚೇಲಕ್ಯ ವ್ರತಂ ಯಚ್ಚ ನೀಚಾನಾಂ ಮುನಿಪುಂಗವಃ ।
ಜಿನಾಜ್ಞಾಯಾಃ ಕ್ಷತಿಂ ಕೃತ್ವಾ ಪರ್ಯ್ಯೇತಿ ಭವಸಾಗರಂ ॥ ೬೧ ॥

ದ್ರವ್ಯಲಿಂಗಮೆಂತುಟೆನೆ—

ಶ್ಲೋಕ॥ ಯಸ್ಯಚೋತ್ಪಾಟಿತಶ್ಮಶ್ರುಕೇಶೋ ಹಿಂಸಾದಿ ವರ್ಜಿತ: ।
ಸದ್ರೂಪಂ ನಿಃಪ್ರತೀಕಾರಂ ಯಥಾಜಾತಸ್ಸಮುಚ್ಚಯೇತ್ ॥ ೬೨ ॥

ಭಾವಲಿಂಗಮೆಂತುಟೆನೆ—

ಶ್ಲೋಕ॥ ನಾನ್ಯಾದಿನೋಪ್ಯಾಹಂ ನಾನ್ಯೇನ್ಯಸ್ಯುರ್ಮೇದಿನಾಯಿತಿ ।
ದೃಶ: ಸನ್ಮತಿರ್ಭಾವಲಿಂಗಸ್ಯಾತ್ ನಾಗ್ನ್ಯಾಕ್ಷ ಜಯಧಾರಿಣಾಃ ॥ ೬೩ ॥
ಲಿಂಗದ್ವಯಮಿದಂ ಚೈವ ಜ್ಞಾನದೃಕ್ಸಾಮ್ಯಸಂಯುತಂ ।
ಮೋಕ್ಷಹೇತುರ್ಭವೇತ್ ಪುಂಸಾಂ ಮೂರ್ಛಾರಂಭಾದಿ ವರ್ಜಿತಃ ॥ ೬೪ ॥

---

## ದ್ರವ್ಯಸ್ತ್ರೀಯರ ದೀಕ್ಷಾವಿಧಾನಮೆಂತೆನೆ—

ಶ್ಲೋಕ ॥ ಲೋಕದ್ವಯಾನಪೇಕ್ಷಾ ಹಿ ಧರ್ಮ್ಮಸ್ಸರ್ವಜ್ಞಭಾಷಿತಃ ॥
ಅತಸ್ತಸ್ಮಿನ್‌ಕೃತಸ್ತ್ರೀಣಾಂ ಲಿಂಗಂ ಸಗ್ರಂಥಮಿಷ್ಯತೇ ॥ ೬೫ ॥
ಕರ್ಮಭೂದ್ರವ್ಯನಾರೀಣಾಂ ನಾದ್ಯಂ ಸಂಹನನತ್ರಯಂ ॥
ವಸ್ತ್ರಾದಾನಾಚರಿತ್ರಂ ಚ ತಾಸಾಂ ಮುಕ್ತಿಕಥಾವೃಥಾ ॥ ೬೬ ॥
ತೇ ನೈವ ಜನ್ಮನಾನಾಸ್ತಿ ಮುಕ್ತಿಸ್ತ್ರೀಣಾಂ ಹಿ ನಿಶ್ಚಯಾತ್ ॥
ತಾಸಾಂ ಯೋಗ್ಯಂ ತಪಶ್ಚಿಹ್ನಂ ಪೃಥಕ್ಕೃತ್ವೋಪವರ್ಣಿತಂ ॥ ೬೭ ॥
ಏಕಮಪ್ಯೇಷು ದೋಷೇಷು ವಿನಾ ನಾರೀ ನ ವರ್ತತೇ ॥
ಗಾತ್ರಸಂವರಣಂ ನಾಸ್ತಿ ತಸ್ಯಾತ್ಸಂವರಣಂ ತತಃ ॥ ೬೮ ॥
ಚಿತ್ತಸ್ರವೋಲ್ಪ ಶಕ್ತಿಶ್ಚ ರಜಃ ಪ್ರಸ್ಖಲಿನಂ ತಥಾ ॥
ಸ್ತ್ರೀಷೂತ್ಪತ್ತಿಶ್ಚ ಸೂಕ್ಷ್ಮಾಣಾಮಪರ್ಯಾಪ್ತ ನೃಣಾಂ ಭವೇತ್ ॥ ೬೯ ॥
ಕಕ್ಷಸ್ತನಾಂತರೇದೇಶೇ ನಾಭೌ ಗುಹ್ಯೇ ಚ ಸಂಭವಃ ॥
ಸೂಕ್ಷ್ಮಾಣಾಂ ಚ ತತಃ ಸ್ತ್ರೀಣಾಂ ಸಂಯಮೋ ನಾಸ್ತಿ ತತ್ವತಃ ॥ ೭೦ ॥
ದರ್ಶನಂ ನಿರ್ಮಲಜ್ಞಾನಂ ಸೂತ್ರಪಾಠೇನ ಬೋಧಿತಃ ॥
ಯದ್ಯಾಪ್ಯುಗ್ರಾಚರೇಚಾರ್ಯಾ ತಥಾಪಿ ಸ್ತ್ರೀ ನ ಸಿಧ್ಯತಿ ॥ ೭೧ ॥
ಯದಿ ತ್ರಿರತ್ನಮಾತ್ರೇಣ ಸಾಪುಂಸಾನಗ್ನತಾವೃಥಾ ॥
ತಿರಶ್ಚಾಮಪಿದುರ್ವಾರಾ ನಿರ್ವಾಣಾಪಿರಲಿಂಗತಾ ॥ ೭೨ ॥

ಮುಕ್ತೇಶ್ಚೇದಸ್ತಿ ಕಿಂ ತಾಸಾಂ ಪ್ರತಿಮಾಸ್ತವನಾನ್ಯಪಿ ॥
ಕ್ರಿಯಂತೇ ಪೂಜ್ಯತೇ ತಾಸಾಂ ಮುಕ್ತೇರಸ್ತುಜಲಾಂಜಲಿಃ ॥ ೭೩ ॥
ತತಸ್ತಗ್ಯೋಗ್ಯಮೇವೋಕ್ತಂ ಲಿಂಗಂ ಸ್ತ್ರೀಣಾಂ ಜಿನೋತ್ತಮೈಃ ॥
ತಲ್ಲಿಂಗಂ ಯೋಗ್ಯಚಾರಿತ್ರಂ ಸಜ್ಜಾತಿ ಪ್ರಕಟಾತ್ತತಃ ॥ ೭೪ ॥
ದೇಶವ್ರತಾನ್ವಿತೈಸ್ತಾಸಾಂ ಆರೋಪ್ಯಂತೇ ಬುಧೈಸ್ತತಃ ॥
ಮಹಾವ್ರತಾನಿ ಸಜ್ಜಾತಿಜ್ಞಪ್ತ್ಯರ್ಥಮುಪಚಾರತಃ ॥ ೭೫ ॥

ಗಾಹೆ ॥ ಪುವ್ವಾಯಿಂವೇಯತ್ತಾ ಪುರಿಸಾ ವೇ ಖವಗಸೇಡಿಮಾರೂಢಾ ॥
ಸೇಸೋದಯೇಣವಿರಹಾ ಜಾಣುವಜುತ್ತಾಯ ತೇಹು ಸಿಜ್ಜಂತಿ ॥ ೧೮ ॥

ಅರ್ಥ—ವೇ=ಯಾರು ಕೆಲವರು, ಪುರಿಸಾ=ಪುರುಷರು, ಪುವ್ವಾಯಿಂವೇಯತ್ತಾ=ಭಾವಪುಂವೇದವನ್ನು ಅನುಭವಿಸುತ್ತಿರ್ದವರು, ಖವಗಸೇಡಿಮಾರೂಢಾ=ಕ್ಷಪಕಶ್ರೇಣಿಯನೇರಿದವರುಗಳುಂ, ಜಾಣುವಜುತ್ತಾಯ=ನಿಜಶುದ್ಧ ನಿಶ್ಚಯಾತ್ಮಧ್ಯಾನೋಪಯೋಗಯುಕ್ತರಾಗಿ, ತೇಹು=ಅವರುಗಳು ಸಿಜ್ಜಂತಿ=ಸಿದ್ಧಿಯನ್ನು ಹೊಂದಿದವರು, ತಹಾ=ಹಾಗೆಯೇ ದ್ರವ್ಯದಿಂ ಪುರುಷರು, ಸೇಸೋದಯೇಣ=ವಿಭಾವದಿಂ ಸ್ತ್ರೀವೇದಂ ಮೇಣ್ ನಪುಂಸಕವೇದಂ ಮೇಣ್ ಪರಮಾತ್ಮಧ್ಯಾನೋಪಯೋಗಯುಕ್ತರಾಗಿಯವರ್ಗಳುಂ ಸಿದ್ಧಿಯನೆಯ್ದುಗುಂ, ಸಕಲ ವಿಮಲ ಕೇವಲಜ್ಞಾನದರ್ಶನಾನಂತಸುಖವೀರ್ಯಾಧೀಶ್ವರನಾದ ಜಿನೇಶ್ವರಂಗೆ ಘಾತಿಕರ್ಮಂಗಳ ನಿರವಶೇಷಕ್ಷಯದಿಂ ನೆರಪಲುಪಟ್ಟ ಶುಭಂಗಳುಂ ಶುದ್ಧಂಗಳುಮಪ್ಪ ಕರ್ಮ ನೋಕರ್ಮ ಯೋಗ್ಯಂಗಳಾದ ವಿಶಿಷ್ಟ ಪರಮಾಣುಪೊರ್ದುವದನ್ನಾಹಾರಮೆಂಬುದು, ಅದಲ್ಲದುಳಿದ ಚತುರ್ವಿಧಾಹಾರಂ ಕೇವಲಿಗಿಲ್ಲೆಂದು ನಿಶ್ಚಯಿಸುವದು. ಮತ್ತಂ ದ್ರವ್ಯಸ್ತ್ರೀಗೆ ತದ್ಭವಮೋಕ್ಷವುಂ ಘಟಿಯಿಸದೆಂದರಿದು ಆರೊಳಂ ವಿವಾದಂ ಮಾಡಲಾಗದು. ಮಾಡಿದೊಡೆ ರಾಗದ್ವೇಷಗಳುಂಟಾಗುವವು, ಅದು ಸಂಸಾರಕ್ಕೆ ಕಾರಣಮೆಂದು ತಿಳಿದು ಉಪಾದೇಯಂ ನಿರ್ಗ್ರಂಥಮೇ ಮೋಕ್ಷಕ್ಕೆ ಕಾರಣಂ, ಸ್ವರೂಪೋಪಲಬ್ಧಿಯೇ ಮುಕ್ತಿ, ನಿಜನಿತ್ಯಾನಂದಾಮೃತಸೇವೆಯೇ ಮೋಕ್ಷಫಲವೆಂದು ನಿಶ್ಚಯಿಸುವದು.

ಗಾಹೆ ॥ ಣಾಣಾಜೀವೋ ಣಾಣಾಕಮ್ಮಮು ಣಾಣಾವಿಹೋಹವೇಲದ್ಧಿ ।
ತಮ್ಹಾಮುಯಣವಿವಾದಂ ಸಗಪರಸಮುಯೇಸುವಜ್ಜೆಜ್ಜೋ ॥ ೧೯ ॥
ಜಂ ಅಣ್ಣಾಣಿಕಮ್ಮಂ ಖವೇಯಿಭವಸಯೇಸಹಸ್ಸಕೋಡೀಹಿಂ ।
ತಣ್ಣಾಣಿತಿಹಿಗುತ್ತೋ ಖವೇಯಿ ಊಸ್ಸಾಸಮೆತ್ತೇಣ ॥ ೨೦ ॥
ಕುಸಳಸ್ಸತಶೋಣಿಉಣಸಸ್ಸಸಂಜಮೊಸಮಪರಸ್ಸವೆರಗ್ಗೊ ।
ಸುದಭಾವಣಸ್ಸತಿಣ್ಣಿವಿತಮ್ಹಾ ಸುದಭವಾಣಂ ಕುಣಹಂ ॥ ೨೧ ॥
ಸಮುಸತ್ತುಬದ್ದುವಗ್ಗೋ ಸಮುಸುಹ ದುಖ್ಖೋಪಸಂಸಣಿಂದಸಮೋ ।
ಸಮುಲೆಡುಕ್ಕಂಚಣಾವಿಯ ಜೀವಿಯಮರಣೆಸಮೋಸವಹೋ। ೨೨ ॥
ಏಯಗ್ಗಗದೋಸಮಣಾ ಏಯಣ್ಣಣಿತ್ತಿದೇಸು ಅತ್ಥೇಸು ।
ಣಿಥಿತ್ತಿಆಗಮದೋ ಆಗಮಚಿತ್ತೋತದೋಛೆಕ್ಕೋ ॥ ೨೩ ॥

ಶ್ರವಣಾವವ ಉತ್ತಮಪಾತ್ರಂ ತಥಾಹಿ ಶ್ರವಣಾಃ ಸರ್ವೇಭ್ಯಃ ಶ್ರೇಷ್ಠಾ ಜ್ಯೇಷ್ಠಾಃ ವರಿಷ್ಠಾಃ ಶುದ್ಧಾತ್ಮಸಮಾಧಿನಿಷ್ಟತ್ವಾತ್, ನಿತ್ಯಾನಿತ್ಯವಸ್ತುವಿವೇಕಿತ್ವಾತ್, ಸಮುಸಮಾಧಿ ಸಂಪನ್ನತ್ವಾತ್, ಅತ್ರಾಮುತ್ರಜ ಭೋಗಕಾಂಕ್ಷಾರಹಿತತ್ವಾತ್, ಮೋಕ್ಷಾರ್ಥಿತ್ವಾತ್, ತತ್ವಯಾಥಾತ್ಮ್ಯಕವೇದಿತ್ವಾತ್, ಯುಕ್ತ್ಯಾವಿಚಾರಕತ್ವಾತ್, ತತ್ವಯಾಥಾತ್ಮ್ಯಶ್ರವಣಾದಿಮತ್ವಾತ್, ಅದುಕ್ತ ಸಾಧನಂ ತದುಕ್ತೇಸಾಧ್ಯಂ, ಯಥಾಸಂಪ್ರತಿಸಂನ್ಯೆಯೋಗಿ ತದಾಚೈತೇಶ್ರವಣಾಃ ॥ ತಸ್ಮಾತ್ಸರ್ವೇಭ್ಯಃ ಶ್ರೇಷ್ಠಾ ಭವಂತಿ ತಥಾ ಶ್ರವಣಾಃ ಸರ್ವೇಭ್ಯಃ ಉತ್ಕೃಷ್ಟಾಃ ವಿಶಿಷ್ಟಾಶ್ಚ ತತ್ವಯಾಥಾತ್ಮ್ಯ ಪ್ರತಿಪಾದಕತ್ವಾತ್ ॥

ಗಾಹೆ ॥ ಆಗಮುಚಖ್ಖೂಸಾಹೂ ಇಂದಿಯಚಖ್ಖೂಣಿಸಬ್ಬಭೂದಾಣಿ ।
ದೇವಾಯಒಹಿಚಖ್ಖೂ ಸಿದ್ಧಾಪುಣಸವ್ವದೋಚಖ್ಖೂ ॥ ೨೪ ॥

ಶ್ಲೋಕ ॥ ಶಾಸ್ತ್ರಹೀನಶ್ಚಯೋಭಿಕ್ಷುರ್ನಚಾನ್ಯಶ್ಚಭವೇದಸೌ ।
ತಸ್ಯಾಜ್ಞಾನಸ್ಯ ನ ಧ್ಯಾನಂ ಧ್ಯಾನಾಭಾವಾನ್ನನಿರ್ವೃತಿಃ ॥ ೭೬ ॥

ವೃತ್ತ ॥ ವೃಚ್ಚಾಲಿನೀ ಮಹಿಷಹಂಸಶುಕಸ್ವಭಾವಾ- ।
ಮಾರ್ಜಾರಕಂಕಮಲಕಾಜಜಲೂಕ ಸಾಮ್ಯಾಃ ॥
ಸಚ್ಛಿದ್ರಕುಂಭಪಶುಸರ್ಪಶಿಲೋಪಮಾನಾ ।
ಸ್ತೇ ಶ್ರಾವಕಾ ಭುವಿಚತುರ್ದಶಧಾ ಭವಂತಿ ॥ ೨೩೩ ॥

ಶ್ಲೋಕ ॥ ಆಲಸ್ಯೋ ಮಂದಬುದ್ಧಿಶ್ಚ ಸುಖಿನೋ ವ್ಯಾಧಿಪೀಡಿತಾಃ ।
ನಿದ್ರಾಲುಃ ಕಾಮುಕಶ್ಚೇತಿ ಷಡ್ಯೆತೇ ಶಾಸ್ತ್ರವರ್ಜಿತಾಃ ॥ ೭೭ ॥

ಅಸೂಯಕತ್ವಂ ಸತತಾವಿಚಾರೋ ।
ದುರಾಗ್ರಹಃ ಶಕ್ತಿವಿಮಾನನಂ ಚ ॥
ಪುಂಸಾಂ ಮಿಮೇ ಪಂಚ ಭವಂತಿ ದೋಷಾ- ।
ಸ್ತತ್ವಾವಬೋಧಪ್ರತಿಬಂಧಹೇತುಃ ॥ ೭೮ ॥

ಅದುರ್ಜನತ್ವಂ ವಿನಯೋ ವಿವೇಕಃ ।
ಪರೀಕ್ಷಣಂ ತತ್ವವಿನಿಶ್ಚಯಶ್ಚ ॥
ಏತೇ ಗುಣಾಃ ಪಂಚ ಭವಂತಿ ತಸ್ಯ ।
ಸ್ವಾತ್ಮತ್ವವಾನ್ ಧರ್ಮ ಯಥಾ ಪರಸ್ಯಾತ್ ॥ ೭೯ ॥

ಆಚಾರ್ಯಪುಸ್ತಕಸಹಾಯನಿವಾಸವಲ್ಲಾ ।
ಬಾಹ್ಯಸ್ತಿತಾಃ ಪಠನಪಂಚಗುಣಾ ಭವಂತಿ ॥

ಆರೋಗ್ಯಬುದ್ಧಿವಿನಯೋದ್ಯಮಶಾಸ್ತ್ರರಾಗಾಃ ।
ತೇಭ್ಯಂತರಾಃ ಪಠನಪಂಚಗುಣಾ ಭವಂತಿ ॥ ೮೦ ॥

ಆಚಾರ್ಯೋಪಾಸನಂ ಶ್ರದ್ಧಾ ಶಾಸ್ತ್ರಾರ್ಥಸ್ಯ ವಿವೇಚನಂ ।
ತತ್ರಯಾಣಾಮನುಷ್ಠಾನಂ ಶ್ರೇಯಃ ಪ್ರಾಪ್ತ್ಯೈಪರೇಗುಣಾಃ ॥ ೮೧ ॥

ಪಲ್ಯಂಕಾಸನಗ: ಸೂರಿ ವಾದಂ ನತ್ವಾ ಕೃತಾಂಜಲಿಃ ।
ಸೂತ್ರಸ್ಯಾಧ್ಯಯನಂ ಕುರ್ಯ್ಯಾತ್ ಕಕ್ಷಾದಿ ಸ್ವಾಂಗಮಸ್ಪೃಶಂ ॥ ೮೨ ॥

ಶ್ಲೋಕ॥ ಕ್ರಿಯಾಕಲಾಪಮಲ್ಪಾಲ್ಪ ಸೂತ್ರಾಣ್ಯಾಚಾರವರ್ಣನಂ ।
ಪಠೇದಥ ಪುರಾಣಾನಿ ತ್ರಿಲೋಕಸ್ಥಿತಿವರ್ಣನಂ ॥ ೮೩ ॥

ಸಿದ್ಧಾಂತತರ್ಕಮಂಗಾಂಗಂ ಬಾಹ್ಯಂ ದೇವಾರ್ಥದೇಶನಂ ।
ಸ್ವೀಯ ಶಕ್ತ್ಯನುಸಾರೇಣ ಭಕ್ತ್ಯಾ ಸ್ವರ್ಮೋಕ್ಷಕಾಂಕ್ಷಯಾ ॥ ೮೪ ॥

ಗಾಹೆ ॥ ಬಾರಸವಿಹಯ್ಯತವೆ ಅಬ್ಭತ್ತರ ಬಾಹಿರೇಕುಸಳದಿಠ್ಠೆ ।
ಣವಿಯಥಿಣ ವಿಯಹೋಹದಿ ಸಜ್ಝಾಯಸಮತ್ತವೊಕ್ಕಮ್ಮಂ ॥ ೨೫ ॥

ದಬ್ಬಾದಿಕ್ಕಂತೋಪಠೇದಿಪುತ್ತಂಥ ಸಿಕ್ಖಲೋಹೇಣ ।
ಆಸಮಾಹಿ ಅಸಜ್ಝಾಯಂ ಕಲಹಂ ವಾಯಿಂದಿಯೋಗಂ ಚ ॥ ೨೬ ॥

ಆರ್ಯೆ ॥ ಅಷ್ಟಮ್ಯಾಮಧ್ಯಯನಂ ಗುರುಶಿಷ್ಯದ್ವಯ ವಿಯೋಗಮಾಹೇತಿ ।
ಕಲಹಾತು ಪೌರ್ಣಿಮಾಸ್ಯಾಂ ಕರೋತಿ ವಿಘ್ನಂ ಚತುರ್ದಶ್ಯಾಂ ॥ ೮೫ ॥

ಕೃಷ್ಣ ಚತುರ್ದಶ್ಯಾಂ ಯದಿ ಅಧೀಯತೇ ಸಾಧವೋಪ್ಯಮಾವಾಸ್ಯಾಂ ।
ವಿದ್ಯೋಪವಾಸವಿಧಯೋ ವಿನಾಶವೃತ್ತಿಂ ಪ್ರಯಾಂತಿ ಸರ್ವೇಪ್ಯಚಿರಾತ್ ॥ ೮೬ ॥

ಮಧ್ಯಾಹ್ನೇ ಜಿನರೂಪನ್ನಾಶಯತಿ ಸಂಧ್ಯಯೋಃ ವ್ಯಾಧಿದಂ ।
ಮಧ್ಯಮರಾತ್ರೌ ಪಠಿತೇ ತುಷ್ಯಂತೋಪಪ್ರಿಯತ್ವಮುಪಯಾಂತಿ ॥ ೮೭ ॥

ಅಷ್ಟಮೀಹಂತ್ಯುಪಾಧ್ಯಾಯಂ ಶಿಷ್ಯಂ ಹಂತಿ ಚತುರ್ದಶೀ ।
ವಿದ್ಯಾಂ ಪಂಚದಶೀಹಂತಿ ಸರ್ವಂಹಿ ಪ್ರತಿಪದ್ಧರೇತ್ ॥ ೮೮ ॥

ತಾ:—ಹಾರಗುಣ ಮುಕ್ತಾಫಲದವೋಲು ಚೈತನ್ಯಾನ್ವಯದ್ರವ್ಯಮುಂ, ಚೈತನ್ಯ ವಿಶೇಷಗುಣಮುಂ, ಚೈತನ್ಯವ್ಯತಿರೇಕಪರ್ಯಾಯಮನುಳ್ಳಾತ್ಮದ್ರವ್ಯಂ ಮೊದಲಾದವಾಗಮದಿಂ ಸಿದ್ಧಮಪ್ಪುದರಿಂ ಶಾಸ್ತ್ರಜ್ಞರೇ ಶ್ರವಣೋತ್ತಮರೆಂಬುದರ್ಥಂ.

ಇತಿ ಶ್ರೀಮಾಘನಂದ್ಯಾಚಾರ್ಯವಿರಚಿತೇ ಶಾಸ್ತ್ರಸಾರಸಮುಚ್ಚಯೇ
ಚರಣಾನುಯೋಗವರ್ಣನಂ ನಾಮ ತೃತೀಯ: ಪರಿಚ್ಛೇದ: ।
ಇಂತು ಶ್ರೀಮಾಘನಂದ್ಯಾಚಾರ್ಯರು ವಿರಚಿಸಿದ ಶಾಸ್ತ್ರಸಾರಸಮುಚ್ಚಯದೊಳ್
ಚರಣಾನುಯೋಗವೆಂಬ ಮೂರನೆಯಾಧ್ಯಾಯಂ ।



॥ ಶ್ರೀಜಿನಸಿದ್ಧೇಭ್ಯಃ ॥

# ದ್ರವ್ಯಾನುಯೋಗಂ



ಸಿದ್ಧಾನ್ನತ್ವಾ ಪ್ರವಕ್ಷ್ಯಾಮಿ ದ್ರವ್ಯಾನುಯೋಗಸಂಜ್ಞಕಂ ।
ಮಂಗಲಾದಿ ಪ್ರಸಿದ್ಧ್ಯರ್ಥಂ ಸ್ವಾತ್ಮೋಥ ಸುಖಸಿದ್ಧಯೇ ॥

ವೃತ್ತ॥ ಗಂಭೀರಂ ಮಧುರಂ ಮನೋಹರತರಂ ದೋಷವ್ಯಪೇತಂ ಹಿತಂ ।
ಕಂಠೋಷ್ಠಾದಿ ವಚೋ ನಿಮಿತ್ತರಹಿತಂ ನೋವಾತರೋದೋದ್ಗತಂ ॥
ಸ್ಪಷ್ಟಂ ತತ್ವಮಭಿಷ್ಟವಸ್ತುಕಥಕಂ ನಿಶ್ಯೇಷಭಾಷಾತ್ಮಕಂ ।
ದೂರಾಸನ್ನಸಮಂ ಸಮಂ ನಿರುಪಮಂ ಜೈನಂ ವಚಃ ಪಾತುವಃ ॥ ೧ ॥

ಶ್ಲೋಕ ॥ ಸಿದ್ಧಿರ್ಬುದ್ಧಿರ್ಜಯೋ ವೃದ್ಧಿ ರಾಜ್ಞಃ ಪುಷ್ಟಿಸ್ತಥೈವ ಚ ।
ಓಂಕಾರಶ್ಚಾಥ ಶಬ್ದಶ್ಚ ನಾಂದೀಮಂಗಲವಾಚಿನಃ ॥ ೧ ॥

ಈ ಎಂಟು ಶಬ್ದಗಳುಂ ನಾಂದೀಮಂಗಲ ವಾಚಿಗಳುಂ.

ಶ್ಲೋಕ ॥ ಹೇತೌ ನಿದರ್ಶನೇ ಪ್ರಶ್ನೇ ಸ್ತುತೌ ಕಂಠಸಮೀಕೃತೇ ।
ಅನನ್ತ್ಯೈಯೋರ್ಯಧಿಕಾರಥೇ ಮಾಂಗಲ್ಯೇ ತಯಿಷ್ಯತೇ ॥ ೨ ॥

ಈ ಶಾಸ್ತ್ರದಲ್ಲಿ ಪೇಳಿದ ಶಬ್ದಮಂಗಳಾರ್ಥ ಮೇಣನನ್ತರಾಧಿಕಾರಾರ್ಥವಾಗಿ ಪೇಳಲು ಪಡುಗುಮಲ್ಲಿಂ ಮಂಗಳನಿಮಿತ್ತ ಫಲಪರಿಣಾಮನಾ ಕರ್ತೃಗಳೆಂಬಾರಧಿಕಾರಂಗಳಿಂ ಮುಂ ಪೇಳ್ದು ಬಳಿಕ ಶಾಸ್ತ್ರವನ್ನು ಆಚಾರ್ಯಂ ವ್ಯಾಖ್ಯಾನವನ್ನು ಮಾಡಬೇಕೆಂಬೀ ನ್ಯಾಯಮನರಿದಾ ಹೇಯೋಪಾದೇಯತತ್ವಪರಿಜ್ಞಾನಾರ್ಥಂ ದ್ರವ್ಯಾನುಯೋಗಮಂ ಪೇಳ್ವನದೆಂತೆನೆ—

---

## ಸೂತ್ರಂ॥ ಅಥಃ ಷಡ್ದ್ರವ್ಯಾಣಿ ॥ ೧ ॥

ಅಥಃ ಚರಣಾನುಯೋಗ ಕಥನಾಂತರಂ ೧ ಜೀವದ್ರವ್ಯಂ, ೨ ಅಜೀವದ್ರವ್ಯಂ, ೩ ಧರ್ಮದ್ರವ್ಯಂ, ೪ ಅಧರ್ಮದ್ರವ್ಯಂ, ೫ ಆಕಾಶದ್ರವ್ಯಂ, ೬ ಕಾಲದ್ರವ್ಯಮೆಂದಿವು ಆರು ಷಡ್ದ್ರವ್ಯಂಗಳಾಗುವವು. ಇವುಗಳಿಗೆ ದ್ರವ್ಯವೆಂಬ ಹೆಸರು ಹ್ಯಾಗುಂಟಾಯಿತೆಂದರೆ:— "ದ್ರವಂತಿತಿ ದ್ರವ್ಯಂ ದ್ರವತಿ ಗಚ್ಛತಿ ಪರಿಣಾಮಿತಿ " ಎಂದರೇಕಾರ್ಥವು ಅತೀತಾನಂತಕಾಲ ದೊಳು ಪರಿಣಮಿಸುತ್ತಿರುವದು, ವರ್ತಮಾನಕಾಲದಲ್ಲಿ ಪರಿಣಮಿಸುತಿರ್ಪುದು, ಅನಾಗತಕಾಲ ದಲ್ಲಿ ಪರಿಣಮಿಸಲುವೇಡಿರ್ಪುದು ಮೇಣ್ ಸತ್ತಾಲಕ್ಷಣವನ್ನುಳ್ಳದ್ದು ಮತ್ತು ಉತ್ಪಾದ, ವ್ಯಯ, ಧ್ರೌವ್ಯದೋಳ್ ಕೂಡಿರುವದು ಮತ್ತು ಗುಣಪರ್ಯಾಯಗಳನ್ನುಳ್ಳದು ಮೇಣ್ ದ್ರವ್ಯವೆಂಬು ವದು ಒಂದನೊಂದು ಬಿಟ್ಟಿರುವದಿಲ್ಲವು. ಮತ್ತೂ ಈ ದ್ರವ್ಯದ ಲಕ್ಷಣವು ಹ್ಯಾಗೆಂದರೆ:—

ಜ್ಞಾನದರ್ಶನೋಪಯೋಗವನ್ನುಳ್ಳದ್ದು ಜೀವದ್ರವ್ಯವು ॥ ೧ ॥ ವರ್ಣಗಂಧರಸ ಸ್ಪರ್ಶಂಗಳಿಂ ಗಳಯಿಸುವ ಪೂರಿಸುವ ಸ್ವರೂಪವನ್ನುಳ್ಳದ್ದು ಪುದ್ಗಲದ್ರವ್ಯವು ॥ ೨ ॥ ಧರ್ಮದ್ರವ್ಯ ಸ್ವರೂಪದಿಂದ ಮೂರ್ತವುಂ ಅನಾದಿ ನಿಧನವುಂ ಅಗುರುಲಘುತ್ವವುಂ ಅವ್ಯಾಬಾಧತ್ವವುಂ ಉತ್ಕೃಷ್ಟಮಮುಂ ಲೋಕಾಕಾರವುಪ್ಪುದು ಗುಣದಿಂದಂತರಂಗ ಗಮನಕ್ರಿಯೆಯನ್ನುಳ್ಳ ಜೀವಪುದ್ಗಲಂಗಳ ಗಮನಾಗಮನಕ್ಕೆ ಬಹಿರಂಗ ಸಹಕಾರಿಕಾರಣವೂದುದೆಂತೆನೆ— ಜಲವು ಹ್ಯಾಗೆ ಮತ್ಸ್ಯಮಕರಾದಿಗಳಾದ ಜಲಚರಂಗಳ ಗಮನಾಗಮನಕ್ಕೆ ಕಾರಣವಾಗಿರುವದು ಅದರಂತೆಯೇ ಧರ್ಮದ್ರವ್ಯವುಂ ಬಹಿರಂಗಸಹಕಾರಿ ಕಾರಣವಾಗಿರುವದು. ತಾನೆಲ್ಲಿಗೂ ಹೋಗತಕ್ಕದಲ್ಲ, ಇದಕ್ಕರ್ಥ ಪರ್ಯಾಯವಲ್ಲದೆ ವ್ಯಂಜನಪರ್ಯಾಯಮಿಲ್ಲ, ಅರ್ಥಪರ್ಯಾಯದಿಂದ ಒಂದೇ ಸಮಯದೊಳು ಉತ್ಪತ್ತಿಯುಂ, ವಿನಾಶವುಂ, ಉಳ್ಳದ್ದು ದ್ರವ್ಯಸ್ವರೂಪದಿಂದ (ಅಚಾಲ್ಯ) ಸ್ಥಿರವಾಗಿರುವದು. ಆ ಅರ್ಥಪರ್ಯಾಯಗಳ ಸ್ವರೂಪವು ಹ್ಯಾಗೆಂದರೆ—ಏಕ ಸಮಯದಲ್ಲಿ ಅಗುರುಲಘುತ್ವಪರಿಣತ್ಯಾತ್ಮಕವಾದ ಷಡ್ವೃದ್ಧಿಹಾನಿಗಳಾಗುವವು. ಹ್ಯಾಗಂದರೆ—೧ ಅನಂತಭಾಗವೃದ್ಧಿಯುಂ, ೨ ಅಸಂಖ್ಯಾತಭಾಗವೃದ್ಧಿಯುಂ, ೩ ಸಂಖ್ಯಾತಭಾಗ ವೃದ್ಧಿಯುಂ, ೪ ಸಂಖ್ಯಾತಗುಣವೃದ್ಧಿಯುಂ, ೫ ಅಸಂಖ್ಯಾತಗುಣವೃದ್ಧಿಯುಂ, ೬ ಅನಂತ ಗುಣವೃದ್ಧಿಯುಂ ಎಂದಿವು ಷಡ್ವೃದ್ಧಿಗಳಾಗುವವು ॥ ೬ ॥ ಅನಂತಭಾಗಹಾನಿ, ಅಸಂಖ್ಯಾತ ಭಾಗಹಾನಿ, ಸಂಖ್ಯಾತಭಾಗಹಾನಿ, ಸಂಖ್ಯಾತಗುಣಹಾನಿ, ಅಸಂಖ್ಯಾತಗುಣಹಾನಿ, ಅನಂತ ಗುಣಹಾನಿಯೆಂದು ಇವು ಷಡ್ಹಾನಿಗಳಾಗುವವು ॥ ೬ ॥ ಮತ್ತಂ ಸೂಕ್ಷ್ಮಾಲಕ್ಷಣಕ್ಷಯೇಣ, ಸ್ತಥಾವರ್ಗೋಚತುರಾ:, ಸರ್ವಜ್ಞದೃಷ್ಟಿವಿಷಯಾಭವಂತಿ, ಅನಾದಿನಿಧನೇದ್ರವ್ಯೈಸ್ಸಪರ್ಯಾಯ: ಪ್ರತಿಕ್ಷಣಂ, ಉನ್ಮಜ್ಜಂತಿ ನಿಮಜ್ಜಂತಿ, ಜಲಕಲ್ಲೋಲವಜ್ಜಲೆ.

ಕಂದ॥ ಇನ್ನಿದರಸತತ್ವರುಚಿಯಿಂ- ।
ದಿನಿದಿಕ್ಕುಂ ತತ್ವನಿರ್ಣಯಂ ಬಳಿಕದರಿಂ- ॥
ದಿನಿದಾತ್ಮೋಥಿಕ ಸುಖಮಿಂ- ।
ತಿಸಿದಿದೆಸೆವಿಸಲುಕಿದರಿನಯಸಾರತೆಯುಂ ॥ ೨ ॥

ಇಂತು ದ್ರವ್ಯಗುಣಪರ್ಯಾಯದಿಂದ ಧರ್ಮದ್ರವ್ಯವು ಹೇಳಲ್ಪಟ್ಟಿತು. ಈ ರೀತಿಯಾಗಿ ಅಧರ್ಮದ್ರವ್ಯಮುಂ ದ್ರವ್ಯದಿಂ ಪರ್ಯಾಯದಿಂ ಧರ್ಮದ್ರವ್ಯಕ್ಕೆ ಹೇಳಿದ ಹಾಗೆ ಹೇಳುವದು. ಗುಣದಿಂದಂತರಂಗಸ್ಥಿತಿ ಪರಿಣತಂಗಳಾದ ಜೀವಪುದ್ಗಲಂಗಳ ಸ್ಥಿತಿಗೆ ಅಧರ್ಮದ್ರವ್ಯವು ಬಹಿರಂಗಸಹಕಾರಿಕಾರಣವಾಗುವದು, ಅದು ಹ್ಯಾಗೆಂದರೆ—ಅಂತರಂಗಸ್ಥಿತಿಪರಿಣತರಾಗಿ ಮಾರ್ಗದಲ್ಲಿ ಪ್ರಯಾಣಮಾಡುವವರ ನಿಲವಿಂಗೆಂತು ವೃಕ್ಷಚ್ಛಾಯ ಬಹಿರಂಗ ಸಹಕಾರಿಕಾರಣವಾಗುವದು ಅದರಂತೆಯೇ ಅಧರ್ಮದ್ರವ್ಯದ ಗುಣವೂ ತಿಳಿಯಲ್ಪಡುವದು.

ಕಂದ॥ ಗತಿಗಂ ಸ್ಥಿತಿಗಂ ಕಾರಣ- ।
ಮತಿಶಯದಿಂದೆರಡುಮಲ್ತೆ ಧರ್ಮಾಧರ್ಮಂ ॥
ಮತಿವಂತರರಿದು ಭಾವಿಸೆ ।
ಶ್ರುತಮದು ಸಂವಿತ್ತಿಯಾಗದಿಕ್ಕುಮೆ ಬಗೆಯಿಂ ॥ ೩ ॥

ಇನ್ನು ಆಕಾಶದ್ರವ್ಯದ ಲಕ್ಷಣವು ಹ್ಯಾಗೆಂದರೆ—ದ್ರವ್ಯದಿಂ ಪರ್ಯಾಯದಿಂ ಮೊದಲು ಧರ್ಮದ್ರವ್ಯಕ್ಕೆ ಹೇಳಿದ ಹಾಗೆ ಹೇಳುವದು ಮತ್ತೊಂದು ವಿಶೇಷಂ ಅಲೋಕಾಕಾಶಕ್ಕೆ ಅನನ್ತ ಪ್ರದೇಶವೆಂದರಿಯುವುದು. ಗುಣದಿಂದೆಲ್ಲಾ ದ್ರವ್ಯಂಗಳಿಗೆ ಇರಲು ಎಡೆಗೊಡುವದು ಹ್ಯಾಗೆಂದರೆ—ಲೋಕಾಕಾಶಂಗಳಸಂಖ್ಯಾತಗಳಾಗುವವು. ಅಂತಪ್ಪ ಪ್ರದೇಶಂಗಳೊಳೊಂದರೊಳನಂತ ಪರಮಾಣುಗಳುಂ ಸೂಕ್ಷ್ಮಸ್ಕಂಧಗಳುಂ ಎಂದಿವುಗಳಿಗೆ ಅವಾಸವಾಗುವದು, ಅವುಗಳಿಗೆ ದೃಷ್ಟಾಂತವನ್ನು ತೋರಿಸುವೆನು. ಒಂದು ಘಟದಲ್ಲಿ ಬೂದಿಯನ್ನು ತುಂಬಿ, ಮತ್ತೊಂದು ಘಟದಲ್ಲಿ ಸೂಜಿಯನ್ನು ತುಂಬಿ, ಬೇರೊಂದು ಕೊಡದಲ್ಲಿ ನೀರನ್ನು ತುಂಬಿ, ಆ ಬೂದಿಯನ್ನು ತುಂಬಿರುವಕೊಡದೊಳಗೆ ಮತ್ತೆರಡು ಘಟದಲ್ಲಿರುವ ಸೂಜಿಯನ್ನೂ ನೀರನ್ನೂ ತುಂಬಿದರೆ ಇವುಗಳನ್ನೆಲ್ಲವನ್ನೂ ಅದೊಂದೇ ಒಳಕೊಳ್ಳುವದು. ಒಂದು ಕೊಡದ ಒಂಟೆಯ ಹಾಲನ್ನು ಒಂದುಕೊಡದ ಜೇನುತುಪ್ಪವನ್ನೂ ಒಂದೇಕೊಡವು ಒಳಕೊಳ್ಳುವದು. ಮೇಣೊಂದು ಕೊಡದವೊಸರನ್ನು ಒಂದುಕೊಡದ ಅನ್ನವು ಒಳಕೊಳ್ಳುವದು. ಮೇಣೊಂದೇ ಗೂಢ ನಾಗಗದ್ಯಾಣಮನೇಕ ಸಹಸ್ರ ಸುವರ್ಣಗದ್ಯಾಣವನ್ನು ಒಳಕೊಳ್ಳುವದು, ಒಳಕೊಂಡೊಡೆ ಒಂದೇ ಗದ್ಯಾಣತೂಕವಾಗುವದು. ಮೇಣೆಲ್ಲಾಯಿಕ್ಕಿ ಸುವರ್ಣವನ್ನು ತೆಗೆದರೆ ಆ ಗೂಢನಾಗವೊಂದೇ ಗದ್ಯಾಣತೂಕವಾಗುವದು. ಇಂತಿವು ಮೊದಲಾದ ದೃಷ್ಟಾಂತರಗಳಿಂದ ಆಕಾಶದ್ರವ್ಯಕ್ಕೆ ಅವಗಹನ ಶಕ್ತಿಯುಂಟಾಗಿರುವದರಿಂದಸಂಖ್ಯಾತಪ್ರದೇಶಿಗಳಾದ ಧರ್ಮಾಧರ್ಮದ್ರವ್ಯಂಗಳುಂ ಅವನ್ನೋಡಲನನ್ತ ಗುಣಗಳಾದ ಪುದ್ಗಲದ್ರವ್ಯಂಗಳಂ ಲೋಕಾಕಾಶ ಪ್ರಮಾಣಗಣನೆಯನ್ನುಳ್ಳ ಕಾಲಾಣುಗಳ್ಗೆ ಇರಲೆಡೆಗೊಡಲಾಕಾಶದ್ರವ್ಯಂ ಸಮರ್ಥವೆಂಬುದರ್ಥಂ, ಪ್ರದೇಶಕ್ಕೆ ಲಕ್ಷಣವು ಹ್ಯಾಗೆಂದರೆ-ಕಿಚ್ಚಿಂ ಬೇಯದು ನೀರಿಂ ನೆನೆಯದು ಕೆಸರಿಂ ಕೊಳೆಯದು ವಜ್ರದಿಂದೊಡೆಯದು ಅದಾವುದೊಂದು ಅದು ಪರಮಾಣುವೆಂಬುವದು ಅದಿಪ್ಪಠಾವು ಪ್ರದೇಶವೆಂಬುವದು.

ಕಂದ॥ ಅವಗಹನ ಶಕ್ತಿಯುಳ್ಳುದು ।
ಭುವನದೊಳಾರಯ್ದು ನೋಳ್ಪಡಾಕಾಶಮೆನಲ್ ॥
ಸವಿಶೇಷದಿಂದ ಮತ್ತಮ- ।
ದವಕಾಶಂ ಗೊಟ್ಟಡೈದು ದ್ರವ್ಯಂಗಳಿಗಂ ॥ ೪ ॥

ಠಾ:—ಇದರರ್ಥಪರ್ಯಾಯಮಲ್ಲದೆ ವ್ಯಂಜನಪರ್ಯಾಯವಿಲ್ಲ ಅರ್ಥಪರ್ಯಾಯದಿಂದ ಒಂದೇ ಸಮಯದೊಳು ಉತ್ಪತ್ತಿಯುಂ, ವಿನಾಶಮನುಳ್ಳದು, ದ್ರವ್ಯಾರ್ಥಿಕನಯದಿಂದ ಬಾಹಲ್ಯಮುಪ್ಪುದು, ಮತ್ತಂ, ಧರ್ಮಾಧರ್ಮಾಕಾಶಂ ತಮ್ಮೊಳು ಸಮನಾಗಿ ಕಾಲದೊಳ್ ವರ್ತಿಸುಗುಂ, ಧರ್ಮಾಧರ್ಮದ ಪೊರಗಿಂತೋರ್ಮೊದಲೊಳ್ ವರ್ತಿಸಿತು ಲೋಕಾಕಾಶಂ, ಆದರಿಂದೆಲ್ಲಾ ದ್ರವ್ಯಂಗಳು ಆಕಾಶದೊಳ್ನೆಲಸಿದವು ಆಕಾಶಮುಂ ತನ್ನೊಳೆ ನೆಲಸಿತ್ತು ತಾನೇ ಆಧಾರಮುಂ ಆದೇಯಮುಮುಪ್ಪುದೆನೆ, ಪರವಾದಿ ಎಂಗುಂ, ಎಲ್ಲಾ ದ್ರವ್ಯಂಗಳ್ಗಂ ಆಕಾಶವೇ ಆಧಾರಮುಪ್ಪುದೆಂದು ಪೇಳ್ವಡೆಲ್ಲಾ ಪುದ್ಗಲಂಗಳ ಗತಿಗಂ ಸ್ಥಿತಿಗಂ ಆಕಾಶವೇ ಆಧಾರವಾಗಲು ಸಾಲದೆ? ಧರ್ಮಾಧರ್ಮ ದ್ರವ್ಯಂಗಳಿರುವುವೆನೆ, ಅಧ್ಯಾತ್ಮವಾದಿ ಎಂದುಂ, ಮೆಂತೆಂಬೆಯಪ್ಪೊ

ಡೆಲ್ಲಾ ಲೋಕಮುಂ ಪದಿನಾಲ್ಕುರಜ್ಜುವೆಂದು ಪ್ರಮಾಣಿಸುವುದಾಗದು. ಸಕಲಕರ್ಮಕ್ಷಯಂ ಗೆಯ್ವ ಜೀವಂಗಳೆಲ್ಲಂ ಲೋಕಾಗ್ರದೊಳ್ನೆಲಸಲರಿಯವೇಕೆಂದೊಡೆ, ಆಕಾಶಮೆನಿತುಂಟು ಉಳ್ಳನ್ನೇವರಂ ಸಿದ್ಧರುಂ ಸಂಸಾರಿಜೀವಂಗಳುಂ ಪುದ್ಗಲದ್ರವ್ಯಂಗಳು ಸಲುವವುಮಕ್ಕುಂ. ಇಂತು ಸಂದದು ಲೋಕದ ಕಡೆಗೆ ವೃದ್ಧಿಯುಂ ಅಲೋಕಾಕಾಶಕ್ಕೆ ಹಾನಿಯುಂ, ಕಾಣಲ ಕ್ಕುಂ. ಅದರಿಂದಾಕಾಶ ದ್ರವ್ಯಮುವಗಹನಕ್ಕೆ ಕಾರಣಮಲ್ಲದೆ ಗತಿಗಂ ಸ್ಥಿತಿಗಂ ಕಾರಣಮಲ್ತು. ಅದರಿಂದ ಧರ್ಮಾಧರ್ಮಂಗಳೇ ಕಾರಣಂಗಳಾದವು. ಅದರಿಂದಲೇನೇ ಲೋಕಮಾದುದೆಲ್ಲ ವರಿಂ ಪೊರಗಾಕಾಶವೊಂದೇಯಕ್ಕುಮೆಂದು ಸಂಬಂಧಿಸುವುದು.

## ಕಾಲದ್ರವ್ಯದ ಗುಣಪರ್ಯಾಯವು ಹ್ಯಾಗೆಂದರೆ—

ಮುಖ್ಯಕಾಲಮುಂ, ವ್ಯವಹಾರಕಾಲಮುಮಿಂತೆರಡಕ್ಕುಂ. ಅಲ್ಲಿಂ ಮುಖ್ಯಕಾಲಮೆಂತ ಪ್ಪುದೆನೆ, ದ್ರವ್ಯಸ್ವರೂಪದಿಂದ ಅಮೂರ್ತವುಂ ಅಕ್ಷಯಮುಂ, ಅನಾದ್ಯನಿಧನಮುಂ, ಅಗುರು ಲಘುತ್ವದ ಗುಣದಿಂದ ಅನಂತವುಂ, ಅಕೃತ್ರಿಮುಮುಂ, ಅವಿಭಾಗಿ ಪರಮಾಣುವಿನಷ್ಟಬ್ಧ ಪ್ರದೇಶ ಪ್ರಮಾಣದಿಂದೇಕ ಪ್ರದೇಶಿಯುಂ, ತನ್ನೊಳು ಮತ್ತೊಂದು ಸಪ್ರತಿಪಕ್ಷ ಪ್ರದೇಶಿಯು ಮಿಲ್ಲಪ್ಪುದರಿಂದ ಪ್ರದೇಶಿಯುನುಪ್ಪುದು.

ಕಂದ॥ ಏಕಪ್ರದೇಶಿಯುಪ್ಪುದ- ।
ನೇಕರಿವ್ಯೆಮುಖ್ಯಕಾಲಮುಂ ಲೋಕದೊಳಿ- ॥
ರ್ದಾಕಾಶದ ಪ್ರದೇಶದೊ- ।
ಳೇಕದು ವರ್ತಿಸದೀ ರತ್ನರಾಸಿಯು ತೆರದಿಂ ॥ ೫ ॥

ಮತ್ತಂ ಗುಣದಿನೆಂತಪ್ಪುದು ಈ ಜೀವದ್ರವ್ಯಂ ಮೊದಲಾಗೆಲ್ಲಾ ದ್ರವ್ಯಂಗಳಿಗೆ ಉತ್ಪತ್ತಿ ವಿನಾಶಸ್ವರೂಪವಾದ ಅರ್ಥಪರ್ಯಾಯಮುಂ ಪುಟ್ಟಿಸಲೇ ಕಾರಣಮಪ್ಪೆಡದುವೆಗುಣಮಕ್ಕು ಮೆನೆ ಪರವಾದಿ ಎಂಗುಮೆಂತು ಪರ್ಯಾಯಮುಂ ಪುಟ್ಟಿಸಲು ಕಾರಣಮಾದುದೆನೆ, ಜೈನವಾದಿ ಎಂಗುಂ ನೀರಿಂಗೆತೆರೆಗಳಂ ಪುಟ್ಟಿಸಲ್ಕೆ ಘಾಳಿಯೆಂತು ನಿಮಿತ್ತಮಾದುದಂತೆಯೆಂದು ಸಂಬಂಧಿ ಸುವುದೆಂಮತ್ತಮಿದರ್ಥಪರ್ಯಾಯಮಲ್ಲದೆ ವ್ಯಂಜನಪರ್ಯಾಯಮಿಲ್ಲ, ಅರ್ಥಪರ್ಯಾಯ ದಿಂದೊಂದೇ ಸಮಯದೊಳು ಉತ್ಪತ್ತಿಯುಂ ವಿನಾಶಮುಮನುಳ್ಳದು ದ್ರವ್ಯಸ್ವರೂಪದಿಂದ ಅಚಾಲ್ಯಮಪ್ಪುದು. ಮತ್ತಂ ವಿಶೇಷದಿಂ ಪರಮಾರ್ಥಕಾಲಮೆಂತಪ್ಪುದೆನೆ, ಮಂದಗತಿ ಪರಿಣತ ನಪ್ಪ ಪುದ್ಗಲಪರಮಾಣುವಿರ್ದ ಕ್ಷೇತ್ರಮುಂ ದಾಂಟುವ ಪೊತ್ತಂ ಸಮಯಮೆಂಬುದು. ಇದು ಮೊದಲಾದುವು ವ್ಯವಹಾರಕಾಲಂ ಮತ್ತಮೊಂದು ಸಮಯದೊಳು ಪುದ್ಗಲಪರಮಾಣು ನಾಲ್ಕು ರಜ್ಜುವಂ ದಾಂಟುವುದೆಂಬುದು ಶೀಘ್ರಪ್ರತ್ಯಾಪೇಕ್ಷೆಯಿಂ ಪೇಳೆಪಟ್ಟುದೆನೆ, ಒಬ್ಬ ಪುರುಷಂ ಮಂದಗತಿಯಂ ನಿಚ್ಚಲುಂಗಾವುದನಡೆವಾತಂ ವಿದ್ಯಾಪ್ರಭಾವದಿಂದೊಂದು ದಿನದೊಳು ನೂರು ಗಾವುದಂ ನಡೆದೊಡಂ ನೂರುದಿನಮಾಗದಂತೆ ನಿಶ್ಚಯಕಾಲಮುಮೆಂದೆಂತೆನೆ—ಸಿಂಹ ಶಬ್ದ ದಿಂ ಸಿಂಹಮುಂಟೆಂಬಂತೆ ಇಂದ್ರ ಶಬ್ದದಿಂದ ಇಂದ್ರನುಂಟೆಂಬಂತೆ, ಆ ವ್ಯವಹಾರಕ್ಕಾಲ ಮುಂ ನಿಶ್ಚಯಕಾಲದ ಪರ್ಯಾಯಮೆಂದರಿಯಲು ಪಡುಗು. ಮತ್ತಂ ದ್ರವ್ಯಮಿಲ್ಲದೆ ಪರ್ಯಾ ಯಂ ದೊರಕೊಳ್ಳದೆಂತೆನೆ——ಸುವರ್ಣಮಿಲ್ಲದೆ ಕಂಕಣಪರ್ಯಾಯಮುಂ, ಮೃತ್ಪಿಂಡಮಿಲ್ಲದೆ

ಘಟಪರ್ಯಾಯಮುಂ, ದೊರೆಕೊಳ್ಳನಪ್ಪುದರಿಂ, ನಿಶ್ಚಯಕಾಲವಿಲ್ಲದೆ ಸಮಯಾವಳಿ ಮೊದಲಾದ ವ್ಯವಹಾರಕಾಲಮುಂ ಪುಟ್ಟಸದಪ್ಪುದರಿಂ ಲೋಕ ಪರಮಾಣುದ್ರವ್ಯವುಂಟೆಂದರಿಯುವದು. ಮತ್ತಂ ಲೋಕದಿಂ ಪೊರಗೆ ಕಾಲದ್ರವ್ಯವಿಲ್ಲಪ್ಪುದರಿಂ ಲೋಕಾಕಾಶಮೆಂತು ವರ್ತಿಸುವುವೆಂದೊಡಾಕಾಶದದ್ರವ್ಯಮಖಂಡಮಪ್ಪುದರಿಂದಿಲ್ಲೆಂದಾಕಾಲದ್ರವ್ಯನೇ ನಿಮಿತ್ತಮಾಗಿ ವರ್ತಿಸುವುದು. ಎಂತು ಕುಂಭಕಾರಚಕ್ರವೊಂದ.ಠಾವಂ ಮುಟ್ಟದೊಡೆಂತು ತಿರುಗುಗುಂ, ಮೇಣಿಂದ್ರಿಯ ಜನಿತ ಸುಖದು:ಖಮೇಕದೇಶಾನುಭವದಿಂ ಸರ್ವಾಂಗಮ ವ್ಯಾಪಿಸ:ಗುಮೆಂದಾಕಾಶದ್ರವ್ಯದ ಪರಿವರ್ತನೆಗೆ ಈ ಲೋಕದ ಕಾಲದ್ರವ್ಯಮೇ ನಿಮಿತ್ಯಮೆಂದರಿಯುವದು.

ಶ್ಲೋಕ ॥ ನಿಮಿತ್ತಮಾಂತರಂ ತತ್ರ ಯೋಗ್ಯತಾ ವಸ್ತುನಿಶ್ಚಿತಾ ।
ಬಹಿರ್ನಿಶ್ಚಯಕಾಲಸ್ತು ನಿಶ್ಚಿತಂ ತತ್ವದರ್ಶಿಭಿ: ॥ ೨ ॥

ಗಾಹೆ ॥ ಕಿಪ್ಪಣವಿಯೇಣಬಹುಣಾಚೇಸಿದ್ಧಾಣರವರಾಗಯೇಕಾವೆ ॥ ೧ ॥

ಸಿರಿಣಾಮುಪರಿಣಮನಶಕ್ತಿಗೆ ತಾನೇ ಕಾರಣಂಗಳಕ್ಕುಂ. ಮತ್ತಮಿಾ ದ್ರವ್ಯಂಗಳೊಳಗೆ ಶುದ್ಧನಿಶ್ಚಯನಯದಿಂ ನಿಜಶುದ್ಧಾತ್ಮದ್ರವ್ಯಮುಪಾದೇಯಮೆಂಬುದು ತಾತ್ಪರ್ಯಂ.

ಗಾಹೆ ॥ ಏವಂ ಛಬ್ಬೇದಮಿದಂ ಜೀವಾಜೀವಪ್ಪಭೇದದೊದಬ್ಬುತ್ತಂ ।
ಕಾಳವಿಯುತ್ತಣ್ಣಾದಬ್ಬಾ ಪಂಚಅತ್ಥಿಕಾಯಂದ ಇ ॥ ೨ ॥

---

## ಸೂತ್ರಂ ॥ ಪಂಚಾಸ್ತಿಕಾಯಾಃ ॥ ೨ ॥

ತಾಃ—೧ ಜೀವಾಸ್ತಿಕಾಯ, ೨ ಪುದ್ಗಲಾಸ್ತಿಕಾಯ, ೩ ಧರ್ಮಾಸ್ತಿಕಾಯ, ೪ ಅಧರ್ಮಾಸ್ತಿಕಾಯ, ೫ ಆಕಾಶಾಸ್ತಿಕಾಯಮೆಂದು ಇವೈದುಂ ಪಂಚಾಸ್ತಿಕಾಯಂಗಳಾಗುವವು ಈ ಐದಕ್ಕೂ ಕಾಯಗಳೆಂಬ ಹೆಸರು ಹ್ಯಾಗುಂಟಾಯಿತೆಂದರೆ—

ಕಾಲತ್ರಯದೊಳುಮುಂಟಪ್ಪುದರಿಂದಸ್ತಿ ಎಂಬುದು. ಬಹುಪ್ರದೇಶಪ್ರಚಯತ್ವಮನುಳ್ಳುದರಿಂ ಶರೀರದಂತೆ ಕಾಯಮೆಂಬುದು. ಅದೆಂತೆನೆ—ಬಂದು ಜೀವಕ್ಕಂ, ಧರ್ಮದ್ರವ್ಯಕ್ಕಂ, ಅಧರ್ಮದ್ರವ್ಯಕ್ಕಂ, ಲೋಕಾಕಾಶಕ್ಕಂ ಪ್ರತ್ಯೇಕ ಲೋಕಮುಮಸಂಖ್ಯಾತಪ್ರದೇಶಮುಮಕ್ಕುಂ. ಅಲೋಕಾಕಾಶಕ್ಕನಂತಪ್ರದೇಶಮುಕ್ಕುಂ. ಪುದ್ಗಲದ್ರವ್ಯಕ್ಕೆ ಸಂಖ್ಯಾತಾಸಂಖ್ಯಾತಾನಂತತ್ರುಣಪ್ರದೇಶಂಗಳಕ್ಕುಂ. ಕಾಲದ್ರವ್ಯಕ್ಕೆ ತ್ರಿಕಾಲದೊಳೆಂದುಂ ಏಕಪ್ರದೇಶಮಪ್ಪುದರಿಂದಸ್ತಿತ್ವಮಲ್ಲದೆಕಾಯತ್ವಮಿಲ್ಲ. ಏಕಪ್ರದೇಶಿಯಪ್ಪ ಪುದ್ಗಲಪರಮಾಣುವಿಂದಸ್ತಿಕಾಯತ್ವಮೆಂತೆನೆ—ಸ್ನಿಗ್ಧರೂಕ್ಷತ್ವಗುಣದಿಂ ಪರಿಣಮಿಸಿ ಬಹುಪ್ರದೇಶಿಯಪ್ಪ ಶಕ್ತಿಯುಂಟಪ್ಪುದರಿಂದುಪಚಾರದಿಂದಸ್ತಿಕಾಯಮೆಂಬುದು.

ಪ್ರದೇಶಕ್ಕೆ ಲಕ್ಷಣಮೆಂತೆನೆ—ವಿಭಾಗಿಯಪ್ಪ ಪುದ್ಗಲಪರಮಾಣುವಿಹ ಠಾವಂ ಪ್ರದೇಶಮೆಂಬುದು ಆ ಪ್ರದೇಶಮನಂತಾನಂತ ಪರಮಾಣುಗಳ್ಗೆರಲೆಡೆಗೊಡಲು ಸಮರ್ಥಮೆಂದಿಂತಾಕಾಶದವಗಹನ ಶಕ್ತಿಗೆ ದೃಷ್ಟಾಂತಮುಂ ಪೇಳಿಪಟ್ಟುದು.

## ಷಡ್ದ್ರವ್ಯ ಪಂಚಾಸ್ತಿಕಾಯಂಗಳ ಚೂಳಿಕೆಯಂ ಪೇಳ್ವೆಂ.

ಗಾಹೆ ॥ ಪರಿಣಾಮಜೀವಮುತ್ತಂ ಸಪದೇಸಂ ಏಯಖೆತ್ತಕಿರಿಯಾಯ ।

ಣಿಚ್ಚಂ ಕಾರಣತಕ್ಕಂ ತಾಸಬ್ಬಗದಮಿದರವ್ಹಿಯಪದೇಣ ॥ ೩ ॥

ತಾ:--ಪರಿಣಾಮಸ್ವಭಾವವಿಭಾವಪರ್ಯಾಯಾಪೇಕ್ಷೆಯಿಂ ಜೀವಪುದ್ಗಲದ್ರವ್ಯಂಗಳು ಪರಿಣಾಮಿಗಳು, ಉಳಿದ ನಾಲ್ಕುಂ ದ್ರವ್ಯಂಗಳು ವಿಭಾವವ್ಯಂಜನಪರ್ಯಾಯಭಾವದಿಂ ಮುಖ್ಯವೃತ್ತಿಯಿಂ ಅಪರಿಣಾಮಿಗಳು.

ವ್ಯಂಜನಪರ್ಯಾಯ ಲಕ್ಷಣಮೆಂತೆನೆ—ಸ್ಥೂಲಮುಂ, ಅಕಾಲಸ್ಥಾಯಿಯುಂ, ವಾಗ್ವಿಷಯಮುಂ, ಇಂದ್ರಿಯಜ್ಞಾನಗೋಚರಮುಮಕ್ಕುಂ. ಜೀವಂ ಶುದ್ಧನಿಶ್ಚಯನಯದಿಂ ವಿಪುಲಜ್ಞಾನದರ್ಶನಭಾವಶುದ್ಧ ಚೈತನ್ಯಪ್ರಾಣದಿಂ, ಅಶುದ್ಧ ನಿಶ್ಚಯನಯದಿಂ ರಾಗಾದ್ಯಶುದ್ಧಭಾವಪ್ರಾಣಂಗಳಿಂದ ಅನುಪಚರಿತಾಸದ್ಭೂತ ವ್ಯವಹಾರನಯದಿಂ ಇಂದ್ರಿಯ ಬಲಾಯುರುಚ್ಛ್ವಾಸ ಅನ್ನಪಾನಮೆಂಬ ನಾಲ್ಕುಂ ಪ್ರಾಣಂಗಳಿಂದಾತ್ಮಂ ಜೀವಿಸಿದುದು, ಜೀವಿಸುತಿರ್ದುದು. ಜೀವಿಸಲಿರ್ದುದು, ಎಂದಿಂತು ಜೀವನೆಂಬುದಂ ತಂದು ಭಾವದಿಂ ಪುದ್ಗಲಾದಿ ಪಂಚದ್ರವ್ಯಂಗಳು ಅಜೀವಂಗಳು. ಮತ್ತಂ ಸ್ಪರ್ಶನ, ರಸನ, ಗಂಧ, ವರ್ಣ ಪೆಡಮುಪ್ಪುದರಿಂ ಪುದ್ಗಲಮೊಂದು ಮೂರ್ತಮೆಂಬುದು. ಅನುಪಚರಿತಾಸದ್ಭೂತ ವ್ಯವಹಾರನಯಾಪೇಕ್ಷೆಯಿಂ ಮೂರ್ತನಾಗಿಯುಂ, ಆತ್ಮಂ ಶುದ್ಧನಿಶ್ಚಯನಯದಿಂದಮೂರ್ತಂ. ಧರ್ಮಾಧರ್ಮಾಕಾಶಕಾಲದ್ರವ್ಯಂಗಳಮೂರ್ತಂಗಳು. ಸಮದೇಶಜೀವಾದಿ ಪಂಚದ್ರವ್ಯಂಗಳು ಪಂಚಾಸ್ತಿಕಾಯಂಗಳಪ್ಪುದರಿಂ ಸಪ್ರದೇಶಿಗಳು. ಬಹುಪ್ರದೇಶಲಕ್ಷಣಕಾಯತ್ವಾಭಾವದಿಂ ಕಾಲದ್ರವ್ಯಮಪ್ರದೇಶಿಯೇ, ಈ ದ್ರವ್ಯಾರ್ಥಿಕನಯದಿಂ ಧರ್ಮಾಧರ್ಮಾಕಾಶದ್ರವ್ಯಂಗಳೇಕಂಗಳುಳಿದ ಜೀವಪುದ್ಗಲಕಾಲಂಗಳನೇಕಂಗಳು. ಖೆತ್ತ=ಸರ್ವದ್ರವ್ಯಾವಕಾಶದಾನ ಸಮರ್ಥ್ಯದಿಂ, ಕ್ಷೇತ್ರಮಾಕಾಶದ್ರವ್ಯಮೊಂದೇ, ದೇಶದ್ರವ್ಯಂಗಳಕ್ಷೇತ್ರಂಗಳು, ಕಿರಿಯಾಯ=ಕ್ಷೇತ್ರದಿಂ ಕ್ಷೇತ್ರಾಂತರಗಮನಮುಳ್ಳುದರಿಂ, ಜೀವಪುದ್ಗಲಂಗಳು ಕ್ರಿಯಾವಂತಂಗಳು, ಧರ್ಮಾಧರ್ಮಾಕಾಶಕಾಲದ್ರವ್ಯಂಗಳು ಪರಿಸ್ಪಂದಾಭಾವದಿಂ ನಿಷ್ಕ್ರಿಯಂಗಳು. ಣಿಚ್ಚಂ—ಧರ್ಮಾಧರ್ಮಾಕಾಶ ಪರಾರ್ಥಕಾಲ ದ್ರವ್ಯಂಗಳರ್ಥಪರ್ಯಾಯಾಪೇಕ್ಷೆಯಿಂದ ಅನಿತ್ಯಂಗಳಾಗಿಯುಂ, ವಿಭಾವವ್ಯಂಜನ ಪರ್ಯಾಯಾಭಾವದಿಂದಲುಂ, ದ್ರವ್ಯಾರ್ಥಿಕನಯದಿಂದಲುಂ ನಿತ್ಯಂಗಳು. ಜೀವಪುದ್ಗಲಂಗಳು ದ್ರವ್ಯಾರ್ಥಿಕನಯಾಪೇಕ್ಷದಿಂ ನಿತ್ಯಂಗಳಾಗಿಯುಂ, ಅರ್ಥಪರ್ಯಾಯಾಪೇಕ್ಷೆಯಿಂದಂ ಅನಿತ್ಯಂಗಳು. ಕಾರಣಂ ಪುದ್ಗಲ ಧರ್ಮಾಧರ್ಮಾಕಾಶಕಾಲದ್ರವ್ಯಂಗಳು ವ್ಯವಹಾರನಯದಿಂ ಜೀವಂ ಶರೀರ ವಾಙ್ಮನ: ಪ್ರಾಣಾಪಾನಾದಿಗಳುಮಂ ಅಸ್ತಿತ್ವವಗಾಹನಾವರ್ತನೆಗಳುಮಂ ಮಾಳ್ಪುದರಿಂ ಕಾರಣಂಗಳು. ಜೀವದ್ರವ್ಯಂ ಗುರುಶಿಷ್ಯರೂಪದಿಂ ಪರಸ್ಪರೋಪಕಾರಮಂ ಮಾಳ್ಪಡಂ ಪುದ್ಗಲಾದಿ ಪಂಚದ್ರವ್ಯಂಗಳ್ಗೇನುಮಂ ಮಾಡದಪ್ಪುದರಿಂದಮಕಾರಣ ಕನ್ತಾಶುದ್ಧ ದ್ರವ್ಯಾರ್ಥಿಕನಯದಿಂ, ಬಂಧಮೋಕ್ಷ ಪುಣ್ಯಾಪಾಪ ಘಟಪಟಾದಿಗಳ್ಗೆ ಜೀವಂ ಕರ್ತೃವಲ್ಲದಿರ್ದೊಡಂ, ಅಶುದ್ಧ ನಿಶ್ಚಯನಯದಿಂ ಶುಭಾಶುಭೋಪಯೋಗ ಪರಿಣತನಾಗಿ, ಪುಣ್ಯ ಪಾಪಬಂಧಕ್ಕೆ ಕರ್ತೃವಾಗಿ, ತತ್ಫಲಭೋಕ್ತೃ

ಮಕ್ಕುಂ. ವಿಶುದ್ಧ ಜ್ಞಾನದರ್ಶನಸ್ವಭಾವ ವಿಶುದ್ಧಾತ್ಮದ್ರವ್ಯ ಸಮ್ಯಕ್‌ಶ್ರದ್ಧಾನ ಜ್ಞಾನಾನುಷ್ಠಾನ ರೂಪಾಭೇದರತ್ನತ್ರಯಾತ್ಮಕ ಶುದ್ಧೋಪಯೋಗ ಪರಿಣತನಾಗಿ, ನಿಜಪರಮಾತ್ಮೋಪಲಂಭ ಲಕ್ಷಣ ಮೋಕ್ಷಕ್ಕೆ ಕರ್ತೃವುಂ, ತತ್ಫಲ ಭೋಕ್ತೃವುಮಕ್ಕುಂ. ಶುಭಾಶುಭ ಶುದ್ಧೋಪಯೋಗ ದೊಳು ಪರಿಣಮಿಸುವ ವಸ್ತು ಮುಂದೆ ಕರ್ತೃತ್ವಮೆಲ್ಲೆಡೆಯೊಳಮರಿಯಲ್ಪಡುಗುಂ. ಪುದ್ಗಲಾದಿ ಪಂಚದ್ರವ್ಯಂಗಳ್ಗೆ ತಂತಮ್ಮ ಪರಿಣಾಮದೊಳು ಪರಿಣಮಿಸುವುದೇ ಕರ್ತೃತ್ವಮಾದೊಡಂ, ವಸ್ತುವೃತ್ತಿಯಿಂ ಪುಣ್ಯಪಾಪರೂಪದಿನಾಕರ್ತೃಮೇ " ಸವ್ವಗದಂ " ಲೋಕವ್ಯಾಪ್ತ್ಯಾಪೇಕ್ಷೆಯಿಂ, ಧರ್ಮಾಧರ್ಮಂಗಳು ಸರ್ವಗತಂಗಳು. ಜೀವದ್ರವ್ಯಮೇಕ ಜೀವಾಪೇಕ್ಷೆಯಿಂ ಲೋಕಪೂರ ಣಾವಸ್ಥೆ ಪೊರಗಾಗಿ ಸರ್ವಗತಮಲ್ಲದು. ನಾನಾಜೀವಾಪೇಕ್ಷೆಯಿಂ ಸರ್ವಗತಮಕ್ಕುಂ. ಪುದ್ಗಲ ದ್ರವ್ಯಂ ಲೋಕರೂಪಮಹಾಸ್ಕಂಧಾಪೇಕ್ಷೆಯಿಂ ಸರ್ವಗತಂ. ಶೇಷಪುದ್ಗಲಾಪೇಕ್ಷೆಯಿಂ ಸರ್ವ ಗತಮಲ್ಲದು, ನಾನಾಕಾಲಾಣುದ್ರವ್ಯಾಪೇಕ್ಷೆಯಿಂ ಲೋಕದೊಳು ಸರ್ವಗತಂ. ಏಕಕಾಲಾಣು ವನ್ನಪೇಕ್ಷಿಯುಂ ಅಸರ್ವಗತಂ. " ಇಯರಪ್ಪಿಪಯಪಯೇಸೋ "—ವ್ಯವಹಾರನಯದಿಂದೆಲ್ಲಾ ದ್ರವ್ಯಂಗಳೇಕ ಕ್ಷೇತ್ರಾವಗಾಹನದಿಂದ ಅನ್ಯೋನ್ಯಾನುಪ್ರದೇಶದಿನಿರ್ದುವಾಗಿಯುಂ, ನಿಶ್ಚಯನ ಯದಿಂ ಸ್ವಕೀಯ ಸ್ವಕೀಯ ಸ್ವರೂಪಮಂ ಪತ್ತುವಿಡುವುವಲ್ಲವು.

ಇಲ್ಲಿಗೆ ಪ್ರಸ್ತುತ ಗಾಹೆ॥ ಅಣ್ಣಣ್ಣಪ್ಪವಿಸಂತಾದೇ ತಾವೋಗಾಸಮಣ್ಣಮಣ್ಣಸ್ಸ ।
ಮೇಳಂತ್ತಾವಿಯಣಿಚ್ಚಂ ಸಗಪಚ್ಚಾವಂಣಮಿಜಹಂತಿ ॥ ೪ ॥

ತಾ॥—ಮತ್ತಮೀ ಷಡ್ದ್ರವ್ಯಂಗಳೊಳಗೆ ಶುದ್ಧ ನಿಶ್ಚಯನಯದಿಂ ಶುದ್ಧ ಬುದ್ಧೈಕ ಸ್ವಭಾ ವಗುಣದಿಂ ಸಮಸ್ತ ಜೀವರಾಸಿಗಳುಪಾದೇಯಮಕ್ಕುಂ. ಅಲ್ಲಿಯುಂ ಭವ್ಯಜೀವಸಮೂಹಂ ಉಪಾದೇಯಮಕ್ಕುಂ. ಮತ್ತಂ ಪರಮ ಶುದ್ಧ ನಿಶ್ಚಯನಯದತ್ತಣಿಂ ಶುಭ ಮನೋವಚನ ಕಾಯ ವ್ಯಾಪಾರರಹಿತ ವೀತರಾಗಚಿದಾನಂದಾದಿ ಗುಣೋಪೇತ ಜಿನಸಿದ್ಧಸದೃಶ ನಿಜಪರಮಾ ತ್ಮತತ್ವ ವೀತರಾಗ ನಿರ್ವಿಕಲ್ಪ ಸಮಾಧಿಕಾಲದೊಳು ಸಾಕ್ಷಾದುಪಾದೇಯಮಕ್ಕುಂ. ಶೇಷದ್ರ ವ್ಯಂಗಳು ಹೇಯಂಗಳೆಂಬುದು ತಾತ್ಪರ್ಯಂ.

ಶ್ಲೋಕ॥ ಬಾದಿಪಂಚಕ ನಿರ್ಮುಕ್ತಂ ಕರ್ಮಾಷ್ಟಕ ವಿವರ್ಜಿತಂ ।
ಚಿದಾತ್ಮಕಂ ಪರಂಜ್ಯೋತಿ ವಂದೇ ದೇವೇಂದ್ರವಂದಿತಂ ॥ ೩ ॥

---

## ಸೂತ್ರಂ॥ ಸಪ್ತತತ್ವಾನಿ ॥ ೨ ॥

ತಾ॥—೧ ಜೀವತತ್ವಂ, ೨ ಅಜೀವತತ್ವಂ, ೩ ಅಸ್ರವತತ್ವಂ, ೪ ಬಂಧತತ್ವಂ, ೫ ಸಂವರತತ್ವಂ, ೬ ನಿರ್ಜರತತ್ವಂ, ೭ ಮೋಕ್ಷತತ್ವಂಗಳೀ ಏಳಕ್ಕುಂ ತತ್ವಮೆಂಬ ಹೆಸರೆಂತಾ ಯಿತೆಂದರೆ—ವಸ್ತುವಿನ ಸ್ವಭಾವಮೆಂಬುದದು ತಾಂತತ್ವಮೆಂಬುದು; ಅಲ್ಲಿಂ ಜೀವತತ್ವ ಮೆಂತೆನೆ? ಅನುಪಚರಿತಾಸದ್ಭೂತ ವ್ಯವಹಾರನಯದತ್ತಣಿಂ ದ್ರವ್ಯಪ್ರಾಣದಿಂದಶುದ್ಧನಿಶ್ಚಯದಿಂ, ರಾಗಾದ್ಯಶುದ್ಧಭಾವಪ್ರಾಣದಿಂ, ಶುದ್ಧನಿಶ್ಚಯದತ್ತಣಿಂ, ಶುದ್ಧಭಾವಪ್ರಾಣದಿಂ, ತ್ರಿಕಾಲದೊಳು ಜೀವಿಸುವ ತ್ರಿವಿಧಜೀವತ್ವಂ ॥ ೩ ॥ ಮೇಣ್ ಏಕೇಂದ್ರಿಯಂಗಳನುಭವಿಸುವ ಕರ್ಮಫಲ

ಚೇತನೆಯುಂ ॥ ೧ ॥ ತ್ರಸಕಾಯಾನುಚರಮಪ್ಪ ಕರ್ಮಕಾರ್ಯಚೇತನೆಯುಂ ॥ ೨ ॥ ಸಿದ್ಧರನುಭವಿಸುವ ಜ್ಞಾನಚೇತನೆಯುಮೆಂಬ ತ್ರಿವಿಧಚೇತನತ್ವಂ ॥ ೩ ॥ ಮೇಣ್ ಭವಾದಿಸಮಯ ರೂಪೋಪಪಾದಯೋಗಮುಂ ॥ ೧ ॥ ಪರ್ಯಾಪ್ತಿಪರ್ಯಾಪ್ತಮಪ್ಪೈಕಾಂತಾನುವೃದ್ಧಿಯೋಗಮುಂ ॥ ೨ ॥ ಭವದ ಕಡೇವರಮಪ್ಪ ಪರಿಣಾಮಯೋಗಮೆಂಬ ಯೋಗತ್ರಯಮುಂ ॥ ೩ ॥ ಮೇಣ್ ವಿಕಲ್ಪರೂಪ ಮನೋವಚನಕಾಯರೂಪ ಯೋಗತ್ರಯಮುಂ ॥೩॥ ಮೇಣ್ ಚೈತನ್ಯ ಬಹಿರಾತ್ಮಾಂತರಾತ್ಮ ಪರಮಾತ್ಮಭೇದದಿಂದ ಆತ್ಮತ್ರಯಮುಂ ॥ ೩ ॥ ಉತ್ಪಾದ, ವ್ಯಯ, ಧ್ರೌವ್ಯತ್ರಯಮುಂ ॥ ೩ ॥ ಮೇಣ್ ಜೀವಮಾರ್ಗಣಾಸ್ಥಾನತ್ರಯಂಗಳನುಳ್ಳದುಂ ॥ ೩ ॥ ೧ ಮೇಣಾಜೀವತತ್ವಂ, ೨ ಪುದ್ಗಲಾದಿ ಪಂಚದ್ರವ್ಯಂಗಳು ಅಜೀವತತ್ವಂ, ೩ ಶುಭಾಶುಭ ಕರ್ಮಾಗಮದ್ವಾರಮಾಸ್ರವತತ್ವಂ, ೪ ಜೀವಕರ್ಮಮೆಂಬೆರಡರ ಅನ್ಯೋನ್ಯಾನುಪ್ರದೇಶಾನುಪ್ರವೇಶಾತ್ಮಕಂ ಬಂಧತತ್ವಂ, ೫ ವ್ರತಸಮಿತಿ ಗುಪ್ತ್ಯಾದಿಗಳಿಂ ಕರ್ಮಂಗಳಂ ತಡೆಯುವದು ಸಂವರತತ್ವಂ, ೬ ಸವಿಪಾಕರೂಪದಿಂ ಕರ್ಮಮಲಂಗಳಂ ಸೋರ್ವದು ನಿರ್ಜರತತ್ವಂ, ೭ ಸ್ವಶುದ್ಧಾತ್ಮತತ್ವಭಾವನೆಯಿಂ ಸಕಲಕರ್ಮನಿರ್ಮುಕ್ತಿಯದು ಮೋಕ್ಷತತ್ವಂ. ಇವರ ಪ್ರಪಂಚಮಂ ಪೇಳಲ್ಪಡುವದು, ಎಲ್ಲಾ ಫಲಮುಮಾತ್ಮಾಧಿಕಮಪ್ಪುದರಿಂ ಮೊದಲೊಳು ಜೀವ ಗ್ರಹಣಂ, ತದುಪಕಾರಿಯಪ್ಪುದರಿಂ ಅನಂತರಂ ಅಜೀವಾಭಿದಾನಂ, ತದುಭಯ ವಿಷಯಮಪ್ಪುದರಿಂದನಂತಮಾಸ್ರವಗ್ರಹಣಂ, ತತ್ಪೂರ್ವಕಮಪ್ಪುದರಿಂದನಂತರಂ ಬಂಧಾಭಿದಾನಂ, ಸಂವೃತ್ತಂಗೆ ಬಂಧಮಿಲ್ಲಪ್ಪುದರಿಂ ತತ್ಪತ್ರಾನಿಕಮನರಿಯಲ್ವೇಡಿ ತದನಂತರಂ ಸಂವರವಚನಂ, ಸಂವರೆಯಾದೊಡೆ ನಿರ್ಜರೆಯು ಕೂಡುಗುಮಪ್ಪುದರಿಂ ತತ್ಸಮೀಪದೊಳು ನಿರ್ಜರಾ ವಚನಂ, ಕಡೆಯೊಳೆಯ್ದೆ ಪಡುಗುಮಪ್ಪುದರಿಂ ಕಡೆಯೋಳ್ ಮೋಕ್ಷವಚನಮಕ್ಕುಂ, ಇಲ್ಲಿಂ ನಿಜನಿರಂಜನ ಶುದ್ಧಾತ್ಮತತ್ವಂ ಉಪಾದೇಯಮೆಂಬುದು ತಾತ್ಪರ್ಯಂ ॥

---

## ಸೂತ್ರಂ॥ ನವಪದಾರ್ಥಾಃ ॥ ೪ ॥

ಮೇಲೆ ಹೇಳಿದ ಸಪ್ತತತ್ವಂಗಳಲ್ಲಿ ಪುಣ್ಯಾಪಾಪಂಗಳು ಕೂಡಿದರೆ ನವಪದಾರ್ಥಂಗಳಾಗುವವು. ಹ್ಯಾಗೆಂದರೆ—೧ ಜೀವಪದಾರ್ಥಂ, ೨ ಅಜೀವಪದಾರ್ಥಂ, ೩ ಆಸ್ರವಪದಾರ್ಥಂ, ೪ ಬಂಧಪದಾರ್ಥಂ, ೫ ಪುಣ್ಯಪದಾರ್ಥಂ, ೬ ಪಾಪಪದಾರ್ಥಂ, ೭ ಸಂವರಪದಾರ್ಥಂ, ೮ ನಿರ್ಜರಪದಾರ್ಥಂ, ೯ ಮೋಕ್ಷಪದಾರ್ಥಂ ಇಂತಿವು ನವಪದಾರ್ಥಂಗಳು ॥ ೯ ॥ ಇಂತೀ ಒಂಭತ್ತಕ್ಕೂ ಪದಾರ್ಥಂಗಳೆಂಬ ಹೆಸರು ಹ್ಯಾಗೆಂದರೆ—ಜ್ಞಾನದಿಂದ ಪರಿಚ್ಛೇದಿಸಲ್ಪಡುವ ವಸ್ತುಗಳೇ ಪದಾರ್ಥಮೆಂಬ ಹೆಸರಾಗುವವು. ಅದು ಹ್ಯಾಗೆಂದರೆ—ಜೀವ ಪುದ್ಗಲ ಸಂಯೋಗದಿಂದಾಸ್ರವ ಬಂಧ ಪುಣ್ಯ ಪಾಪಮೀ ನಾಲ್ಕು ಪದಾರ್ಥಂಗಳು ಹೇಯಂಗಳಾಗುವವು. ಆ ಎರಡರಗಲಿಕೆಯಿಂ ಸಂವರ ನಿರ್ಜರ ಮೋಕ್ಷಮೆಂಬೀ ಮೂರು ಪದಾರ್ಥಂಗಳು ಉಪಾದೇಯಮೆಂಬುದರ್ಥವು.

---

## ಸೂತ್ರಂ॥ ಚತುರ್ವಿಧೋ ನ್ಯಾಸ: ॥ ೫ ॥

ತಾ:—ನಾಮ ಸ್ಥಾಪನಾ ದ್ರವ್ಯ ಭಾವವೆಂದು ನ್ಯಾಸವು ನಾಲ್ಕು ವಿಧವಾಗುವದು. ಇವುಗಳ ದೆಸೆಯಿಂದ ಜೀವಾದಿಗಳರಿಯಲ್ಪಡುವವು. ೧ ಜಾತ್ಯಾದಿ ನಿಮಿತ್ಯಾಂತರ ನಿರಪೇಕ್ಷೆಯಾದ ಹೆಸರು ನಾಮವೆಂಬುವದು. ೨ ಕಾಷ್ಠ, ಪಾಷಾಣ, ಪುಸ್ತಕ, ಚಿತ್ರಕರ್ಮಾದಿಗಳೊಳು ಅದಿದೆಂದು ಸ್ಥಾಪಿಸಲ್ಪಡುತ್ತಿರುವದು ಸ್ಥಾಪನೆಯೆಂಬುವದು. ೩ ಗುಣಪರ್ಯಾಯವನ್ನುಳ್ಳದ್ದು ದ್ರವ್ಯವೆನ್ನುವದು. ೪ ವರ್ತಮಾನಪರ್ಯಾಯೋಪಲಕ್ಷಿತದ್ರವ್ಯಂ ಭಾವವೆಂಬುದು. ಅದೆಂತೆಂದೊಡೆ—೧ನಾಮಜೀವಂ, ೨ ಸ್ಥಾಪನಾಜೀವಂ, ೩ ದ್ರವ್ಯಜೀವಂ, ೪ ಭಾವಜೀವವೆಂದು ನಾಲುತೆರ ಜೀವಪದಾರ್ಥಂ ನಿರಿಸೆಪಡುಗುಂ. ಜೀವವೆಂಬ ಹೆಸರು ನಾಮಜೀವಂ, ಸ್ಥಾಪನೆಗೆರಡುತೆರವು, ಸದ್ಭಾವ, ಅಸದ್ಭಾವ ಭೇದಗಳಲ್ಲಿ ಆಕಾರವನ್ನುಳ್ಳ ಕಾಷ್ಠ, ಪಾಷಾಣ ಪ್ರತಿಮೆಗಳಲ್ಲಿ ಅದು ಇದೆಂದು ಸ್ಥಾಪಿಸಲ್ಪಡುತ್ತಿರುವದು ಸದ್ಭಾವಸ್ಥಾಪನಾಜೀವಂ, ಅಕ್ಷರಾದಿಗಳೊಳು ಅದು ಇದೆಂದು ಸ್ಥಾಪಿಸೆಪಡುತಿರ್ದುದು, ಅಸದ್ಭಾವಸ್ಥಾಪನಾಜೀವಂ. ದ್ರವ್ಯಜೀವನಿತ್ತೆರಂ, ೧ಆಗಮದ್ರವ್ಯಜೀವನೆಂದುಂ, ನೋಆಗಮದ್ರವ್ಯಜೀವನೆಂದುಂ ಅಲ್ಲಿ ಪರ್ಯಾಯಮನರಿದು ಉಪಯೋಗವಿಲ್ಲದುದನಾಗಮದ್ರವ್ಯಜೀವನೆಂಬುದು. ನೋಆಗಮದ್ರವ್ಯಜೀವಂ ಮೂರುತೆರಂ—೧ ಅರಿವನಶರೀರಂ, ೨ ಅರಿಯದಿರ್ದಜೀವಂ, ೩ ಎರಡುಮಲ್ಲದದುಂ, ಅಲ್ಲಿ ಅರಿವನ ಶರೀರಂ. ಅತೀತ,ಅನಾಗತ ವರ್ತಮಾನಭೇದದಿಂ ಮೂರುತೆರಂ. ಆ ಎರಡುಮಲ್ಲದದು ದ್ರವ್ಯಭಾವಭೇದದಿಂದೆರಡುವಿಧವು. ಭಾವಜೀವಂ, ಆಗಮಭಾವಜೀವನೆಂದುಂ, ನೋಆಗಮಭಾವಜೀವನೆಂದು ಮೇಣಾಗಮಮನರಿದು ಉಪಯೋಗದೊಳ್ಕೂಡಿದಾತ್ಮನಾಗಮಜೀವಂ. ನೋಆಗಮಭಾವಜೀವನೆರಡುತೆರಂ. ಉಪಯುಕ್ತನುತ್ಪರಿಣಿತನುಮೆಂದಲ್ಲಿ ಆಗಮಮನೋದದೆಯು ಆಗಮಾರ್ಥದೊಳ್ ಉಪಯೋಗಮನುಳ್ಳ ಜೀವನುಪಯುಕ್ತನೆಂಬುವನು, ಕೇವಲಜ್ಞಾನಿತತ್ಪರಿಣಿತನೆಂಬಯಿಂತೆ ಉಳಿದ ಪದಾರ್ಥಗಳೊಳಂ ನಾಮಾದಿನಿಕ್ಷೇಪವಿಧಿಯಿಂ ಯೋಜಿಸಲ್ಪಡುವದು.

---

## ಸೂತ್ರಂ ॥ ದ್ವಿವಿಧಂ ಪ್ರಮಾಣಂ ॥ ೬ ॥

೧ ಪರೋಕ್ಷಪ್ರಮಾಣ, ೨ ಪ್ರತ್ಯಕ್ಷಪ್ರಮಾಣ ಈ ೨ ಪ್ರಮಾಣಗಳು. ಅಪ್ರಕೃತನಿವಾರಣಮಂ, ಪ್ರತ್ಯಕ್ಷಪ್ರಮಾಣಮುಂ ಅಪ್ರತ್ಯಕ್ಷಪ್ರಮಾಣಮೆಂದಿತ್ತೆರದ ಪ್ರಮಾಣಮೆನಿಸಿದ ಜ್ಞಾನಭೇದಮೆಂತೆನೆ—

---

## ಸೂತ್ರಂ ॥ ಪಂಚಸದ್‌ಜ್ಞಾನಾನಿ ॥ ೭ ॥

ತಾ:—ಮತಿಜ್ಞಾನಂ, ಶ್ರುತಜ್ಞಾನಂ, ಅವಧಿಜ್ಞಾನಂ, ಮನ:ಪರ್ಯಾಯಜ್ಞಾನಂ, ಕೇವಲಜ್ಞಾನಂ, ಎಂದೈದುಂ ಸಮ್ಯಜ್ಞಾನಂಗಳಕ್ಕುಮೆಂತೆನೆ—ಸಾಮಾನ್ಯವಿಶೇಷಾತ್ಮಕಮಪ್ಪ ವಸ್ತುಗಳಂ ಸಂಶಯ ವಿಮೋಹ ವಿಭ್ರಮರಹಿತಂಗಳಾಗಿ ತಿಳಿಯುವವುಗಳಾದ್ದರಿಂದ ನಿಜನಿರಂಜನಶುದ್ಧಾತ್ಮನಿಜತತ್ವಸಮ್ಯಕ್‌ಶ್ರದ್ಧಾನಜನಿತಂಗಳಪ್ಪುದರಿಂ ಸಮ್ಯಜ್ಞಾನಗಳೆಂದು ಹೇಳಲ್ಪಡುವವು.

---

## ಸೂತ್ರಂ ॥ ತ್ರೀಣ್ಯಜ್ಞಾನಾನಿ ॥ ೪ ॥

ತಾ:—ಕುಮತಿ, ಕುಶ್ರುತ, ವಿಭಂಗಜ್ಞಾನವೆಂದೀ ಮೂರುಂ ಅಜ್ಞಾನಗಳೆಂತೆನೆ–ಕೈಪೆ ಸೋರೆಯ ಭಾಜನದೊಳೆರೆದ ಹಾಲಿನಂತೆ, ಆ ಮೊದಲ ಮೂರು ಸಮ್ಯಜ್ಞಾನಂಗೆ ಮಿಥ್ಯಾತ್ವಾನನ್ತಾನುಬಂಧಿಕ್ರೋಧಮಾನಮಾಯಾಲೋಭಗಳೆಂಬ ಕಷಾಯಂಗಳ ದೆಶೆಯಿಂದ ಅಜ್ಞಾನಂಗಳೆನಿಸಲ್ಪಡುವವು. ಈ ಎಂಟು ( ೮ ) ಜ್ಞಾನಂಗಳಲ್ಲಿ ಮತಿಶ್ರುತಂಗಳುಂ, ಕುಮತಿ, ಕುಶ್ರುತಗಳೆಂಬೀ ನಾಲ್ಕುಂ ಪರೋಕ್ಷಪ್ರಮಾಣಂಗಳುಂ, ಅವಧಿ, ಮನ:ಪರ್ಯಾಯಂಗಳುಂ ವಿಭಂಗಾವಧಿಯುಮೆಂದೀ ಮೂರು ಜ್ಞಾನಂಗಳೇಕದೇಶ ಪ್ರತ್ಯಕ್ಷ ಪ್ರಮಾಣಂಗಳುಂ, ಕೇವಲಜ್ಞಾನಂ ಸಕಲಪ್ರತ್ಯಕ್ಷ ಪ್ರಮಾಣಮುಕ್ಕುಂ, ಕೇವಲಜ್ಞಾನವೆಂದೂ ಸ್ವಭಾವಗುಣವಾಗುವದು. ಉಳಿದೇಳು ಜ್ಞಾನಂಗಳು ವಿಭಾವಗುಣಂಗಳಾಗುವವು. ಅವುಗಳಲ್ಲಿ ಅಜ್ಞಾನತ್ರಯಂಗಳು ಹೇಯಂ, ಕ್ಷಯೋಪಶಮಿಕ ಸಮ್ಯಜ್ಞಾನ ಚತುಷ್ಟಯಂ ಪರಂಪರೆಯಿಂದುಪಾದೇಯಂ, ಕ್ಷಾಯಿಕಮಪ್ಪ ( ಸಮ್ಯಜ್ಞಾನಂ ) ಕೇವಲಜ್ಞಾನಂ ಸಾಕ್ಷಾದುಪಾದೇಯಮುಕ್ಕುಂ.

---

## ಸೂತ್ರಂ ॥ ಮತಿಜ್ಞಾನಂ ಷಟ್‌ತ್ರಿಂಶತ್ರಿಶದ್ಭೇದಂ ॥ ೯ ॥

ತಾ:—ಮತಿಜ್ಞಾನವು ಮುನ್ನೂರ ಮೂವತ್ತಾರು ( ೩೩೬ ) ಭೇದವಾಗುವದು. ಅದು ಹ್ಯಾಗೆಂದರೆ—ಮತಿಜ್ಞಾನಾವರಣ ವೀರ್ಯಾಂತರಾಯ ಕ್ಷಯೋಪಶಮದಿಂ, ಬಹಿರಂಗ ಪಂಚೇಂದ್ರಿಯಮುಂ, ಮನಮುಮೆಂದೀಯಾರಿಂದ್ರಿಯಗಳು ಕಾರಣವಾಗೊಡೆಯವು, ಅರ್ಥಾವಗ್ರಹ, ವ್ಯಂಜನಾವಗ್ರಹ, ಈಹೆ, ಅವಾಯ, ಧಾರಣೆಯುಮೆಂದಯ್ದು, ಅವಗ್ರಹವೆಂಬುದಿಂದ್ರಿಯಾರ್ಥಂ ಸಂಯೋಗಾಂತರಮಪ್ಪರಿತಂ. ಅವಗ್ರಹ, ಗೃಹಿತಾರ್ಥಮಂ ವಿಶೇಷಿಸಿ ಅರಿಯುವದು ಈಹೆ, ಆ ಊಹಿಸಿದರ್ಥಮಂ ನಿರ್ಣಯಿಸುವದು ಅವಾಯಂ, ಅದಂ ಕಾಲಾಂತರದಿಂ ಮರೆಯದುದಕ್ಕೆ ಕಾರಣಮಪ್ಪುದು ಧಾರಣೆ, ಅಲ್ಲಿ ಮೊದಲರ್ಥಾವಗ್ರಹಂ ಅಪ್ರಾಪ್ತಾರ್ಥಗ್ರಾಹಕಂ ಚಕ್ಷುರಿಂದ್ರಿಯಕ್ಕಂ, ವ್ಯಂಜನಾವಗ್ರಹಮಿಲ್ಲಪ್ಪುದರಿಂ, ಚಕ್ಷುವಿಂಗಂ ಮನಕ್ಕಂ ನಾಲ್ಕು ನಾಲ್ಕು ಆಗುವವು. ಉಳಿದಿಂದ್ರಿಯಂಗಳಿಗೈದಾಗಲು ಅವಗ್ರಹಾದಿಗಳು ( ೨೮ ) ಇಪ್ಪತ್ತೆಂಟುಭೇದವಾಗುವದು. ಮತ್ತಂ ಅವಗ್ರಹಾದಿಗಳ ಭೇದಮೆಂತೆನೆ–ಬಹು, ಏಕ, ಬಹುವಿಧ ಏಕವಿಧ, ಕ್ಷಿಪ್ರ, ಅಕ್ಷಿಪ್ರ, ಅನಿಶ್ರಿತ, ನಿಶ್ರಿತ, ಅನುಕ್ತ, ಉಕ್ತ, ಧ್ರುವ, ಅಧ್ರುವವೆಂದು ದ್ವಾದಶವಿಧವಾಗುವದು. ಮತ್ತಂ ಆಹ್ವಾದಿಗಳ ಅರ್ಥವು ಹ್ಯಾಗೆಂದರೆ—೧ ಅನೇಕವನ್ನರಿಯುವದು ಬಹು, ೨ ಒಂದನ್ನರಿಯುವದು ಏಕಂ, ೩ ಅನೇಕತೆರಗಳನ್ನು ತಿಳಿಯುವದು ಬಹುವಿಧವು, ೪ ಒಂದೇತೆರನರಿಯುವದು ಏಕವಿಧವು, ೫ ಬೇಗನೆ ತಿಳಿಯುವದು ಕ್ಷಿಪ್ರಂ, ೬ ಸಾವಕಾಶದಿಂದರಿಯುವದು ಅಕ್ಷಿಪ್ರಂ, ೭ ವಸ್ತುವಿನನೇಕದೇಶದಿನರಿಯುವದು ಅನಿಶ್ರಿತವು, ೮ ವಸ್ತುಸಾಕಲ್ಯದಿಂದ ವಸ್ತುವನ್ನು ಅರಿಯುವದು ನಿಶ್ರಿತವು. ೯ ಹೇಳದಿರುವದನ್ನರಿಯುವದು ಅನುಕ್ತವು, ೧೦ ಹೇಳಿದ್ದನ್ನರಿಯುವದು ಉಕ್ತವು, ೧೧ ನಿತ್ಯವಾಗಿರುವದನ್ನು ತಿಳಿಯುವದು ಧ್ರುವವು, ೧೨ ಅನಿತ್ಯವಾದದ್ದನ್ನು ತಿಳಿಯುವದು ಅಧ್ರುವವಾಗುವದು. ಇಂತೀ ಬಹ್ವಾದಿಗಳಾದ ಹನ್ನೆರ

ಡನ್ನು ಅನವಗ್ರಹಗಳಾದ ಒಂದೊಂದಕ್ಕೆ ಯೋಜಿಸುವದು ಹ್ಯಾಗಂದರೆ—೧ ಬಹ್ವರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೨ ಏಕಾರ್ಥಾವಗ್ರಹ ಸ್ಪರ್ಶನೇಂದ್ರಿಯಮತಿಜ್ಞಾನಮುಂ, ೩ ಬಹುವಿಧಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೪ ಏಕವಿಧಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೫ ಕ್ಷಿಪ್ರಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೬ ಅಕ್ಷಿಪ್ರಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೭ ಅನಿಶ್ರುತಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೮ ನಿಶ್ರುತಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೯ ಅನುಕ್ತಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೧೦ ಉಕ್ತಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೧೧ ಧ್ರುವಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ೧೨ ಅಧ್ರುವಾರ್ಥಾವಗ್ರಹ ಸ್ಪರ್ಶನೇಂದ್ರಿಯ ಮತಿಜ್ಞಾನಮುಂ, ಇದೇ ರೀತಿಯಿಂದ ವ್ಯಂಜನಾವಗ್ರಹಕ್ಕೆ ಹನ್ನೆರಡುಂ ॥೧೨॥ ಅವಾಯಕ್ಕೆ ಹನ್ನೆರಡುಂ ॥೧೨॥ ಅನುಸ್ಪರ್ಶನೇಂದ್ರಿಯಕ್ಕೆ ಅರುವತ್ತುಂ ॥೬೦॥ ರಸನೇಂದ್ರಿಯಕ್ಕೆ ಅರವತ್ತುಂ ॥೬೦॥ ಘ್ರಾಣೇಂದ್ರಿಯಕ್ಕೆ ಅರುವತ್ತುಂ ॥೬೦॥ ಚಕ್ಷುರಿಂದ್ರಿಯಕ್ಕೆ ಅಷ್ಟಚತ್ವಾರಿಂಶವುಂ ॥೪೮॥ ಶ್ರೋತ್ರೇಂದ್ರಿಯಕ್ಕೆ ಅರುವತ್ತುಂ ॥೬೦॥ ಮನಕ್ಕೆ ನಲವತ್ತೆಂಟುಂ ॥೪೮॥ ಇಂತಿವುಗಳೆಲ್ಲಾ ಕೂಡಿದರೆ ಮುನ್ನೂರು ಮೂವತ್ತಾರು ಭೇದಗಳಾಗುವವು ॥೩೩೬॥ ಸ್ವರೂಪಾನುಭವನ ಲಕ್ಷಣ ವೀತರಾಗ ನಿರ್ವಿಕಲ್ಪ ಸ್ವಸಂವೇದನಜ್ಞಾನಮುಪಾದೇಯಂ.

---

## ಸೂತ್ರಂ ॥ ದ್ವಿವಿಧಂ ಶ್ರುತಂ ॥ ೧೦ ॥

ತಾ॥—ಮತಿಪೂರ್ವಕ ಶ್ರುತಜ್ಞಾನಮುಂ, ಅದುವುಂ ಅಕ್ಷರಾತ್ಮಕವುಂ, ಅನಕ್ಷರಾತ್ಮಕವುಂ ಎಂದೆರಡು ಭೇದವು ॥೨॥ ಅದರಲ್ಲಿ ಅನಕ್ಷರಾತ್ಮಕವು ಅಂಗಾಂಗಬಾಹ್ಯಭೇದವನ್ನುಳ್ಳದ್ದು, ಮತ್ತಂ ಸ್ವಯೋಗ್ಯವಾದ ಅರುವತ್ತಾರು ಸಾವಿರದ ಮುನ್ನೂರ ಮೂವತ್ತಾರು ಭವದ ಕಡೆಯ ಭವದ ಸೂಕ್ಷ್ಮನಿಗೋಧ ಲಬ್ಧ್ಯಪರಿಯಾಪ್ತಕ ಉತ್ಪನ್ನ ಪ್ರಥಮಸಮಯದೊಳು ಸ್ಪರ್ಶನೇಂದ್ರಿಯ ಮತಿಜ್ಞಾನಪೂರ್ವಕಮುಂ, ೨ ನಿತ್ಯೋದ್ಘಾಟಮುಂ, ನಿರಾವರಣಮುಮಪ್ಪ ಪರ್ಯಾಯಶ್ರುತಮುಂ, ಪರ್ಯಾಯಸಮಾಸಶ್ರುತಮುಂ, ೩ ಅಕ್ಷರಮುಂ, ೪ ಅನಕ್ಷರಮುಂ, ೫ ಪದಮುಂ, ೬ ಪದಸಮಾಸಮುಂ, ೭ ಸಂಘಾತಮುಂ, ೮ ಸಂಘಾತಸಮಾಸಮುಂ, ೯ ಪ್ರತಿಪತ್ತಿಯುಂ, ೧೦ ಪ್ರತಿಪತ್ತಿಸಮಾಸಮುಂ, ೧೧ ಅನಿಯೋಗಮುಂ, ೧೨ ಅನಿಯೋಗಸಮಾಸಮುಂ, ೧೩ ಪ್ರಾಭೃತಕ ಪ್ರಾಭೃತಕಮುಂ, ೧೪ ಪ್ರಾಭೃತಕ ಪ್ರಾಭೃತಕ ಸಮಾಸಮುಂ, ೧೫ ಪ್ರಾಭೃತಕಮುಂ, ೧೬ ಪ್ರಾಭೃತಕ ಸಮಾಸಮುಂ, ೧೭ ವಸ್ತುವುಂ, ೧೮ ವಸ್ತುಸಮಾಸಮುಂ, ೧೯ ಪೂರ್ವಮುಂ, ೨೦ ಪೂರ್ವಸಮಾಸಮುಂ ಎಂದು ದ್ರವ್ಯಶ್ರುತಜ್ಞಾನವು ವಿಂಶತಿಭೇದವಾಗುವದು ॥೨೦॥ ಸ್ವಶುದ್ಧಾತ್ಮಲಂಬನವಾದ ಶ್ರುತಜ್ಞಾನಮುಪಾದೇಯಮೆಂಬುದು ಭಾವಾರ್ಥವು.

---

## ಸೂತ್ರಂ ॥ ದ್ವಾದಶಾಂಗಾನಿ ॥ ೧೧ ॥

ತಾ:—೧ ಆಚಾರಾಂಗಂ, ೨ ಸೂತ್ರಕೃತಾಂಗಂ, ೩ ಸ್ಥಾನಾಂಗಂ, ೪ ಸಮವಾಯಾಂಗಂ, ೫ ವ್ಯಾಖ್ಯಾಪ್ರಜ್ಞಪ್ತ್ಯಂಗಂ, ೬ ಜ್ಞಾತೃಕಥಾಂಗಂ, ೭ ಉಪಾಸಕಾಧ್ಯಯನಾಂಗಂ, ೮ ಅನ್ತಕೃದ್ದಶಾಂಗಂ, ೯ ಅನುತ್ತರೋಪಪಾದಿಕದಶಾಂಗಂ, ೧೦ ಪ್ರಶ್ನವ್ಯಾಕರಣಾಂಗಂ, ೧೧ ವಿಪಾಕಸೂತ್ರಾಂಗಂ, ೧೨ ದೃಷ್ಟಿವಾದಾಂಗಂ ಎಂದಿಂತು ದ್ವಾದಶಾಂಗಗಳಾಗುವವು. ೧ ಪರಿಕರ್ಮಮುಂ, ೨ ಸೂತ್ರಕೃತಮುಂ, ೩ ಪ್ರಥಮಾನುಯೋಗಮುಂ, ೪ ಪೂರ್ವಗತಮುಂ ೫ ಚೂಳಿಕೆಯುಮೆಂದು ದೃಷ್ಟಿವಾದಾಂಗಂ ಪಂಚವಿಧವು. ಅದರಲ್ಲಿ ೧ ಚಂದ್ರಪ್ರಜ್ಞಪ್ತಿ, ೨ ಸೂರ್ಯಪ್ರಜ್ಞಪ್ತಿ, ೩ ಜಂಬೂದ್ವೀಪಪ್ರಜ್ಞಪ್ತಿ, ೪ ದ್ವೀಪಸಾಗರಪ್ರಜ್ಞಪ್ತಿ, ೫ ವ್ಯಾಖ್ಯಾಪ್ರಜ್ಞಪ್ತಿ ಎಂಬೀ ಭೇದದಿಂದ ಪರಿಕರ್ಮವು ಪಂಚವಿಧವಾಗುವದು. ಪ್ರಥಮಾನುಯೋಗವು ಏಕವಿಧವು. ೧ ಉತ್ಪಾದಪೂರ್ವವುಂ, ೨ ಆಗ್ರಾಯಣೀಯವುಂ, ೩ ವೀರ್ಯಾನುಪ್ರವಾದಮುಂ ೪ ಅಸ್ತಿನಾಸ್ತಿಪ್ರವಾದಮುಂ, ೫ ಜ್ಞಾನಪ್ರವಾದಮುಂ, ೬ ಸತ್ಯಪ್ರವಾದಮುಂ, ೭ ಆತ್ಮಪ್ರವಾದಮುಂ, ೮ ಕರ್ಮಪ್ರವಾದಮುಂ, ೯ ಪ್ರತ್ಯಾಖ್ಯಾನಮುಂ, ೧೦ ವಿದ್ಯಾನುವಾದಮುಂ, ೧೧ ಕಲ್ಯಾಣನಾಮಧೇಯಮುಂ, ೧೨ ಪ್ರಾಣಪ್ರವಾದಪೂರ್ವಂ, ೧೩ ಕ್ರಿಯಾವಿಶಾಲಪೂರ್ವಂ, ೧೪ ಲೋಕಬಿಂದುಸಾರಪೂರ್ವಮೆಂದು ಪೂರ್ವಗತವು ಚತುರ್ದಶವಿಧವು. ದೃಷ್ಟಿವಾದವೆಂಬ ಅಂಗದ ೫ ನೇ ಭೇದವಾದ ಚೂಲಿಕೆಯು, ೧ ಜಲಗತ, ೨ ಸ್ಥಲಗತ, ೩ ಮಾಯಾಗತ, ೪ ಆಕಾಶಗತ ಹರಮೇಖಲಾದಿ ಮಾಯಾಸ್ವರೂಪಮುಂ ೫ ಶಾಕಿನ್ಯಾದಿ ರೂಪಪರಾವರ್ತನ ಭೇದದಿಂ ರೂಪಗತಚೂಳಿಕೆ ಎಂದಿಂತು ಪಂಚಭೇದವು. ಇನ್ನು ಸಂಕ್ಷೇಪದಿಂದ ದ್ವಾದಶಾಂಗದ ಅರ್ಥವು ನಿರೂಪಿಸಲ್ಪಡುವದು. ಹ್ಯಾಗಂದರೆ—

ಅಷ್ಟಾದಶಸಹಸ್ರ (೧೮೦೦೦) ಪದಗಳನ್ನುಳ್ಳದ್ದಾಗಿ ವ್ರತ, ಸಮಿತಿ, ಗುಪ್ತಿ ಮೊದಲಾದ ಯತಿಗಳ ಆಚಾರವನ್ನು ಹೇಳುವದು ಆಚಾರಾಂಗವು ॥ ೧ ॥

ಷಟ್ತ್ರಿಂಶತ್‌ಸಹಸ್ರ (೩೬೦೦೦) ಪದಗಳನ್ನುಳ್ಳದ್ದಾಗಿ ಜ್ಞಾನದರ್ಶನಾದಿ ವಿನಯಂಗಳೆಂಬ ಕ್ರಿಯಾವಿಶೇಷಂಗಳನ್ನು ಹೇಳುವದು ಸೂತ್ರಕೃತಾಂಗವು ॥ ೨ ॥

ದ್ವಿಚತ್ವಾರಿಂಶತ್ಸಹಸ್ರ (೪೨೦೦೦) ಪದಗಳನ್ನುಳ್ಳದ್ದಾಗಿ ಜೀವಾದಿ ಷಡ್ದ್ರವ್ಯಗಳೈಕಾದ್ಯೈಕೋತ್ತರ ಅವಸ್ಥೆಗಳನ್ನು ಹೇಳುವದು ಸ್ಥಾನಾಂಗವು ॥ ೩ ॥

ಒಂದುಲಕ್ಷದ ಅರವತ್ತುನಾಲ್ಕುಸಾವಿರ (೧೬೪೦೦೦) ಪದಗಳನ್ನುಳ್ಳದ್ದಾಗಿ ಒಂದು ಜೀವಂ ಧರ್ಮಾಧರ್ಮಲೋಕಾಕಾಶದ್ರವ್ಯಂಗಳ ಪ್ರದೇಶಸಮಾನತ್ವಮುಂ, ಜಂಬೂದ್ವೀಪಮುಂ ಸಪ್ತಮನರಕದವಧಿಸ್ಥಾನೇಂದ್ರಿಯಕ್ಕಮುಂ, ನಂದೀಶ್ವರದನಂದಾದಿ ಸರೋವರಮುಂ, ವ್ಯಂತರರ ಪಟ್ಟಣಮುಂ, ಸರ್ವಾರ್ಥಸಿದ್ಧಿಯ ವಿಮಾನಮೆಂದಿವು ಮೊದಲಾಗಿ ತಮ್ಮೊಳು ಸಮಾನವಿಸ್ತರಂಗಳಾದ ಕ್ಷೇತ್ರಂಗಳ ಸಮಾನತ್ವಮುಮಂ, ಉತ್ಸರ್ಪಿಣ್ಯವಸರ್ಪಿಣಿ ಮೊದಲಾಗಿ ತಮ್ಮೊಳು ಸಮಾನಂಗಳಾದ ಕಾಲಗಳ ಸಮಾನತ್ವಮುಮಂ, ಕ್ಷಾಯಿಕಜ್ಞಾನಂ, ಕ್ಷಾಯಿಕದರ್ಶನಂ, ಮೊದಲಾದ ಭಾವಂಗಳ ಸಮಾನತ್ವಮುಮಂ ಹೇಳುವದು ಸಮವಾಯಾಂಗವು ॥ ೪ ॥

ಎರಡುಲಕ್ಷದಿಪ್ಪತ್ತೆಂಟುಸಾವಿರ ( ೨೨೮೦೦೦ ) ಪದಗಳನ್ನುಳ್ಳದ್ದಾಗಿ ಜೀವನುಂಟೋ ಮೇಣಿಲ್ಲವೋ ಎಂಬೀ ಅಸ್ತಿನಾಸ್ತಿ ಮೊದಲಾಗಿ ಗಣಧರರು ಮಾಡುವ ಅರುವತ್ತಾರುಸಾವಿರ ( ೬೬೦೦೦ ) ಪ್ರಶ್ನೆಗಳಿಗೆ ಉತ್ತರವನ್ನು ಹೇಳುವದು ವ್ಯಾಖ್ಯಾಪ್ರಜ್ಞಪ್ತಿ ಅಂಗವು ‖ ೫ ‖

ಐದುಲಕ್ಷದೈವತ್ತಾರುಸಾವಿರ ( ೫೫೫೬೦೦೦ ) ಪದಗಳನ್ನುಳ್ಳದ್ದಾಗಿ ತೀರ್ಥಕರ ಗಣಧರರ ದೇವರ ಕಥೆಗಳನ್ನೂ ಅನುಪಕಥೆಗಳನ್ನೂ ಹೇಳುವ ಜ್ಞಾತೃಕಥೆಯುಂ ‖೬‖

ಹನ್ನೊಂದುಲಕ್ಷದೈಯ್ವತ್ತುಸಾವಿರ ( ೧೧೫೦೦೦೦ ) ಪದಗಳನ್ನುಳ್ಳದ್ದಾಗಿ ಶ್ರಾವಕಾಚಾರವನ್ನು ನಿರೂಪಿಸುವದು ಉಪಾಸಕಾಧ್ಯಯನಾಂಗವು ‖೭‖

ಇಪ್ಪತ್ಮೂರುಲಕ್ಷದಿಪ್ಪತ್ತೆಂಟುಸಾವಿರ ( ೨೩೨೮೦೦೦ ) ಪದಗಳನ್ನುಳ್ಳದ್ದಾಗಿ ಏಕೇಕ ತೀರ್ಥಂಕರರ ತೀರ್ಥದಲ್ಲಿ ನಿಜಪರಮಾತ್ಮಭಾವನೆಯಿಂದ ಘೋರೋಪಸರ್ಗಂಗಳನ್ನು ಗೆದ್ದು ಸಂಸಾರವನ್ನು ಕೆಡಿಸಿದ ಹತ್ತುತೆರದ ಹತ್ತು ಹತ್ತು ಮುನೀಶ್ವರರ ವರ್ಣನೆಯನ್ನು ಹೇಳುವದು ಅಂತಕೃದ್ದಶಾಂಗವು ‖ ೮ ‖

ತೊಂಭತ್ತೆರಡುಲಕ್ಷದ ನಲ್ವತ್ತುನಾಲ್ಕುಸಾವಿರ ( ೯೨೪೪೦೦೦ ) ಪದಂಗಳಿಂದ ಒಬ್ಬೊಬ್ಬ ತೀರ್ಥಂಕರರ ತೀರ್ಥದಲ್ಲಿ ಸ್ವಕೀಯ ಚಿದಾನಂದಾತ್ಮಭಾವನೆಯಿಂದ ಮಹಾ ಭಯಂಕರವಾದ ಘೋರೋಪಸರ್ಗಂಗಳನ್ನು ಗೆದ್ದು ದೇವತೆಗಳಿಂದ ಪೂಜಿಸಲ್ಪಟ್ಟು ವಿಜಯಾದಿ ಪಂಚಾಣುತ್ತರೆಗಳಲ್ಲಿ ಹುಟ್ಟುವ ಹತ್ತು ತೆರದ ಹತ್ತು ಹತ್ತು ಅನಗಾರರ ವರ್ಣನೆಯನ್ನು ಹೇಳುವದು ಅನುತ್ತರೋಪಪಾದಿಕ ದರ್ಶನಾಂಗವು ‖ ೯ ‖

ತೊಂಭತ್ಮೂರುಲಕ್ಷದ ಹದಿನಾರುಸಾವಿರ (೯೩೧೬೦೦೦) ಪದಂಗಳಿಂದ ನಷ್ಟಮುಷ್ಟಿಚಿಂತಾಲಾಭಾಲಾಭಂಗಳಂ ಮೊದಲಾದ ಪರರ ಪ್ರಶ್ನೆಗಳನ್ನಾಶ್ರಯಿಸಿ ಪ್ರಯೋಜನಂಗಳನ್ನು ಹೇಳುವದು ಪ್ರಶ್ನವ್ಯಾಕರಣಾಂಗವು ‖ ೧೦ ‖

ಒಂದುಕೋಟಿ ಎಂಭತ್ತುನಾಲ್ಕುಲಕ್ಷ ( ೧೮೪೦೦೦೦ ) ಪದಗಳಿಂದ ಪುಣ್ಯ ಪಾಪಫಲಂಗಳನ್ನು ಹೇಳುವದು ವಿಪಾಕಸೂತ್ರಾಂಗವು ‖ ೧೧ ‖

ಈ ರೀತಿಯಾಗಿ ಹೇಳಿದ ಹನ್ನೊಂದಂಗಗಳ ಪದಗಳೆಲ್ಲಾ ಕೂಡಿ ನಾಲ್ಕು ಕೋಟಿಯುಂ ಹದಿನೈಯ್ದು ಲಕ್ಷವುಂ ಎರಡುಸಾವಿರ( ೪೧೫೦೨೦೦೦ ) ಪದಂಗಳಾಗುವವು.

ಮೂವತ್ತಾರುಲಕ್ಷದ ಐದುಸಾವಿರ ( ೩೬೦೫೦೦೦ ) ಪದಂಗಳಿಂ ಚಂದ್ರನ ಆಯುಷ್ಯ, ಗತಿ, ಕಲೆಯ ವೃದ್ಧಿ, ಕ್ಷಯ, ವೈಭವ, ಪರಿವಾರ ಇತ್ಯಾದಿ ವರ್ಣನೆಯನ್ನು ಹೇಳುವದು ಚಂದ್ರಪ್ರಜ್ಞಪ್ತಿಯು ‖ ೧ ‖

ಐದುಲಕ್ಷದ ಮೂರುಸಾವಿರ ( ೫೦೩೦೦೦ ) ಪದಂಗಳಿಂದ ಸೂರ್ಯನ ಆಯುಷ್ಯಗಮನಾಗಮನ ವಿಭಾವಾದಿಗಳನ್ನು ಹೇಳುವದು ಸೂರ್ಯಪ್ರಜ್ಞಪ್ತಿಯು ‖ ೨ ‖

ಮೂರುಲಕ್ಷದಿಪ್ಪತ್ತೈದುಸಾವಿರ ( ೩೨೫೦೦೦ ) ಪದಂಗಳಿಂದ ವರ್ಷಧರ ಪರ್ವತಗಳ್ಮೊದಲು ಜಂಬೂದ್ವೀಪದ ಸ್ವರೂಪವನ್ನು ಹೇಳುವದು ಜಂಬೂದ್ವೀಪಪ್ರಜ್ಞಪ್ತಿಯು ‖ ೩ ‖

ಐವತ್ತೆರಡುಲಕ್ಷದ ಮೂವತ್ತಾರುಸಾವಿರ ( ೫೨೩೬೦೦೦ ) ಪದಂಗಳಿಂದ ಅಸಂಖ್ಯಾತ ದ್ವೀಪಸಮುದ್ರಗಳ ಸ್ವರೂಪವನ್ನು ಹೇಳುವದು ದ್ವೀಪಸಾಗರ ಪ್ರಜ್ಞಪ್ತಿಯು ॥ ೪ ॥

ಎಂಭತ್ತುನಾಲ್ಕುಲಕ್ಷದ ಮೂವತ್ತಾರುಸಾವಿರ ( ೮೪೩೬೦೦೦ ) ಪದಂಗಳಿಂದ ಜೀವಾದಿ ದ್ರವ್ಯಂಗಳ ರೂಪಿತ್ವಂ ಅರೂಪಿತ್ವಂ ಮೊದಲಾದ ಸ್ವರೂಪವನ್ನು ಹೇಳುವದು ವ್ಯಾಖ್ಯಾಪ್ರಜ್ಞಪ್ತಿಯುಮೆಂದೀ ಐದುತೆರದ ಪರಿಕರ್ಮಮುಂ ॥ ೫ ॥

ಎಂಭತ್ತೆಂಟುಲಕ್ಷ ಪದಂಗಳಿಂ ಜೀವಂ ಅಸ್ತಿನಾಸ್ತಿರೂಪವೇ ಆಗಿರುತ್ತದೆ, ಜೀವನು ಕರ್ತನೇ ಆಗಿದ್ದಾನೆ ಭೋಕ್ತನೇ ಆಗಿದ್ದಾನೆ ಸರ್ವಗತನಲ್ಲೆಂಬಿದು ಮೊದಲಾದ ಧರ್ಮವನ್ನು ಹೇಳುವದು ಪೃಥುವ್ಯಾದಿ ಪ್ರಭವನಣುಮಾತ್ರಂ ಸರ್ವಗತನೆಂಬಿದು ಮೊದಲಾದ ಧರ್ಮವನ್ನು ನಿಷೇಧಿಸುವ ಎಂಭತ್ತೆಂಟು ಭೇದವನ್ನುಳ್ಳ ಸೂತ್ರಮುಂ ॥ ೧ ॥

ಐದುಸಾವಿರ ಪದಂಗಳಿಂದ ತ್ರಿಷಷ್ಟಿಶಲಾಕಾಪುರುಷರ ಪುರಾಣಗಳನ್ನು ಹೇಳುವ ಪ್ರಥಮಾನುಯೋಗಮುಂ ॥ ೨ ॥

ತೊಂಭತ್ತೈದುಕೋಟಿಯುಂ ಐವತ್ತೈದುಲಕ್ಷದೈದು (೯೫೫೫೦೦೦೦೫ ) ಪದಂಗಳಿಂದ ಸಕಲ ಪದಾರ್ಥಂಗಳ ಸ್ಥಿತ್ಯುತ್ಪತ್ತಿವಿನಾಶಂ ಮೊದಲಾದ ಸ್ವರೂಪಗಳನ್ನು ಹೇಳುವ ಪೂರ್ವಗತಮುಂ ॥ ೩ ॥

ಎರಡುಕೋಟಿಯುಂ ಒಂಭತ್ತುಲಕ್ಷೆಯುಂ ಎಂಭತ್ತೊಂಭತ್ತುಸಾಸಿರದಿನ್ನೂರು ( ೨೦೯೮೯೨೦೦ ) ಪದಂಗಳಿಂದ ಜಲಗಮನ ಜಲಸ್ತಂಭಾದಿಗಳಿಗೆ ಕಾರಣವಾದ ಮಂತ್ರ ತಂತ್ರ ತಪಶ್ಚರಣಗಳನ್ನು ಹೇಳುವ ಜಲಗತಮುಂ ॥ ೪ ॥

ಅನಿತೇ ಪದಂಗಳಿಂದ ಭೂಮಿಗಮನ ಕಾರಣವಾದ ಮಂತ್ರತಂತ್ರಾದಿಗಳುಮಂ ಭೂಮಿ ಸಂಬಂಧಾದಿ ವಾಸ್ತುವಿದ್ಯಾದಿಗಳನ್ನು ಹೇಳುವ ಸ್ಥಲಗತಮುಂ ॥ ೫ ॥

ಅಷ್ಟೇಪದಗಳಿಂದ ಇಂದ್ರಜಾಲಾದಿಗಳನ್ನು ಹೇಳುವ ಮಾಯಾಗತಮುಂ ॥ ೬ ॥

ಅನಿತೇ ಪದಂಗಳಿಂದ ಆಕಾಶಗಮನ ಮಂತ್ರತಂತ್ರ ಮೊದಲಾದವುಗಳನ್ನು ಹೇಳುವ ಆಕಾಶಗಮನಮುಂ ॥ ೭ ॥

ಸಿಂಹ, ವ್ಯಾಘ್ರ, ಆನೆ, ಕುದುರೆ, ಮನುಷ್ಯ, ವೃಕ್ಷ, ಚಿಗರಿ, ಮೊಲ, ಎತ್ತು, ಹುಲಿ ಮುಂತಾದ ರೂಪುಗಳನ್ನು ಬದಲು ಮಾಡುವದಕ್ಕೆ ಕಾರಣವಾದ ಮಂತ್ರತಂತ್ರಾದಿಗಳನ್ನೂ, ಮತ್ತು ಕಲ್ಲು, ಮಣ್ಣು, ಕಟ್ಟಿಗೆಗಳ ಮೂರ್ತಿಗಳನ್ನು ಮಾಡುವ ಚಿತ್ರಕರ್ಮಾದಿಗಳನ್ನೂ ಧಾತುವಾದ ರಸವಾದ ಇತ್ಯಾದಿಗಳನ್ನೂ ಹೇಳುವ ರೂಪಗತಮುಂ ॥ ೮ ॥ ಎಂದಿಂತು ಪಂಚ ವಿಧವಾದ ಚೂಳಿಕೆಗಳಿಂದ ಕೂಡಿದ ಐದುತರದ ದೃಷ್ಟಿವಾದವೆಂಬಂಗವು ಹನ್ನೆರಡು ಭೇದ ವಾಗುವದು.

ಮತ್ತು ದೃಷ್ಟಿವಾದವೆಂಬಂಗದ ಲಕ್ಷಣವು ಹ್ಯಾಗೆಂದರೆ—ಕೋಟಿಪದಂಗಳಿಂದ ಜೀವಾದಿಗಳನ್ನೂ ಜೀವಾದಿಗಳ ಸ್ಥಿತ್ಯುತ್ಪತ್ತಿವಿನಾಶಂಗಳನ್ನೂ ಹೇಳುವದು ಮೊದಲಾದ ಉತ್ಪಾದಪೂರ್ವಮುಂ ॥ ೧ ॥

ತೊಂಭತ್ತಾರುಲಕ್ಷ ( ೯೬೦೦೦೦೦ ) ಪದಂಗಳಿಂದ ಅಂಗಂಗಳ ಮುಖ್ಯವಾದ ಅರ್ಥಂಗಳನ್ನು ಹೇಳುವ ಅಗ್ರಾಯಣೀಯಪೂರ್ವಮುಂ ॥ ೨ ॥

ಎಪ್ಪತ್ತೆರಡುಲಕ್ಷ ( ೭೨೦೦೦೦೦ ) ಪದಂಗಳಿಂದ ಕೇವಲಿಗಳ, ಸುರೇಂದ್ರ, ಧರಣೇಂದ್ರ, ಚಕ್ರವರ್ತಿಗಳ, ಮಹತ್ತಾದ ವೀರ್ಯಾದಿಗಳನ್ನು ಹೇಳುವ ವೀರ್ಯಾನುಪ್ರವಾದಮುಂ ॥ ೩॥

ಅರವತ್ತುಲಕ್ಷ ( ೬೦೦೦೦೦೦ ) ಪದಂಗಳಿಂದ ಅನೇಕ ಪ್ರಕಾರಗಳಿಂದ ಷಟ್ಪದಾರ್ಥಗಳ ಅಸ್ತಿನಾಸ್ತಿ ಧರ್ಮಂಗಳನ್ನು ಹೇಳುವ ಅಸ್ತಿನಾಸ್ತಿಪ್ರವಾದಮುಂ ॥ ೪ ॥

ಒಂದುಗುಂದಿದ ಕೋಟಿ ( ೯೯೯೯೯೯೯ ) ಪದಂಗಳಿಂದ ಅಷ್ಟಜ್ಞಾನ ಪ್ರಕಾಶಂಗಳನ್ನೂ ಅವುಗಳ ಉದಯಹೇತುಗಳನ್ನೂ ಅವಕ್ಕೆ ಆಧಾರವಾದವುಗಳನ್ನೂ ಹೇಳುವ ಜ್ಞಾನಪ್ರವಾದಮುಂ ॥ ೫ ॥

ಒಂದುಕೋಟಿಯಾರು ( ೧೦೦೦೦೦೦೬ ) ಪದಂಗಳಿಂ ವಚನಗುಪ್ತಿಯುಮಂ ಕಂಡಾದಿಸ್ಥಾನಂಗಳನ್ನುಳ್ಳ ವಚನಸಂಸ್ಕಾರಮಂ ಪ್ರಕಟಿಸುವ ವರ್ತತ್ವಪರ್ಯಾಯಂಗಳನುಳ್ಳ ( ೧೨ ಭಾಷಾ ) ದ್ವೀಂದ್ರಿಯಾದಿ ವಕ್ತೃಗಳುಮಂ, ಶುಭಾಶುಭಮನಪ್ರಯೋಗವನ್ನೂ ಹೇಳುವ ಸತ್ಯಪ್ರವಾದಮುಂ ॥ ೬ ॥

ಇಪ್ಪತ್ತಾರುಕೋಟಿ ( ೨೬೦೦೦೦೦೦೦ ) ಪದಂಗಳಿಂದ ಅಜ್ಞಾನಸುಖಾದಿಮಯಸ್ವರೂಪಮುಮಂ, ಕರ್ತೃತ್ವ ಭೋಕ್ತೃತ್ವಾದಿ ಧರ್ಮಂಗಳನ್ನು ಹೇಳುವ ಆತ್ಮಪ್ರವಾದಮುಂ ॥ ೭॥

ಒಂದುಕೋಟಿ ಎಂಭತ್ತುಲಕ್ಷ ( ೧೮೦೦೦೦೦೦ ) ಪದಂಗಳಿಂದ ಕರ್ಮಂಗಳ ಬಂಧೋದಯ, ಉದೀರಣ, ಸತ್ವ, ಉತ್ಕರ್ಷಣ, ಅಪಕರ್ಷಣದ ಉಪಶಮನ, ಸಂಕ್ರಮಣ, ನಿಧತ್ತ, ನಿಃಕಾಚಿತ ಇತ್ಯಾದಿ ಅವಸ್ಥೆ ಈರ್ಯಾಪಥ ತಪಸ್ಯ, ಅಧಃಕರ್ಮಾದಿಗಳ ನಿರ್ಜರೆ ಮೊದಲಾದವುಗಳನ್ನು ಹೇಳುವ ಕರ್ಮಪ್ರವಾದಮುಂ ॥ ೮ ॥

ಎಂಭತ್ತುನಾಲ್ಕುಲಕ್ಷ ( ೮೪೦೦೦೦೦ ) ಪದಂಗಳಿಂದ ದ್ರವ್ಯಪರ್ಯಾಯ ನಿವೃತ್ತಿಗಳನ್ನು ಹೇಳುವ ಪ್ರತ್ಯಾಖ್ಯಾನಪೂರ್ವಮುಂ ॥ ೯ ॥

ಒಂದುಕೋಟಿಯುಂ ಹತ್ತುಲಕ್ಷ ( ೧೧೦೦೦೦೦೦ ) ಪದಗಳಿಂದಂಗುಷ್ಟಪ್ರಸೇನೆ ಮೊದಲಾದ ಏಳುನೂರು ಕ್ಷುಲ್ಲಕ ವಿದ್ಯೆಗಳುಂ ರೋಹಿಣಿಪ್ರಜ್ಞಪ್ತಿ ಮೊದಲಾದೈನೂರು ಮಹಾವಿದ್ಯೆಗಳನ್ನೂ, ಅಷ್ಟಾಂಗ ಮಹಾನಿಮಿತ್ಯವನ್ನೂ ಹೇಳುವ ಹತ್ತನೆಯ ವಿದ್ಯಾನುವಾದಮುಂ ॥ ೧೦॥

ಇಪ್ಪತ್ತಾರುಕೋಟಿ (೨೬೦೦೦೦೦೦೦) ಪದಂಗಳಿಂದ ಅರ್ಹದ್ಬಲದೇವ, ಚಕ್ರವರ್ತ್ಯಾದಿಗಳ ಕಲ್ಯಾಣಮಂ ಹೇಳುವ ಕಲ್ಯಾಣಪೂರ್ವಮುಂ ॥ ೧೧ ॥

ಹದಿಮೂರುಕೋಟಿ ( ೧೩೦೦೦೦೦೦೦ ) ಪದಂಗಳಿಂ ಪ್ರಾಣಾಪಾನವಿಭಾಗಮಾಯ್ಯುರ್ವೇದ ಮಂತ್ರವಾದ ಗಾರುಡ ಮೊದಲಾದವುಗಳನ್ನು ಹೇಳುವ ಪ್ರಾಣಾವಾಯುಮುಂ ॥೧೨॥

ಒಂಭತ್ತುಕೋಟಿ ( ೯೦೦೦೦೦೦೦ ) ಪದಂಗಳಿಂ ಎಪ್ಪತ್ತೆರಡು ಕಲೆಗಳನ್ನೂ ತಮ್ಮ ಅಲಂಕಾರಂ ಮೊದಲಾದ ಶಾಸ್ತ್ರಂಗಳನ್ನೂ ಹೇಳುವ ಕ್ರಿಯಾವಿಶಾಲಮುಂ ॥ ೧೩ ॥

ಹನ್ನೆರಡು ಕೋಟಿಯುಮೈವತ್ತುಲಕ್ಷ (೧೨೫೦೦೦೦೦೦) ಪದಂಗಳಿಂದ ಲೋಕದೊಳು ಸಾರವಾದ ಮೋಕ್ಷಸುಖವನ್ನೂ, ಅದನ್ನು ಸಾಧಿಸುವ ಅನುಷ್ಠಾನದ ಕ್ರಿಯೆಗಳಿಗೆ ಸ್ಥಾನವಾಗಿರ್ದವಂ ಪೇಳ್ವ ಲೋಕಬಿಂದುಸಾರವೆಂಬ ಹದಿನಾಲ್ಕನೆಯ ಪೂರ್ವಮುಮಂ ಆನಂದದಿಂದ ವಂದಿಸುತ್ತೇನೆ ॥ ೧೪ ॥

ಚತುರ್ದಶ ಪೂರ್ವಂಗಳ ವಸ್ತುಗಳ ಭೇದಂಗಳನ್ನು ಹೇಳುವ—

ಗಾಹೆ॥ ದಸಚೊದ್ದಸ ಅಠ್ಠಠ್ಠಾ ರಸಬಾರಸಯಂಚ ದೋಸುಪುವ್ವೇಸು ।
ಸೋಳಸ ವೀಸಂತೀಸಂದಸಮಮ್ಮಿಯ ಪಂಣರಸವಥ್ಥೂ ॥ ೫ ॥

ಏದೇಸಿಂ ಪುವ್ವಾಣಂ ಏವದಿಯೋ ವಥ್ಥುಸಂಗಹೋಭಣಿಯೋ ।
ಸಾಣಂ ಪುವ್ವಾಸೇಣಂ ದಸದಸ ವಥ್ಥೂಪಣಿವದಾಮಿ ॥ ೬ ॥

ಎಕ್ಕೆಕ್ಕಮ್ಮಿಯ ವಥ್ಥೂ ವೀಸಂವೀಸಂ ಚ ಪಾಹುಡಾ ಭಣಿಯಾ ।
ವಿಸಮಸಮಾಹಿಯವಥ್ಥೂ ಸವ್ವೇಪುಣಪಾಹುಡೇ ಹಿ ಸಮಾ ॥ ೭ ॥

ಪುವ್ವಾಣಂ ವಥ್ಥುಸಯಂ ಪಂಚಾಣವುದಿ ಹವಂತಿ ವಥ್ಥೂಣಿ ।
ಪಾಹುಡ ತಿಣ್ಣಿಸಹಸ್ಸಾ ಣವಯಸಯಾಚೊದ್ದಸಾಣಂ ತು ॥ ೮ ॥

ಟೀ—೧೦, ೧೪, ೮, ೧೮, ೧೨ ೧೬, ೨೦, ೩೦, ೧೫, ೧೦, ೧೦, ೧೦, ೧೦, ೧೨, ಅನ್ತು ವಸ್ತುಗಳೆಲ್ಲಾ ಕೂಡಿ ನೂರತೊಂಭತ್ತೈದು (೧೯೫) ಆಗುವವು. ಒಂದೊಂದು ವಸ್ತುವಿಂಗೆ ಇಪ್ಪತ್ತು ಇಪ್ಪತ್ತು ಪ್ರಾಭೃತಂಗಳಾಗಲೆಲ್ಲಾ ವಸ್ತುಗಳಿಗೂ ಕೂಡಿ ಪ್ರಾಭೃತಂಗಳು ಮೂರು ಸಾವಿರದೊಂಭೈನೂರು (೩೯೦೦) ಆಗುವವು. ಪೂರ್ವಾನ್ತಮುಂ, ಅಪರಾನ್ತಮುಂ, ಧ್ರುವಮುಂ, ಅಧ್ರುವಮುಂ, ಚ್ಯವನಲಬ್ಧಿಯುಂ, ಅಧ್ರುವಸಂಪ್ರಣಿಧಿಯುಂ, ಅರ್ಥಮುಂ, ಭೌಮಾವಯಾಚ್ಯಮುಂ, ಸರ್ವಾರ್ಥಮುಂ, ಕಲ್ಪನೀಯಜ್ಞಾನಮುಂ, ಅತೀತಕಾಲಮುಂ, ಅನಾಗತಕಾಲಮುಂ, ಸಿದ್ಧಮುಂ, ಸಾಧ್ಯಮುಂ, ಎಂದಿಂತು ಅಗ್ರಾಯಣೀಯ ಎಂಬೆರಡನೆಯ ಪೂರ್ವದ ಉಪಲಬ್ಧಂಗಳೆಂಬ ಹೆಸರನ್ನುಳ್ಳ ಚತುರ್ದಶ ವಸ್ತುಗಳೊಳಗೆ ಚ್ಯವನಲಬ್ಧಿಯೆಂಬೈದನೆಯ ವಸ್ತುವಿನ ಇಪ್ಪತ್ತುಂ ಪ್ರಾಭೃತಂಗಳೊಳಗೆ ನಾಲ್ಕನೆಯ ಮಹಾಕರ್ಮ ಪ್ರಕೃತಿಯೆಂಬ ಪ್ರಾಭೃತಕ ಸಂಬಂಧಿಗಳಾಗಿ ಅನುಯೋಗವೆಂಬ ಹೆಸರನ್ನುಳ್ಳ ಆಚಾರ್ಯಪರಂಪರೆಯಿಂದ ಉಪಲಬ್ಧಂಗಳೆನಿಸಿದ ಕೃತಿಯುಂ, ವೇದನೆಯುಂ, ಸ್ಪರ್ಶನಮುಂ, ಕರ್ಮಮುಂ, ಪ್ರಕೃತಿಯುಂ, ಬಂಧನಮುಂ, ನಿಬಂಧನಮುಂ, ಪ್ರಕ್ರಮಮುಂ, ಅನುಪಕ್ರಮಮುಂ, ಅಭ್ಯುದಯಮುಂ ಮೋಕ್ಷಮುಂ, ಸಂಕ್ರಮಮುಂ, ಲೇಶ್ಯೆಯುಂ, ದ್ರವ್ಯಲೇಶ್ಯಾಕರ್ಮಮುಂ, ಭಾವಲೇಶ್ಯಾಪರಿಣಾಮಮುಂ, ಸಾತಾಸಾತಮುಂ, ದೀರ್ಘಹ್ರಸ್ವಮುಂ, ಭವಧಾರಣೀಯಮುಂ, ಪುದ್ಗಲಾತ್ಮಕಮುಂ, ನಿಧತ್ತಾನಿಧತ್ತಮುಂ, ಸನಿಕಾಚಿತಾನಿಕಾಚಿತಮುಂ, ಕರ್ಮಸ್ಥಿತಿಕಮುಂ, ಪಶ್ಚಿಮಸ್ಕಾಂಧಮುಂ, ಅಲ್ಪಬಹುತ್ವಮುಂ, ಎಂದಿಂತು ಚತುರ್ವಿಂಶತಿ (೨೪) ಅನುಯೋಗದ್ವಾರಂಗಳನ್ನು ಪರಮಾತ್ಮಜ್ಞಾನ ಸಿದ್ಧ್ಯರ್ಥಂ ಭಾವಿಸುವೆನು.

ದ್ವಾದಶಾಂಗಗಳ ನೂರಹನ್ನೆರಡುಕೋಟಿಯುಂ ಎಂಭತ್ತುಮೂರುಲಕ್ಷೆಯುಮೈವ್ವತ್ತೆಂಟು ಸಾಸಿರದೈದು (೧೧೨೮೩೫೮೦೦೫) ಪದಂಗಳನ್ನು ನಿರ್ವಾಣಪದ ಲಬ್ಧ್ಯರ್ಥಂ ಸ್ತುತಿಯಿ

ಸುವೆನು. ಅರ್ಥಪದಂ, ಪ್ರಮಾಣಪದಂ, ಮಧ್ಯಪದಮೆಂದು ಪದಂತ್ರಿವಿಧಂ, ಇನಿತಕ್ಷರ ಮೆಂಬ ನಿಯಮವಿಲ್ಲದುದರ್ಥಪದಂ, ಎಂಟಕ್ಷರ ಪ್ರಮಾಣವನ್ನುಳ್ಳದ್ದು ಪ್ರಮಾಣಪದಂ, ಈ ದ್ವಾದಶಾಂಗ ಪ್ರವಿಷ್ಟಶ್ರುತಮಂ ಪೇಳ್ವನಿತು ಪದಂಗಳಂ, ಮಧ್ಯಪದಂಗಳಲ್ಲಿ ಸಾಸಿರದ್ಮೆಯ್ನೂರು ಮೂವತ್ನಾಲ್ಕುಕೋಟಿಯುಂ ಎಂಭತ್ಮೂರುಲಕ್ಷದ ಏಳುಸಾಸಿರದೆಂಟುನೂರೆಂಭತ್ತೆಂಟಕ್ಷರಂಗಳ ( ೧೬೩೪೮೩೦೭೮೮೮ ) ಮಧ್ಯಪದಂಗಳಂ ಭೇದಜ್ಞಾನ ಲಾಭಾರ್ಥಂ ವಂದಿಸುವೆನು, ಮಧ್ಯಫಲಂಗಳಿಂದೆಲ್ಲವರ ವರ್ಣಂಗಳಿಂದುಳಿದೆಂಟುಕೋಟಿಯುಮೊಂದುಲಕ್ಷೆಯುಂ ಎಂಟು ಸಾವಿರದ ನೂರೆಪ್ಪತ್ತೈದು ( ೮೦೧೦೮೧೭೫ ) ಅಕ್ಷರಗಳಂ ಪ್ರಮಾಣಂಗಳಾಗುವವು. ಅದರಿಂದಾದ ಪ್ರಕೀರ್ಣಕವು ಹ್ಯಾಗೆಂದರೆ—

---

## ಸೂತ್ರಂ॥ ಚತುರ್ದಶಪ್ರಕೀರ್ಣಕಾನಿ ॥ ೧೨ ॥

ತಾ:—ಸಾಮಾಯಿಕಂ, ಚತುರ್ವಿಂಶತಿಸ್ತವನಂ, ವಂದನೆಯುಂ, ಪ್ರತಿಕ್ರಮಣಂ, ವೈನಯಿಕಂ, ಕೃತಿಕರ್ಮಂ, ದಶವೈಕಾಲಿಕೆಯುಂ, ಉತ್ತರಾಧ್ಯಯನಂ, ಕಲ್ಪ್ಯವ್ಯವಹಾರಂ, ಕಲ್ಪ್ಯಾಕಲ್ಪ್ಯಂ, ಮಹಾಕಲ್ಪ್ಯಂ, ಪುಂಡರೀಕಂ, ಮಹಾಪುಂಡರೀಕಂ, ಅಶೀತಿಕೆ ( ನಿಷಿದ್ಧಕಾ ) ಯುಮೆಂದು ಚತುರ್ದಶ ( ೧೪ ) ಪ್ರಕೀರ್ಣಕಗಳಾಗುವವು. ಅವುಗಳ ಲಕ್ಷಣವು ಹ್ಯಾಗೆಂದರೆ—

ಯತಿಗಳ ಸಮತೆಯ ಲಕ್ಷಣವನ್ನು ಹೇಳುವ ಸಾಮಾಯಿಕಮುಂ ॥ ೧ ॥

ಚತುರ್ವಿಂಶತಿ ತೀರ್ಥಂಕರ ಗುಣಸ್ತವನಗಳನ್ನು ಹೇಳುವ ಚತುರ್ವಿಂಶತಿ ಸ್ತವನಮುಂ ॥ ೨ ॥

ಅರ್ಹದಾದಿಗಳ ವಂದನೆಯ ಲಕ್ಷಣವನ್ನು ಹೇಳುವ ವಂದನೆಯುಂ ॥ ೩ ॥

ದಿವಮುಂ, ರಾತ್ರಿಯುಂ, ಪಕ್ಷಮುಂ, ಚಾತುರ್ಮಾಸಿಕಮುಂ, ಸಂವತ್ಸರಮುಂ, ಈರ್ಯಾಪಥಮುಂ, ಉತ್ತಮಾರ್ಥಸಕ್ರಂಗಳಿಂದೇಳು ತೆರದ ಪ್ರತಿಕ್ರಮಣಗಳನ್ನು ಮಾಡುವದನ್ನು ಹೇಳುವ ಪ್ರತಿಕ್ರಮಣಮುಂ ॥ ೪ ॥

ಜ್ಞಾನ, ದರ್ಶನ, ಚಾರಿತ್ರ, ತಪ, ಉಪಚಾರವೆಂಬೈದು ತೆರದ ವಿನಯಂಗಳಂ ಹೇಳುವ ವೈನಯಿಕಮುಂ ॥ ೫ ॥

ದೀಕ್ಷಾಗ್ರಹಣಾದಿ ಕ್ರಿಯೆಗಳನ್ನು ಹೇಳುವ ಕೃತಿಕರ್ಮಮುಂ ॥ ೬ ॥

ದೃಮ ಪುಷ್ಪಿತಂಗಳಂ ಮೊದಲಾದ ಹತ್ತಧಿಕಾರಂಗಳಿಂದ ಸಾಧುಗಳ ಆಚಾರಕ್ಕೆ ಯೋಗ್ಯವಾದ ಶುದ್ಧ ಆಹಾರದ ವರ್ಣನೆಯುನ್ನು ಹೇಳುವ ದಶವೈಕಾಲಿಕೆಯುಂ ॥ ೭ ॥

ಅನೇಕ ತೆರದ ಉಪಸರ್ಗ, ಇಪ್ಪತ್ತೆರಡು ಪ್ರಕಾರದ ಪರೀಷಹಗಳನ್ನು ಸೈರಿಸುವ ವಿಧಾನಗಳು ಮತ್ತು ಅವುಗಳ ಫಲವನ್ನು ಹೇಳುವ ಉತ್ತರಾಧ್ಯಯನಮುಂ ॥ ೮ ॥

ಯತಿಗಳ ಯೋಗ್ಯವಾದ ಆಚಾರವುಂ ಅದು ತಪ್ಪಿದೊಡೆ, ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೇಳುವ ಕಲ್ಪ್ಯವ್ಯವಹಾರಮುಂ ॥ ೯ ॥

ಸಾಗಾರ, ಅನಗಾರರುಗಳಿಗೆ ಕಾಲವಿಶೇಷದಿಂ ತಕ್ಕತಕ್ಕದ್ದಾದ ಆಚಾರಂಗಳನ್ನು ಹೇಳುವ ಕಲ್ಪ್ಯಾಕಲ್ಪ್ಯಮುಂ ‖ ೧೦ ‖

ದೀಕ್ಷೆಯ, ಶಿಕ್ಷೆಯ, ಗಣಪೋಷಣದ, ಆತ್ಮಸಂಸ್ಕಾರದಭಾವನೆಯ, ಸಲ್ಲೇಖನೆಯ ಕಾಲ, ಉತ್ತಮಾರ್ಥಕಾಲ ಮೆಂದಾರು ಕಾಲಕ್ಕೆ ತಕ್ಕ ಯತಿಗಳಾಚಾರವನ್ನು ಹೇಳುವ ಮಹಾ ಕಲ್ಪ್ಯಮುಂ ‖ ೧೧ ‖

ಭವನವಾಸಿಗರು ಮೊದಲಾದ ದೇವರ್ಕಳುತ್ಪತ್ತಿಗೆ ಕಾರಣವಾದ ತಪ ಮೊದಲಾದವುಗಳನ್ನು ಹೇಳುವ ಪುಂಡರೀಕಮುಂ ‖ ೧೨ ‖

ಆ ದೇವರ್ಕಳಿಗೆ ದೇವಿಯರಾದ ಸ್ತ್ರೀಯರುತ್ಪತ್ತಿಗೆ ಕಾರಣವನ್ನು ಹೇಳುವ ಮಹಾ ಪುಂಡರೀಕಮುಂ ‖ ೧೩ ‖

ಸೂಕ್ಷ್ಮಸ್ಥೂಲ ದೋಷಂಗಳಿಗೆ ಪ್ರಾಯಶ್ಚಿತ್ತವನ್ನೂ, ಪುರುಷಶಕ್ತಿಯನ್ನು ವಿಚಾರಿಸಿ ಪ್ರಾಯಶ್ಚಿತ್ತವನ್ನು ಹೇಳುವ ಅಶೀತಿಕೆ (ನಿಷಿದ್ಧಕಾ) ಯು ಮೆಂದಂಗಬಾಹ್ಯಂಗಳಾದ ಚತುರ್ದಶ, ಪ್ರಕೀರ್ಣಕಂಗಳನ್ನು ನಿತ್ಯಾನಂದಜ್ಞಾನಸಿದ್ಧ್ಯರ್ಥವಾಗಿ ನಮಸ್ಕಾರವನ್ನು ಮಾಡುವೆನು ೧೪.

ಕಂದ‖ ದ್ರವ್ಯಶ್ರುತಮಂ ಭಾವಿಸೆ ।<br>
ದ್ರವ್ಯಂ ಕೂಡುಗುಮದಿಂತು ಭಾವಶ್ರುತದೊಳ್ ‖<br>
ದ್ರವ್ಯಂಗಳ ನಿಶ್ಚಯದಿಂ ।<br>
ಭವ್ಯಂ ಭಜಿಸುಗೆ ಬೋಧಿಸುಖಮಂ ಪಡೆಗುಂ ‖ ೬ ‖

---

## ಸೂತ್ರಂ‖ ತ್ರಿವಿಧಮವಧಿಜ್ಞಾನಂ ‖ ೧೩ ‖

ತಾ:—ದೇಶಾವಧಿ, ಪರಮಾವಧಿ, ಸರ್ವಾವಧಿಯೆಂದು ಅವಧಿಜ್ಞಾನವು ಮೂರು ಭೇದವಾಗುವದು ‖ ೩ ‖ ಹ್ಯಾಗೆಂದರೆ—

ರೂಪಿದ್ರವ್ಯಂಗಳಾದ ದ್ರವ್ಯ, ಕ್ಷೇತ್ರ, ಕಾಲ, ಭಾವಂಗಳನ್ನು ಸೀಮೆಮಾಡಿ ಅವಧಿಜ್ಞಾನಾವರಣೀಯದ ವೀರ್ಯಾಂತರಾಯದ ಕ್ಷಯೋಪಶಮದಿಂ ಹುಟ್ಟಿದವರೊಳು ದೇಶಾವಧಿಯೆಂಬುವದು ಭವಪ್ರತ್ಯಯವುಂ, ಗುಣಪ್ರತ್ಯಯವುಂ ಎಂದು ಎರಡು ಭೇದವಾಗುವದು ‖ ೨‖ ಅದರಲ್ಲಿ ದೇವತೆಗಳಿಗೂ ನಾರಕರಿಗೂ ಹುಟ್ಟುವದು ಭವಪ್ರತ್ಯಯಾವಧಿಜ್ಞಾನವು. ತೀರ್ಥಕರ ಪರಮದೇವರಿಗೆ ಸರ್ವಾಂಗಗಳಲ್ಲಿ ಹುಟ್ಟುವದು ಗುಣಪ್ರತ್ಯಯಾವಧಿಜ್ಞಾನವು. ಗುಣಾಧಿಕರಾದ ಮನುಷ್ಯರಿಗೂ ತಿರ್ಯಂಚರಿಗೂ ವಿಶೋಧಿವಶದಿಂದ ನಾಭಿಯ ಮೇಲೆ ಪರಿಣಮಿಸಿದ ಶಂಖಾದಿ ಚಿಹ್ನೆಗಳಲ್ಲಿ ಹುಟ್ಟುವದು ಷಡ್ವಿಕಲ್ಪವು. ಅದು ಹ್ಯಾಗೆಂದರೆ—

ಅನುಗಾಮಿ, ಅನನುಗಾಮಿ, ವರ್ಧಮಾನ, ಹೀಯಮಾನ, ಅವಸ್ಥಿತ, ಅನವಸ್ಥಿತ ಭೇದದಿಂದಾರು ಭೇದವಾಗುವದು ‖ ೬ ‖

ಅವುಗಳಲ್ಲಿ ಭಾಸ್ಕರನ ಪ್ರಕಾಶದ ಹಾಗೆ ಎತ್ತಲಾಗಿ ಹೋದರೂ ಜೊತೆಗೆ ಹೋಗುವದು ಅನುಗಾಮಿಯೆಂಬವಧಿಯು ‖ ೧ ‖

ಮುಗ್ಧ ಪುರುಷಂ ಕೇಳುವ ವಚನದ ಹಾಗೆ ಅಲ್ಲಿಯೇ ನಾಶವಾಗುವದು ಅನನುಗಾಮಿಯು || ೨ ||

ಶುಕ್ಲಪಕ್ಷದ ಚಂದ್ರನ ಹಾಗೆ ಸಮ್ಯಗ್ದರ್ಶನಾದಿ ವಿಶುದ್ಧಿಪರಿಣಾಮದಿಂದ ಹುಟ್ಟಿ ಅಲ್ಲಿಂದ ಹಿಡಿದು ಅಸಂಖ್ಯಾತ ಲೋಕದವರೆಗೂ ನಿರಂತರವೂ ಹೆಚ್ಚುವದು ವರ್ಧಮಾನವು || ೩ ||

ಕೃಷ್ಣಪಕ್ಷದ ಚಂದ್ರನಂತೆ ಸಮ್ಯಗ್ದರ್ಶನಾದಿ ಗುಣಾನಿಶಂಕ್ಲೇಶಪರಿಣಾಮವೃದ್ಧಿಯೋಗದಿನಂಗುಳಾಸಂಖ್ಯೇಯಭಾಗಂಬರಂ ಕುಂದುವುದು ಹೀಯಮಾನವು || ೪ ||

ದಿನಕರಬಿಂಬದ ಹಾಗೆ ಕುಂದುತ್ತುಂ ಪೆರ್ಚುತ್ತುಂ ಇರುವದು ಅವಸ್ಥಿತಮೆಂಬುವದು ||೫||

ಪರಮಾವಧಿ ಸರ್ವಾವಧಿಯೆಂಬೆರಡು ಚರಮದೇಹಧಾರಿಗಳಾದ ಪರಮಸಂಯತರಿಗೆ ಆಗುವದು. ಜಘನ್ಯ ಮಧ್ಯಮೋತ್ಕೃಷ್ಟವನ್ನುಳ್ಳದ್ದು ಏಕದೇಶ ಪ್ರತ್ಯಕ್ಷವಾಗಿ ತಿಳಿಯುವದು||೬||

ಇಲ್ಲಿ ಸರ್ವಾವಧಿಯನ್ನು ಬೋಧಿಲಾಭಾರ್ಥವಾಗಿ ಸ್ತುತಿಸುವೆನು || ೩ ||

---

## ಸೂತ್ರಂ || ದ್ವಿವಿಧೋ ಮನಃಪರ್ಯಯಶ್ಚ || ೧೪ ||

ತಾ:—ಋಜುಮತಿಯುಂ ವಿಪುಲಮತಿಯುಮೆಂದು ಮನಃಪರ್ಯಯಜ್ಞಾನವು ಎರಡು ಭೇದವಾಗುವದು. ಹ್ಯಾಗೆಂದರೆ—

ಮನಃಪರ್ಯಯಜ್ಞಾನಾವರಣೀಯದ ಕ್ಷಯೋಪಶಮಮುಂ, ವೀರ್ಯಾನ್ತರಾಯದ ಕ್ಷಯೋಪಶಮವುಂ ಉಂಟಾಗಲು ತನ್ನ ಮನವನ್ನವಲಂಬಿಸುವ ಈಹಾಮತಿಜ್ಞಾನಪೂರ್ವಕಂ ಅನ್ಯರ ಮನದೊಳರ್ದಮೂರ್ತವಾದ ವಸ್ತುವನ್ನೇಕದೇಶದಿಂದ ಪ್ರತ್ಯಕ್ಷವಾಗಿ ವಿಕಲ್ಪರೂಪದಿಂದರಿಯುವದು ಋಜುಮತಿಜ್ಞಾನವು. ಋಜುವಾದ ಮನವಚನಕಾಯದ ಅರ್ಥವನ್ನು ತಿಳಿಯುವದು ಯಾವಾಗಲಾದರೂ ನಾಶವಾಗುವದು || ೧ ||

ವಕ್ರಾವಕ್ರವಾದ ಅನ್ಯರ ಮನವಚನಕಾಯಗಳಿಗೆ ಸಂದ ಅರ್ಥವನ್ನು ತಿಳಿಯುವದು ಮತ್ತು ಅದು ನಾಶವಾಗುವದಿಲ್ಲ. ಇದು ವಿಪುಲಮತಿಜ್ಞಾನವು || ೨ || ಈ ಎರಡು ಪರಮಸಂಯತರುಗಳಿಗುಂಟಾಗುವವು || ೪ ||

ಶ್ಲೋಕ || ಕ್ಷಾಯಿಕಮೇಕಮನಂತಂ ತ್ರಿಕಾಲಸರ್ವಾರ್ಥಯುಗಪದವಭಾಸಂ |
ಸಕಲ ಸುಖಧಾಮಸತತಂ ವಂದೇಹಂ ಕೇವಲಜ್ಞಾನಂ || ೪ ||

ಗಾಹೆ || ಸುದಕೇವಳಂಚಣಾಣಂ ದೋಂಣಿವಿಸರಿಸಾಣಿಹೊಂತಿದೋಹದೊ |
ಸುದಣಾಣಂತುಪಮುಖ್ಖಂ ಪಚ್ಚಖ್ಖಂಕೇವಲಜ್ಞಾನಂ || ೯ ||

ತಾ:—ಮತ್ತಮೀ ಜ್ಞಾನಂಗಳನುಪಚರಿತ ಶುದ್ಧಸದ್ಭೂತವ್ಯವಹಾರನಯದಿಂ ಮಿಥ್ಯಾತ್ವರೂಪಂಗಳಾದ ಕುಮತಿ, ಕುಶ್ರುತ, ವಿಭಂಗಜ್ಞಾನವೆಂಬತ್ರಯಂಗಳು ಜೀವಕ್ಕೆ ವಿಭಾವಗುಣಂಗಳಾಗುವವು. ಜಗತ್ರಯ ಕಾಲತ್ರಯವರ್ತಿ ಸಕಲ ಪದಾರ್ಥಯುಗಪದವಲೋಕನ ಸಮರ್ಥ ಸಕಲ ವಿಮಲ ಕೇವಲಜ್ಞಾನವು ಉಪಾದೇಯವೆಂದು ತಾತ್ಪರ್ಯವು || ೫ ||

---

## ಸೂತ್ರಂ ॥ ನವನಯಾ: ॥ ೧೫ ॥

ಟೀ:—ದ್ರವ್ಯಾರ್ಥಿಕನಯಮುಂ, ಪರ್ಯಾಯಾರ್ಥಿಕನಯಮುಂ, ನೈಗಮನಯಮುಂ, ಸಂಗ್ರಹನಯಮುಂ, ವ್ಯವಹಾರನಯಮುಂ, ಋಜುಸೂತ್ರಮುಂ, ಶಬ್ದನಯಮುಂ, ಸಮಭಿರೂಢಮುಂ, ಏವಂಭೂತಮೆಂದಾಗಮನಯಂ ಒಂಭತ್ತು ಭೇದಗಳಾಗುವವು. ಸದ್ಭೂತ ವ್ಯವಹಾರನಯಂ, ಅಸದ್ಭೂತವ್ಯವಹಾರನಯಂ, ಉಪಚರಿತಾಸದ್ಭೂತವ್ಯವಹಾರನಯಮೆಂದಿವು ಮೂರುಂ ಉಪನಯಂಗಳಾಗುವವು. ಇವುಗಳ ಭೇದವು ಹ್ಯಾಗಂದರೆ—

ಅಭೇದದಿಂದನುಪಚಾರದಿಂ ವಸ್ತುವಂ ನಿಶ್ಚಯಿಸುವದು ನಿಶ್ಚಯನಯವು. ಭೇದದಿಂದುಪಚಾರದಿಂ ವಸ್ತುವಂ ವ್ಯವಹರಿಸುವದು ವ್ಯವಹಾರನಯವು. ಅಲ್ಲಿಯೆಲ್ಲಾ ಜೀವಂಗಳುಂ ಶುದ್ಧಬುದ್ಧೈಕಸ್ವಭಾವಂಗಳೆಂಬುವದು ಶುದ್ಧನಿಶ್ಚಯನಯವು. ರಾಗಾದಿಗಳೇ ಜೀವವೆಂಬುದು ಅಶುದ್ಧನಿಶ್ಚಯನಯವು. ಕೇವಲಜ್ಞಾನದಿ ಶುದ್ಧಗುಣಂಗಳುಂ ಸಿದ್ಧಗುಣಂಗಳೆಂಬುದನುಪಚರಿತ ಶುದ್ಧಸದ್ಭೂತವ್ಯವಹಾರನಯದಿಂ ಮತಿಜ್ಞಾನಾದಿ ವಿಭಾವಗುಣಂಗಳು ತನ್ನವೆಂಬುವದು ಉಪಚರಿತಾಶುದ್ಧಸದ್ಭೂತವ್ಯವಹಾರನಯವು. ಶರೀರಾದಿಗಳು ಜೀವನಸಂಬಂಧವೆಂಬುವದು ಅನುಪಚರಿತಾಸದ್ಭೂತ ವ್ಯವಹಾರನಯವು. ಗೃಹ, ಗ್ರಾಮ, ಧನ, ಧಾನ್ಯಾದಿಗಳು ಆತ್ಮಸಂಬಂಧಿಯೆಂಬುವದು ಉಪಚರಿತಾಸದ್ಭೂತ ವ್ಯವಹಾರನಯಂಗಳೆಂದಿವು ಅಧ್ಯಾತ್ಮ ಸಂಬಂಧಿಗಳಾದ ಆರುನಯಗಳಾಗುವವು. ಮತ್ತು ಅರಿವನಭಿಪ್ರಾಯಂ ಮೇಣ್ ಪ್ರಮಾಣ ಪರಿಗೃಹಿತವಸ್ತ್ವೈಕದೇಶದೊಳು ವರ್ತಿಸುವದು ಮೇಣ್ ಗುಣಪರ್ಯಾಯಂಗಳಂ ದ್ರವ್ಯಮನೆಯ್ದಿ ಸೂದುನಯವೆಂಬುವದು. ಕರ್ಮೋಪಶಮದಿಂ ನಿರಪೇಕ್ಷ ಶುದ್ಧ ದ್ರವ್ಯಾರ್ಥಿಕನಯದಿಂ ಸಿದ್ಧ ಸದೃಶಶುದ್ಧಾತ್ಮಂ ಸಂಸಾರಾವಸ್ಥೆಯೊಳು ಪೇಳಿಪಡುಗುಂ. ಉತ್ಪಾದ, ವ್ಯಯ, ಗೌಣದಿಂ ಸತ್ತಾಗ್ರಾಹಕ ಶುದ್ಧ ದ್ರವ್ಯಾರ್ಥಿಕ ನಯದಿಂ ದ್ರವ್ಯಂ ನಿತ್ಯಮೆಂದು ಪೇಳಿಪಡುಗುಂ. ಭೇದಕಲ್ಪನಾ ನಿರಪೇಕ್ಷ ಶುದ್ಧ ದ್ರವ್ಯಾರ್ಥಿಕನಯದಿಂ ನಿಜಗುಣಪರ್ಯಾಯದಿಂ ದ್ರವ್ಯಂ ಬೇರಲ್ಲವೆಂದು ಪೇಳಿಪಡುಗುಂ. ಕರ್ಮೋಪಾಧಿ ಸಾಪೇಕ್ಷಾಶುದ್ಧದ್ರವ್ಯಾರ್ಥಿಕನಯದಿಂ ಕ್ರೋಧಾದಿ ಕರ್ಮಜನಿತವಿಭಾವಮನಾತ್ಮನೆಂದು ಪೇಳಿಪಡುಗುಂ. ಉತ್ಪಾದ, ವ್ಯಯ, ಧ್ರೌವ್ಯ ಸಾಪೇಕ್ಷಾ ಶುದ್ಧ ದ್ರವ್ಯಾರ್ಥಿಕನಯದಿಂದೊಂದು ಸಮಯದೊಳಗೆ ಉತ್ಪಾದ, ವ್ಯಯ, ಧ್ರೌವ್ಯ ಸಾಪೇಕ್ಷಾಶುದ್ಧ ದ್ರವ್ಯಾರ್ಥಿಕನಯದಿಂ ಗುಣಪರ್ಯಾಯ ಸ್ವಭಾವಮಂ ದ್ರವ್ಯಮೆಂದು ಪೇಳಿಪಡುಗುಂ. ಸ್ವದ್ರವ್ಯಾದಿ ಗ್ರಾಹಕ ದ್ರವ್ಯಾರ್ಥಿಕನಯದಿಂ ದ್ರವ್ಯಮುಂಟೆಂದು ಪೇಳಿಪಡುಗುಂ. ಪರದ್ರವ್ಯಾದಿ ಗ್ರಾಹಕ ದ್ರವ್ಯಾರ್ಥಿಕನಯದಿಂ ದ್ರವ್ಯಮಿಲ್ಲೆಂದು ಪೇಳುವದು. ಪರಮಭಾವ ಗ್ರಾಹಕ ದ್ರವ್ಯಾರ್ಥಿಕನಯದಿಂದಾತ್ಮಜ್ಞಾನಸ್ವರೂಪಮೆನ್ನಲ್ಪಡುವದು ಹ್ಯಾಗಂದರೆ—ಶುದ್ಧನುಮಲ್ಲಮಶುದ್ಧನುಮಲ್ಲ ಅನುಪಚರಿತನುಮಲ್ಲೆಂಬರ್ಥವು. ಇಂತು ಹತ್ತುತೆರ ದ್ರವ್ಯಾರ್ಥಿಕನಯದಿಂದ ದ್ರವ್ಯಂ ಹೇಳಲ್ಪಟ್ಟಿತು.

ಇನ್ನಾರು ಪ್ರಕಾರದ ಪರ್ಯಾಯಾರ್ಥಿಕನಯದಿಂದ ಹೇಳುವದು ಹ್ಯಾಗಂದರೆ—ಅನಾದಿನಿತ್ಯಪರ್ಯಾಯಾರ್ಥಿಕನಯದಿಂ ಪುದ್ಗಲಪರ್ಯಾಯಂ ನಿತ್ಯವೆನ್ನಲ್ಪಡುವದು. ಸಾದಿನಿತ್ಯ ಪರ್ಯಾಯಾರ್ಥಿಕನಯದಿಂ ಜೀವನಪರ್ಯಾಯಂ ನಿತ್ಯವೆನ್ನಲ್ಪಡುವದು. ಸತ್ತಾಗೌಣತ್ವದಿರನುತ್ಪಾದ ವ್ಯಯಗ್ರಾಹಕ ಸ್ವಭಾವನಿತ್ಯ ಶುದ್ಧ ಪರ್ಯಾಯಾರ್ಥಿಕ ನಯದಿಂ ಸಮಯ ಸಮ

ಯಂ ಪರ್ಯಾಯಂ ವಿನಾಶಿಯೆನ್ನಲ್ಪಡುವದು. ಕರ್ಮೋಪಾಧಿ ಸ್ವಾಪೇಕ್ಷೆಸ್ವಭಾವ ನಿತ್ಯಾಶುದ್ಧ ಪರ್ಯಾಯಾರ್ಥಿಕ ನಯದಿಂದೊಂದೇ ಕ್ಷಣದೊಳ್‌ತ್ರಿಸ್ವರೂಪ ಪರ್ಯಾಯಮೆಂದು ಹೇಳಲ್ಪಡುವದು. ಕರ್ಮೋಪಾಧಿ ನಿರಪೇಕ್ಷೆ ವಿಭಾವ ನಿತ್ಯ ಶುದ್ಧ ಪರ್ಯಾಯಾರ್ಥಿಕ ನಯದಿಂ ಸಿದ್ಧಪರ್ಯಾಯಸದೃಶ ಶುದ್ಧಿಯಿಂ ಸಂಸಾರಿ ಜೀವನೊಳು ಪೇಳಪಡುಗುಂ. ಕರ್ಮೋಪಾಧಿ ಸ್ವಾಪೇಕ್ಷೆ ವಿಭಾವಾನಿತ್ಯಾಶುದ್ಧ ಪರ್ಯಾಯಾರ್ಥಿಕ ನಯದಿಂ ಸಂಸಾರಿ ಜೀವಂಗಳ ಸಾವು ಪುಟ್ಟೆಂಬುದಂ ಪೇಳ್ವುದು. ಭಾವಿ ನೈಗಮನಯದಿಂ ಶುದ್ಧಾತ್ಮಂ ಧ್ಯೇಯಮೆಂಬುದು. ಮೇಣ್ಮುಂದಾಗಲುವೇಡಿರ್ದ ಪ್ರಸ್ಥಮನೀಗಳೇ ಪ್ರಸ್ಥವೆಂಬುವ ಮೇಣ್ ಕುಮಾರನ ಅರಸೆಂಬಂತೆ, ಭೂತ ನೈಗಮನಯದಿಂ ಇಂದಿನ ದೀಪಾವಳಿಯಂದು ವೀರವರ್ಧಮಾನಸ್ವಾಮಿ ನಿರ್ವಾಣಮನೆಯ್ದಿದನೆಂಬುದು. ವರ್ತಮಾನನೈಗಮನಯದಿಂ ನನಿಷ್ಪನ್ನ ಕ್ರಿಯೆಯಂ ನಿಃಪನ್ನಂ ಮಾಡಿಹನೆಂಬುವದು ಮೇಣ್ ಧನಮುನನ್ನದೆಂಬುದು. ಸಾಮಾನ್ಯ ಸಂಗ್ರಹನಯದಿಂ ಪರಸ್ಪರ ವಿರೋಧದಿಂದೆಲ್ಲಾ ದ್ರವ್ಯಮುಂಟೆಂದು ಹೇಳಲ್ಪಡುವದು. ವಿಶೇಷ ಸಂಗ್ರಹನಯದಿಂ ಪರಸ್ಪರ ವಿರೋಧದಿಂದೆಲ್ಲಾ ಜೀವಂಗಳುಂಟೆಂದು ಹೇಳಲ್ಪಡುವದು. ಸಾಮಾನ್ಯ ಸಂಗ್ರಹಭೇದ ವ್ಯವಹಾರ ನಯದಿಂ ಪರಸ್ಪರ ವಿರೋಧದಿಂ ಸರ್ವ ಜೀವಂಗಳುಂಟೆಂಬುದನೆಂದೊಡೆ, ಜೀವಂಗಳಿವಂಗಳೆಂಬುದರ್ಥಂ ವಿಶೇಷಸಂಗ್ರಹಭೇದಕ ವ್ಯವಹಾರನಯದಿಂ ಪರಸ್ಪರ ವಿರೋಧದಿಂದೆಲ್ಲಾ ಜೀವರೊಳುಂಟೆಂಬುದೇನರ್ಥಮೆಂದೊಡೆ, ಸಂಸಾರಿಜೀವಂಗಳಿವು ಮುಕ್ತಿಜೀವಂಗಳಿವೆಂಬುದರ್ಥಂ ಸೂಕ್ಷ್ಮ ಋಜುಸೂತ್ರನಯದಿಂದೇಕ ಸಮಯಮಾತ್ರಾವಸ್ಥಾನಂ ಪರ್ಯಾಯಮೆಂಬುದು. ಸ್ಥೂಲ ಋಜುಸೂತ್ರನಯದಿಂ ಏಕಸಮಯಮಾತ್ರಾವಸ್ಥಾನಂ ಪರ್ಯಾಯಮೆಂಬುದು. ಸ್ಥೂಲ ಋಜುಸೂತ್ರನಯದಿಂ ಮನುಷ್ಯಪರ್ಯಾಯ ಪ್ರಧಾನತ್ವದಿಂ ಮನುಷ್ಯನೆಂಬುದು. ಶಬ್ದನಯದಿಂ ಘಟಪಟಶಬ್ದಪ್ರಧಾನತ್ವದಿಂ ಘಟಪಟವೆಂಬುದರ್ಥಂ ಸಮಾಭಿರೂಢನಯದಿಂ ಇಂದ್ರಃ ಶಕ್ರ ಪುರಂಧರನೆಂಬುದು, ಏವಂ ಭೂತನಯದಿಂ ಪಾಠಕ ಗಾಯಕ ನರ್ತಕನೆಂಬುದು.

ಮತ್ತಮಿನ್ನು ಉಪನಯಗಳು ಹ್ಯಾಗೆಂದರೆ—ಶುದ್ಧ ಸದ್ಭೂತವ್ಯವಹಾರನಯದಿಂ ಶುದ್ಧ ಗುಣಗುಣಿಯುಂ, ಪರ್ಯಾಯಪರ್ಯಾಯಿಯುಂ, ಸ್ವಭಾವಸ್ವಭಾವಿಯುಂ, ಪ್ರದೇಶಪ್ರದೇಶಿಯುಂ, ಎಂದಿವಂ ಪೇಳುವದು ಅಶುದ್ಧ ಸದ್ಭೂತವ್ಯವಹಾರನಯದಿಂ ಶ್ರದ್ಧಾಶ್ರದ್ಧೆಯು ಮೆಂದ ಸದ್ಭೂತನಯಮಿತ್ತೆರ೧ ॥ ೨ ॥ ಸ್ವಜಾತ್ಯಸದ್ಭೂತವ್ಯವಹಾರನಯದಿಂ ಸ್ಕಂಧಮಂ ಪುದ್ಗಲಮೆಂಬುದು, ವಿಜಾತ್ಯಸದ್ಭೂತವ್ಯವಹಾರನಯದಿಂದೇಕೇಂದ್ರಿಯಾದಿ ಜೀವಂಗಳ ಶರೀರಮನಾತ್ಮನೆಂಬುದು, ಸ್ವಜಾತಿವಿಜಾತ್ಯಸದ್ಭೂತವ್ಯವಹಾರನಯದಿಂ ಶ್ರದ್ಧಾಶ್ರದ್ಧೆಯುಮೆಂದಸದ್ಭೂತ ವ್ಯವಹಾರನಯಂ ಮೂರುತೆರಂ ॥ ೩ ॥ ಸ್ವಜಾತಿದ್ರವ್ಯದಲ್ಲಿ ಸ್ವಜಾತಿದ್ರವ್ಯಾಪರೋಪಣಂ, ಉಪಚರಿತಾಸದ್ಭೂತವ್ಯವಹಾರನಯದಿಂ ಪುತ್ರಾದಿ ಬಂಧುವರ್ಗಮೆನ್ನವರೆಂಬುವದು. ವಿಜಾತಿ ದ್ರವ್ಯದಲ್ಲಿ ವಿಜಾತಿದ್ರವ್ಯಾಪರೋಪಣಂ ಉಪಚರಿತಾಸದ್ಭೂತವ್ಯವಹಾರನಯದಿಂ ಮಣಿಕನಕ ರಜತಮಯ ವಸ್ತ್ರಾದಿಗಳಪ್ಪವಬೃತನಪದಾರ್ಥಂಗಳೆನ್ನವೆಂಬುವದು. ಸ್ವಜಾತಿ ವಿಜಾತಿ ದ್ರವ್ಯದಲ್ಲಿ ಸ್ವಜಾತಿ ವಿಜಾತಿ ದ್ರವ್ಯಾಪರೋಪಣಂ ಉಪಚರಿತಾಸದ್ಭೂತ ವ್ಯವಹಾರನಯದಿಂ ದೇಶ

ರಾಜ್ಯಗೃಹಾದಿ ಮಿಶ್ರಪದಾರ್ಥಂಗಳೆನ್ನವೆಂಬುದು. ಅಸದ್ಭೂತ ವ್ಯವಹಾರನಯದಿಂ ಅಶುದ್ಧ ನಿಶ್ಚಯನಯದಿಂದಾತ್ಮಂ ಪರಸಮಯಿಯೆಂಬುದು. ಶುದ್ಧ ನಿಶ್ಚಯನಯದಿಂ ಪರಮ ಭಾವಗ್ರಾಹಕನಯದಿಂದಾತ್ಮಂ ಸ್ವಸಮಯಿಯೆಂಬುದು. ಸದ್ಭೂತ ವ್ಯವಹಾರನಯದಿಂ ದ್ರವ್ಯಮೋಕ್ಷಂ, ಅಶುದ್ಧ ನಿಶ್ಚಯನಯದಿಂ ಭಾವಮೋಕ್ಷಂ, ಶುದ್ಧ ನಿಶ್ಚಯದಿಂ ಸಮಯಸಾರಲಾಭಮಲ್ಲದೆ ದ್ರವ್ಯ, ಭಾವಮೋಕ್ಷಮಿಲ್ಲ, ಅಸದ್ಭೂತ ವ್ಯವಹಾರನಯದಿಂ ದ್ರವ್ಯಕರ್ಮಕರ್ತೃ, ಅಶುದ್ಧ ನಿಶ್ಚಯನಯದಿಂ ಭಾವಕರ್ಮಕರ್ತೃ, ಶುದ್ಧ ನಿಶ್ಚಯನಯದಿಂ ಶುದ್ಧಭಾವಕರ್ತೃ, ಪರಮ ಭಾವಗ್ರಾಹಕದಾಪೇಕ್ಷೆಯಿಂದ ಮೂರು ಭಾವಕ್ಕಂ ಕರ್ತೃವಲ್ಲ, ಇನ್ನು ನಯದೃಷ್ಟಾಂತ ಪೂರ್ವಕವಾಗಿ ಹೇಳಲ್ಪಟ್ಟಿತು.

ಉಕ್ತಂಚ ಶ್ಲೋ ॥ ನಯಾನಾಂ ಲಕ್ಷಣಂ ಭೇದಂ ವಕ್ಷ್ಯೇ ನತ್ವಾ ಜಿನೇಶ್ವರಂ ।
ದುರ್ನಯಾರತಮೋ ನಾಶಂ ಮಾರ್ತಂಡಂ ಜಗದೀಶ್ವರಂ ॥ ೫ ॥
ನಯಾವಕ್ತ್ಯುರ್ವಿವಕ್ಷ್ಯಾಸ್ಯಾದ್ವಸ್ತ್ವಂ ಶೇಷಂ ಪ್ರವರ್ತತೇ ।
ದ್ವಿಧಾಸೌಭಿದ್ಯತೇ ಮೂಲಾದ್ರವ್ಯಪರ್ಯಾಯಭೇದತಃ ॥ ೬ ॥
ನೈಗಮಸ್ಸಂಗ್ರಹಶ್ಚೇತಿ ವ್ಯವಹಾರ ಋಜುಸೂತ್ರಕೌ ।
ಶಬ್ದ ಸಮಭಿರೂಢೈವಂ ಭೂತಾ ನವನಯಾಸ್ಸ್ಮೃತಾಃ ॥ ೭ ॥
ಸದ್ಭೂತಾಸದ್ಭೂತೌ ಸ್ಯಾತಾಮುಪಚಾರತೋಪ್ಯಸದ್ಭೂತಃ ।
ಇತ್ಯುಪನಯಾಸ್ತ್ರಿಭೇದಾಃ ಪ್ರೋಕ್ತಾಸ್ತಥೈವ ತತ್ವಜ್ಞೈಃ ॥ ೮ ॥
ದ್ರವ್ಯಾರ್ಥಿದಶವಿಧಂ ಸ್ಯಾತ್ ಪರ್ಯಾಯಾರ್ಥಿಕಷಡ್ವಿಧಃ ।
ನೈಗಮಸ್ತ್ರಿವಿಧಸ್ತತ್ರ ಸಂಗ್ರಹಶ್ಚ ದ್ವಿಧಾಮತಃ ॥ ೯ ॥
ವ್ಯವಹಾರ ಋಜುಸೂತ್ರೌ ಚ ಪ್ರಕೃತ್ಯೇಕಂ ದ್ವಿವಿಧಾತ್ಮಕಃ ।
ಶಬ್ದೇ ಸಮಭಿರೂಢೈವಂ ಭೂತಾನಾಂ ನಾಸ್ತಿ ಕಲ್ಪಕಾ ॥ ೧೦ ॥
ಸದ್ಭೂತಶ್ಚ ನಯಾದ್ವಿಧಾಃ ಸದ್ಭೂತಸ್ತ್ರಿವಿಧಾಮತಾಃ ।
ಉಪಚಾರಾದಸದ್ಭೂತ ಪ್ರೋಕ್ತಸೋಪಿಸ್ತ್ರ್ಯೈ ವಿದ್ಯಮಾ ಭಜೇತ್ ॥ ೧೧ ॥
ಸರ್ವಪಾರನಯಭೇದಾನಾಂ ಭೇದಾ ಷಟ್ತ್ರಿಂಶದೀರಿತಾ ।
ಏತಾನಿ ಗದ್ಯತೇ ತೇಷಾಂ ಸ್ವರೂಪವ್ಯಾಪ್ತಿಲಕ್ಷಣಂ ॥ ೧೨ ॥

ಮತ್ತಮಧ್ಯಾತ್ಮಭಾಷಯಾನಯಾವಭ್ಯಂತ್ಯ ತತ್ರತಾವಸ್ಮಾಲನಯೋದ್ದೊ ನಿಶ್ಚಯೋ ವ್ಯವಹಾರಶ್ಚ ತತ್ರಾಭೇದಾಸಪಚಾರತಯಾ, ವಸ್ತುನಿಶ್ಚಯತಾ ಇತಿನಿಶ್ಚಿಯತಃ, ಭೇದೋಪಚಾರತಯಾ ವಸ್ತುವ್ಯವಹೃತ ಇತೆ, ಯ ಸೋಪಾಧಿವಿಷಯೋ ಶುದ್ಧನಿಶ್ಚಯಃ, ಅಥಾಮತಿಜ್ಞಾನೋದಯೋಜೀವಯಿತೆ, ವ್ಯವಹಾರಾ ದ್ವಿವಿಧಃ ಸದ್ಭೂತವ್ಯವಹಾರ, ಅಸದ್ಭೂತ ವ್ಯವಹಾರಶ್ಚಸ್ತತ್ರೈವ ವಸ್ತುವಿಷಯಃ, ಸದ್ಭೂತ ವ್ಯವಹಾರ ಭಿನ್ನವಸ್ತುವಿಷಯೋ, ಅಸದ್ಭೂತ ವ್ಯವಹಾರಃ, ಸದ್ಭೂತ ವ್ಯವಹಾರೋ ದ್ವಿವಿಧಃ. ಉಪಚರಿತಾನುಪಚರಿತಭೇದಾತ್, ತತ್ರಸೋಪಾಧಿಕ ಗುಣ ಗುಣೀವಿಷಯಃ, ಉಪಚರಿತ ಸದ್ಭೂತ ವ್ಯವಹಾರ, ೧ ಯಥಾಜೀವಸ್ಯಮತಿಜ್ಞಾನಾದಯೋ ಗುಣಾಃ, ೨ ನಿರುಪಾಧಿ ಗುಣಗುಣೀಭೇದ ವಿಷಯಾನುಪಚರಿತ ಸದ್ಭೂತ ವ್ಯವಹಾರಯಥಾ

ಜೀವಸ್ಯ ಕೇವಲಜ್ಞಾನಾದಯೋಗುಣಾ, ಅಸದ್ಭೂತ ವ್ಯವಹಾರೋ ದ್ವಿವಿಧಃ ॥ ೨ ॥ ಉಪಚರಿತಾನುಪಚರಿತಭೇದಾಸ್ತತ್ರ ಸಂಕ್ಲೇಶರಹಿತ ವಸ್ತುಸಂಬಂಧ ವಿಷಯಮುಪಚರಿತಾಸದ್ಭೂತ ವ್ಯವಹಾರಃ ॥ ೧ ॥ ಯಥಾ ಜೀವಸ್ಯ ಧನಧಾನ್ಯಮಿತ್ಯಾದಿ ಸಂಕ್ಲೇಶಸಹಿತ ವಸ್ತುಸಂಬಂಧ ವಿಷಯಃ, ಅನುಪಚರಿತಾಸದ್ಭೂತ ವ್ಯವಹಾರಃ ಯಥಾ ಜೀವಸ್ಯ ಶರೀರಮಿತಿ, ಏವ ಮಧ್ಯಾತ್ಮ ಭಾಷಯಾಷಣ್ಮಯಾ, ಎಲ್ಲಾ ಜೀವಂಗಳುಂ ಶುದ್ಧ ಬುದ್ಧೈಕ ಸ್ವಭಾವಂಗಳೆಂಬುದು ಶುದ್ಧ ನಿಶ್ಚಯ ನಯವು. ಕೇವಲಜ್ಞಾನಾದಿ ಶುದ್ಧನಯಂಗಳು ಜೀವಸಂಬುದ್ಧಿಯಂಬುವದನುಪಚರಿತಸದ್ಭೂತ ವ್ಯವಹಾರನಯವು. ಮತಿಜ್ಞಾನಾದಿ ವಿಭಾವಗುಣಂಗಳು ಜೀವಸಂಬುದ್ಧಿಯಂಬುವದು, ಉಪಚರಿತಸದ್ಭೂತ ವ್ಯವಹಾರನಯವು. ಶರೀರಾದಿಗಳ್ಜೀವಸಂಬಂಧಿಯೆನ್ನುವದು ಅನುಪಚರಿತಸದ್ಭೂತ ವ್ಯವಹಾರನಯವು. ಗೃಹಗ್ರಾಮಾದಿಗಳು ಎನ್ನವೆಂಬುವದು ಉಪಚರಿತಾಸದ್ಭೂತ ವ್ಯವಹಾರನಯುವು.

ಗಾಹೆ॥ ಜಾವದಿಯಾ ವಯಣವಹಾತಾವದಿಯಾ ಚೇವಹೊಂತಿಣಯವಾದಾ ।
ಜಾವದಿಯಾಣಯ ವಾದಾತಾವದಿಯಾ ಚೇವಹೊಂತಿ ಪರಸಮಯಾ ॥ ೯ ॥

ಶ್ಲೋಕ ॥ ಪ್ರಮಾಣನಯನಿಕ್ಷೇಪೈರ್ಯೋರ್ಥಾಂ ನಾಭಿಸಮೀಕ್ಷ್ಯತೆ ।
ಯುಕ್ತಂಭಾ ಯುಕ್ತಿವದಾತಿ ತಸ್ಯಾ ಯುಕ್ತಂಚ ಯುಕ್ತಿವತ್ ॥ ೧೩ ॥

ಜ್ಞಾನಂ ಪ್ರಮಾಣಮಿಥ್ಯಾಹು, ರೂಪಯೋನ್ಯಾಸಮುಚ್ಯತೇ, ।
ನಯೋಜ್ಞಾತುರಭಿಪ್ರಾಯೋ ಯುಕ್ತಿತೋರ್ಥ ಪರಿಗ್ರಹಾಃ ॥ ೧೪ ॥

ವಚನ ॥ ಮತ್ತಂ ಸ್ವಾತ್ಮೋಪಲಬ್ಧಿ ಲಕ್ಷಣಮೋಕ್ಷಮುಮನಾತ್ಮಪಡೆವಂದಮೆಂತೆನೆ, ಇಲ್ಲಿಂ ದ್ರವ್ಯಾದಿ ಸ್ವಪರ ಹೇತುಗಳಾವಾವುವೆಂದೊಡೆ, ಸ್ವದ್ರವ್ಯಮುಂ, ಸ್ವಕ್ಷೇತ್ರಮುಂ, ಸ್ವಕಾಲಮುಂ, ಸ್ವಭಾವಮುಮೆಂದಿವಂತರಂಗ ಹೇತುಗಳು, ಪರದ್ರವ್ಯಮುಂ, ಪರಕ್ಷೇತ್ರಮುಂ, ಪರಕಾಲಮುಂ, ಪರಭಾವಮುಂ, ಎಂದಿವು ಬಹಿರಂಗ ಹೇತುಗಳು. ಇಂತಿವುಗಳನ್ನು ದೃಷ್ಟಾಂತ ಮೂಲಕರಿಂದಾರಿಕ್ಷಾತಂಗಳೊಳು ಯಥಾ ಕ್ರಮದಿ ಯೋಜಿಸಲ್ಪಡುವವು. ಇಲ್ಲಿಂ ದೃಷ್ಟಾಂತಂಗಳೊಳು ಸ್ವದ್ರವ್ಯಮೆನ್ನುವದು ಹೇಮಪಾಷಾಣ ಪರ್ಯಾಯ ಪರಿಣತ ಪುದ್ಗಲದ್ರವ್ಯಂ, ಸ್ವಕ್ಷೇತ್ರಮೆನ್ನುವದು, ಅದರ ಪ್ರದೇಶಂಗಳುಪಚಾರದಿನಿರ್ದಾಕಾಶ ಪ್ರದೇಶಂಗಳು, ಮೇಣ್ ಸ್ವಕಾಲಮೆನ್ನುವದು, ಅವರ ಅತೀತಾನಾಗತ ಪರ್ಯಾಯಂ, ವರ್ತಮಾನ ಸ್ವಭಾವಮೆನ್ನುವದು ಅದರ ಕ್ರಿಯಾಕಾರಿತ ಪರಿಣತಮಪ್ಪ ವರ್ತಮಾನ ಪರ್ಯಾಯಂ, ಪರದ್ರವ್ಯಮೆನ್ನುವದು, ರಸಮೂಲಿಕೆ ಮೊದಲಾದವು. ಪರಕ್ಷೇತ್ರಮೆನ್ನುವದು, ಮೂಷೆ ಮೊದಲಾದುದು. ಪರಕಾಲಮೆನ್ನುವದು, ಇರುಳುಂ ಪಗಲುಂ, ಮೇಣ್ ಪರಭಾವಮೆನ್ನುವದು, ರಸವಾದಿಯ ಪರಿಣತಿಯ ವಿಶೇಷವು. ದೃಷ್ಟಾಂತಿಕದೊಳು ಸ್ವದ್ರವ್ಯಮೆನ್ನುವದು ಅನಾದ್ಯನಿಧನ ಸಾಧಾರಣ ಚೈತನ್ಯ ಸ್ವಭಾವಮಪ್ಪ ಜೀವದ್ರವ್ಯವು. ಸ್ವಕ್ಷೇತ್ರಮೆನ್ನುವದು ಅದರ ಲೋಕಮಾತ್ರ ಸಂಖ್ಯಾತ ಪ್ರದೇಶಂಗಳು, ಉಪಚಾರದಿಂದದರಿದಾಕಾಶ ಪ್ರದೇಶಂಗಳು. ಮೇಣ್ ಸ್ವಕಾಲಮೆನ್ನುವದು, ಅದರ ಅತೀತಾನಾಗತ ಪರ್ಯಾಯಂಗಳು, ಸ್ವಭಾವಮೆನ್ನುವದು, ವಿಶುಧ್ಯತಿಶಯ ವಿಶೇಷದೊಳ್ಕೂಡಿದ ವರ್ತಮಾನ ಪರ್ಯಾಯವು. ಪರದ್ರವ್ಯಮೆನ್ನುವದು, ಉತ್ತಮ ಸಂಹನನವು. ಪರಕ್ಷೇತ್ರಮೆನ್ನುವದು, ಪಂಚ

ದಶ ಕರ್ಮಭೂಮಿಗಳು. ಪರಕಾಲಮೆನ್ನುವದು, ದುಷ್ಷಮವೆಂಬ ಜಿನೆಯ ಕಾಲವು. ಪರಭಾವವೆಂಬುದು ತತ್ತ್ವೋಪದೇಶಕರ ಸ್ವಚಾರ್ಯಾದಿಗಳ ಪರಿಣತ ವಿಶೇಷವು. ಇನ್ನನೇಕ ಸಹಕಾರಿ ಕಾರಣಕಲಾಪಮುಳ್ಳೊಡಂ ಸಮಗ್ರವಿಶಿಷ್ಟಮಪ್ಪಾತನೇ ಮುಖ್ಯಮೆಂದು ವೃತ್ತಿಯಿಂ ವಿವಕ್ಷಿಸಲ್ಪಟ್ಟನೆಂಬುದಿದರ ತಾತ್ಪರ್ಯವು.

———

## ಸೂತ್ರಂ ॥ ಸಪ್ತಭಂಗಿತಿ ॥ ೧೬ ॥

ತಾ:—ಸ್ಯಾದಸ್ತಿ, ಸ್ಯಾನ್ನಾಸ್ತಿ, ಸ್ಯಾದಸ್ತಿನಾಸ್ತಿ, ಸ್ಯಾದವಕ್ತವ್ಯಂ, ಸ್ಯಾದಸ್ತ್ಯವಕ್ತವ್ಯಂ, ಸ್ಯಾನ್ನಾಸ್ತ್ಯವಕ್ತವ್ಯಂ, ಸ್ಯಾದಸ್ತಿನಾಸ್ತ್ಯವಕ್ತವ್ಯಂ ಎಂದಿವು ಸಪ್ತಭಂಗಿಗಳಕ್ಕುಮೆಂತೆನೆ—

ಶ್ಲೋಕ॥ ಏಕಸ್ಮಿಂ ನವಿರೋಧೇನ ಪ್ರಮಾಣನಯವಾಕ್ಯತಃ ॥
ಸದಾದಿಕಲ್ಪನಾಯಾಚ ಸಪ್ತಭಂಗಿತಿಸಾಮಾತಾ ॥ ೧೫ ॥

ತಾ:—"ಸ್ಯಾತ್ಕಥಂಚಿತ್ ವಿವಕ್ಷಿತಪ್ರಕಾರಮೆಂದೊಡಮೇಕಾರ್ಥಂ" ಸ್ವದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಸ್ಯಾದಸ್ತಿಯೆನ್ನುವದು ॥ ೧ ॥

ಪರದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಸ್ಯಾನ್ನಾಸ್ತಿಯೆನ್ನುವದು ॥ ೨ ॥

ಕ್ರಮದಿಂ ಸ್ವಪರದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಸ್ಯಾದಸ್ತಿನಾಸ್ತಿಯೆನ್ನುವದು ॥ ೩ ॥

ಯುಗಪದ್ವಕ್ತುಮಶಕ್ಯತ್ವಾತ್ ಕ್ರಮಪ್ರವೃತ್ತಿರ್ಭಾರತೀಃ ಯೆಂಬ ವಚನದತ್ತಣಿಂ ಯುಗಪತ್ ಸ್ವಪರದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಸ್ಯಾದವಕ್ತವ್ಯಮೆನ್ನುವದು ॥ ೪ ॥

ಸ್ವದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಯುಗಪತ್ ಸ್ವಪರದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಸ್ಯಾದಸ್ತ್ಯವಕ್ತವ್ಯಮೆನ್ನುವದು ॥ ೫ ॥

ಪರದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಯುಗಪತ್ ಸ್ವಪರದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಸ್ಯಾನ್ನಾಸ್ತ್ಯವಕ್ತವ್ಯಮೆನ್ನುವದು ॥ ೬ ॥

ಕ್ರಮದಿಂ ಸ್ವಪರದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಯುಗಪತ್ ಸ್ವಪರದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂ ಸ್ಯಾದಸ್ತಿನಾಸ್ತ್ಯವಕ್ತವ್ಯಮೆನ್ನುವದು ॥ ೭ ॥

ಸ್ಯಾದಸ್ತಿಯೆನ್ನುವದು ಮೊದಲಾದುದು ಪ್ರಮಾಣವಾಕ್ಯಂ ॥ ೧ ॥
ಸ್ಯಾದಸ್ತ್ಯೇವವೆಂಬುವದು ಮೊದಲಾದುದು ದುರ್ನಯವಾಕ್ಯಂ ॥ ೨ ॥
ಅಸ್ತಿಯೆನ್ನುವದು ಮೊದಲಾದುದು ಪ್ರಮಾಣವಾಕ್ಯಂ ॥ ೩ ॥

ಅಸ್ತ್ಯೇವ ಎಂಬುದು ಮೊದಲಾದವು, ದುರ್ನಯವಾಕ್ಯಂ ॥ ೪ ॥ ಎಂಬೀ ವಾಕ್ಯಚತುಷ್ಟಯದಿಂ ಸಮ್ಯಗ್ಭೇದಮುಂ ಮಿಥ್ಯಾಭೇದಮುಂ ಎಂದರಿಯಲ್ಪಡುವವು. ಇಲ್ಲಿಂ ಸಮ್ಯಗ್ಯಾತ್ಮಕಮಪ್ಪ ಶುದ್ಧಾತ್ಮತತ್ವಮುಪಾದೇಯಮೆಂದು ತಾತ್ಪರ್ಯಂ.

ಶ್ಲೋಕ॥ ಸದೇಕನಿತ್ಯವಕ್ತವ್ಯಾಸ್ತದ್ವಿಪಕ್ಷಾಶ್ಚತೇನಯಾ: ॥
ಸರ್ವತೇತಿಪ್ರದುಷ್ಯಂತಿ ಪುಶ್ಯಾತಿಸ್ಯಾವಿತೀಹಿತೇ ॥ ೧೬ ॥

ಇಂತು ಹದಿನಾರು ಸೂತ್ರಂಗಳಿಂದ ಪ್ರಕಾಯತತ್ವಾರ್ಥ ನಿಕ್ಷೇಪಪ್ರಮಾಣ ನೆಯ ಸಪ್ತಭಂಗಿಗಳ ಸ್ವರೂಪವು ಹೇಳಲ್ಪಟ್ಟಿತು.

---

ಸೂತ್ರಂ ॥ ಪಂಚಭಾವಾಃ ॥ ೧೭ ॥

ತಾಃ—ಔಪಶಮ, ಕ್ಷಾಯಿಕ, ಕ್ಷಯೋಪಶಮಿಕ, ಔದಯಿಕ, ಪಾರಿಣಾಮಿಕಭಾವ ಮೆಂದು ಭಾವವೈದುತರವು ॥ ೫ ॥

---

ಸೂತ್ರಂ ॥ ಔಪಶಮಿಕೋ ದ್ವಿವಿಧಾಃ ॥ ೧೮ ॥

ತಾ:—೧ ಸಪ್ತಪ್ರಕೃತಿಗಳ ಉಪಶಮದಿಂದ ಹುಟ್ಟಿದ್ದು ಉಪಶಮಸಮ್ಯಕ್ತ್ವವುಂ, ೨ ಏಕ ವಿಂಶತಿ ( ೨೧ ) ಚಾರಿತ್ರಮೋಹನೀಯದ ಉಪಶಮದಿಂದ ಹುಟ್ಟಿದ್ದು ಉಪಶಮಚಾರಿತ್ರವುಂ ಎಂದು ಔಪಶಮಿಕಭಾವವೆರಡುವಿಧವು.

---

ಸೂತ್ರಂ ॥ ಕ್ಷಾಯಿಕೋ ನವವಿಧ: ॥ ೧೯ ॥

ತಾ:—೧ ಕ್ಷಾಯಿಕಸಮ್ಯಕ್ತ್ವಂ, ೨ ಕ್ಷಾಯಿಕಚಾರಿತ್ರವುಂ, ೩ ಕೇವಲಜ್ಞಾನಂ, ೪ ಕೇವಲದರ್ಶನಂ, ೫ ಕ್ಷಾಯಿಕದಾನಂ, ೬ ಕ್ಷಾಯಿಕಲಾಭಂ, ೭ ಕ್ಷಾಯಿಕಭೋಗಂ, ೮ ಕ್ಷಾಯಿಕೋಪಭೋಗಂ, ೯ ಕ್ಷಾಯಿಕವೀರ್ಯಮೆಂದು ಕ್ಷಾಯಿಕಭಾವದಲ್ಲಿ ನವಭೇದಂಗಳು.

---

ಸೂತ್ರಂ ॥ ಅಷ್ಟಾದಶವಿಧಃ ಕ್ಷಾಯೋಪಶಮಿಕ: ॥ ೨೦ ॥

ತಾ:—ಮತಿ, ಶ್ರುತ, ಅವಧಿ, ಮನ:ಪರ್ಯಯವೆಂಬೀ ನಾಲ್ಕುಂ ಸಮ್ಯಜ್ಞಾನಗಳು. ಕುಮತಿ, ಕುಶ್ರುತಿ, ವಿಭಂಗವೆಂಬೀ ಮೂರುಂ ಅಜ್ಞಾನಂಗಳು. ಚಕ್ಷುರ್ದರ್ಶನಂ, ಅಚಕ್ಷುರ್ದರ್ಶನಂ, ಅವಧಿದರ್ಶನಮೆಂದು ದರ್ಶನಂಗಳು ಮೂರುವಿಧವು. ದಾನ, ಲಾಭ, ಭೋಗ ಉಪಭೋಗ, ವೀರ್ಯಮೆಂದೈದುಂ ಲಬ್ಧಿಗಳು. ವೇದಕಸಮ್ಯಕ್ತ್ವಂ, ಸರಾಗಚಾರಿತ್ರಂ, ದೇಶಸಂಯಮಮೆಂದು ಇವು ಮೂರುಂ. ಇಂತು ಮಿಶ್ರಭಾವಂ ಹದಿನೆಂಟು ಭೇದವಾಗುವದು. ಹ್ಯಾಗಂದರೆ— ಪ್ರತಿಪಕ್ಷಕರ್ಮಣಾಮುದಯೇ ವಿದ್ಯಮಾನೋಪಿಯೋ ಜೀವಗುಣಾಂ ಸೋದೃಶ್ಯತೇ ಪಕ್ಷೇಯೋಪಶಮ: ಕ್ಷಯೋಪಶಮದೊಳಾದುದು ಕ್ಷಯೋಪಶಮಿಕಭಾವವೆಂಬುವದರ್ಥಂ ॥

---

ಸೂತ್ರಂ ॥ ಔದಯಿಕಮೇಕವಿಂಶತಿಭೇದಃ ॥ ೨೧ ॥

ತಾ:—ನರಕ, ತಿರ್ಯಂಚ, ಮನುಷ್ಯ, ದೇವಗತಿಗಳೆಂದು ನಾಲ್ಕು ಗತಿಗಳು. ಕ್ರೋಧ, ಮಾನ, ಮಾಯಾ, ಲೋಭಮೆಂದು ನಾಲ್ಕು ಕಷಾಯಂಗಳು. ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂಗ ಎಂದು ಮೂರು ಲಿಂಗಗಳು. ಮಿಥ್ಯಾತ್ವಂ, ಅಜ್ಞಾನಂ, ಅಸಂಯಮಂ, ಅಸಿದ್ಧತ್ವಂ

ಎಂದು ನಾಲ್ಕು. ಕೃಷ್ಣ, ನೀಲ, ಕಾಪೋತ, ಪೀತ, ಪದ್ಮ, ಶುಕ್ಲ ಎಂಬ ಆರು ಲೇಶ್ಯಂಗಳುಂ ಎಂದು ಔದಯಿಕ ಭಾವದಲ್ಲಿ ಇಪ್ಪತ್ತೊಂದು ಭೇದಂಗಳು

---

ಸೂತ್ರಂ ॥ ಪಾರಿಣಾಮಿಕ ಸ್ತ್ರಿವಿಧಃ ॥ ೨೨ ॥

ತಾ:—ಜೀವತ್ವಂ, ಭವ್ಯತ್ವಂ, ಅಭವ್ಯತ್ವಂ ಎಂದೀ ಮೂರುಂ ಪಾರಿಣಾಮಿಕ ಭಾವಭೇದಂಗಳು. ಶುದ್ಧ ಜೀವಾಸ್ತಿಕಾಯವೆಂಬ ಹೆಸರನ್ನುಳ್ಳ ನಿಜಪರಮ ಪಾರಿಣಾಮಿಕಭಾವವು ಉಪಾದೇಯವೆಂಬುವದು ಈ ಮೂರು ಸೂತ್ರಗಳ ಅಭಿಪ್ರಾಯವು.

---

ಸೂತ್ರಂ॥ ಗುಣಜೀವಮಾರ್ಗಣಾಸ್ಥಾನಾನಿ ಪ್ರತ್ಯೇಕಂ ಚತುರ್ದಶಃ ೨೩

ತಾಃ—೧ ಮಿಥ್ಯಾದೃಷ್ಟಿ, ೨ ಸಾಸಾದನಸಮ್ಯಗ್ದೃಷ್ಟಿ ೩ ಸಮ್ಯಗ್ಮಿಥ್ಯಾದೃಷ್ಟಿ, ೪ ಅಸಂಯತಸಮ್ಯಗ್ದೃಷ್ಟಿ, ೫ ದೇಶವ್ರತಿ, ೬ ಪ್ರಮತ್ತಸಂಯತ, ೭ ಅಪ್ರಮತ್ತಸಂಯತ, ೮ ಅಪೂರ್ವಕರಣ, ೯ ಅನಿವೃತ್ತಿಕರಣ, ೧೦ ಕ್ಷಪಕೋಪಶಮಕಸಂಯತ, ( ಸೂಕ್ಷ್ಮಸಾಂಪರಾಯಕ್ಷಪಕೋಪಶಮಕಸಂಯತ, ) ೧೧ ಉಪಶಾಂತಕಷಾಯ ವೀತರಾಗಛದ್ಮಸ್ಥಸಂಯತ, ೧೨ ಕ್ಷೀಣಕಷಾಯವೀತರಾಗಛದ್ಮಸ್ತಸಂಯತ, ೧೩ ಸಯೋಗಿಕೇವಲಿಜಿನಂ, ೧೪ ಅಯೋಗಿಕೇವಲಿಜಿನರೆಂದು ಹದಿನಾಲ್ಕು ಗುಣಸ್ಥಾನಂಗಳಾಗುವವು. ಇಂತಿವುಗಳ ಲಕ್ಷಣಗಳು ಹ್ಯಾಗೆಂದರೆ—

ಗಾಹೆ ॥ ಮಿಚ್ಛಾಸಾಸಣಮಿಸ್ಸೋ ಅವಿರದಸಮ್ಮೋಯ ದೇಸವಿರದೋಯ ।
ವಿರಯಾಪಮತ್ತ ಇಯರೋ ಅಪುಬ್ಬ ಅಣಿಯಟ್ಠಿಸುಹಮೋಯ ॥ ೧೦ ॥
ಉವಸಂತಖೀಣಮೋಹೋ ಸಜೋಗಿಕೇವಲಿಜಿಣೋ ಅಜೋಗಿಯಾ ।
ಚೌದಸಗುಣಠ್ಠಾಣಾಣಿ ಇಯ ಕಮೇಣ ಸಿದ್ಧಾಯ ಣಾಯಪ್ಪಾ ॥ ೧೧ ॥

ಇದಾನೀಂ ತೇಷಾಮೇವ ಗುಣಸ್ಥಾನಾನಾಂ ಪ್ರತ್ಯೇಕಂ ಸಂಕ್ಷೇಪಲಕ್ಷಣಂ ಕಥ್ಯತೇ ॥ ತಥಾಹಿ--ಸಹಜಶುದ್ಧ ಕೇವಲ ಜ್ಞಾನದರ್ಶನರೂಪಾಖಂಡೈಕಪ್ರತ್ಯಕ್ಷಪ್ರತಿಭಾಸಮಯನಿಜಪರಮಾತ್ಮಪ್ರಭೃತಿಷಡ್ದ್ರವ್ಯ, ಪಂಚಾಸ್ತಿಕಾಯ, ಸಪ್ತತತ್ವ, ನವಪದಾರ್ಥೇಷು, ಮೂಢತ್ರಯಾದಿ ಪಂಚವಿಂಶತಿಮಲರಹಿತಂ ವೀತರಾಗಸರ್ವಜ್ಞಪ್ರಣೀತ ನಯವಿಭಾಗೇನ, ಯಸ್ಯ ಶ್ರದ್ಧಾನಂ ನಾಸ್ತಿ ಸ ಮಿಥ್ಯಾದೃಷ್ಟಿರ್ಭವತಿ ॥ ೧ ॥

ಮಿಥ್ಯಾದೃಷ್ಟಿಯಾರು ಅಂದರೆ—ಸಹಜವಾದ, ಶುದ್ಧ ಕೇವಲಜ್ಞಾನದರ್ಶನರೂಪವಾದ ಅಖಂಡೈಕ ಪ್ರತ್ಯಕ್ಷಪ್ರತಿಭಾಸಹಿತನಾದ ನಿಜಪರಮಾತ್ಮನೇ ( ಶುದ್ಧಜೀವ ) ಮೊದಲಾದ, ಷಡ್ದ್ರವ್ಯ, ಪಂಚಾಸ್ತಿಕಾಯ, ಸಪ್ತತತ್ವ, ನವಪದಾರ್ಥಗಳಲ್ಲಿ ಮೂಢತ್ರಯವೇ ಮೊದಲಾದ ಇಪ್ಪತ್ತೈದು ದೋಷವಿಲ್ಲದ, ವೀತರಾಗಸರ್ವಜ್ಞದೇವರಿಂದ ಹೇಳಲ್ಪಟ್ಟ, ನಯವಿಭಾಗದಲ್ಲಿ ಯಾವ ಜೀವನಿಗೆ ಶ್ರದ್ಧೆಯಿಲ್ಲವೋ ಅವನೇ ಮಿಥ್ಯಾದೃಷ್ಟಿ ಜೀವನು ॥ ೧ ॥

ಪಾಷಾಣರೇಖಾಸದೃಶಾನಂತಾನುಬಂಧಿಕ್ರೋಧಮಾನಮಾಯಾಲೋಭಾನ್ಯತರೋದಯೇನ,

ಪ್ರಥಮೌಪಶಮಿಕ ಸಮ್ಯಕ್ತ್ವಪ್ರತಿತೋ ಮಿಥ್ಯಾತ್ವಂ ನಾದ್ಯಾಪಿ ಗಚ್ಛತೀತ್ಯನ್ತರಾಲವರ್ತೀ ಸಾಸಾದನಃ ॥ ೨ ॥

ಸಾಸಾದನನೆಂದರೆ—ಕಲ್ಲಿನಲ್ಲಿ ಬರೆದ ಅಕ್ಷರದಂತೆ ಅನಂತಾನುಬಂಧಿ ಕ್ರೋಧ, ಮಾನ, ಮಾಯಾ, ಲೋಭಗಳಲ್ಲಿ ಯಾವದಾದರೂ ಒಂದರ ಆವಿರ್ಭಾವದಿಂದ, ಔಪಶಮಿಕ ಸಮ್ಯಕ್ತ್ವರಹಿತನಾಗಿ ಮಿಥ್ಯಾತ್ವವನ್ನು ಎದುವರಿಗೆ ಹೊಂದಲಿಲ್ಲವೋ; ಅಂದರೆ ಅಂತಃಸಮ್ಯಕ್ತ್ವ, ಮಿಥ್ಯಾತ್ವ ಈ ಎರಡು ಇರುವ ಜೀವನೇ ಸಾಸಾದನನು ॥ ೨ ॥

"ನಿಜಶುದ್ಧಾತ್ಮಾದಿತತ್ವಂ ವೀತರಾಗ ಸರ್ವಜ್ಞಪ್ರಣೀತಂ ಪರಪ್ರಣೀತಂ ಚ ಮನ್ಯತೇಯಃ ಸದರ್ಶನಮೋಹನೀಯ ಭೇದ ಮಿಶ್ರಕರ್ಮೋದಯೇನ ದಧಿಗುಡಮಿಶ್ರಭಾವವತ್ ಮಿಶ್ರಗುಣಸ್ಥಾನವರ್ತೀ ಭವತಿ " ॥ ೩ ॥

ಮಿಶ್ರನೆಂದರೆ—ವೀತರಾಗ ಸರ್ವಜ್ಞರಿಂದ ಹೇಳಲ್ಪಟ್ಟ ಮತ್ತು ಇತರರಿಂದ ಹೇಳಲ್ಪಟ್ಟ ನಿಜಶುದ್ಧಾತ್ಮಾದಿ ತತ್ವವನ್ನು ಯಾವನು ತಿಳಿಯುತ್ತಾನೋ, ಅಂಥಾ ಜೀವನು ದರ್ಶನಮೋಹನೀಯ ಭೇದ ಮಿಶ್ರಕರ್ಮೋದಯದಿಂದ ದಧಿಗುಡಮಿಶ್ರವಾದ ಪದಾರ್ಥದಂತೆ ಮಿಶ್ರಗುಣವುಳ್ಳವನೇ ಮಿಶ್ರಗುಣಸ್ಥಾನವರ್ತಿಯು.

ಅಥ ಮತಂ ಏನಕೇನಾಪ್ಯೇಕೇನ ಮಮ ದೇವೇನ ಪ್ರಯೋಜನಂ ತಥಾ ಸರ್ವೇ ದೇವಾ ವಂದನೀಯಾ ನ ಚ ನಿಂದನೀಯಾ ಇತ್ಯಾದಿ ವೈನಯಿಕ ಮಿಥ್ಯಾದೃಷ್ಟಿಃ ಸಂಶಯ ಮಿಥ್ಯಾದೃಷ್ಟಿರ್ವಾ ತಥಾ ಮನ್ಯತೇ ತೇನ ಸಹ ಸಮ್ಯಗ್ಮಿಥ್ಯಾದೃಷ್ಟೇಃ ಕೋ ವಿಶೇಷ ಇತಿ, ಅತ್ರ ಪರಿಹಾರಃ—"ಸ ಸರ್ವದೇವೇಷು ಸರ್ವಸಮಯೇಷು ಚ ಭಕ್ತಿಪರಿಣಾಮೇನ ಏನ ಕೇನಾಪ್ಯೇಕೇನ ಮಮ ಪುಣ್ಯಂ ಭವಿಷ್ಯತೀತಿಮತ್ವಾ ಸಂಶಯರೂಪೇಣ ಭಕ್ತಿಂ ಕುರುತೇ ನಿಶ್ಚಯೋ ನಾಸ್ತಿ, ಮಿಶ್ರಸ್ಯ ಪುನರುಭಯತ್ರ ನಿಶ್ಚಯೋಸ್ತೀತಿ ವಿಶೇಷಃ"

ಯಾವದಾದರೂ ಒಂದು ದೈವದಿಂದ ನನಗೆ ಲಾಭವುಂಟು. ಆದಕಾರಣ ಸರ್ವದೇವರೂ ವಂದನೀಯರೇ ಹೊರತು ನಿಂದನೀಯರಲ್ಲಾ ಎಂಬುವರೇ ವೈನಯಿಕ ಮಿಥ್ಯಾದೃಷ್ಟಿಗಳು. ಸಂಶಯ ಮಿಥ್ಯಾದೃಷ್ಟಿಗಳೂ ಇದರಂತೆ ತಿಳಿಯುವದು, ಹಾಗಾದರೆ—ಇವರಿಗೂ ಸಮ್ಯಜ್ಮಿಥ್ಯಾದೃಷ್ಟಿಗಳಿಗೂ ಏನುಭೇದವು? ಸಂಶಯ ಮಿಥ್ಯದೃಷ್ಟಿಯಾದರೋ, ಸರ್ವರುಗಳಲ್ಲಿ ಸರ್ವಸಮಯಗಳಲ್ಲಿಯೂ ಕೂಡ ಭಕ್ತಿಪರಿಣಾಮದಿಂದ, ಯಾವದಾದರೂ ಒಂದು ಉಪಾಯದಿಂದ ನನಗೆ ಪುಣ್ಯಲಾಭವೆಂದು ತಿಳಿದು ಸಂಶಯಭಾವದಿಂದ ಭಕ್ತಿಯನ್ನು ಮಾಡುವನೇ ಹೊರ್ತು ನಿಶ್ಚಯಭಾವವು ಎಂದಿಗೂ ಇಲ್ಲಾ, ಮಿಶ್ರನಿಗಾದರೋ, ಉಭಯತ್ರದಲ್ಲಿಯೂ ನಿಶ್ಚಯ ಉಂಟು ಎಂಬುವದೇ ವಿಶೇಷವು ॥ ೩ ॥

ಸ್ವಾಭಾವಿಕಾನಂತಜ್ಞಾನಾದ್ಯನಂತಗುಣಾಧಾರಭೂತಂ ನಿಜಪರಮಾತ್ಮ ದ್ರವ್ಯಮುಪಾದೇಯಮ್, ಇಂದ್ರಿಯಸುಖಾದಿ ಪರದ್ರವ್ಯಂ ಹಿ ಹೇಯಮಿತ್ಯರ್ಹತ್ಸರ್ವಜ್ಞ ಪ್ರಣೀತನಿಶ್ಚಯ ವ್ಯವಹಾರನಯ ಸಾಧ್ಯಸಾಧಕಭಾವೇನ ಮನ್ಯತೇ ಪರಂ ಕಿಂತು ಭೂಮಿರೇಖಾದಿ ಸದೃಶಕ್ರೋಧಾದಿ ದ್ವಿತೀಯ ಕಷಾಯೋದಯೇನ ಮಾರಣನಿಮಿತ್ತಂ ತಲವರ ಗೃಹೀತ ತಸ್ಕರವದಾತ್ಮ ನಿಂದಾದಿ ಸಹಿತಃ ಸನ್ನಿಂದ್ರಿಯ ಸುಖಮನುಭವತೀತ್ಯವಿರತ ಸಮ್ಯಗ್ದೃಷ್ಟೇರ್ಲಕ್ಷಣಮ್ ॥ ೪ ॥

ಅವಿರತ ಸಮ್ಯಗ್ದೃಷ್ಟಿಯು ಯಾರು—ಅನಂತಜ್ಞಾನ ಗುಣಾಧಾರ ಭೂತವಾದ ನಿಜಪ ರಮಾತ್ಮದ್ರವ್ಯವೇ ಗ್ರಾಹಕವಾದದ್ದು, ಇಂದ್ರಿಯ ಸುಖಾದಿ ಪರದ್ರವ್ಯವು ಬಿಡಬೇಕಾದದು ಎಂದು ಅರ್ಹತ್ಸರ್ವಜ್ಞಪ್ರಣೀತ ನಿಶ್ಚಯವ್ಯವಹಾರನಯ ಸಾಧ್ಯಸಾಧಕ ಭಾವದಿಂದ ತಿಳುವ ಳಿಕೆಯುಳ್ಳವನಾಗಿ, ನೆಲದಲ್ಲಿ ಬರೆದ ಗೆರೆಯಂತೆ ಇರುವ ಕ್ರೋಧಾದಿ ದ್ವಿತೀಯಕಷಾಯೋದಯ ದಿಂದ ಶಿಕ್ಷಿಸುವದಕ್ಕೋಸ್ಕರ, ಕೊತ್ವಾಲನ ಕೈಗೆ ಶಿಕ್ಕಿರುವ ಕಳ್ಳರಂತೆ, ಆತ್ಮನಿಂದಾಪರನಾಗಿ ಇಂದ್ರಿಯ ಸುಖವನ್ನನುಭವಿಸುವವನೇ, ಅವಿರತ ಸಮ್ಯಗ್ದೃಷ್ಟಿಯು ॥ ೪ ॥

ಯ: ಪೂರ್ವೋಕ್ತ ಪ್ರಕಾರೇಣ, ಸಮ್ಯಗ್ದೃಷ್ಟಿ ಸನ್, ಭೂಮಿರೇಖಾದಿ ಸಮಾನ ಕ್ರೋಧಾದಿ ದ್ವಿತೀಯಕಷಾಯೋದಯಾಭಾವೇ, ಸತ್ಯಭ್ಯಂತರೇ, ನಿಶ್ಚಯನಯೇನೈಕದೇಶರಾಗಾ ದಿರಹಿತ, ಸ್ವಾಭಾವಿಕಸುಖಾನುಭೂತಿಲಕ್ಷಣೇಷು, ಬಹಿರ್ವಿಷಯೇ, ಪುನರೇಕದೇಶ ಹಿಂಸಾ ನೃತಸ್ತೇಯಾಬ್ರಹ್ಮಪರಿಗ್ರಹ ನಿವೃತ್ತಿಲಕ್ಷಣೇಷು.

ಗಾಹೆ॥ " ದಂಸಣವದ ಸಾಮಾಯಿಯಪೋಸಹ ಸಚ್ಚಿತ್ತರಾಇ ಭತ್ತೇಯ ।
ಬಹ್ಮಾರಂಭಪರಿಗ್ಗಹ ಅಣುಮಣ ಮುದ್ದಿಠ್ಠದೇಸವಿರದೇದಿ ॥ ೧೨ ॥

ಇತಿ ಗಾಥಾ ಕಥಿತೈಕಾದಶ ನಿಲಯೇಷು ವರ್ತತೇ, ಸ ಪಂಚಮಗುಣಸ್ಥಾನವರ್ತೀ ಶ್ರಾವಕೋ ಭವತಿ ॥೫॥

ದೇಶವಿರತ ಸಮ್ಯಗ್ದೃಷ್ಟಿ ( ಅಥವಾ ಶ್ರಾವಕ ) ಯಾರು ಅಂದರೆ, ಪೂರ್ವೋಕ್ತ ಪ್ರಕಾ ರದಿಂದ ಸಮ್ಯಗ್ದೃಷ್ಟಿಯಾಗಿ, ಭೂಮಿಯಲ್ಲಿ ಬರೆದ ಗೆರೆಯಂತೆ, ಪ್ರತ್ಯಾಖ್ಯಾನ ( ತಿರಸ್ಕಾರ ) ಕ್ರೋಧಕಷಾಯೋದಯಾಭಾವನಾಗಿ, ಅಂತರಂಗದಲ್ಲಿ ನಿಶ್ಚಯನಯದಿಂದ ಏಕದೇಶರಾಗಾದಿ ರಹಿತವಾದ ಸ್ವಾಭಾವಿಕ ಸುಖಾನುಭವ ಲಕ್ಷಣವಾದ, ಬಹಿರ್ಭಾವದಲ್ಲಿ ಹಿಂಸಾ, ಅನೃತ, ಚೌರ್ಯ, ಅಬ್ರಹ್ಮ, ಪರಿಗ್ರಹ ಇವುಗಳ ಏಕದೇಶತ್ಯಾಗ ಲಕ್ಷಣವಾದ ಪಂಚಾಣುವ್ರತಗಳ ಲ್ಲಿಯೂ, ದರ್ಶನ, ವ್ರತ, ಸಾಮಾಯಿಕ, ಪ್ರೋಷಧ, ಸಚಿತ್ತವಿರತ, ರಾತ್ರಿಭುಕ್ತ, ಬ್ರಹ್ಮ ಚರ್ಯ, ಆರಂಭವಿರತ, ಪರಿಗ್ರಹವಿರತ, ಅನುಮತಿವಿರತ, ಉದ್ದಿಷ್ಟವಿರತ, ಎಂಬ ಏಕಾದ ಶಸ್ಥಾನಗಳಲ್ಲಿರುವವನೇ ಪಂಚಮಗುಣಸ್ಥಾನವರ್ತಿಯಾದ ಶ್ರಾವಕನು ॥ ೫ ॥

ಸ ಏವ ಸದೃಷ್ಟಿರ್ಧೂಲಿರೇಖಾದಿ ಸದೃಶ, ಕ್ರೋಧಾದಿ ತೃತೀಯ ಕಷಾಯೋದಯಾ ಭಾವೇ, ಸತ್ಯಭ್ಯಂತರೇ ನಿಶ್ಚಯನಯೇನ, ರಾಗಾದ್ಯುಪಾಧಿರಹಿತ, ಸ್ವಶುದ್ಧಾತ್ಮ ಸಂವಿತ್ತಿ ಸಮು ತ್ಪನ್ನ ಸುಖಾಮೃತಾನುಭವ ಲಕ್ಷಣೇಷು, ಬಹಿರ್ವಿಷಯೇಷು, ಪುನಃ ಸಾಮಸ್ತ್ಯೇನ ಹಿಂಸಾನೃ ತಸ್ತೇಯಬ್ರಹ್ಮ ಪರಿಗ್ರಹ ನಿವೃತ್ತಿಲಕ್ಷಣೇಷು, ಚ ಪಂಚಮಹಾವ್ರತೇಷು, ವರ್ತತೇ ಯದಾ ತದಾ ದು:ಸ್ವಪ್ನಾದಿ ವ್ಯಕ್ತಾವ್ಯಕ್ತಪ್ರಮಾದಸಹಿತೋಽಪಿ, ಷಷ್ಠಮ ಗುಣಸ್ಥಾನವರ್ತೀ ಪ್ರಮತ್ತ ಸಂಯತೋ ಭವತಿ ॥ ೬ ॥

ಪ್ರಮತ್ತವಿರತನೆಂದರೆ—" ಇಂಥಾ ಸಮ್ಯಗ್ದೃಷ್ಟಿಯು ಮಣ್ಣಿನಲ್ಲಿ ಬರೆದ ಗೆರೆಯಂತೆ, ಅಪ್ರತ್ಯಾಖ್ಯಾನ ಕ್ರೋಧಾದಿ ಮೂರು ಕಷಾಯಗಳ ಆವಿರ್ಭಾವರಹಿತನಾಗಿ, ನಿಶ್ಚಯನಯ ದಿಂದ, ಅಂತರಂಗದಲ್ಲಿ ರಾಗಾದ್ಯುಪಾಧಿರಹಿತನಾಗಿ, ನಿಜಶುದ್ಧಾತ್ಮಜ್ಞಾನದಿಂದ ಹುಟ್ಟಿದ ಸುಖಾ

ಮೃತದ ಅನುಭವವುಳ್ಳವನಾಗಿ ಬಾಹ್ಯದಲ್ಲಿ ಸಂಪೂರ್ಣವಾಗಿ, ಹಿಂಸಾ, ಅಸತ್ಯ, ಚೌರ್ಯ, ಅಬ್ರಹ್ಮ, ಪರಿಗ್ರಹತ್ಯಾಗರೂಪವಾದ ಐದು ಮಹಾವ್ರತವುಳ್ಳವನಾಗಿಯೂ, ದುಃಸ್ವಪ್ನಾದಿಗಳಂತೆ ಪ್ರಕಟ ಅಪ್ರಕಟ ಪ್ರಮಾದ ಸಹಿತನೇ ಷಷ್ಠಮಗುಣಸ್ಥಾನವರ್ತಿ ಪ್ರಮತ್ತವಿರತನು.

ಸ ಏವ ಜಲರೇಖಾದಿ ಸದೃಶ ಸಂಜ್ವಲನ ಕಷಾಯ ಮಂದೋದಯೇಸತಿ, ನಿಷ್ಪ್ರಮಾದ ಶುದ್ಧಾತ್ಮಸಂವಿತ್ತಿ ಮಲಜನಕ ವ್ಯಕ್ತಾವ್ಯಕ್ತ ಪ್ರಮಾದರಹಿತ:ಸನ್ ಸಪ್ತಮಗುಣಸ್ಥಾನವರ್ತೀ ಅಪ್ರಮತ್ತಸಂಯತೋ ಭವತಿ ॥ ೭ ॥

ಅರ್ಥ—ಅಂಥಾ ಪೂರ್ವೋಕ್ತನೇ, ಜಲರೇಖೆಗೆ ಸಮವಾದ ಸಂಜ್ವಲನಕಷಾಯಗಳು, ಮಂದೋದಯವಾಗುತ್ತಿರಲಾಗಿ ( ಕಷಾಯಕಮ್ಮಿಯಾಗುತ್ತಿರಲು ), ಪ್ರಮಾದರಹಿತವಾದ ಶುದ್ಧಾತ್ಮಜ್ಞಾನದಲ್ಲಿ ದೋಷವನ್ನುಂಟುಮಾಡುವ ಪ್ರಕಟಾಪ್ರಕಟಗಳಾದ ಎರಡು ಬಗೆಯಾದ ಪ್ರಮಾದರಹಿತನಾಗಿ, ಏಳನೇ ಗುಣಸ್ಥಾನದಲ್ಲಿರುವವನೇ, ಅಪ್ರಮತ್ತಸಂಯತನು ॥ ೭ ॥

ಅಪೂರ್ವಕರಣ ಅಂದರೆ—ಸಏವ ಅತೀತ ಸಂಜ್ವಲನಕಷಾಯಮಂದೋದಯೇ, ಸತ್ಯಪೂರ್ವಪರಮಾಹ್ಲಾದೈಕಸುಖಾನುಭೂತಿಲಕ್ಷಣಾಪೂರ್ವಕರಣೋಪಶಮಕಕ್ಷಪಕಸಂಜ್ಞೋಽಷ್ಟಮಗುಣಸ್ಥಾನವರ್ತೀಭವತಿ ॥ ೮ ॥

ಅಂದರೆ—ಅಂಥವನೇ ಅತೀತ ಸಂಜ್ವಲನ ಕಷಾಯಗಳು ಮಂದೋದಯಗಳಾದ ಮೇಲೆ, ಪೂರ್ವದಲ್ಲಿ ಇಲ್ಲದ ಅತ್ಯಂತಾನಂದರೂಪಗಳಾದ, ಸುಖಗಳನ್ನು ಅನುಭವಿಸುವಂಥಾ ಅಪೂರ್ವಕರಣಭಾವದಲ್ಲಿ ಔಪಶಮಿಕ, ಕ್ಷಪಕನಾಮವುಳ್ಳ ಅಷ್ಟಮಗುಣಸ್ಥಾನವರ್ತಿಯೇ, ಅಪೂರ್ವಕರಣನು ॥ ೮ ॥

ದೃಷ್ಟ, ಶ್ರುತಾನುಭೂತ, ಭೋಗಕಾಂಕ್ಷಾದಿರೂಪ ಸಮಸ್ತ ಸಂಕಲ್ಪ ವಿಕಲ್ಪರಹಿತ, ನಿಜನಿಶ್ಚಲಪರಮಾತ್ಮತತ್ವೈಕಾಗ್ರಧ್ಯಾನಪರಿಣಾಮೇನ, ಕೃತ್ವಾ ಯೇಷಾಂ ಜೀವಾನಾಮೇಕಸಮಯೇ, ಪರಸ್ಪರಂ ಪೃಥಕ್ಕರ್ತುಂ ನಾಯಾಂತಿ ತೇ ವರ್ಣಸಂಸ್ಥಾನಾದಿ, ಭೇದೇಽಪ್ಯನಿವೃತ್ತಿಕರಣೋಪಶಮಿಕ, ಕ್ಷಪಕಸಂಜ್ಞಾ ದ್ವಿತೀಯಕಷಾಯಾದ್ಯೇಕವಿಂಶತಿ ಭೇದಭಿನ್ನಚಾರಿತ್ರಮೋಹಪ್ರಕೃತೀನಾಮುಪಶಮಕ್ಷಪಣಸಮರ್ಥಾನವಮಗುಣಸ್ಥಾನವರ್ತಿನೋ ಭವಂತಿ ॥ ೯ ॥

ಅನಿವೃತ್ತಿಕರಣ ಅಂದರೆ—ನೋಡಿದಂಥ, ಕೇಳಿದಂಥ, ಅನುಭವಿಸಿದಂಥ, ಸುಖಗಳು ಮತ್ತೂ ಬೇಕೆಂಬ ಆಶೆಯಿಂದ ದೂರರಾಗಿ, ಸಂಕಲ್ಪ ವಿಕಲ್ಪರಹಿತನಾದ ನಿಜನಾದ ನಿಶ್ಚಲನಾದ ಪರಮಾತ್ಮನ ತತ್ವಗಳ ಏಕಾಗ್ರಧ್ಯಾನಪರಿಣಾಮದಿಂದ ಯಾವ ಜೀವರುಗಳಿಗೆ ಒಂದೇ ಕಾಲದಲ್ಲಿ ಬೇರೆ ಬೇರೆಯಾಗಿ ಮಾಡುವದಕ್ಕೆ ಆಗದ ಯಾವ ವರ್ಣ, ಮತ್ತು ಅವಯವ ರಚನಾ ಭೇದಗಳಿದ್ದರೂ, ಅನಿವೃತ್ತಿಕರಣನೆಂಬ ಹೆಸರನ್ನು ಧರಿಸಿ, ಇಪ್ಪತ್ತೊಂದು ಪ್ರಕಾರವಾದ ದ್ವಿತೀಯ ಕಷಾಯಗಳೇನು, ೨೧ ಪ್ರಕಾರವಾದ ಚಾರಿತ್ರ ಮೋಹನೀಯಕರ್ಮಗಳ ಉಪಶಮ ( ಕಮ್ಮಿಮಾಡುವ ) ಮತ್ತು ಕ್ಷಪಣದಲ್ಲಿ ಸಮರ್ಥರಾದ ಒಂಭತ್ತನೇ ಗುಣಸ್ಥಾನದಲ್ಲಿರುವ ಜೀವರೇ, ಅನಿವೃತ್ತಿಕರಣರು ॥ ೯ ॥

ಸೂಕ್ಷ್ಮಪರಮಾತ್ಮತತ್ವಭಾವನಾಬಲೇನ, ಸೂಕ್ಷ್ಮಕ್ಲಿಷ್ಟಗತಲೋಭ ಕಷಾಯಸ್ಯೋಪಶಮಕಾ:, ಕ್ಷಪಕಾಶ್ಚ ದಶಮಗುಣಸ್ಥಾನವರ್ತಿನೋ ಭವಂತಿ ॥ ೧೦ ॥

ಸೂಕ್ಷ್ಮಸಾಂಪರಾಯ ಅಂದರೆ—ಸೂಕ್ಷ್ಮವಾದ ಪರಮಾತ್ಮತತ್ವದ ಭಾವನಾಬಲದಿಂದ ಸೂಕ್ಷ್ಮಕ್ಲಿಷ್ಟಗತವಾದ ಲೋಭಕಷಾಯಗಳ ಉಪಶಮ, ಮತ್ತು ಕ್ಷಪಕ ವುಳ್ಳವರೇ, ಹತ್ತನೇ ಗುಣಸ್ಥಾನವರ್ತಿಗಳು ಸೂಕ್ಷ್ಮಸಾಂಪರಾಯರು ॥ ೧೦ ॥

ಪರಮೋಪಶಮಮೂರ್ತಿನಿಜಾತ್ಮಸ್ವಭಾವ ಸಂವಿತ್ತಿಬಲೇನ, ಸಕಲೋಪಶಾಂತಮೋಹಾ, ಏಕಾದಶಗುಣಸ್ಥಾನವರ್ತಿನೋ ಭವಂತಿ ॥ ೧೧ ॥

ಉಪಶಾಂತಮೋಹ ಅಂದರೆ—ಪರಮ ಉಪಶಾಂತವಾದ ಆಕಾರವುಳ್ಳ, ನಿಶ್ಚಯನಾದ ಯಾವ ಪರಮಾತ್ಮನ ಸ್ವಭಾವಸಿದ್ಧವಾದ ಜ್ಞಾನಬಲದಿಂದ ಸಂಪೂರ್ಣವಾಗಿ, ಮೋಹವನ್ನು ಉಪಶಾಂತಮಾಡಿರುವ, ಹನ್ನೊಂದನೇ ಗುಣಸ್ಥಾನವರ್ತಿಗಳು, ಉಪಶಾಂತಮೋಹರು ೧೧

ಉಪಶಮಶ್ರೇಣಿವಿಲಕ್ಷಣೇನ, ಕ್ಷಪಕಶ್ರೇಣಿಮಾರ್ಗೇಣ, ನಿಷ್ಕಷಾಯ ಶುದ್ಧಾತ್ಮಭಾವನಾಬಲೇನ, ಕ್ಷೀಣಕಷಾಯಾ ದ್ವಾದಶಗುಣಸ್ಥಾನವರ್ತಿನೋ ಭವಂತಿ ॥ ೧೨ ॥

ಕ್ಷೀಣಮೋಹ ಅಂದರೆ—ಉಪಶಮಶ್ರೇಣಿಯಿಂದ ಬೇರೆಯಾದ ಕ್ಷಪಕಶ್ರೇಣೀಮಾರ್ಗ ದ್ವಾರದಿಂದ ಕಷಾಯರಹಿತರಾಗಿ, ಶುದ್ಧ ಆತ್ಮಭಾವನಾ ಬಲದಿಂದ ನಷ್ಟ ಕಷಾಯವುಳ್ಳ ಹನ್ನೆರಡನೇ ಗುಣಸ್ಥಾನವರ್ತಿಗಳೇ, ಕ್ಷೀಣಮೋಹರು ॥ ೧೨ ॥

ಮೋಹಕ್ಷಪಣಾನಂತರಮಂತರ್ಮುಹೂರ್ತಕಾಲಂ, ಸ್ವಶುದ್ಧಾತ್ಮಸಂವಿತ್ತಿ ಲಕ್ಷಣೈಕತ್ವವಿತರ್ಕವಿಚಾರದ್ವಿತೀಯ ಶುಕ್ಲಧ್ಯಾನೇ ಸ್ಥಿತ್ವಾ, ತದಂತ್ಯಸಮಯೇ, ಜ್ಞಾನಾವರಣ ದರ್ಶನಾವರಣಾಂತರಾಯತ್ರಯಂ ಯುಗಪದೇಕಸಮಯೇನ, ನಿರ್ಮೂಲ್ಯ ಮೇಘಪಂಜರವಿನಿರ್ಗತ ದಿನಕರ ಇವ, ಸಕಲವಿಮಲಕೇವಲಜ್ಞಾನಕಿರಣೈರ್ಲೋಕಾಲೋಕಪ್ರಕಾಶಕಸ್ತ್ರಯೋದಶಗುಣಸ್ಥಾನವರ್ತಿನೋ ಜಿನಭಾಸ್ಕರಾಭವಂತಿ ॥ ೧೩ ॥

ಸಯೋಗೀಕೇವಲೀ ಜಿನ ಅಂದರೆ—ಮೇಲೆ ಹೇಳಿದ ಮೋಹನಾಶವಾದ ಮೇಲೆ, ಅಂತರ್ಮುಹೂರ್ತದಲ್ಲಿ ನಿಜಶುದ್ಧಾತ್ಮರೂಪಜ್ಞಾನದ ಏಕತ್ವವಿತರ್ಕವಿಚಾರ ಸಂಜ್ಞಕವಾದ ದ್ವಿತೀಯ ಶುಕ್ಲಧ್ಯಾನದಲ್ಲಿರುತ್ತಾ ಅಂತ್ಯಕಾಲದಲ್ಲಿ ಜ್ಞಾನಾವರಣ, ದರ್ಶನಾವರಣ, ಅಂತರಾಯ ಈ ಮೂರು ಕರ್ಮಗಳನ್ನು ಒಂದೇಕಾಲದಲ್ಲಿ ಸಂಪೂರ್ಣವಾಗಿ ಕಳೆದು, ಮೇಘಗಳ ಗುಂಪಿನಿಂದ ಈಚೆಗೆ ಬಂದ ಸೂರ್ಯನಂತೆ, ಸಂಪೂರ್ಣರೂಪದಿಂದ ನಿರ್ಮಲವಾದ ಕೇವಲಜ್ಞಾನವೆಂಬ ಸೂರ್ಯನ ಕಿರಣಗಳಿಂದ, ಲೋಕಾಲೋಕ ಪ್ರಕಾಶಕರಾದ, ಹದಿಮೂರನೇ ಗುಣಸ್ಥಾನವರ್ತಿಗಳಾದ ಜಿನಭಾಸ್ಕರರೇ, ಸಯೋಗಿ ಕೇವಲಿಗಳು ॥ ೧೩ ॥

ಮನೋವಚನಕಾಯವರ್ಗಣಾಲಂಬನ ಕರ್ಮಾದಾನ ನಿಮಿತ್ತಾತ್ಮಪ್ರದೇಶಪರಿಸ್ಪಂದ ಲಕ್ಷಣಯೋಗರಹಿತಾಶ್ಚತುರ್ದಶಗುಣಸ್ಥಾನವರ್ತಿನೋಽಯೋಗಿ ಜಿನಾಭವಂತಿ ॥ ೧೪ ॥

ಅಯೋಗಿ ಕೇವಲೀ ಜಿನ ಅಂದರೆ—ಅಂಥಾ ಸಯೋಗಿಯೇ ಮನ, ವಚನ, ಕಾಯಸಂಬಂಧಗಳಾದ ಕರ್ಮಗಳನ್ನು ಗ್ರಹಿಸಿರುವ ಕಾರಣ ಯಾವ ಆತ್ಮಪ್ರದೇಶಗಳ ಪರಿಸ್ಪಂದರೂಪವಾದ ಯೋಗದಿಂದ ರಹಿತರಾಗಿ ಹದಿನಾಲ್ಕನೇ ಗುಣಸ್ಥಾನದಲ್ಲಿರುವವರೇ, ಅಯೋಗಿಜಿನರು ॥೧೪॥

ತತಶ್ಚ ನಿಶ್ಚಯ ರತ್ನತ್ರಯಾತ್ಮಕ ಕಾರಣಭೂತ ಸಮಯಸಾರ ಸಂಜ್ಞೇನ, ಪರಮ ಯಥಾಖ್ಯಾತ ಚಾರಿತ್ರೇಣ, ಚತುರ್ದಶಗುಣಸ್ಥಾನಾತೀತಾ:, ಜ್ಞಾನಾವರಣಾದ್ಯಷ್ಟಕರ್ಮರಹಿತಾಃ, ಸಮ್ಯಕ್ತ್ವಾದ್ಯಷ್ಟಗುಣಾಂತರ್ಭೂತ ನಿರ್ನಾಮಗೋತ್ರಾದ್ಯನಂತಗುಣಾ: ಸಿದ್ಧಾ ಭವಂತಿ.

ಆ ಮೇಲೆ ಮೇಲೆ ಹೇಳಿದ ಅಯೋಗಿಜಿನರು ನಿಶ್ಚಯ ರತ್ನತ್ರಯಗಳಿಗೆ ಕಾರಣವಾದ ಸಮಯಸಾರನೆಂಬ ಹೆಸರುಳ್ಳ ಯಥಾಖ್ಯಾತ ಚಾರಿತ್ರದಿಂದ ಚತುರ್ದಶಗುಣಸ್ಥಾನಾತೀತರಾಗಿ, ಜ್ಞಾನಾವರಣಾದಿ ಎಂಟು ಕರ್ಮರಹಿತರಾಗಿ, ಸಮ್ಯಕ್ತ್ವಾದಿ ಎಂಟುಗುಣಗಳಲ್ಲಿ ಶೇರಿರುವ ನಿರ್ನಾಮ, ನಿರ್ಗೋತ್ರವೇ ಮೊದಲಾದ ಎಂಟುಗುಣವುಳ್ಳ ಸಿದ್ಧರಾಗಿದ್ದಾರೆ.

ಈ ಹದಿನಾಲ್ಕು ( ೧೪ ) ಗುಣಸ್ಥಾನಂಗಳು.

೧ ಬಾದರೈಕೇಂದ್ರಿಯ ಪರ್ಯಾಪ್ತಕಾಪರ್ಯಾಪ್ತಕ, ೨ ಸೂಕ್ಷ್ಮೈಕೇಂದ್ರಿಯ ಪರ್ಯಾಪ್ತಕಾಪರ್ಯಾಪ್ತಕ, ೩ ದ್ವೀಂದ್ರಿಯಪರ್ಯಾಪ್ತಕಾಪರ್ಯಾಪ್ತಕ, ೪ ತ್ರೀಂದ್ರಿಯಪರ್ಯಾಪ್ತಕಾಪರ್ಯಾಪ್ತಕ, ೫ ಚತುರಿಂದ್ರಿಯ ಪರ್ಯಾಪ್ತಕಾಪರ್ಯಾಪ್ತಕ, ೬ ಅಸಂಜ್ಞಿಪಂಚೇಂದ್ರಿಯ ಪರ್ಯಾಪ್ತಕಾಪರ್ಯಾಪ್ತಕ, ೭ ಸಂಜ್ಞಿಪಂಚೇಂದ್ರಿಯ ಪರ್ಯಾಪ್ತಕಾಪರ್ಯಾಪ್ತಕ, ಪರ್ಯಾಪ್ತಕ ೭, ಅಪರ್ಯಾಪ್ತಕ ೭ ಅಂತೂ ೧೪ ಜೀವಸಮಾಸಗಳು. ೧ ಗತಿ, ೨ ಇಂದ್ರಿಯ, ೩ ಕಾಯ, ೪ ಯೋಗ, ೫ ವೇದ, ೬ ಕಷಾಯ, ೭ ಜ್ಞಾನ, ೮ ಸಂಯಮ, ೯ ದರ್ಶನ, ೧೦ ಲೇಶ್ಯಾ, ೧೧ ಭವ್ಯತ್ವ, ೧೨ ಸಮ್ಯಕ್ತ್ವ, ೧೩ ಸಂಜ್ಞಿತ್ವ, ೧೪ ಆಹಾರ ಈ ೧೪ ಮಾರ್ಗಣಸ್ಥಾನಂಗಳು.

---

## ಸೂತ್ರಂ ॥ ದ್ವಿವಿಧಮೇಕೇಂದ್ರಿಯಂ ॥ ೨೪ ॥

೧ ಬಾದರೈಕೇಂದ್ರಿಯ, ೨ ಸೂಕ್ಷ್ಮೈಕೇಂದ್ರಿಯಂ ಎಂದಿತ್ತೆರನವರುತ್ಕೃಷ್ಟ ಸ್ಪರ್ಶನೇಂದ್ರಿಯಂ ನಾನೂರು ಬಿಲ್ಲಕ್ಕುಂ, ಅಸಂಜ್ಞಿ ಪಂಚೇಂದ್ರಿಯ ಪರ್ಯಂತ ಸ್ಪರ್ಶನೇಂದ್ರಿಯ ವಿಷಯಂ ದ್ವಿಗುಣದ್ವಿಗುಣಮಕ್ಕುಂ.

ಗಾಹೆ॥ ಬಾದರ ಸುಹುಮುದ ಏಣಯ ಬಾದರ ಸುಹುಮಾವಂತಿ ತದ್ದೇಹೋ ।<br>
ಪೂದಸರೀರಂ ಥೂಳಂ ಅಘಾದೇಹಂ ಹವೇಸುಹುಮಂ ॥ ೧೩ ॥<br>
ತದ್ದೇಹ ಮಂಗುಳಸಾ ಸಂಬಬ್ಬಾಗಸ್ಸದಿ ಉಮಂಣಂತು ।<br>
ಆದಾರೇ ಥೂಳಾಜೀವೋ ಸಬ್ಬಥ್ಥಣಿರಂತರಾ ಸುಹುಮಾ ॥ ೧೪ ॥

---

## ಸೂತ್ರಂ ॥ ವಿಕಲತ್ರಯಂ ॥ ೨೫ ॥

ತಾ:—ಅಸಂಖ್ಯಾತ ಸಂಖ್ಯೆಯನ್ನುಳ್ಳ ದ್ವೀಂದ್ರಿಯಂಗಳುಂ, ತ್ರೀಂದ್ರಿಯಂಗಳುಂ, ಚತುರಿಂದ್ರಿಯಂಗಳೆಂದಿವು ವಿಕಲತ್ರಯಂಗಳಕ್ಕುಮೆಂತೆನೆ—ಕ್ರಿಮಿಜಂತು, ನಾಯಿ, ಮೊಸಳೆ, ಶಂಬದ ಪುಳು, ಗುಳ್ಳೆ ಮೊದಲಾದವಕ್ಕೆ ಸ್ಪರ್ಶನಮುಂ, ಅರುವತ್ತನಾಲ್ಕು ಚಾಪಪ್ರಮಾಣದ ರಸ

ನೇಂದ್ರಿಯಮನುಳ್ಳ ದ್ವೀಂದ್ರಿಯಂಗಳು ॥ ೨ ॥ ಕುಂಥುವರಲೆ, ಚೇಳು ಇರುವೆ, ತಗುಣೆ, ಮೊದಲಾದವುಗಳಿಗೆ ಸ್ಪರ್ಶನಮುಂ, ರಸನಮುಂ ಎಂದಿವು ಮುನ್ನಿನಿಮ್ಮಡಿ ಅಸಂಜ್ಞಿಪರ್ಯಂತ ಮಕ್ಕು. ನೂರುಧನು ಪ್ರಮಾಣದ ಘ್ರಾಣೇಂದ್ರಿಯಮನುಳ್ಳ ತ್ರೀಂದ್ರಿಯಂಗಳು ॥೩॥ ತುಂಬಿ, ಪತಂಗನೊಣ, ಜೇನನೊಣ, ಚಿಕ್ಕಡು, ಗುಂಗುರು, ನೊರಜು, ತೊನಸೆ ಮೊದಲಾದವಕ್ಕೆ ಸ್ಪರ್ಶನ, ರಸನ, ಘ್ರಾಣಮುಂ, ಎರಡು ಸಾಸಿರದೊಂಭೈನೂರೈವತ್ನಾಲ್ಕು ಯೋಜನಮುಂ ( ೨೯೫೪ ) ಕಾಣ್ಬ ಚಕ್ಷುರಿಂದ್ರಿಯಮನುಳ್ಳ ಚತುರಿಂದ್ರಿಯಂಗಳುಂ ॥ ೪ ॥

---

## ಸೂತ್ರಂ ॥ ಪಂಚೇಂದ್ರಿಯದ್ವಿವಿಧಂ ॥ ೨೬ ॥

ಅಸಂಖ್ಯಾತ ಸಂಖ್ಯೆಯನ್ನುಳ್ಳ ಪಂಚೇಂದ್ರಿಯಂಗಳು ಮನವಿಲ್ಲದವುಂ, ಮನಮುಳ್ಳವು ಮೆಂದು ಇತ್ತೆರವೆಂತೆನೆ—ಸ್ಪರ್ಶನ, ರಸನ, ಘ್ರಾಣ, ಚಕ್ಷುವೆಂದು ಸಾವಿರಕೋದಂಡಮಂ ಕೇಳ್ವ ಶ್ರೋತ್ರೇಂದ್ರಿಯಮನುಳ್ಳ ಅಸಂಜ್ಞಿ ಪಂಚೇಂದ್ರಿಯಮುಂ, ದೇವ, ಮನುಷ್ಯ, ತಿರಿಯಂಚ, ನಾರಕರುಮೆಂದು ಸಂಜ್ಞಿ ಪಂಚೇಂದ್ರಿಯಂಗಳನೇಕ ಭೇದಮಕ್ಕುಂ. ಉತ್ಕೃಷ್ಟ ದಿಂದ್ರಿಯ ವಿಷಯಂ ಸ್ಪರ್ಶನ, ರಸನ, ಘ್ರಾಣಮೆಂಬಿವಕ್ಕೊಂಭತ್ತುಯೋಜನಂ, ಚಕ್ಷುವಿಂಗೆ ನಲವತ್ತೇಳು ಸಾವಿರದಿನ್ನೂರರವತ್ಮೂರು ( ೪೭೨೬೩ ) ಯೋಜನಮುಂ, ಇಪ್ಪತ್ತು ಭಾಗ ಮಾಡಿದಲ್ಲಿ ೪೭೨೬೦ $\frac{೭}{೨೦}$ ಮೇಗೇಳು ಕೆಳಗೆಲ್ಲಾಪತ್ತುಭಾಗಮಕ್ಕುಂ. ಶ್ರೋತ್ರೇಂದ್ರಿಯದಿಂ ದ್ವಾದಶಯೋಜನಮುಂ ಕೇಳ್ವುದು ॥೧೨॥ ಮನೋ ಇಂದ್ರಿಯದಿಂ ಯಥಾಯೋಗ್ಯಮನರಿವುದುಂ॥

ಗಾಹೆ॥ ದೇವಾ ಚ ಉಂಣಿಕಾಯಾ ಮಾಣಾಸ್ಸಾ ಕಮ್ಮಭೋಗಭೂಮಿಯಾ ।
ತಿರಿಯಾಹುಂಪಯಾರೊ ಣಿರಯಾಪುಡವಿಭೇದಗಯಾ ॥ ೧೫ ॥

ಈ ಇಂದ್ರಿಯ ವಿಷಯಂಗಳಿಗೆ

ಗಾಹೆ॥ ಡಣು ವಿಷದವ ಸಯಕದಿ ಜೋಯಣಥಾದಾಳ ಹೀಣತಿ ಸಹಸ್ಸಾ ।
ಅಠ್ಠಸಹಸ್ಸದಣೋಣಂ ವಿಸಯಾದುಗುಣಾ ಅಸಣ್ಣಿತ್ತಿ ॥ ೧೬ ॥

ಸಂಜ್ಞಿಗೆ ಗಾಹೆ। ಸಣ್ಣಿಸ್ಸಬಾರಸೋದೇ ತಣ್ಹಾಬಂಣವಜೋ ಯಣಾಣಿ ಚಖ್ಖುಸಂ ।
ತೇತಾಳ ಸಹಸ್ಸಾ ಬೇಸದತೇ ಸತ್ತಿಮದಿರೆಯಾ ॥ ೧೭ ॥
ಅದಿಯಸಹಸ್ಸಂ ಬಾರಸತಿ ಚವುತ್ತೆಕ್ಕಂ ಸಹಸ್ಸಯಂಪ ಉಮೇ ।
ಸಖ್ಖೇಣವಿಹ್ಣಿ ಭಮರೇ ಮಚ್ಛೇವರದೇಹದಿಹೊದುಂ ॥ ೧೮ ॥

---

## ಸೂತ್ರಂ ॥ ಷಟ್ಪರ್ಯಾಪ್ತಯಃ ॥ ೨೭ ॥

೧ ಆಹಾರಪರ್ಯಾಪ್ತಿಯುಂ, ೨ ಶರೀರ ಪರ್ಯಾಪ್ತಿಯುಂ, ೩ ಇಂದ್ರಿಯ ಪರ್ಯಾಪ್ತಿಯುಂ, ೪ ಉಛ್ವಾಸನಿಶ್ವಾಸಪರ್ಯಾಪ್ತಿಯುಂ, ೫ ಭಾಷಾಪರ್ಯಾಪ್ತಿಯುಂ, ೬ ಮನಃಪರ್ಯಾಪ್ತಿಯುಮೆಂದು ಆರು ಪರ್ಯಾಪ್ತಿಗಳು.

ಉಕ್ತಂಚ ಗಾಹೆ ॥ ಆಹಾರಸರೀರಿಂದಿಯ ಪಜ್ಜತ್ತಿ ಆಣಪಾಣಭಾಸಮಣೋ ।
ಚತ್ತಾರೀಪಚ್ಚಛಪ್ಪಿಯ ಇಗವಿಗಲಾಸಣ್ಣಿಸಂಣೀಣಂ ॥ ೧೯ ॥
ಪಜ್ಜತ್ತಿಪಂ ರವಣಂಜುಗವತ್ತುಕಡಿಮೇಣಹೊದಿಣಿಠ್ಠವಣಂ ॥
ಅತ್ತೊಮುಹುತ್ತಕಾಲೇ ಣಹಿಯಮೋತಿತಿಯಾಳಾವಾ ॥ ೨೦ ॥
ಪಜ್ಜತ್ತಸುದ್ದಯೇಣ ಯಣಿಯಣಿಯಪಜ್ಜತ್ತಿಣಿಠ್ಠಿದೋಹೊದಿ ॥
ಜಾವಸರೀರಮಪುಂಣಂ ಣಿಬ್ಬುಂತಿಯಪುಂಣಗೋತಾವ ॥ ೨೧ ॥
ಉದಂ ಏದು ಅಪುಣ್ಣಸಯ ಸಗಸಗಪಜ್ಜತ್ತಿಯಂಣಣಿಠ್ಠವದಿ ॥
ಅಂತೊಮುಹುತ್ತಮಣಂಲದ್ಧಿಯ ಅಪಜ್ಜತ್ತಗಾಸೊದೂ ॥ ೨೨ ॥

---

## ಸೂತ್ರಂ ॥ ದಶಪ್ರಾಣಾಃ ॥ ೨೮ ॥

ತಾ:—೧ ಸ್ಪರ್ಶನೇಂದ್ರಿಯಪ್ರಾಣಂ, ೨ ರಸನೇಂದ್ರಿಯಪ್ರಾಣಂ, ೩ ಘ್ರಾಣೇಂದ್ರಿಯ ಪ್ರಾಣಂ, ೪ ಚಕ್ಷುರೇಂದ್ರಿಯಪ್ರಾಣಂ, ೫ ಶ್ರೋತ್ರೇಂದ್ರಿಯಪ್ರಾಣಂ, ೬ ಮನೋಬಲಪ್ರಾಣಂ, ೭ ವಾಗ್ಬಲಪ್ರಾಣಂ, ೮ ಕಾಯಬಲಪ್ರಾಣಂ, ೯ ಉಚ್ಛ್ವಾಸನಿಶ್ವಾಸಪ್ರಾಣಂ, ೧೦ ಆಯುಪ್ರಾಣ ಮೆಂದಿವು ದಶಪ್ರಾಣಂಗಳಕ್ಕುಂ.

ಉಕ್ತಂಚ ಗಾಹೆ ॥ ಪಚ್ಚೆಂದಿಯ ಪಾಣಮಣವಚೇಕಾ ಏಣತಿಂಣಿಬಲಪಾಣಾ ॥
ಆಣಪ್ಪಾಣಪಿಪಾಣಾ ಆಉಗಪಾಣೇಣ ಹೊಂತಿದಶಪಾಣಾ ॥ ೨೩ ॥
ಇಂದಿಯಕಾಯ ಊಣಿಯಪುಂಣಾ ಪುಂಣೇಸುಪುಂಣಗೇಯಾ ॥
ಣಿವು ಬಿಯಿಂದಿಯಾದಿಪುಂಣೇವ ಬೇಮಣಾಸಂಣಿಪುಂಣೇವಾ ॥ ೨೪ ॥
ದಶಸಣ್ಣಿಣಪ್ಪಾಣಾಸೇಸೆಗೂಣಂತಿಮಸ್ಸಚೇಊಣಾ ॥
ಪಜ್ಜತೇಸಿದರೇಸುಯ ಸತ್ತದುಗೇಸೇಸಗೇಗೂಣಾ ॥ ೨೫ ॥

---

## ಸೂತ್ರಂ ॥ ಚತುಸ್ರಸಂಜ್ಞಾ: ॥ ೨೯ ॥

ತಾಃ—೧ ಆಹಾರಸಂಜ್ಞೆಯುಂ, ೨ ಭಯಸಂಜ್ಞೆಯುಂ, ೩ ನಿದುವನಸಂಜ್ಞೆಯುಂ, ೪ ಪರಿಗ್ರಹಸಂಜ್ಞೆಯುಂ ಎಂದು ಸಂಜ್ಞೆಯು ನಾಲ್ಕುವಿಧವು.

ಗಾಹೆ ॥ ಛಕ್ಕೊತ್ತಿಪಡಮಸಂಣಾಸಕಜ್ಜಸೇಸಾಯಕಾರಣವೆಖ್ಖಾ ॥
ಪುವ್ವೋಪಡಮಣಿಯಟ್ಟಸುಹುಮೊತ್ತಿಕಮೇಣಸೇಸಾವ್ವಾ ॥ ೨೬ ॥

---

## ಸೂತ್ರಂ ॥ ಗತಿಶ್ಚತುರ್ವಿಧಾಃ ॥ ೩೦ ॥

ತಾಃ—೧ ನರಕಗತಿಯುಂ, ೨ ತಿರ್ಯಂಚಗತಿಯುಂ, ೩ ಮನುಷ್ಯಗತಿಯುಂ ೪ ದೇವ ಗತಿಯುಮೆಂದು ನಾಲ್ಕಕ್ಕುಂ. ನಾರಕರೊಳು ಮಿಥ್ಯಾದೃಷ್ಟ್ಯಾದಿ ನಾಲ್ಕು ಗುಣಸ್ಥಾನಮಕ್ಕುಂ.

ತಿರ್ಯಂಚರೊಳಯ್ದು ಗುಣಸ್ಥಾನಮಕ್ಕುಂ. ಮನುಷ್ಯರೊಳು ಹದಿನಾಲ್ಕು ಗುಣಸ್ಥಾನಮಕ್ಕುಂ. ದೇವರೊಳು ಗುಣಸ್ಥಾನಮಕ್ಕುಂ.

---

## ಸೂತ್ರಂ ॥ ಪಂಚೇಂದ್ರಿಯಾಣಿ ॥ ೩೧ ॥

ತಾ॥—೧ ಏಕೇಂದ್ರಿಯ, ೨ ದ್ವೀಂದ್ರಿಯ, ೩ ತ್ರೀಂದ್ರಿಯ, ೪ ಚತುರಿಂದ್ರಿಯ, ೫ ಪಂಚೇಂದ್ರಿಯಮೆಂದಯ್ದುತೆರಂ. ೧ ಸಮಚತುರಸ್ರಾದ್ಯನೇಕಾಕಾರದ ಸ್ಪರ್ಶನೇಂದ್ರಿಯಮುಂ, ೨ ಕುದುರೆಯಾಕಾರದ ರಸನೇಂದ್ರಿಯಮುಂ, ೩ ಅದಿರ್ಮುತ್ತೆಯಸಳಿನಂದದ ಘ್ರಾಣೇಂದ್ರಿಯಮುಂ, ೪ ಚಣಯಿಕೆಯಾಕಾರದ ಚಕ್ಷುರಿಂದ್ರಿಯಮುಂ, ೫ ಎವೆಯ ಸುಳಿಯಂ ಪೋಲ್ವ ಶ್ರೋತ್ರೇಂದ್ರಿಯಮುಂ, ಇವುಗಳ ಕ್ಷಯೋಪಶಮಸ್ಥಾನಮಂಗುಲಾಸಂಖ್ಯೇಯ ಭಾಗಮಾತ್ರಮಕ್ಕುಂ. ಸ್ಪರ್ಶನೇಂದ್ರಿಯಮೊಂದರಿಂದರಿಯುವದು ಏಕೇಂದ್ರಿಯವು. ಸ್ಪರ್ಶನ, ರಸನಮೆಂಬೆರಡಿಂದ್ರಿಯದಿಂದರಿವುದು ದ್ವೀಂದ್ರಿಯವು ॥ ೨ ॥ ಸ್ಪರ್ಶನ, ರಸನ, ಘ್ರಾಣ, ಎಂಬ ಮೂರಿಂದ್ರಿಯಗಳಿಂದರಿವುದು ತ್ರೀಂದ್ರಿಯವು ॥ ೩ ॥ ಸ್ಪರ್ಶನ, ರಸನ, ಘ್ರಾಣ, ಚಕ್ಷುರಿಂದ್ರಿಯದಿಂದರಿಯುವದು ಚತುರಿಂದ್ರಿಯವು ॥ ೪ ॥ ಸ್ಪರ್ಶನ, ರಸನ, ಘ್ರಾಣ, ಚಕ್ಷು, ಶ್ರೋತ್ರಮೆಂಬೈದಿಂದ್ರಿಯದಿಂದರಿಯುವದು ಪಂಚೇಂದ್ರಿಯವು ॥೫॥ ಏಕೇಂದ್ರಿಯ ಜೀವಂಗಳಿಗೆ ಮಿಥ್ಯಾದೃಷ್ಟಿಗುಣಸ್ಥಾನಮುಂ, ಕಥಂಚಿತ್ ಸಾಸಾದನ ಗುಣಸ್ಥಾನಮಕ್ಕುಂ ವಿಕಲತ್ರಯಂಗಳಿಗೆ ಹೀಗೆಯೇ ಆಗುವದು. ಪಂಚೇಂದ್ರಿಯ ಜೀವಂಗಳಿಗೆ ಹದಿನಾಲ್ಕು ಗುಣಸ್ಥಾನಮಕ್ಕುಂ.

---

## ಸೂತ್ರಂ ॥ ಷಡ್ಜೀವನಿಕಾಯಾಃ ॥ ೩೨ ॥

೧ ಪೃಥ್ವೀಕಾಯಿಕ, ೨ ಅಪ್ಪುಕಾಯಿಕ, ೩ ತೇಜಃಕಾಯಿಕ, ೪ ವಾಯುಕಾಯಿಕ, ೫ ವನಸ್ಪತಿಕಾಯಿಕ, ೬ ತ್ರಸಕಾಯಿಕವೆಂದು ಆರುವಿಧವು. ಪೃಥ್ವಿಯ ಗಂಧ, ಪೃಥ್ವಿಯ ವರ್ಣ, ಪೃಥ್ವಿಯ ರಸ, ಪೃಥ್ವ್ಯಾಕಾರವಾಗಿ ಇರ್ಪುವು, ಚಣಯಿಕೆಯ( ಕಡಲೆಯ ) ಆಕಾರದ ಪೃಥ್ವೀಕಾಯಿಕ ಜೀವಂ ॥ ೧ ॥ ಉದಕದವರ್ಣ, ಉದಕದಗಂಧ, ಉದಕದರಸ, ಉದಕಾಕಾರಮನುಳ್ಳ ದುರ್ಭೇವುಪನಿಯಂದದ ಅಪ್ಪುಕಾಯಜೀವಂ॥ ೨ ॥ ಬೆಂಕಿಯವರ್ಣ, ಬೆಂಕಿಯಗಂಧ, ಬೆಂಕಿಯರಸ, ಬೆಂಕಿಯಾಕಾರಮನುಳ್ಳ ಸೂಜಿಯಾಕಾರಮೊತ್ತಮೊತ್ತದಂತಪ್ಪತೇಜಃಕಾಯ್ಕಮುಂ ॥ ೩ ॥ ಘಾಳಿಯವರ್ಣ, ಘಾಳಿಯಗಂಧ, ಘಾಳಿಯರಸ, ಘಾಳಿಯಾಕಾರವನ್ನುಳ್ಳದು, ಪತಾಕೆಯಾಕಾರದ ವಾತಕಾಯ್ಕಜೀವಂ ॥ ೪ ॥ ಗಿಡಮರಬಳ್ಳಿ ಹೊದರು ಹಸುರು ಹಾವಸೆ ಮೊದಲಾದವನುಳ್ಳ ವನಸ್ಪತಿಕಾಯ್ಕಜೀವಂಗಳುಂ, ಯಸಗಿಮಸಗಿ ಹರಿವುವೆಲ್ಲಂ ತ್ರಸಕಾಯ್ಕಜೀವಂ ॥ ೫ ॥ ಪೃಥ್ವಿ, ಅಪ್ಪು, ವನಸ್ಪತಿಕಾಯ್ಕ ಜೀವಂಗಳಿಗೆ ಎರಡು ಗುಣಸ್ಥಾನಮಕ್ಕುಂ. ತೇಜೋವಾತಕಾಯ್ಕಂಗಳಗೆ ಮಿಥ್ಯಾದೃಷ್ಟಿಗುಣಸ್ಥಾನಮೊಂದೇಯಕ್ಕುಂ. ತ್ರಸಕಾಯ್ಕಂಗಳಿಗೆ ಹದಿನಾಲ್ಕು ಗುಣಸ್ಥಾನಮಕ್ಕುಂ. ಏಕವಿಕಲೇಂದ್ರಿಯಂಗಳೊಳು ಶರೀರಪರ್ಯಾಪ್ತಿನೆರೆಯದನ್ನೆಗಂ ಸಾಸಾದನಗುಣಸ್ಥಾನಮಿರದಪ್ಪುದರಿಂ ಕೆಲಂಬರಾಚಾರ್ಯರು ಗುಣಸ್ಥಾನಮನೊಲ್ಲರು.

---

## ಸೂತ್ರಂ ॥ ತ್ರಿವಿಧೋ ಯೋಗ: ॥ ೩೩ ॥

ತಾಃ—ಮನ, ವಚನ, ಕಾಯಮೆಂದು ಯೋಗಂ ತ್ರಿವಿಧಮಕ್ಕುಂ.

---

## ಸೂತ್ರಂ ॥ ಪಂಚದಶವಿಧಾ: ॥ ೩೪ ॥

ತಾ:—ಸತ್ಯಮನ, ಅಸತ್ಯಮನ, ಉಭಯಮನ, ಅನುಭಯ ಮನವೆಂದು ಮನೋಯೋಗಂ ನಾಲ್ಕುತೆರವು ॥ ೪ ॥ ಸತ್ಯವಚನ, ಅಸತ್ಯವಚನ, ಸತ್ಯಾಸತ್ಯವಚನ, ಸತ್ಯಾಸತ್ಯವಿಲಕ್ಷಣವೆಂದು ವಚನಯೋಗಂ ನಾಲ್ಕುತೆರವು ॥ ೪ ॥ ಔದಾರಿಕ, ಔದಾರಿಕಮಿಶ್ರ, ವೈಕ್ರಿಯಕ, ವೈಕ್ರಿಯಕಮಿಶ್ರ, ಆಹಾರಕ, ಆಹಾರಕಮಿಶ್ರ, ಕಾರ್ಮಣಕಾಯಯೋಗಮೆಂದು ಕಾಯಯೋಗವೇಳುತೆರವು ॥ ೭ ॥ ಇಂತು ಯೋಗಮಾರ್ಗಣೆಯು ಹದಿನೈದು ಭೇದವಾಗುವದು. ಅಲ್ಲಿ ಅಸತ್ಯೋಭಯ ಮನವಚನಂಗಳ್ಗೆ ಸಂಜ್ಞಿಪಂಚೇಂದ್ರಿಯಂ ಪರ್ಯಾಪ್ತಕಂ ಮೊದಲ್ಗೊಂಡು ಕ್ಷೀಣಕಷಾಯಪರಿಯಂತಮಕ್ಕುಂ. ಸತ್ಯಮನವಚನ ಅನುಭಯಮನಕ್ಕಂ ಸಂಜ್ಞಿಪರ್ಯಾಪ್ತಕವಾದಿಯಾಗಿ ಅನುಭಯಮನಕ್ಕಂ, ವಿಕಲೇಂದ್ರಿಯಂಗಳಾದಿಯಾಗಿ ಸಯೋಗಿಕೇವಲಿ ಪರಿಯಂತಮಕ್ಕುಂ. ಔದಾರಿಕಕ್ಕೆ ಸ್ಥಾವರಕಾಯಂ ಮೊದಲ್ಗೊಂಡು ಸಯೋಗಿಕೇವಲಿಪರ್ಯಂತಮಕ್ಕುಂ. ಔದಾರಿಕಮಿಶ್ರಕ್ಕೆ ಮಿಥ್ಯಾದೃಷ್ಟಿ, ಸಾಸಾದನ, ಪುಂವೇದ, ಅಸಂಯತ, ಕವಾಟಸಯೋಗಿಯುಮೆಂಬ ನಾಲ್ಕು ಗುಣಸ್ಥಾನಮಕ್ಕುಂ. ವೈಕ್ರಿಯಕ್ಕೆ ನಾಲ್ಕು ಗುಣಸ್ಥಾನಮಕ್ಕುಂ. ವೈಕ್ರಿಯಕಮಿಶ್ರಕ್ಕೆ ಮಿಶ್ರಗುಣಸ್ಥಾನಂ ಪೊರಗಾಗಿ, ಮೂರು ಗುಣಸ್ಥಾನಮಕ್ಕುಂ. ಆಹಾರಕ, ಆಹಾರಕಮಿಶ್ರಂಗಳಂತರ್ಮುಹೂರ್ತಕಾಲಂ ಪ್ರಮತ್ತಗುಣಸ್ಥಾನಮೊಂದೇಯಕ್ಕುಂ ॥ ೧ ॥ ಕಾರ್ಮಣಕಾಯಯೋಗಕ್ಕೆ ಔದಾರಿಕಮಿಶ್ರದಂತೆ ನಾಲ್ಕು ಗುಣಸ್ಥಾನಮಕ್ಕುಂ.

---

## ಸೂತ್ರಂ ॥ ವೇದಸ್ತ್ರಿವಿಧಃ ॥ ೩೫ ॥

ತಾ:—ಪುಂವೇದಂ, ಸ್ತ್ರೀವೇದಂ, ನಪುಂಸಕವೇದಮೆಂದು ಮೂರುತೆರವು.

---

## ಸೂತ್ರಂ ॥ ನವವಿಧೋ ವಾ ॥ ೩೬ ॥

ತಾ:—೧ ದ್ರವ್ಯಪುರುಷ ಭಾವಪುರುಷ, ೨ ದ್ರವ್ಯಪುರುಷ ಭಾವಸ್ತ್ರೀಯುಂ, ೩ ದ್ರವ್ಯಪುರುಷ ಭಾವನಪುಂಸಕನುಂ, ೪ ದ್ರವ್ಯಸ್ತ್ರೀ ಭಾವಸ್ತ್ರೀಯುಂ ೫ ದ್ರವ್ಯಸ್ತ್ರೀಭಾವಪುರುಷನುಂ, ೬ ದ್ರವ್ಯಸ್ತ್ರೀ ಭಾವನಪುಂಸಕನುಂ, ೭ ದ್ರವ್ಯನಪುಂಸಕ ಭಾವನಪುಂಸಕನುಂ, ೮ ದ್ರವ್ಯನಪುಂಸಕ ಭಾವಪುರುಷನುಂ, ೯ ದ್ರವ್ಯನಪುಂಸಕ ಭಾವಸ್ತ್ರೀಯುಂ ಎಂದು ನವಭೇದವು ॥ ೯ ॥ ಆ ಮೊದಲ ಮೂರು ಭೇದದವರ್ಗೆ ಕರ್ಮಕ್ಷಯಂ ಕಥಂಚಿತ್ ಘಟಯಿಸುಗುಂ.

ಗಾಹೆ ॥ ಪುರಿಸಿಚ್ಛಿಸಂಡವೇದೋದಯೇಣ ಪುರಿಸಿಚ್ಛಿಸಂಡವ್ವಾಭಾವಾ ॥
ಣಮೋದಯೇಣದವ್ವೇಪಾಏಣ ಸಮಾಕಹಿಂವಿಸಮಾ ॥ ೨೭ ॥

ವೇದ್ಯತ ಇತಿವೇದ, ಅಥವಾ ಆತಪ್ರವೃತ್ತೇಸ್ಸಂಮೋಹೋತ್ಪಾದೋವೇದ:, ಅಥವಾ ಆತ್ಮಪ್ರವೃತ್ತೇರ್ನಿದುವನ ಸಂಹಿಮೋಹೋತ್ಪಾದೋವೇದ:. ಹುಲ್ಲಕಿಚ್ಚಿನಂತೆ ಪುಂವೇದಮುಂ, ದುವೆಕಿಚ್ಚಿನಂತೆ ಸ್ತ್ರೀವೇದಮುಂ, ಇಟ್ಟಗೆಯ ಕಿಚ್ಚಿನಂತೆ ನಪುಂಸಕವೇದಮುಂ, ನಪುಂಸಕ ವೇದಕ್ಕೆ ಸ್ಥಾವರಕಾಯಂ ಮೊದಲ್ಗೊಂಡು, ಸ್ತ್ರೀಪುರುಷರ ವೇದಂಗಳ್ಗೆ ಅಸಂಜ್ಞಿ ಪಂಚೇಂದ್ರಿಯಂ ಮೊದಲ್ಗೊಂಡು, ಅನಿವೃತ್ತಿಕರಣನ ಪ್ರಥಮಭಾಗ ಪರ್ಯಂತಮೊಂಭತ್ತುಗುಣಸ್ಥಾನ ಮಕ್ಕುಂ.

---

## ಸೂತ್ರಂ ॥ ಚತುಃ ಕಷಾಯಾಃ ॥ ೩೬ ॥

ತಾ:—ಕ್ರೋಧ, ಮಾನ, ಮಾಯಾ, ಲೋಭಮೆಂದು ಕಷಾಯಂ ನಾಲ್ಕು ತೆರವು. ವಿಶೇಷದಿಂದನಂತಾನುಬಂಧಿಕ್ರೋಧ, ಮಾನ, ಮಾಯಾ, ಲೋಭಂ, ಅಪ್ರತ್ಯಾಖ್ಯಾನಕ್ರೋಧ, ಮಾನ, ಮಾಯಾ, ಲೋಭಂ, ಪ್ರತ್ಯಾಖ್ಯಾನ ಕ್ರೋಧ, ಮಾನ, ಮಾಯಾ, ಲೋಭಂ ಸಂಜ್ವಲನಕ್ರೋಧ, ಮಾನ, ಮಾಯಾ, ಲೋಭಂ ಎಂದು ಮೇಣ್ ೧೬ ಭೇದಮಕ್ಕುಂ.

ಗಾಹೆ ॥ ಸಮ್ಮತ್ತದೇಸಸಯಳಚರಿತ್ತಜಹಖ್ಖಾದಚರಣ ॥
ಪರಿಣಾಮೇಖಾದಂತಿವಾಕಸಾಯಾ ಚಉಸೋಳಅಸಂಖಲೋಗಮಿದಾ ॥ ೨೮ ॥
ಶಿಲ ಭೂಸಿಕ ಉದರೆಯಾ ಸಿಲ ಅಥ್ಥಿದಾರುಲತಾದವಸ್ಸೇಮೆ ॥
ಸಸ್ಸಲೇಯಣಿಮುತ್ತಿಲಖ್ಖಕುಸುಭ್ಭ ಹರಿದಸಮಾ ॥ ೨೯ ॥

ತಾತ್ಪರ್ಯ—ಸ್ಥಾವರಕಾಯಂ ಮೊದಲ್ಗೊಂಡು ಅನಿವೃತ್ತಿಕರಣನ ದ್ವಿತೀಯ ಭಾಗ ಪರ್ಯಂತಂಕ್ರೋಧಮುಂ, ತೃತೀಯಭಾಗಪರ್ಯಂತ ಮಾನಮುಂ, ಚತುರ್ಥಭಾಗಪರ್ಯಂತ ಮಾಯೆಯುಂ ಸೂಕ್ಷ್ಮಸಾಂಪರಾಯಪರ್ಯಂತ ಲೋಭಕಷಾಯಮುಮಕ್ಕುಂ.

---

## ಸೂತ್ರಂ ॥ ಅಷ್ಟಜ್ಞಾನಾನಿ ॥ ೩೭ ॥

ತಾ:—ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಾಯಮೆಂಬೀ ನಾಲ್ಕುಂ ಕ್ಷಯೋಪಶಮಜನಿತಂಗಳು, ಕೇವಲಜ್ಞಾನಂ ಕ್ಷಾಯಿಕಂ ಆ ಐದು ಸಮ್ಯಜ್ಞಾನಂಗಳು. ಕುಮತಿ, ಕುಶ್ರುತ, ವಿಭಂಗವೆಂದು ಅಜ್ಞಾನವು ಮೂರುವಿಧವು. ಇಂತು ಜ್ಞಾನಮಾರ್ಗಣೆ ಅಷ್ಟ ಭೇದವಾಗುವದು. ಸ್ಥಾವರಕಾಯಂ ಮೊದಲ್ಗೊಂಡು ಕುಮತಿ ಕುಶ್ರುತಂಗಳುಂ, ಸಂಜ್ಞಿಪರ್ಯಾಪ್ತಕಂ ಮೊದಲ್ಗೊಂಡು ವಿಭಂಗಜ್ಞಾನಮುಂ, ಸಾಸಾದನ ಪರ್ಯಂತಮಕ್ಕುಂ. ಸಮ್ಯಗ್ಮಿಥ್ಯಾದೃಷ್ಟಿಗುಣಸ್ಥಾನದೊಳು ಸಜ್ಞಾನಾಜ್ಞಾನತ್ರಯ ಮಿಶ್ರಂಗಳಕ್ಕುಂ. ಮತಿ ಶ್ರುತಾವಧಿಗಳು ಅಸಂಯತ ಸಮ್ಯಗ್ದೃಷ್ಟಿ ಮೊದಲ್ಗೊಂಡು, ಮನ:ಪರ್ಯಾಯಜ್ಞಾನಂ ಪ್ರಮತ್ತಸಂಯತಂ ಮೊದಲ್ಗೊಂಡು, ಕ್ಷೀಣಕಷಾಯಂಬರಮಕ್ಕುಂ. ಕೇವಲಜ್ಞಾನಂ ಜಿನರೊಳಂ ಸಿದ್ಧರೊಳಂ ಆಗುವದು.

---

## ಸೂತ್ರಂ ॥ ಸಪ್ತಸಂಯಮಾಃ ॥ ೩೯ ॥

ತಾಃ—೧ ಸಾಮಾಯಿಕ, ೨ ಛೇದೋಪಸ್ಥಾಪನ, ೩ ಪರಿಹಾರವಿಶುದ್ಧಿ, ೪ ಸೂಕ್ಷ್ಮ ಸಾಂಪರಾಯ, ೫ ಯಥಾಖ್ಯಾತಚಾರಿತ್ರಂ, ೬ ದೇಶಸಂಯಮಂ, ೭ ಅಸಂಯಮಮೆಂದು ಸಂಯಮಮಾರ್ಗಣೆ ಏಳುಭೇದವು. ಅದು ಹ್ಯಾಗೆಂದರೆ—ಬಾದರ ಸಂಜ್ವಲನಕಷಾಯಂಗಳು ದಯದಿಂ ಮೊದಲ ಮೂರುಂ ಬಾದರ ಸಂಯಮಂಗಳಕ್ಕುಂ. ಸೂಕ್ಷ್ಮಸಂಜ್ವಲನಲೋಭದಿಂ ಸೂಕ್ಷ್ಮಸಂಯಮಗುಣಂ ಪುಟ್ಟುಗುಂ. ಸಮಸ್ತಮೋಹನೀಯದುಪಶಮದೊಳಂ ಕ್ಷಯದೊಳಂ ಯಥಾಖ್ಯಾತ ಶುದ್ಧ ಚಾರಿತ್ರಮಕ್ಕುಂ. ಉಳಿದೆರಡುಮಂ ಮುಂದೆ ಪೇಳ್ದಪರಾಪಂಚವಿಧಾಚಾರಿತ್ರಂಗಳ ಲಕ್ಷಣಮೆಂತೆನೆ—ವ್ರತ, ಗುಪ್ತಿ, ಸಮಿತಿ, ಧರ್ಮಂ ಮೊದಲಾಗೊಡೆಯವರ ವಿಕಲ್ಪದಿಂದಗಲ್ದದಾಗಿಯುಂ, ಸರ್ವಸಾವದ್ಯಯೋಗ ನಿವೃತ್ತಿ ಯಾವದೊಂದು ಚಾರಿತ್ರಕಕ್ಕುಮದು ಸಾಮಾಯಿಕ ಶುದ್ಧಚಾರಿತ್ರಮಕ್ಕು ॥ ೧ ॥ ಸಮಸ್ತ ವ್ರತ, ಸಮಿತಿ, ಗುಪ್ತಿ, ಸಂಯಮಶೀಲ ಗುಣಾದಿ ವಿಕಲ್ಪದೊಳು ಕೂಡಿ ನಿರವದ್ಯವೃತ್ತಿಯಿಂ ನೆಗಳಲು ಛೇದೋಪಸ್ಥಾಪನ ಶುದ್ಧ ಚಾರಿತ್ರಮಕ್ಕುಂ ॥ ೨ ॥ ಈ ಎರಡುಂ ಪ್ರಮತ್ತಸಂಯತಾದಿ ಚತುರ್ಗುಣಸ್ಥಾನದೊಳಪ್ಪವು. ತ್ರಿಂಶದ್ವರ್ಷ ಆಯುಷ್ಯನುಂ, ಸಮಸ್ತ ಭೋಗಾನುಭುಕ್ತನುಂ, ಉತ್ತಮ ಸಂಹನನ ಶರೀರನುಮಪ್ಪಪುರುಷಂ, ಜಾತರೂಪಮಂ ಧರಿಸಿ ತೀರ್ಥಕರ ಪಾದಮೂಲದಲ್ಲಿ ವರ್ಷಪೃಥಕ್ತ್ವಂಬರಂ ಪ್ರತ್ಯಾಖ್ಯಾನಮೆಂಬೊಂಭತ್ತನೆಯ ಪೂರ್ವಮನೋದಿ ಸಂಯಮವಿನಾಶಿ ಭೀರುವಪ್ಪ ಪರಿಹಾರಶುದ್ಧ ಚಾರಿತ್ರಮಂ ಕೈಕೊಂಡು ನೆಗಳ್ವವರ ಲಕ್ಷಣಮಂ ಪಂಚಸಮಿತಿಗಳೊಳಂ ತ್ರಿಗುಪ್ತಿಗಳೊಳಂ ಕೂಡಿ ಸರ್ವಸಾವದ್ಯಮಂ ಪರಿಹರಿಸುವದೂ, ಪಂಚವ್ರತದೊಳಂ ಕೂಡಿದುದು, ಮೋಣೇಕವ್ರತಮನೇ ತನಗೊಡೆಯದು, ತ್ರಿಸಂಧ್ಯೆಗಳನುಳಿಪಿ ದಿನಂಪ್ರತಿ ಗವ್ಯೂತಿದ್ವಯ ಪ್ರಮಾಣ ಕ್ಷೇತ್ರಮಂ ವಿಹಾರಿಸುವದು ಮೊದಲಾಗೊಡೆಯದು, ಅಂತಾಪರಿಹಾರವಿಶುದ್ಧಿಯ ಪುರುಷಂ ಷಡ್ಜೀವನಿಕಾಯಸಂಕೀರ್ಣಮಪ್ಪ ಲೋಕದೊಳು ಚರಿಸುತಿರ್ದು ಪದ್ಮಪತ್ರಮೆಂತು ನೀರೊಳಗಿರ್ದು ನೀರಂ ಪೊರೆಯದಂತೆ ಪಾಪಸಮೂಹದೋಳ್ಪೊರೆವನಲ್ಲಂ, ಆ ಯತಿಗೆ ಮಳೆಗಾಲಂ ನಿಯಮವಿಲ್ಲ. ಆ ತೃತೀಯಸಂಯಮಂ ಪ್ರಮತ್ತರೊಳಪ್ರಮತ್ತರೊಳಲ್ಲದಿಲ್ಲ ॥೩॥ ಸೂಕ್ಷ್ಮ ಮಾಡಲ್ಪಟ್ಟ ಸಂಜ್ವಲನ ಲೋಭಮನೊಡೆಯವಪ್ಪಯತಿಗಳುಪಶಮಂಗಳ್ಗೆ ಕ್ಷಪಕಂಗಕ್ಕೆ ವಿಕಲ್ಪರಹಿತಮಪ್ಪ ಪರಿಣಾಮಮನೊಡೆಯದು, ಯಥಾಖ್ಯಾತಚಾರಿತ್ರದೊಳೇನಾನುಂ ಕುಂದಿದುದು ಸೂಕ್ಷ್ಮಸಾಂಪರಾಯ ಶುದ್ಧಚಾರಿತ್ರಂ ॥೪॥ ಮೋಹನೀಯದುದಯದಿಂದ ಪಿಂಗಿದುದೇಕಸ್ವರೂಪಮಪ್ಪಮನಮನೊಡೆಯದು, ಉಪಶಾಂತಕಷಾಯಾದಿ ಚತುರ್ಗುಣಸ್ಥಾನ ಭೂಮಿಕಮಪ್ಪುದು, ಯಥಾಖ್ಯಾತಶುದ್ಧಚಾರಿತ್ರಂ ॥ ೫ ॥ ಎಂದಿವರೊಳು ಮೊದಲೇಳುಂ, ಮೋಹನೀಯದುಪಶಮದೊಳಂ ಕ್ಷಯದೊಳಂ, ಕ್ಷಯೋಪಶಮದೊಳಪ್ಪವು. ತೃತೀಯ ಕ್ಷಯೋಪಶಮಕಂ ಕಡೆ ಎರಡುಮುಪಶಮದೊಳು ಕ್ಷಯದೊಳಮಪ್ಪವು. ಪಂಚಗುಣಸ್ಥಾನ ಭೂಮಿಕಮುಂ, ಪ್ರತ್ಯಾಖ್ಯಾನಕಷಾಯದುದಯ ಜನಿತವುಂ, ದರ್ಶನಿಕ ಪ್ರತಿಕಾದ್ಯೈಕಾದಶನಿಲಯ ಸಮನ್ವಿತಮಪ್ಪದೇಶಚಾರಿತ್ರಂ ಕ್ಷಯೋಪಶಮವಾಗುವದು. ಮಿಥ್ಯಾದೃಷ್ಟ್ಯಾದಿ ಚತುರ್ಗುಣಸ್ಥಾನದೊಳಸಂಯಮವಾಗುವದು. ಪ್ರತ್ಯಾಖ್ಯಾನ ಕಷಾಯಂಗುದಯಮುಂಟಪ್ಪುದರಿಂ ನಿವೃತ್ತಿಪರಿ

ಣಾಮವಿಲ್ಲ, ಅಲ್ಲಿ ಚಾರಿತ್ರಮೋಹನೀಯಮಂ ಕುರಿತು ಔದಯಿಕ ಭಾವನೇ ಅಗುವದು. ಸಿದ್ಧರಿಗೆ ಸಂಯಮಮಾರ್ಗಣೆಯ ವಿಕಲ್ಪಂ ಯಾವದೂ ಇಲ್ಲಾ.

---

## ಸೂತ್ರಂ ॥ ಚತ್ವಾರಿದರ್ಶನಾನಿ ॥ ೪೦ ॥

ಟೀ:—ದರ್ಶನಮಾರ್ಗಣೆಯೊಳು ಸಾಮಾನ್ಯ ವಿಶೇಷಾತ್ಮಕಮಪ್ಪ ವಸ್ತುಗಳ ಸ್ವರೂಪ ಮಾತ್ರಮನಾವುದೊಂದು ವಿಕಲ್ಪರಹಿತವಾಗಿ ಜ್ಞಾನದಿಂ ಮುನ್ನಮೇಕೈಕೊಳ್ಳುವದು ದರ್ಶನ ವೆಂಬುವದು. ಅದು ಚಕ್ಷುದರ್ಶನಂ, ಅಚಕ್ಷುದರ್ಶನಂ, ಅವಧಿದರ್ಶನಂ, ಕೇವಲದರ್ಶನಮೆಂದು ಚತುರ್ವಿಧವಾಗುವದು. ॥ ೪ ॥

೧ ಚಕ್ಷುರಿಂದ್ರಿಯ ಮತಿಜ್ಞಾನದಿಂ ಮುನ್ನಪ್ಪುದು ಚಕ್ಷುದರ್ಶನಂ, ೨ ಶೇಷೇಂದ್ರಿಯ ಮತಿಜ್ಞಾನದಿಂ ಮುನ್ನಮೇಪುಟ್ಟುವದಚಕ್ಷುದರ್ಶನಂ, ೩ ಅವಧಿಜ್ಞಾನದಿಂ ಮುನ್ನಮೇಪುಟ್ಟುವ ಪ್ರಕಾಶಂ ಅವಧಿದರ್ಶನಂ, ॥ ೪ ॥ ಕೇವಲದರ್ಶನ ವಿಷಯಮಿಲ್ಲವುಂ ದಿನಕರ ಪ್ರಕಾಶೋ ಷ್ಣಂಗಳಂತೆ ಬೆಳಗುವದು ಕೇವಲದರ್ಶನಂ, ದರ್ಶನೋಪಯೋಗದಕಾಲಮಂತರ್ಮುಹೂ ರ್ತವೇ ಆಗುವದು. ಇಂತೀ ಕ್ರಮಪ್ರವೃತ್ತಿ ಛದ್ಮಸ್ತರೊಳಲ್ಲದೆ, ಜಿನರೊಳಂ ಸಿದ್ಧರೊಳಂ ಇಲ್ಲ.

ಇಂತೀ ದರ್ಶನನಾಲ್ಕಕ್ಕಂ ಸ್ವಾಮಿಗಳಾರೆಂದೊಡೆ—ಚಕ್ಷುರಿಂದ್ರಿಯಕ್ಕೆ ಚತುರಿಂದ್ರಿಯಂ ಮೊದಲ್ಗೊಂಡು, ಅಚಕ್ಷುರಿಂದ್ರಿಯಕ್ಕೆ ಸ್ಥಾವರಕಾಯಂ ಮೊದಲ್ಗೊಂಡು, ಅವಧಿದರ್ಶನಕ್ಕೆ ಅಸಂಯತ ಸಮ್ಯಗ್ದೃಷ್ಟಿಯಿಂ ಮೊದಲ್ಗೊಂಡು, ಕ್ಷೀಣಕಷಾಯ ಪರಿಯಂತರವಾಗುವದು. ಕೇವಲದರ್ಶನಂ ಜಿನರಲ್ಲಿಯೂ ಸಿದ್ಧರಲ್ಲಿಯೂ ಆಗುವದು.

---

## ಸೂತ್ರಂ ॥ ಷಡ್ಲೇಶ್ಯಾ: ॥ ೪೧ ॥

ಟೀ:—ಲೇಶ್ಯಾಮಾರ್ಗಣೆಯೊಳು ಲೇಶ್ಯೆಯೆಂಬುದು ಕಷಾಯೋದಯಾನುರಂಜಿತಮಪ್ಪ ಯೋಗಪ್ರವೃತ್ತಿಯಿಂ ಲೇಶ್ಯೆಯೆಂಬುವದು, ಮತ್ತಮಾತ್ಮಂ ಪುಣ್ಯಪಾಪ ಪ್ರಕೃತಿ ಪ್ರದೇಶ ಸ್ಥಿತ್ಯ ನುಭಾಗ ಬಂಧಗಳಂ ತನಗೆ ಮಾಡುವದು ಲೇಶ್ಯೆ, ಅಂತಾಲೇಶ್ಯೆ, ಕೃಷ್ಣ, ನೀಲ, ಕಾಪೋತ, ಪೀತ ಪದ್ಮ, ಶುಕ್ಲಭೇದದಿಂ ಷಟ್ಪ್ರಕಾರಮಕ್ಕುಂ. ಅವುಗಳಲ್ಲಿ ಮೊದಲ ಮೂರು ಲೇಶ್ಯೆಗಳು ಅಶುಭಂಗಳು, ನರಕಗತಿಗೆ ಕಾರಣಂಗಳು, ಉಳಿದ ಮೂರುಂ ಲೇಶ್ಯೆಂಗಳುಂ ದೇವಗತಿಗೆ ಕಾರಣಂಗಳು ಮಕ್ಕುಂ, ಇಂತಿವುಗಳ ಲಕ್ಷಣಂಗಳು ಹ್ಯಾಗೆಂದರೆ—

ಕಂದ॥ ಚಂಡಂ ವೈರಮನುಳಿಯಂ ।
ಭಂಡನಶೀಲಂ ದಯಾವಿಹೀನನಧರ್ಮಂ ॥
ತೊಂಡನತಿಕಲುಷಿ ಪಾಪದ ।
ಪಿಂಡಮೆನಿಪ್ಪವನೇ ಕೃಷ್ಣಲೇಶ್ಯೆಯ ಜೀವಂ ॥ ೭ ॥

ಕಂದ॥ ಆಲಸ್ಯಂ ದುರ್ಬುದ್ಧಿಂ ಕು- ।
ಶೀಲಂ ಮಾಯಾವಿ ವಿಷಯವಂಚಕನತಿ ವಾ- ॥
ಚಾಲಂ ಸರಲಲನಾದರ ।
ಲೋಲನೆನಿಪ್ಪವನೆ ನೀಲಲೇಶ್ಯೆಯ ಜೀವಂ ॥ ೮ ॥

ತನ್ನಂತೆಗೆತ್ತು ಶಿಷ್ಟರು- ।
ಮಂ ನಂಬಂ ಪಳಿವನಾರುಮಂ ಸಲೆಪೊಗಳ್ವಂ ॥
ತನ್ನಂ ಕೀರ್ತಿಸೆ ಕೊಡುವಂ ।
ತನ್ನುಮನೆನಿಪಂ ಕಾಪೋತಲೇಶ್ಯೆಯ ಜೀವಂ ॥ ೯ ॥

ದಾನರತಂ ಜೀವದಯಾ ।
ಮಾನಂ ಕಾರ್ಯಮಿದಕಾರ್ಯಮೆಂಬಿದನಱುದಂ ॥
ತಾನರಿವಂ ಮೃದುವೆನಿಸುವ ।
ಮಾನವನಿರಲಿಲ್ಲಿ ಪೀತಲೇಶ್ಯೆಯ ಜೀವಂ ॥ ೧೦ ॥

ಗುರುಭಕ್ತಂ ಋಜುಧರ್ಮಾ- ।
ನುರಾಗಿ ಭದ್ರಂ ಕ್ಷಮಾಗುಣಂ ತ್ಯಾಗಿ ದಯಾ- ॥
ಪರನತಿ ನಿರ್ಮಲನೆನಿಸುವ ।
ನರನಿಂತಿರಲಿಲ್ಲಿ ಪದ್ಮಲೇಶ್ಯೆಯ ಜೀವಂ ॥ ೧೧ ॥

ಎಲ್ಲರೊಳಂ ಸಮಸಾರೊಳ- ।
ಮೊಲ್ಲಕ್ಕೈವಾರಮಂ ಸರಾಗಾದಿಗಳೊಳ್ ॥
ಸಲ್ಲಂ ನಿದಾನ ಶಲ್ಯಮು- ।
ಮಿಲ್ಲದನೆನಿಸುವನೇ ಶುಕ್ಲಲೇಶ್ಯೆಯ ಜೀವಂ ॥ ೧೨ ॥

ಮತ್ತಮಂತಾಲೇಶ್ಯೆಗಳೆಲ್ಲಮಿಪ್ಪತ್ತಾರು ಭೇದಮಕ್ಕುಂ ॥ ೨೬ ॥ ಅವುಗಳೊಳು ಮಧ್ಯಮಂಗಳೆಂಟು ( ೮ ) ಆಯುಷ್ಯ ಬಂಧಯೋಗ್ಯಂಗಳೆಂಟು ಸೂಳು ಕಟ್ಟುವಲ್ಲಿಯೊಳವಪ್ಪವು ಉಳಿದ ಪದಿನೆಂಟು ವಿಕಲ್ಪದಂಶಂಗಳುಂ ಚತುರ್ಗತಿಗಮನ ಕಾರಣಂಗಳಾವಾವುವೆಂದೊಡೆ—ಶುಭತ್ರಿಕವುಂ (೩) ಅಶುಭತ್ರಿಕವುಂ ( ೩ ), ಎಂದಿವುಗಳೊಳು ಉತ್ಕೃಷ್ಟ, ಮಧ್ಯಮ, ಅಧಮಭೇದದಿಂದೊಂದು ತ್ರಿವಿಧವಾಗಿ ಹದಿನೆಂಟಂಶಂಗಳಕ್ಕುಂ ॥ ೧೮ ॥ ಅವರೊಳು ಶುಕ್ಲಲೇಶ್ಯೆಯುತ್ಕೃಷ್ಟ ಜಘನ್ಯಾಂಶಂಗಳಿಂ ಕಾಲಂಗೆಯ್ದುವರ್ಗಳು, ಸರ್ವಾರ್ಥಸಿದ್ಧಿಯಲ್ಲಿಯೂ, ಶತಾರ ಸಹಸ್ರಾರ ಕಲ್ಪಗಳಲ್ಲಿಯೂ ಪುಟ್ಟುವರು. ಉತ್ಕೃಷ್ಟ ಜಘನ್ಯಾಂಶಂಗಳಿಂ ಪಂಚತ್ವಮನೆಯ್ದಿ ಮಧ್ಯಮದೊಳವರ ಮಧ್ಯಮವಿಮಾನಂಗಳೊಳು ಸಂಭವಿಸುವರು. ಪದ್ಮಲೇಶ್ಯೆಯುತ್ಕೃಷ್ಟ ಜಘನ್ಯಾಂಶಂಗಳಿಂ ಕಾಲಂಗೆಯ್ದುವರ್ಗಳು, ಸಹಸ್ರಾರ, ಸನತ್ಕುಮಾರ, ಮಾಹೇಂದ್ರಕಲ್ಪದೊಳಂ ಹುಟ್ಟುವರು. ಮಧ್ಯಮದೊಳವರ ಮಧ್ಯಮವಿಮಾನಂಗಳೊಳು ಉದಯಿಸುವರು. ಪೀತಲೇಶ್ಯೆಯ ಉತ್ಕೃಷ್ಟ ಜಘನ್ಯಾಂಶಂಗಳಿಂ ಪಂಚತ್ವವನ್ನೈದಿದವರು ಸನತ್ಕುಮಾರ, ಮಾಹೇಂದ್ರಕಲ್ಪದಂತಿಮ ಚಕ್ರವೆಂಬಿಂದ್ರಕದೊಳಂ, ಶ್ರೇಡಿಬದ್ಧಂಗಳೊಳಂ, ಸೌಧರ್ಮ, ಈಶಾನಕಲ್ಪದ ರಿತುವೆಂಬ ಮೊದಲಿಂದ್ರಕದೊಳಂ ಶ್ರೇಡಿಬದ್ಧದೊಳುಂ ಹುಟ್ಟುವರು. ಮಧ್ಯಮದೊಳ

ವರ ಮಧ್ಯಮವಿಮಾನಂಗಳೊಳಂ ಉದಯಿಸುವರು. ಮತ್ತಂ ಕೃಷ್ಣಲೇಶ್ಯೆಯ ಜಘನ್ಯಾಂಶಂಗಳಿಂ ಕಾಳಮಹೋಗ್ರವ್ಯಾಳ ವಿಷಗ್ರಸ್ಥರಾದವರ್ಗಳವಥಿಸ್ಥಾನಂಗಳುಂ ಐದನೆಯ ನರಕದ ತಿಮಿಶ್ರವೆಂಬ ಕಡೆಯಿಂದ್ರಕದೊಳಂ ಸಂಭವಿಸುಗುಂ, ಮಧ್ಯಮದೊಳವರ ಮಧ್ಯಮ ಬಿಲಂಗಳ್ಲಿ ಹುಟ್ಟುವರು. ನೀಲಲೇಶ್ಯೆಯಯುತ್ಕೃಷ್ಠ ಜಘನ್ಯಾಂಶಗಳೊಳಂದಂತಕ ಮುಖಾಭ್ಯಂತರಕ್ಕೆ ಸಂದವರ್ಗಳು, ಧೂಮಪ್ರಭೆಯ ಅಂಡಮೆಂಬಿಂದ್ರಕದೊಳು ಜನಿಯಿಸುವರು. ಮಧ್ಯಮದೊಳವರ ಮಧ್ಯಮ ಬಿಲಂಗಳೊಳು ಹುಟ್ಟುವರು. ಕಾಪೋತಲೇಶ್ಯೆಯುತ್ಕೃಷ್ಠದಿಂ ಜಘನ್ಯಾಂಶಂಗಳಿಂ ಕೃತಾಂತೋದರಾಂತರಕ್ಕೆ ಸಂದವರ್ಗಳು, ಮೂರನೆಯ ನರಕದ ಸಂಜ್ವಲನವೆಂಬಿಂದ್ರಕದೊಳಂ, ಪ್ರಥಮ ನರಕದ ಸೀಮನ್ತವೆಂಬಿಂದ್ರಕದೊಳಂ ಉದಯಿಸುವರು. ಮಧ್ಯಮದೊಳವರ ಮಧ್ಯಮಬಿಲಂಗಳೊಳು ಹುಟ್ಟುವರು. ಇಂತು ಮತ್ತಂ ಕೃಷ್ಣಲೇಶ್ಯೆಯ ಮಧ್ಯಮಾಂತರದಿಂ ಸತ್ತವರ್ಗಳು, ಭವನತ್ರಯದೊಳಂ ತ್ರಸಸ್ಥಾವರಂಗಳೊಳುಂ ಹುಟ್ಟುವರು. ಮತ್ತಂ ಕೃಷ್ಣತ್ರಿಕಂಗಳ ಮಧ್ಯಮಾಂಶಂಗಳಿಂ ಮರಣಮನೆಯ್ದಿದವರ್ಗಳು ತೇಜಸ್ಥಾವರಕಾಯ್ಕಂಗಳಾಗಿಯುಂ, ವಿಕಲೇಂದ್ರಿಯಂಗಳಾಗಿಯುಂ ಹುಟ್ಟುವರು. ಮತ್ತಂ ದೇವತೆಗಳುಂ, ನಾರಕರುಂ, ತಂತಮ್ಮ ಲೇಶ್ಯೆಗಳಿಂದಲೇ ಸತ್ತು ಮನುಷ್ಯರುಂ, ತಿರ್ಯಂಚರುಂ, ಆಗಿ ಯಥಾಯೋಗ್ಯದಿಂದ ಹುಟ್ಟುವರು. ಈ ರೀತಿಯಾಗಿ ಹೇಳಿದ ಲೇಶ್ಯೆಗಳೆಲ್ಲಂ ಭಾವಲೇಶ್ಯೆಗಳು. ದ್ರವ್ಯಲೇಶ್ಯೆಯೆಂಬುವದು, ಷಟ್ಪದ, ನೀಲ, ಕಾಪೋತ, ಪೀತ, ಅಂಬುಜ, ಶಂಖಸಮಪ್ರಭಮೆಂದು ಷಟ್ಪ್ರಕಾರಮಕ್ಕುಂ. ಒಂದೊಂದು ಸಂಖ್ಯಾತಾಸಂಖ್ಯಾತ ವಿಕಲ್ಪಂಗಳಾಗುವವು. ಇಂತೀ ದ್ರವ್ಯಲೇಶ್ಯೆ, ಭಾವಲೇಶ್ಯೆಗಳಿಲ್ಲದವರು ಮುಕ್ತರು.

ಗಾಹೆ ॥ ಅಯದೊತ್ತಿ ಛಕ್ಕಲೆಸ್ಸಾವೋಸುಹತಿಯಲೆಸ್ಸಾಹುದೇಶವಿರದತಿ ।
ಎತತ್ತೋಸುಕ್ಕಾಲೆಸ್ಸಾ ಅಜೋಗಿತಾಣಂ ಅಲೆಸ್ಸಂತು ॥ ೩೦ ॥

---

## ಸೂತ್ರಂ ॥ ದ್ವಿವಿಧಂ ಭವ್ಯತ್ವಂ ॥ ೪೨ ॥

ಟೀ:—ಭವ್ಯಂ, ಅಭವ್ಯನೆಂದು ಭವ್ಯಮಾರ್ಗಣೆ ಎರಡು ವಿಧವು ॥೨॥ ಅಲ್ಲಿ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಂಗಳ ನೆರವಣಿಗೆಯಂ ಪಡೆದು, ಅನಂತಚತುಷ್ಟಯ ಸ್ವರೂಪದಿಂ ಪರಿಣಮಿಸಲ್ಕೆ ಯೋಗ್ಯರಾದ ಜೀವಂಗಳು ಭವ್ಯರು ॥೧॥ ಎಂದುಂ ಸಮ್ಯಕ್ತ್ವಾದಿಸಾಮಗ್ರಿಯಂ ಪಡೆಯದೆ, ಮುಕ್ತಿಯನ್ನು ಹೊಂದದ ಜೀವಂಗಳು ಅಭವ್ಯರು ॥ ೨ ॥ ಸ್ಥಾವರಕಾಯಂ ಮೊದಲ್ಗೊಂಡು ಅಯೋಗಿ ಕೇವಲಿಪರ್ಯಂತಂ ಹದಿನಾಲ್ಕು ಗುಣಸ್ಥಾನಂಗಳೊಳು ಭವ್ಯರಕ್ಕುಂ. ಮಿಥ್ಯಾದೃಷ್ಟಿ ಗುಣಸ್ಥಾನವೊಂದೇ ಅಭವ್ಯರಿಗಾಗುವದು. ಸಿದ್ಧರ್ಗೆ ಭವ್ಯಾಭವ್ಯವಿಕಲ್ಪಗಳಿಲ್ಲ.

---

## ಸೂತ್ರಂ ॥ ಷಡ್ವಿಧಾ ಸಮ್ಯಕ್ತ್ವಮಾರ್ಗಣಾ ॥ ೪೩ ॥

ಟೀ:—ಉಪಶಮ, ವೇದಕ, ಕ್ಷಾಯಿಕಮೆಂದು ಮೂರುತೆರವು ॥೩॥ ಮಿಥ್ಯಾತ್ವ, ಸಾಸಾದನ, ಮಿಶ್ರ ಎಂಬೀ ಮೂರುಂ, ಪ್ರತಿಪಕ್ಷಂ ಗೂಡಿ ಸಮ್ಯಕ್ತ್ವಮಾರ್ಗಣೆ ಆರುಭೇದಮಕ್ಕುಂ ॥೬॥ ಅವುಗಳೊಳು ಉಪಶಮಿಕಂ ಕ್ಷಣದಿಂದವೊಂದೇ ಸಮಯ ವಿಕಲ್ಪಮುತ್ಪತ್ತಿಯತ್ತಣಿಂ

ಪ್ರಥಮೋಪಶಮ, ದ್ವಿತಿಯೋಪಶಮ ಭೇದದಿಂದೆರಡುತೆರವು. ಅದರಲ್ಲಿ ಮಿಥ್ಯಾದೃಷ್ಟಿಗೆ ಹುಟ್ಟು ವದು ಪ್ರಥಮೋಪಶಮಮಂ, ವೇದಕ ಸಮ್ಯಗ್ದೃಷ್ಟಿಗೆ ಹುಟ್ಟುವದು ದ್ವಿತೀಯೋಪಶಮಮಂ, ಮತ್ತ ಮಾಸಮ್ಯಕ್ತ್ವಮೆಂತು ಪುಟ್ಟುಮಿಂತೆಂನಡೆ—ಮಿಥ್ಯಾದೃಷ್ಟಿಯುಂ, ಭವ್ಯನುಂ, ಸಂಜ್ಞಿಯುಂ, ಪರ್ಯಾಪ್ತನುಂ, ಗರ್ಭಜನುಮಪ್ಪಜೀವಂ ಲಬ್ಧಿಚತುಷ್ಟಯಂ ಮೊದಲಾಗೊಡೆಯ ಪಲವುಂ ಸಾಮಗ್ರಿಗಳನೆಯ್ದಿದಿಂ ಬಳಿಕ, ತ್ರಿಕರಣ ಲಬ್ಧಿಯಂ ಪಡೆದು, ಪ್ರಥಮೋಪಶಮ ಸಮ್ಯಕ್ತ್ವಮಂ ಕೈಕೊಳ್ಗುಂ. ಅದನ್ನೇ ಮೇಣಣುವ್ರತದೊಳ್ಕೂಡಿ ಮೇಣ್ ಮಹಾವ್ರತದೊಳುಕೂಡಿ ಕೈಕೊ ಳ್ವರು. ಭೋಗಭೂಮಿಜದೇವನಾರಕರು ಸಮ್ಯಕ್ತ್ವಮನ್ನೊಂದನ್ನೇ ಕೈಕೊಳ್ವರು, ತಿರ್ಯಂ ಚರಾ ಸಮ್ಯಕ್ತ್ವಮಂ ಕೈಕೊಳ್ವರು. ಕರ್ಮಭೂಮಿಯ ಮನುಷ್ಯರು ಅಂಥಾಸಮಕ್ತ್ವಕ್ಕೆ ಕಡ ಡಿದ ಪರಿಣಾಮಮಿಲ್ಲಪ್ಪುದರಿಂ, ಕ್ಷಾಯಿಕದಂಡಮೇ ತನ್ನ ಕಾಲದೊಳಗೆ ಜನನ ಮರಣಂ ಮೊದಲಾದಗೊಡೆಯವಿಲ್ಲ. ಅದಕ್ಕೆ ಸ್ಥಿತಿಯನ್ತರ್ಮುಹೂರ್ತಂ, ಮತ್ತಮಾ ಸಮ್ಯಕ್ತ್ವದ ಕಾಲದೊಳೆಲ್ಲಿಯಾನುಂ, ಅನನ್ತಾನುಬಂಧಿಗಳೊಳಾವುದಾನುಮೊಂದು ಕಷಾಯಮುದಯಿಸ ಲೊಡಂ, ಸಮ್ಯಕ್ತ್ವಮೆಂಬ ಗಿರಿಶಿಖರದಿಂ ಸ್ಖಲಿತನಾಗಿ, ಮಿಥ್ಯಾತ್ವಮೆಂಬ ಭೂಮಿಗಭಿಮುಖ ನಾಗಿ, ಬೀಳುತ್ತಿರ್ದಾತನಂತರಾಲವರ್ತಿ ಸಾಸಾದನ ಸಮ್ಯಗ್‌ದೃಷ್ಟಿಯೆಂಬವನಕ್ಕುಂ. ಆತನ ಕಾಲಂ ಜಘನ್ಯದಿನ್ನೊಂದು ಸಮಯಂ, ಉತ್ಕೃಷ್ಟದಿಂ ಆರಾವಲಿಕಾಲಮಕ್ಕುಂ. ಜಂತ್ರ ದೊಳು ಪೊಯ್ದ ಪಾರಕಿನಂತೆ ತನ್ನಕಾಲದ ತದನಂತರದೊಳು ದರ್ಶನಮೋಹನೀಯದೊಳಾ ವುದಾನುಮೊಂದುದಯಕ್ಕೆ ಬರುವದು. ಮಿಥ್ಯಾತ್ವಕ್ಕೆ ಸಂದಡೆ, ಅವರೊಳು ಜಘನ್ಯದಿಂದಂತ ರ್ಮುಹೂರ್ತಮಿರ್ದು ಗುಣಾಂತರಕ್ಕೆ ಸಲ್ಗುಂ. ಉತ್ಕೃಷ್ಟದಿನಿರ್ದ ಪುದ್ಗಲಪರಾವರ್ತನಕಾಲಂ ಸಂಸಾರ ಸಮುದ್ರದೊಳು ತೊಳಲ್ಗುಂ. ದುರ್ಗತಿಗಮನಕ್ಕೆ ಮಿಥ್ಯಾತ್ವಮೊಂದೇ ಮುಖ್ಯಕಾರ ಣವು. ಮತ್ತಂ ಸಮ್ಯಗ್ಮಿಥ್ಯಾತ್ವಕ್ಕೆ ಸಂದಡೆ, ಅವರೊಳಿಪ್ಪ ಕಾಲಮನ್ತರ್ಮುಹೂರ್ತಮೇ, ತನ್ನ ಕಾಲದ ತದನಂತರದೊಳು ಮಿಥ್ಯಾದೃಷ್ಟಿಯಕ್ಕುಂ ಅಸಂಯತನಕ್ಕುಂ. ಸಮ್ಯಗ್ಮಿಥ್ಯಾತ್ವಂ, ಮಿಶ್ರಶ್ರದ್ಧಾನಮಪ್ಪ ಕ್ಷಯೋಪಶಮಿಕ ಗುಣಮಕ್ಕುಂ. ಆ ಗುಣಮನೊಡೆಯವರ್ಗೆ ತದ್ಭವ ಮರಣ ಮೊದಲಾಗೊಡೆಯವಿಲ್ಲ. ಮತ್ತಂ ಸಮ್ಯಕ್ತ್ವ ದ್ರವ್ಯಮುದಯಮಾದುದಾದಡೆ, ತತ್ಪ್ರಕೃ ತಿಯುದಯದಲ್ಲು ಕೂಡಿದಾತಂಗೆ ಚಲನಮುಂ, ಮಲಿನಮುಂ, ಅವಗಾಢಮುಮಪ್ಪ ವೇದಕ ಸಮ್ಯಕ್ತ್ವಂ ಪುಟ್ಟುಗುಂ. ಕ್ಷಯೋಪಶಮಜ ಗುಣಗಣಮಾಗುಣದೊಳು ಜಘನ್ಯದಿಂದ ಅನ್ತ ರ್ಮುಹೂರ್ತಮಿದ್ದು ಗುಣಾಂತರಕ್ಕೆ ಸಲ್ಗುಂ. ಉತ್ಕೃಷ್ಟದಿಂ ಸುದೇವತ್ವದೊಳು ಸುಮಾನುಷ್ಯ ರೊಳು ಅಭ್ಯುದಯ ಸುಖಪರಂಪರೆಯ ನೆಯ್ದುತ್ತಂ ಅರುವತ್ತಾರು ಸಾಗರೋಪಮ ಕಾಲಮಿ ಕ್ಕುಮೆಂತೆನೆ—

ಲಾಂತವಕಲ್ಪದೊಳು ಹದಿಮೂರು, ಅಚ್ಯುತಕಲ್ಪದೊಳು ಇಪ್ಪತ್ತೆರಡು, ಉಪರಿಮ ಗ್ರೈವೇಯಕದಲ್ಲಿ ಮೂವತ್ತೊಂದು ಸಾಗರೋಪಮಂಗಳು, ತಂತಮ್ಮಾಯುಷ್ಯಂಗಳು, ಹೀನಂ ಗಳಾಗುವವು. ಮತ್ತಮಾವೇದಕ ಸಮ್ಯಗ್ದೃಷ್ಟಿಯು ಉಪಶಮ ಶ್ರೇಣಿಯನ್ನೇರಲು ಬಗೆದನಾ ದೊಡೆ, ಮುನ್ನಂ ಕರಣತ್ರಯಂಗಳಂ ವಿಸಂಯೋಜಿಸುತ್ತಂ, ಮತ್ತಂ ತ್ರಿಕರಣಂಗೆಯ್ದು ದರ್ಶ ನಮೋಹನೀಯ ತ್ರಿಕಮನುಪಶಮಿಸಿ, ದ್ವಿತಿಯೋಪಶಮಿಕನಾಗಿ ತತ್ಸಮ್ಯಕ್ತ್ವ ಸಹಿತಮುಪಶಮ

ಶ್ರೇಣ್ಯಾರೋಹಣಂಗೆಯ್ದು ಮಿಳಿದೊಡೆ ಆ ಸಮ್ಯಕ್ತ್ವಂ ಬೆರಸಿಯಿಳಿಗುಮಲ್ಲಿಯಾನುಂ ಆಯು ಷ್ಯಮಿಲ್ಲದಿರ್ದೊಡೆ ಸತ್ತು ಲೇಶ್ಯಾವಶದಿಂ ಪುಟ್ಟುಗುಂ. ಪರಿಹಾರಾಹಾರ ಋದ್ಧಿಗಳುಂ, ಮನಃಪ ರ್ಯಯಜ್ಞಾನಮುಂ, ಪ್ರಥಮೋಪಶಮಕ್ಕಿಲ್ಲ, ದ್ವಿತಿಯೋಪಶಮಕ್ಕೆ ಸಂಭವಮುಂಟು. ಮತ್ತಂ ದರ್ಶನಮೋಹನಿಯ ಕ್ಷಪಣ ಪ್ರಾರಂಭ ಕುರು ಕರ್ಮಭೂಮಿಯ ಮನುಷ್ಯರಪ್ಪಸಂಯತಾದಿ ಚತುರ್ಗುಣಸ್ಥಾನದವರು, ತೀರ್ಥಕರ ಪಾದಮೂಲದೊಳು ಮೇಣ್ ಕೇವಲಿಗಳ ಪಾದಮೂಲ ದೊಳು, ಮೇಣ್ ಶ್ರುತಕೇವಲಿಗಳ ಪಾದಮೂಲದೊಳಿರ್ದು ಆ ನಾಲ್ವರುಂ ದರ್ಶನಮೋಹ ನೀಯ ತ್ರಿಕಮುಂ ಕ್ಷಪಿಯಿಸುವರೆಂತೆಂದೊಡೆ—

ನಿರ್ವಾಣಯೋಗ್ಯಮಪ್ಪ ಕ್ಷೇತ್ರಮುಂ, ಕಾಲಮುಂ, ಭವಮುಂ, ವಯಸಮುಮೆಂದಿಂತೆ ರಡರೊಳು, ಶುಭಲೇಶ್ಯೆಗಳ ವೃದ್ಧಿಯುಂ, ಕಷಾಯಂಗಳ ಹಾನಿಯುಂ, ಎಂದಿವಂ ತಾಳ್ದಿದಾತಂ ಮುನ್ನಂ ತ್ರಿಕರಣಂಗಳಿಂದನಂತಾನುಬಂಧಿಗಳ ಪರಪ್ರಕೃತಿ ಸ್ವರೂಪಮಂ ಮಾಡಿ, ಮತ್ತಂ ತ್ರಿಕರಣಂಗೆಯ್ದು, ಮಿಥ್ಯಾತ್ವಕರ್ಮಮಂ ನಿರ್ಮೂಲಂ ಮಾಡಿ, ಸಮ್ಯಗ್ಮಿಥ್ಯಾತ್ವಮಂ ತದನ ನ್ತರಂ ಕೆಡಿಸಿ, ಬಳಿಕಂ ಸಮ್ಯಕ್ತ್ವ ಪ್ರಕೃತಿಯುಮಂ ನಿಶ್ಶೇಷಮಾಗಿ ಕ್ಷಪಿಯಿಸಿ, ಕ್ಷಾಯಿಕ ಸಮ್ಯಗ್‌ದೃಷ್ಟಿಯಕ್ಕುಂ. ಆ ಸಮ್ಯಕ್ತ್ವಂ ಅಸಂಯತ ಸಮ್ಯಗ್ದೃಷ್ಟಿಯಿಂ ತೊಟ್ಟು, ಸಿದ್ಧರ್ವರ ಗಮಕ್ಕುಂ. ಉಪಶಮ ಸಂಮ್ಯಕ್ತ್ವಮುಮಸಂಯತನಿಂ ತೊಟ್ಟು, ಉಪಶಾಂತಕಷಾಯಂ ಬರೆ ಗಮಕ್ಕುಂ. ವೇದಕಮುಂ ಪ್ರಥಮೋಪಶಮ ಸಮ್ಯಕ್ತ್ವಮುಂ ಅಸಂಯತಾದಿ ಚತುರ್ಗುಣಸ್ಥಾನ ದೊಳತ್ತಲಿಲ್ಲ. ಮಿಥ್ಯಾತ್ವಮುಂ, ಸಮ್ಯಗ್ಮಿಥ್ಯಾತ್ವಮುಂ, ಸಾಸಾಧನ ಸಮ್ಯಕ್ತ್ವಮುಂ, ತಂತಮ್ಮ ಗುಣಸ್ಥಾನದೊಳೇಯಕ್ಕುಂ. ಆ ಕ್ಷಾಯಿಕ ಸಮ್ಯಗ್ದೃಷ್ಟಿಗಳುಮಾಭವದೊಳು, ಮೇಣ್ ಮೂ ರುಭವದೊಳು, ಮೇಣ್ ನಾಲ್ಕುಭವದಿಂ ಮೇಲೆ ಸಂಸಾರದೊಳಿರರು. ಅದಕ್ಕೆ ಸಂಸಾರಿಯಂ ಕುರಿತು ಜಘನ್ಯದಿಂದಂತರ್ಮುಹೂರ್ತಂ, ಉತ್ಕೃಷ್ಟದಿಂದನ್ತರ್ಮುಹೂರ್ತಾದಿ ಕಾಷ್ಠಾವ ರ್ಷದಿಂ ಕುಂದಿದೆರಡು ಪೂರ್ವಕೋಟಿಯಿನ್ನಧಿಕಮಾಗುಳ್ಳ ಮೂವತ್ಮೂರು ಸಾಗರೋಪಮ ಮಕ್ಕುಂ, ಸಿದ್ಧಗೆ ಕಡೆಯಿಲ್ಲ. ( ವೇದಕೋಪಶಮ ಸಮ್ಯಕ್ತ್ವದಿಂ ಬಳಿಬಳಿಚಿದರಾದಡೆ ಅರ್ಧಪುದ್ಗಲ ಪರಾವರ್ತನಕಾಲಮಿರ್ಪ್ಪರು. )

ಗಾಹೆ॥ ದೇವೇಸುದೇವ ಮಣುವೆ ಸುರಣರ ತಿರಿಯೆ ಚದುಗ್ಗದಿ।
ಸುಂಪಿಕದ ಕರಣಿಜ್ಜುಪ್ಪತ್ತಿಕಮಸೋ ಅಂತಮುಹುತ್ತೇಣ ॥ ೩೧ ॥

ದರ್ಶನಮೋಹನೀಯ ಕ್ಷಪಣೆಯಂ ಪೇಳ್ವಲ್ಲಿ ಮೂರು ಪ್ರಕೃತಿಗಳು ಕ್ಷಪಿಯಿಸೆ, ಸಮ್ಯ ಕ್ತ್ವಪ್ರಕೃತಿಯೆಲ್ಲಮಂ ಕ್ಷಪಿಯಿಸಿ, ಒಂದಂತರ್ಮುಹೂರ್ತವಿರ್ದಲ್ಲಿ, ದೇವಗತಿಯೊಳ್ಪುಟ್ಟ ಲಕ್ಕುಂ ಎರಡಂತರ್ಮುಹೂರ್ತಕಾಲಮಿರ್ದಲ್ಲಿ, ದೇವಮನುಷ್ಯಗತಿಯಲ್ಲಿ ಪುಟ್ಟಲಕ್ಕುಂ ಮೂರಂತರ್ಮುಹೂರ್ತಮಿರ್ದಲ್ಲಿ, ಸುರನರ ತಿರಿಯಗ್ಗತಿಯೊಳ್ಪುಟ್ಟಲಕ್ಕುಂ. ನಾಲ್ಕಂತ ರ್ಮುಹೂರ್ತಮಿರ್ದಲ್ಲಿ, ಚತುರ್ಗತಿಯೊಳು ಕ್ರಮದಿಂ ಪುಟ್ಟಲಕ್ಕುಂ ವೇದಕೋಪಶಮಸಮ್ಯ ಕ್ತ್ವದಿಂ ಬರ್ಚಿದರಾದಡೆ, ಅರ್ಧಪುದ್ಗಲ ಪರಾವರ್ತನಕಾಲಮಿರ್ಪರು.

———

## ಸೂತ್ರಂ ॥ ದ್ವಿವಿಧಂ ಸಂಜ್ಞಿತ್ವಂ ॥ ೪೪ ॥

ತಾ:—ಸಂಜ್ಞಿಯುಂ, ಅಸಂಜ್ಞಿಯುಮೆಂದಿತ್ತೆರಂ. ಅದೆಂತೆಂದೊಡೆ—ಅಂಗೋಪಾಂಗ ದುದಯದೊಳಾದ ವಿಕಸಿತಮಪ್ಪಷ್ಟದಳ ಪದ್ಮಾಕಾರಮಂ ಪೋಲ್ವ ದ್ರವ್ಯಮನದೊಳು ಕ್ಷಯೋಪಶಮಮುಂ, ಅರಿತಮುಂ ಮನೋ ಇಂದ್ರಿಯಮೆಂಬುದದನೊಡೆಯಾತಂ ತಕ್ಕುದುತಗದೆಂಬುದುಮಂ, ಪುಸಿನನ್ನಿಯೆಂಬುದುಮಂ ಮುನ್ನಮಾರ್ಯೆಯುದ್ದಿ ಶಿಕ್ಷಿಸಿದುದಂ ಕೈಕೊಳ್ಗುಂ, ಪೆಸರೊಳ್ಕರೆದೊಡೆ ಬಕ್ಕುಮದು ಸಮಸ್ತಮಿನಿತರಿಂದಗಲ್ದುದೇ ಅಮನಸ್ಕವು. ಇಂದ್ರಿಯದಾವರಣಂ ಕ್ಷಯೋಪಶಮಮುಂ, ತದರ್ಥಬೋಧಂ ನಿಜಮಿಂತೀ ಎರಡುಂ ಹಿತಾಹಿತವಿಧಿನಿಶೇಷಾತ್ಮಿಕೆಯು ಶಿಕ್ಷೆ ಎಂಬುದದು ಮನುಷ್ಯಾದಿಗಳ್ಗಕ್ಕುಂ, ಕರಚರಣ ಚಲನಾದಿಗಳಂ ಕ್ರಿಯೆ ಎಂಬುದು, ಅದು ವೃಷಭಾದಿಗಳಕ್ಕುಂ. ಚರ್ಮಪುತ್ರಿಕಾದಿಗಳಿಂ ವಿದವಿದಾನಾದಿಗಳನುಪದೇಶಮೆಂಬುದದನುಳ್ಳುದು ಗಜಾದಿಗಳಕ್ಕುಂ. ಶೋಕಾದಿಗಳ ಪಾತಮಾಳಾಪಮನುಳ್ಳುದು ಚಾಷಾಕ್ಯಾದಿಗಿಣಿ ಮೊದಲಾದವು.

ಕಂದ॥ ನೋಯಿಂದ್ರಿಯದಾವರಣಂ ।  
ಕ್ಷಾಯೋಪಶಮಂ ತದರ್ಥಬೋಧಂ ನಿಜಮಿ- ॥  
ನ್ತೀಯೆರಡುಂ ಸನ್ನಿಗೆಮ- ।  
ತ್ತಾಯೆರಡುಂ ಪೊರಗು ಸನ್ನಿಗರ್ಹನಮತದಿಂ ॥ ೧೩ ॥

ತಾ:—ಏಕೇಂದ್ರಿಯದಿಂ ತೊಟ್ಟು, ಅಸಂಜ್ಞಿಪಂಚೇಂದ್ರಿಯಂಬರಂ, ಅಸಂಜ್ಞಿಗಳು. ಸಂಜ್ಞಿ ಮಿಥ್ಯಾದೃಷ್ಟಿಯಿಂ ತೊಟ್ಟು, ಕ್ಷೀಣಕಷಾಯಂಬರಂ ಸಂಜ್ಞಿಗಳು. ಸಯೋಗಿಕೇವಲಿಗಳುಂ, ಸಮನಸ್ಕರುಂ. ಅಮನಸ್ಕರುಮಲ್ಲರು.

---

## ಸೂತ್ರಂ ॥ ಆಹಾರೋಪಯೋಗಶ್ಚೇತಿ ॥ ೪೫ ॥

ತಾ:—ಇತ್ತೆರದಾಹಾರಮುಂ, ಇತ್ತೆರದುಪಯೋಗಮುಮೆಂತೆನೆ—

ಕಂದ॥ ಬಹುಭೇದ ಮನೋವಾಗ್ವಿ- ।  
ಗ್ರಹತ್ರಯಕ್ಕುಚಿತಮಪ್ಪ ಪುದ್ಗಲ ಪಿಂಡಂ ॥  
ಗ್ರಹಣಮನಾಗಮನಿಪುಣ ।  
ರ್ಬಹುನಯರಾಹಾರಮೆಂದದಂ ಪ್ರಕಟಸುವರ್ ॥ ೧೪ ॥

ತಾ:—ಔದಾರಿಕ, ವೈಕ್ರಿಯಕ, ಆಹಾರಕಮೆಂಬ ಮೂರುಂ ನೋಕರ್ಮಶರೀರ ಪ್ರಕೃತಿಬಂಧಂಗಳುಂ, ನೋಕರ್ಮವರ್ಗಣಂಗಳುಂ, ತಂತಮ್ಮ ವಾಕ್ಕೃತಿಗೆ ಭಾಷಾವರ್ಗಣೆಗಳನಾತ್ಮಂ ಸಯೋಗ್ಯವಶದಿಂ, ಕಾದಕಬ್ಬಿಣದ ಗುಂಡಂ ನೀರೊಳಗಿಕ್ಕಿದನ್ತೆ ಸುತ್ತಲುಂ ಕರ್ಮಪುದ್ಗಲಮಂ ತೆಗೆವುದಾಹಾರಮೆಂಬುವದು. ಅನ್ತಪ್ಪಾಹಾರಂ ಮಿಥ್ಯಾದೃಷ್ಟಿಯಿಂ ತೊಟ್ಟು, ಸಯೋಗಿಕೇವಲಿಗಳವರಿಗೆ ಆಗುವದೆಂದರ್ಥವು. ಆಯರ್ಥಮಂ ವಿಪರೀತಂ ಮಾಡಿ ಕೆಲಂಬರಜ್ಞಾನಿಗಳು ಸರ್ವಜ್ಞಂಗೆ ಕಬಳಾಹಾರಮುಂಟೆಂದು ನುಡಿವರದು ಪುಸಿ.

ಗಾಹೆ ॥ ಣೋಕಮ್ಮಕಮ್ಮಹಾರೋಲೆಪ್ಪಾಹಾರೋಯಕಬಳಮಾಹಾರೋ ।
ಓಜಮಣೋವಿಯಕಮಸೋ ಆಹಾರೋಛವ್ವಿಹೋ ಣೇಯೋ ॥ ೩೨ ॥

ಣೋಕಮ್ಮಕಮ್ಮಹಾರೋ ಜೀವಾಣಂ ಹೋದಿ ಚವುಗಯಿಗಯಾಣಂ ।
ಕಬಳಹಾರೋ ಣರಪಸುರುಖ್ಖೇಸುಯಲೆಪ್ಪಾಹಾರೋ ॥ ೩೩ ॥

ಪಖ್ಖಿಣಓಜಾಹಾರೋ ಅಂಡಯಮಝ್ಝೇಸು ವಡ್ಢಮಾಣಾಣಂ ।
ದೇವೇಸುಮಣಾಹಾರೋ ಚವುವಿಸಾಣಿಗ್ಗಿದಿ ಕೇವಳಿಣೋ ॥ ೩೪ ॥

ಣೋಕಮ್ಮಕಮ್ಮಹಾರೋ ಉದಯಾರೇಣ ತಸ್ಸ ಆಯಾಮೇ।
ಭಣಿಯಾ ಣಹುಣಿಚ್ಛಯೇಣ ಸೋವಿಹುಲಿಯರಾವ್ವಾಪರೋಜಮ್ಹಾ ॥ ೩೫ ॥

ತಾ:—ಅಂತಪ್ಪ ಆಹಾರವಿಲ್ಲದವರಾರೆಂದೊಡೆ–ವಿಗ್ರಹಗತಿಯ ಜೀವಂಗಳುಂ ಸಮುದ್ಘಾತಕ್ಕೆ ಸಂದ ಕೇವಲಿಗಳುಂ, ಅಯೋಗಿಕೇವಲಿಗಳುಂ, ಸಿದ್ಧರುಂ, ಅನಾಹಾರಿಗಳು. ಮತ್ತೊಂದು ವಿಶೇಷಂ ಸತ್ತುಪುಟ್ಟಲು ಪೋಪಾಗಲಾಹಾರಿಗಳುಮನಾಹಾರಿಗಳುಮೊಳರೆಂದೊಡೆ, ಋಜುಗತಿಯೊಳು ಸಲುವರಾಹಾರಿಗಳು, ವಕ್ರಗತಿಯೊಳು ಸಲುವ ಜೀವಂಗಳನಾಹಾರಿಗಳು.

ಕಂದ ॥ ಋಜುಗತಿಕೊಂಕದೆ ಸಲ್ವುದು ।
ಋಜುಗತಿಯೊಂದೆರಡು ಮೂರು ಕೊಂಕುಳ್ಳದು ತಾಂ ॥
ಋಜುವಿನೊಳಾಹಾರಿಗಳುಂ ।
ಋಜುವಿನೊಳಾಹಾರಿಯಲ್ತು ಮತ್ತಾಜೀವಂ ॥ ೧೫ ॥

ತಾ:—ಆಹಾರಕಾಲಮುತ್ಕೃಷ್ಟದಿಂ ಸೂಚ್ಯಂಗಳುಗಳಾಸಂಖ್ಯೆಯಭಾಗಮಕ್ಕುಂ. ಅದೆಂತೆನೆ—ಸಂಖ್ಯಾತವಿಕಲ್ಪಂಗಳ ಪ್ರಮಾಣಮಕ್ಕುಂ. ಉತ್ಸರ್ಪಿಣಿಯವಸರ್ಪಿಣಿಯುಮಂ ಕೂಡಿದೊಡೆ ಕಲ್ಪಮೆಂಬುದಕ್ಕುಂ. ಕಾರ್ಮಣಕಾಯಯೋಗದೊಳನಾಹಾರಮಕ್ಕುಂ. ಅನಾಹಾರಕಾಲಮೊಂದೆರಡು ಮೂರುಂ ಸಮಯಂಗಳಕ್ಕುಂ. ಇಂತೀ ಮಾರ್ಗಣೆಗಳೊಳಗೆ ಸಿದ್ಧರ್ಗೆ ಸಿದ್ಧಗತಿಯಕ್ಕುಂ. ಕೇವಲಜ್ಞಾನಮುಂ, ಕೇವಲ ದರ್ಶನಮುಂ, ಕ್ಷಾಯಿಕಸಮ್ಯಕ್ತ್ವಮುಂ, ಅನಾಹಾರಕಮುಂ, ಮಾರ್ಗಣಾವಯವಂಗಳಕ್ಕುಂ. ಇಂತೀ ಗುಣಸ್ಥಾನಮಾರ್ಗಣಸ್ಥಾನಂಗಳಿಂ ಜೀವತ್ವಂ ಸೂಚಿಸಲ್ಪಟ್ಟತು.

ಗಾಹೆ ॥ ಸಿದ್ಧಾಣಂ ಸಿದ್ಧಗಯಿಕೇವಳಣಾಣಂಚ ದಂಸಣಂ ಖಯಿಯಂ ।
ಸಂಮತ್ತಮಣಾಹಾರಂ ಉಪಜೋಗಾಣಂ ಕಮುಪ್ಪಉತ್ತಿ ॥ ೩೬ ॥

---

## ಸೂತ್ರಂ ॥ ಉಪಯೋಗಶ್ಚೇತಿ ॥ ೪೭ ॥

ಗಾಹೆ ॥ ಉವಓಗೋ ದುವಿಯಪ್ಪೋ ದಂಸಣಣಾಣಂ ಚ ದಂಸಣಂ ಚದುಧಾ ।
ಚಖ್ಖು ಅಚಖ್ಖು ಓಹೀ ದಂಸಣಮಥ ಕೇವಲಂ ಣೇಯಂ ॥ ೩೭ ॥

ತಾ:—"ಉವಓಗೋ ದುವಿಯಪ್ಪೋ" ಉಪಯೋಗೋ ದ್ವಿವಿಕಲ್ಪ:, "ದಂಸಣಣಾಣಂಚ" ನಿರ್ವಿಕಲ್ಪಕಂ ದರ್ಶನಂ ಸವಿಕಲ್ಪಕಂ ಜ್ಞಾನಂ, ಜ್ಞಾನೋಪಯೋಗಮುಂ, ದರ್ಶನೋಪಯೋಗಮೆಂದು ಉಪಯೋಗವು ಎರಡು ವಿಧವು.

ಚ ಪುನಃ " ದಂಸಣಂ ಚದುಧಾ " ದರ್ಶನಂ ಚತುರ್ಧಾಭವತಿ, " ಚಕ್ಖು ಅಚಕ್ಖು ಓಹೀ ದಂಸಣಮಥಕೇವಲಂ ಣೇಯಂ " ಚಕ್ಷುರ್ದರ್ಶನಮಚಕ್ಷುರ್ದರ್ಶನಮವಧಿದರ್ಶನಮಥ ಅಥೋ ಕೇವಲದರ್ಶನಮಿತಿ ವಿಜ್ಞೇಯಮ್.

ಗಾಹೆ ॥ ಣಾಣಂ ಅಟ್ಠವಿಯಪ್ಪಂ ಮದಿಸುದಿಓಹೀ ಅಣಾಣಣಾಣಾಣಿ ।
ಮಣಪಜ್ಜವಕೇವಲಮವಿ ಪಚ್ಚಕ್ಖ ಪರೋಕ್ಖಭೇಯಂ ಚ ॥ ೩೪ ॥

ಟೀ:—" ಣಾಣಂ ಅಟ್ಠವಿಯಪ್ಪಂ " ಜ್ಞಾನಮಷ್ಟವಿಕಲ್ಪಂ ಭವತಿ, " ಮದಿಸುದಿ ಓಹೀ ಅಣಾಣಣಾಣಾಣಿ" ಅತ್ರಾಷ್ಟ ವಿಕಲ್ಪಮಧ್ಯೇ, ಮತಿಶ್ರುತಾವಧಯೋ ಮಿಥ್ಯಾತ್ವೋದಯವಶಾದ್ವಿಪರೀತಾಭಿನಿವೇಶರೂಪಾಣ್ಯಜ್ಞಾನಾನಿ ಭವಂತಿ. ತಾನ್ಯೇವಶುದ್ಧಾತ್ಮಾದಿತತ್ವವಿಷಯೇ, ವಿಪರೀತಾಭಿನಿವೇಶರಹಿತತ್ವೇನ, ಸಮ್ಯಗ್ದೃಷ್ಟಿಜೀವಸ್ಯ ಸಮ್ಯಗ್ಜ್ಞಾನಾನಿ ಭವಂತಿ.

" ಮಣಪಜ್ಜವಕೇವಲಮವಿ " ಮನಃಪರ್ಯಯಜ್ಞಾನಂ ಕೇವಲಜ್ಞಾನಮಪ್ಯೇವಮಷ್ಟವಿಧಂ ಜ್ಞಾನೋಪಯೋಗಂ ಭವತಿ.

" ಪಚ್ಚಕ್ಖ ಪರೋಕ್ಖ ಭೇಯಂ ಚ " ಪ್ರತ್ಯಕ್ಷಪರೋಕ್ಷಭೇದಂಚ ಅವಧಿಮನಃಪರ್ಯಯದ್ವಯಮೇಕದೇಶಪ್ರತ್ಯಕ್ಷಂ, ವಿಭಂಗಾವಧಿರಪಿ ದೇಶಪ್ರತ್ಯಕ್ಷಂ, ಕೇವಲಜ್ಞಾನಂ ಸಕಲಪ್ರತ್ಯಕ್ಷಂ ಶೇಷಚತುಷ್ಟಯಂ ಪರೋಕ್ಷಮಿತಿ.

ಅಲ್ಲಿ ದರ್ಶನೋಪಯೋಗಂ ನಾಲ್ಕುತೆರಂ, ಜ್ಞಾನೋಪಯೋಗಮೆಂಟುತೆರಂ, ಇಂತು ಉಪಯೋಗವು ದ್ವಾದಶಭೇದವು ॥ ೧೨ ॥ ಮೊದಲೆರಡು ಗುಣಸ್ಥಾನದೊಳು ಕುಮತಿ, ಕುಶ್ರುತ, ವಿಭಂಗಮೆಂಬೀ ತ್ರಯಮುಂ. ಚಕ್ಷುರಚಕ್ಷುರ್ದರ್ಶನವೆಂಬೀ ಪಂಚೋಪಯೋಗಮಕ್ಕುಂ ॥ ೫ ॥ ಮಿಶ್ರನಲ್ಲಿ ಸಮ್ಯಗ್ಮಿಥ್ಯಾತ್ವರೂಪಂಗಳಾದ ಮಿಶ್ರೋಪಯೋಗಂಗಳಾಗುವವು. ಅಸಂಯತ, ದೇಶವ್ರತಿದ್ವಯದೊಳು, ಮತಿಶ್ರುತಾವಧಿಜ್ಞಾನತ್ರಯಮುಂ, ಚಕ್ಷುರಚಕ್ಷುರವಧಿದರ್ಶನತ್ರಯಮುಮೆಂಬೀ ಆರು ಉಪಯೋಗಂಗಳಾಗುವವು. ಪ್ರಮತ್ತನಾದಿಯಾಗಿ ಕ್ಷೀಣಕಷಾಯಪರ್ಯಂತವಿರುವ ಗುಣಸ್ಥಾನಗಳಲ್ಲಿ, ಮೇಲೆ ಹೇಳಿದ ಆರುಂ, ಮನಃಪರ್ಯಾಯವುಂ ಕೂಡಿ ಏಳು ಉಪಯೋಗಗಳಾಗುವವು. ಜಿನಸಿದ್ಧರುಗಳಲ್ಲಿ ಕೇವಲಜ್ಞಾನೋಪಯೋಗವುಂ, ಕೇವಲದರ್ಶನ ಉಪಯೋಗವುಂ, ಎಂಬೀ ಎರಡು ಉಪಯೋಗಗಳುಂಟಾಗುವವು.

ಗಾಹೆ ॥ ಗುಣಜೀವಾಪಜ್ಜತ್ತಿಪಾಣಾಸಂಣಾಯಮಗ್ಗಣವೋಯಂ ।
ವಿವಜೋಗೋವಿಯಕಮಸೋ ವಿಸಂತುಪರೂವಣಾ ಭಣಿಯಂ ॥ ೩೯ ॥

ಇಂತು ಜೀವದ್ರವ್ಯವು ಹೇಳಲ್ಪಟ್ಟಿತು. ಈ ಮಾರ್ಗಣಸ್ಥಾನೋಪಯೋಗಂಗಳೊಳಗೆ ಸಿದ್ಧಗತಿಯುಂ, ಕೇವಲಜ್ಞಾನಮುಂ, ಕೇವಲದರ್ಶನಮುಂ, ಕ್ಷಾಯಿಕಸಮ್ಯಕ್ತ್ವವುಂ, ಅನಾಹಾರಕದ್ವಯಮುಂ, ಜಗತ್ರಯಕಾಲತ್ರಯವರ್ತಿ ಸಕಲ ಪದಾರ್ಥಯುಗಪದವಲೋಕನ, ಸಕಲವಿಮಲಕೇವಲಜ್ಞಾನ ಕೇವಲದರ್ಶನೋಪಯೋಗವೆಂಬಿವುಗಳು ಸಾಕ್ಷಾದುಪಾದೇಯವೆಂದು ತಾತ್ಪರ್ಯವು.

---

ಸೂತ್ರಂ॥ ಪುದ್ಗಲಾಕಾಶಕಾಲದ್ರವ್ಯಾಸ್ರವಕ್ಷಪ್ರತ್ಯೇಕಂದ್ವಿವಿಧಾಃ ॥೪೭॥

ತಾ:—ಪರಮಾಣುಸ್ಕಂಧ ಭೇದಗಳಿಂದ ಪುದ್ಗಲವೆರಡುವಿಧವು ಹ್ಯಾಗೆಂದರೆ—ಸೂಕ್ಷ್ಮವುಂ, ಜಲಾನಲಾದಿಗಳಿನವಿನಾಶಿಯುಂ, ಅವಿಭಾಗಿಯುಂ ವರ್ಣಚತುಷ್ಟಯದಿಂ, ಪೂರಣಗಲನ ಸ್ವಭಾವವುಂ, ಏಕೈಕ ವರ್ಣಗಂಧರಸಸ್ಪರ್ಶನದ್ವಯಾನ್ವಿತಮುಮಪ್ಪುದು ಪರಮಾಣುಯೆಂಬುದಕ್ಕುಂ.

ಗಾಹೆ ॥ ಏಯರಸವಂಣಗಂಧಾಕೋಪಾಸಾಸಂಡಕಾರಣಮಸಂಡಂ ।
ಖಂಡಂತರಿದಂದವ್ವೇ ಪರಮಾಣುತ್ತಂ ವಿಯಾಣಾಹಿ ॥ ೪೦ ॥

ಸ್ಕಂಧಮೆಂತೆನೆ—ದ್ವ್ಯೆಣುಕಾದಿಸಂಖ್ಯಾತಾಸಂಖ್ಯಾತನಂತವಿಕಲ್ಪಮನುಳ್ಳುದು. ಆ ಪರಮಾಣುಮನಂತಗೊಂಡಡೊಂದು ಸಂಜ್ಞಾಸಂಜ್ಞೆ ಎಂಬುದಕ್ಕುಂ. ಅದನೆಂಟುಗೊಂಡಡೆ ಸಂಜ್ಞೆಯೆಂಬುದಕ್ಕುಂ, ಅದನೆಂಟುಗೊಂಡಡೆ ತ್ರುಟರೇಣು, ತ್ರುಟರೇಣುವೆಂಟರಿಂ ತ್ರಸರೇಣು, ತ್ರಸರೇಣುವೆಂಟರಿಂ ರಥರೇಣು, ಈ ಕ್ರಮದಿಂದಪ್ಟಾಪ್ಟಗುಣಿತಂ ಮಾಡುತ್ತಂ ಪೋಗೆ ಉತ್ತಮ, ಮಧ್ಯಮ, ಜಘನ್ಯ ಭೋಗಭೂಮಿಜರ, ಕರ್ಮಭೂಮಿಜರ, ವಾಲಾಗ್ರಮುಂ, ಲಿಕ್ಷೆಯುಂ, ಯೂಕೆಯುಂ, ಎವೆಯುಂ, ಅಂಗುಳಮಕ್ಕುಂ, ಆಯಂಗುಳಮಾತ್ಮಾಂಗುಳಮುತ್ಸೇದಾಂಗುಳ, ಪ್ರಮಾಣಾಂಗುಳವೆಂದು ತ್ರಿವಿಧಮಕ್ಕುಂ.

ಕಂದ ॥ ನರರಾವುದೊಂದುಕಾಲದ ।
ಕರಾಂಗುಳಂ ತಾನದಕ್ಕುಮಾತ್ಮಾಂಗುಳಮಾ ॥
ಬೆರಲಿಂ ಛತ್ರಸುಚಾಮರ ।
ಸುರಗೃಹ ಕಳಸಾಂಬರಾದಿಯುಂ ಪವಣಿಸುಗುಂ ॥ ೧೬ ॥

ತಾಃ—ಪ್ರಮಾಣವೃದ್ಧಿಯಿಂ ಬಂದ ಎವೆಯನೆಂಟುಗೊಂಡಡೆ, ಉತ್ಸೇದಾಂಗುಲ ಬಂದಾಗುವದು. ಅದರಿಂ ಚತುರ್ಗತಿಯ ಜೀವಂಗಳ ಶರೀರೋತ್ಸೇದಮುಂ, ಅಕೃತ್ರಿಮ ಚೈತಾಲಯಂಗಳುಮೆಂದಿವು ಮೊದಲಾಗೊಡೆಯವಂ ಪ್ರಮಾಣಿಸುವದು, ಉತ್ಸೇದಾಂಗುಲವು. ಅದನೈನೂರುಗೊಂಡಡೆ, ಬಂದು ಪ್ರಮಾಣಂಗುಲವು. ಭುವನತ್ರಯ, ದ್ವೀಪ, ಸಮುದ್ರ, ಪರ್ವತ, ನದಿ, ನದ ಹ್ರದವಿಮಾನ ಭವಾದಿಗಳ ಪ್ರಮಾಣಿಸುದಿಂತೀಯಂಗುಲಂಗಳನಾರುಗೊಂಡರೊಂದಡ್ಡಿ, ಎರಡಡ್ಡಿಯಿಗ್ಗೇಣು, ಎರಡುಗೇಣಿಂ ಮೊಳ, ಮೊಳನೆರಡರಿಂ ಕಿಷ್ಕು, ಕಿಷ್ಕು ದ್ವಯದಿಂ ದಂಡಂ, ದಂಡದ್ವಿಸಹಸ್ರದಿಂ ಕ್ರೋಶಂ, ಕ್ರೋಶಚತುಷ್ಕಂ ಯೋಜನಮೊಂದಕ್ಕುಂ.

ಮತ್ತಂ ಸ್ಕಂಧಂಗಳು, ಬಾದರ ಬಾದರಮುಂ, ಬಾದರಮುಂ, ಸೂಕ್ಷ್ಮಬಾದರಮುಂ, ಸೂಕ್ಷ್ಮಮುಂ, ಸೂಕ್ಷ್ಮಸೂಕ್ಷ್ಮಮುಮೆಂದಿವಕ್ಕುಂ. ಇವಕ್ಕೆ ಯಥಾ ಸಂಖ್ಯೆಯುಂ, ಸಂಖ್ಯೆಯುಂ, ಪೃಥ್ವಿಯುಂ, ಬಲಮುಂ, ಛಾಯೆಯುಂ, ಚತುರಿಂದ್ರಿಯ ವಿಷಯಮುಂ, ಕರ್ಮಪುದ್ಗಲಮುಂ, ಕರ್ಮಾತೀತಮುಮೆಂದು ಷಟ್ಪ್ರಕಾರಮಕ್ಕುಂ ॥೬॥ ಮುಂಪೇಳ್ದ ಪರಮಾಣುಗಳತಿ ಸೂಕ್ಷ್ಮಗಳಪ್ಪುದರಿಂ ಸರ್ವಾವಧಿಜ್ಞಾನಕ್ಕಂ, ಕೇವಲಜ್ಞಾನಕ್ಕಂ ವಿಷಯಮಲ್ಲದೆ, ಉಳಿದ ಜ್ಞಾನಂಗಳಿಗೆ ವಿಷಯಮಲ್ಲದು. ಅಂತಪ್ಪ ಪರಮಾಣುಗಳೊಳೊಂದರೊಳು ಸ್ನಿಗ್ಧ ರೂಕ್ಷತ್ವಗುಣದಿಂಪತ್ತಿದ್ವ್ಯಣುಕಾದಿ ಸ್ಕಂಧಗಳಕ್ಕುಂ, ಅದುತಾಂ ಕಾರಣ ಪರಮಾಣುವಕ್ಕುಂ, ಸ್ಕಂಧಂಗಳು

ಬಿರಿಬಿರಿದೊಂದೊಂದಂ ಪತ್ತುವಿಟ್ಟ ಪರಮಾಣುಗಳಪ್ಪುದದು ಕಾರ್ಯಪರಮಾಣುವೆಂಬು ದಕ್ಕುಂ. ಪಂಚವರ್ಣ, ಪಂಚರಸ, ದ್ವಿಗಂಧ, ಅಷ್ಟಸ್ಪರ್ಶವೆಂದಿವು ಪುದ್ಗಲದ್ರವ್ಯದ ವಿಭಾವ ಗುಣಂಗಳಕ್ಕುಂ. ಶಬ್ದ, ಬಂಧ, ಸೂಕ್ಷ್ಮ, ಸ್ಥೌಲ್ಯ, ಸಂಸ್ಥಾನ, ಭೇದ, ತಮ, ಛಾಯಾತಪೋ ದ್ಯೋತನೆಂದಿವು ಪುದ್ಗಲದ್ರವ್ಯದ ವಿಭಾವಪರ್ಯಾಯಂಗಳಕ್ಕುಂ.

ಆಕಾಶದ್ರವ್ಯವು ಹ್ಯಾಗೆಂದರೆ— ಲೋಕಾಕಾಶವುಂ, ಅಲೋಕಾಕಾಶಮೆಂದಾಕಾಶದ್ರವ್ಯ ವೆರಡು ಭೇದವು ॥೨॥ ಆದರಲ್ಲಿ ಲೋಕಾಕಾಶವು ಜೀವದ್ರವ್ಯಂಗಳಿಗೆ ಆಧಾರವಾಗುವದು ॥೧॥ ಜೀವಾದಿ ದ್ರವ್ಯಗಳಿಲ್ಲದಿರುವದು, ಮತ್ತು ಶುದ್ಧವಾಗಿರುವದು, ಅಲೋಕಾಕಾಶವು ॥ ೨ ॥

---

## ಕಾಲದ್ರವ್ಯವೆಂತೆನೆ—

ಪರಮಾರ್ಥಕಾಲಂ, ವ್ಯವಹಾರಕಾಲವೆಂದು ಎರಡು ವಿಧವು ॥೨॥ ಅದು ಹ್ಯಾಗೆಂದರೆ— ಪರಮಾರ್ಥಕಾಲವು ಆದಿಮಧ್ಯಾವಸಾನವಿರಹಿತವುಂ, ಅಮೂರ್ತವುಂ, ಅವಸ್ಥಿತವುಂ, ಅಗುರು ಲಘುಕವುಂ, ಸೂಕ್ಷ್ಮತ್ವವುಂ, ಜೀವಾದಿ ದ್ರವ್ಯಂಗಳಂ ತನಗಾವರ್ತನಾನಿಮಿತ್ತಮಪ್ಪುದದು ಲೋಕಾಕಾಶದೊಳೊಂದೊಂದು ಪ್ರದೇಶದೊಳು ಒಂದೊಂದು ಕಾಲಾಣುಗಳು ರತ್ನರಾಶಿಯಂತೆ ಇರುವವು. ಪ್ರದೇಶವೆಂಬುವದು ಪರಮಾಣುವಿರುವ ಕ್ಷೇತ್ರವು. ಕಾಲದ್ರವ್ಯಂ ಲೋಕಾಕಾಶ ಪ್ರದೇಶವೆಷ್ಟಿರುತ್ತದೋ ಅಷ್ಟೇ ಇರುವದು. ಆ ಪರಮಾರ್ಥಕಾಲವನ್ನಾಶ್ರಯಿಸಿ, ಸಮಯಾ ವಲಿಕೋಛ್ವಾಸ, ಸ್ತೋಕ, ಲವ, ಘಟಿಕಾ, ಮುಹೂರ್ತ, ದಿವಸ, ಪಕ್ಷ, ಮಾಸ, ಋತು, ಅಯನ, ಸಂವತ್ಸರಾದಿ ಭೇದದಿಂದ ವ್ಯವಹಾರಕಾಲವು ಪ್ರವರ್ತಿಸುವದು. ಆದರಲ್ಲಿ ಸೂಕ್ಷ್ಮ ವುಂ, ಜಲಾನಲಾದಿಗಳಿನ ವಿನಾಶಿಯುಂ ಅವಿಭಾಗೆಯುಂ, ಸರ್ವಾವಧಿಜ್ಞಾನ ಪ್ರತ್ಯಕ್ಷಗೋಚ ರವುಂ, ವರ್ಣಚತುಷ್ಟಯದಿಂ ಪೂರಣಗಲನ ಸ್ವಭಾವವುಂ, ಏಕೈಕರಸ, ಗಂಧ, ಸಹಿತವುಂ ಸ್ಪರ್ಶದ್ವಯಾನ್ವಿತವುಂ ಆಗಿರುವದು ಪರಮಾಣುವೆನ್ನುವದು. ಅಂಥಾಪರಮಾಣುವೇ ಲೋಕಾ ಕಾಶದೊಳರ್ಧಕಾಲಾಣುವಂ ಮಂದಗತಿಯಿಂದಾಂಟುವ ಹೊತ್ತಂ ಸಮಯವೆಂಬುದು, ಅಸಂ ಖ್ಯಾತ ಸಮಯದಿಂದಾವಲಿ, ಸಂಖ್ಯಾತ ಸಮಯಾವಲಿಗಳಿಂ ಒಂದು ಉಛ್ವಾಸಂ, ಏಳು ಉಛ್ವಾಸಗಳಿಂದ ಒಂದುಸ್ತೋಕವು, ಏಳುಸ್ತೋಕಗಳಿಗೆ ಒಂದುಲವಂ, ಮೂವತ್ತೆಂಟುವರೆ ಲವಗಳಿಗೆ ಒಂದುಘಳಿಗೆ, ಎರಡುಘಳಿಗೆಗೆ ಒಂದು ಮುಹೂರ್ತಂ, ಮೂವತ್ತು ಮುಹೂರ್ತಗಳಿ ಗೊಂದು ದಿವಸಂ, ಹದಿನೈದು ದಿನಗಳಿಗೊಂದು ಪಕ್ಷಂ, ಪಕ್ಷದ್ವಯಕ್ಕೆ ಮಾಸಂ, ಮಾಸದ್ವ ಯಕ್ಕೆ ಋತು, ಮೂರು ಋತುಗಳಿಗೆ ಅಯನಂ ಅಯನದ್ವಯದಿಂ ಸಂವತ್ಸರಂ, ಸಂವತ್ಸರ ಪಂಚಕದಿಯುಗಂ, ಯುಗದ್ವಯದಿಂ ದಶವರ್ಷಂ ಇಂತು ಮೇಗೆಲ್ಲಂ ದಶಗುಣಿತಂ ಮಾಡುತ್ತಾ ಹೋಗಲು ಶತಂ, ಸಹಸ್ರಂ, ಅಯುತಂ, ಲಕ್ಷಂ, ಪ್ರಯುತಂ, ಕೋಟಿ, ಅರ್ಬುದಂ, ಪದ್ಮಂ, ಖರ್ವಂ, ನಿಖರ್ವಂ, ಮಹಾಪದ್ಮಂ, ಶಂಖಂ, ಸಮುದ್ರಂ, ಮಧ್ಯಂ, ಅಂತ್ಯಂ, ಪರಮಾಂತ್ಯಂ, ಪರಮಕೋಟಿಯೆಂದಕ್ಕುಂ, ಇನ್ನು ಪೆರ್ಚುತ್ತಂ ಪೋಗೆಪೋಗೆ ಸಂಖ್ಯಾತಾಸಂಖ್ಯಾತಾನಂತ ವಿಕಲ್ಪಂಗಳಕ್ಕುಂ. ಅಲ್ಲಿ ಸಂಖ್ಯಾತಂ, ಶ್ರುತಕೇವಲಿಗಳು ಮೊದಲಾದವರಿಗೆ ವಿಷಯವು, ಉತ್ಕೃಷ್ಟ ಸಂಖ್ಯಾತದಿಂ ಮೇಲೆ ಪೆರ್ಚಿದುದೆಲ್ಲಂ, ಅಸಂಖ್ಯಾತಮವಧಿಜ್ಞಾನವಿಷಯಂ,

ಸರ್ವಾವಧಿಜ್ಞಾನವಿಷಯದಿಂ ಮೇಲೆ ಹೆಚ್ಚಿನವುಗಳೆಲ್ಲಂ, ಅನಂತಮೆಂಬುದು ಪ್ರಮಾಣಮದು ಕೇವಲಜ್ಞಾನವಿಷಯಂ, ಇನ್ನು ಹೇಳಿದ ಲಕ್ಷವರ್ಷಮಂ ಎಂಭತ್ನಾಲ್ಕರಿಂದ ಗುಣಿಸಿದರೆ ಒಂದು ಪೂರ್ವಾಂಗವಾಗುವದು. ಅದನ್ನು ಎಂಭತ್ತುನಾಲ್ಕು ಲಕ್ಷಗಳಿಂದ ಗುಣಿಸಿದರೆ ಒಂದು ಪೂರ್ವವಾಗುವದು. ಇಂತೀ ಕ್ರಮದಿಂದ ಎಂಭತ್ತುನಾಲ್ಕು ಲಕ್ಷದಿಂದೆಣೆಗೊಟ್ಟು ಗುಣಿಸುತ್ತಾ ಹೋಗಲು ಪರ್ವಾಂಗಂ, ಪರ್ವಂ, ಣಕಾದಾಂಗಂ, ಣಕಾರ, ಕುಮುದಾಂಗಂ, ಕುಮುದಂ, ಪದ್ಮಾಂಗಂ, ಪದ್ಮಂ, ನಳಿನಾಂಗಂ, ನಳಿನಂ, ಕಮಲಾಂಗಂ, ಕಮಲಂ, ತುಟ್ಯಾಂಗಂ, ತುಟ್ಯಂ, ಅಟಟಾಂಗಂ, ಅಟಟಂ, ಅಮಮಾಂಗಂ, ಅಮಮಂ, ಹಾಹಾಂಗಂ, ಹಾಹಾ, ಹೂ ಹೂಯಂಗಂ, ಹೂಹೂ, ಲತಾಂಗಂ, ಲತಾ, ಮಹಾಲತಾಂಗಂ, ಮಹಾಲತಾ ಎಂಬಿವಕ್ಕುಂ. ಆ ಮುಂಪೇಳ್ದ ಎಂಭತ್ತುನಾಲ್ಕು ಲಕ್ಷದಿಂದ ಅನುಕ್ರಮದಿಂ ಗುಣಿಸುತ್ತಾ ಹೋಗಲುತ್ಪನ್ನೋತ್ಪನ್ನರಾಶಿಗಳಿಗೆ ಶೀರ್ಷ ಪ್ರಕಂಪಿತಮುಂ, ಹಸ್ತಪ್ರಹೇಲಿತಮುಂ, ಅಚಲಾತ್ಮಕತ್ವಮುಮೆಂದು ಸಂಜ್ಞೆ ಇಂತು ಹೇಳಿದಕಾಲಂ ವರ್ಷಗಣನೆಯಿಂ ಸಂಖ್ಯಾತವಾಗುವದು. ಇದು ಗಣನಾಪ್ರಮಾಣವು. ಗಣನಾತೀತವಾದದ್ದು ಪಲ್ಯೋಪಮಾಧಿಕಮಸಂಖ್ಯಾತಮಂತದು ಪಲ್ಯೋಪಮಂ, ಸಾಗರೋಪಮಂ, ಸೂಚ್ಯಂಗುಲಂ, ಪ್ರತರಾಂಗುಲಂ, ಘನಾಂಗುಲಂ, ಜಗಛ್ರೇಣಿ, ಲೋಕ ಪ್ರತರೆ, ಲೊಕ ಪೂರಣೆಯೆಂದಷ್ಟ ಪ್ರಮಾಣವಾಗುವದು. ಇಂತಿವು ಪ್ರತ್ಯಕ್ಷಜ್ಞಾನ ಗೋಚರ ವಿಷಯಂಗಳು ಉಪಮೆಯಿಂದಲ್ಲದರಿಯಲ್ಬಾರದಪ್ಪುದರಿಂದ ಉಪಮಾ ಪ್ರಮಾಣಮೆಂಬುದಲ್ಲಿ ಪಲ್ಯೋಪಮಮಂ ಹುಟ್ಟಿಸುವ ಕ್ರಮವು ಹ್ಯಾಗಂದರೆ—

ಮುಂಪೇಳ್ದ ಪರಮಾಣುಗಳಲ್ಲಿ ಅನಂತಂಗೊಂಡೊಡೆ, ಒಂದು ಸೈಜ್ಞಾ, ಸೈಜ್ಞೆಗಳೆಂಟಕ್ಕೆ ತೃಟರೇಣು, ಮೊದಲಾದವುಗಳಿಂದ, ಮುಂಪೇಳ್ದ ಪ್ರಮಾಣಾಂಗುಲದಿಂ ಬಂದಯೋಜನ ವಿಸ್ತಾರಗಳಷ್ಟೇ ಪ್ರಮಾಣದ ಗುಣ್ಪಂ ಸಮವೃತ್ತವುಂ ಆದ ಮೂರುಖಾತ ( ಹಳ್ಳ )ಮಂ ಪರಿಕಲ್ಪಿಸಿ, ಶೀತಾತಪಾದಿರಹಿತವಾದ ಭೂಗೃಹದಲ್ಲಿ ಅವಿಯೋಗಳಂಗಳಂ, ಸಲಹಿ, ಅವರ್ಕವಕ್ಕೆ ಪುಟ್ಟಿದವಂ ನಡೆಪುತ್ತಂ ಏಳನೆಯ ಸೂಳುಪುಟ್ಟಿದ ಮರಿಗುರಿಯೇಳನೆಯ ದಿನದರೋಮಂಗಳಂಕೊಂಡು ಮೊದಲು ಕಡೆಯರಿಯಬಾರದಂತೆ ಕತ್ತರಿಸಿ, ಮೊದಲ ಕುಳಿಯೊಳಿಡಿದಿಡಿದು ತೀವಿದೊಡಮೆನಿತಕ್ಕುಮವಂ ನೂರು ನೂರು ವರ್ಷಕ್ಕೊಂದೊಂದಂ ತೆಗೆಯಲೆಂದಿಗೆ ತೀರುವದು ಅದು ವ್ಯವಹಾರ ಪಲ್ಯವು. ಅಲ್ಲಿಯೊಂದು ರೋಮಂಗಳಂ ಅಸಂಖ್ಯಾತ ವರ್ಷಸಮಯಮೆನಿತನಿತೇ ಸಂಖ್ಯಾತಕೋಟಿ ವರ್ಷಂಗಳ ಸಮಯಮೆನಿತನಿತೆ ಖಂಡಂಗಳಂ ಮಾಡಿ, ಎರಡನೆಯ ಕುಳಿಯೊಳು ಯಿಡಿದಿಡಿದು ತೀವಿದೊಡೆ, ಅವಂಸಮಯಕ್ಕೊಂದೊಂದಂ ತೆಗೆವರೆ ಎಷ್ಟುಕಾಲಕ್ಕೆ ತೀರುವದು ಅದು ಉದ್ಧಾರಪಲ್ಯವು. ಅವರೊಂದೊಂದು ರೋಮಖಂಡಮಂ ಮುಂನಿನಂತೆ ಸಂಖ್ಯಾತಕೋಟಿ ವರ್ಷಂಗಳ ಸಮಯಮೆನಿತನಿತು ಖಂಡಂಗಳಂ ಮಾಡಿ, ಮೂರನೆಯ ಕುಳಿಯನ್ನು ತುಂಬಿ ಸಮಯಕ್ಕೊಂದೊಂದಂ ತೆಗೆಬರೆ, ಎಷ್ಟುಕಾಲಕ್ಕೆ ತೀರುವದು ಅದದ್ಧಾರಪಲ್ಯವಾಗುವದು. ಇಂತಿವರಲ್ಲಿ ವ್ಯವಹಾರಪಲ್ಯದಿಂ ಸಂಖ್ಯೆಯಂ ಪೇಳ್ಗುಂ. ಅದ್ಧಾರಪಲ್ಯದಿಂ ಕರ್ಮಸ್ಥಿತಿ, ಕಾಲಸ್ಥಿತಿ, ಕಾಯಸ್ಥಿತಿಮೆಂದಿವುಗಳನ್ನರಿಯಬಹುದು. ಅಂತಾ ಪಲ್ಯೋಪಮಂಗಳಂ ಪತ್ತು ಕೋಟಾಕೋಟಿಗೊಂಡೊಡೆ, ವ್ಯವಹಾರೋದ್ಧಾರಾದ್ಧಾರ ಸಾಗರೋಪಮಂಗಳಾಗುವವು.

## ಸೂಚ್ಯಂಗುಳವೆಂತೆಂದೊಡೆ—

ಅದ್ಧಾರಪಲ್ಯಾರ್ಧಚ್ಛೇದನೆಯಂ ವಿಗಳಿಸಿ ಪಲ್ಯಮುಮಂ, ಬೇರೆಬೇರೆ ಗುಣಾಕಾರಂಗೊಂಡನ್ಯೋನ್ಯಭ್ಯಸ್ತಂ ಮಾಡಿ ಪಡೆದರಾಶಿಯಲ್ಲಿ ಒಂದು ರೋಮಾಣುಗಳೊಂದೊಂದು ಆಕಾಶ ಪ್ರದೇಶಂಗಳಂ ಬುದ್ಧಿಯಿಂ ತೆಗೆದುಕೊಂಡು ಸೂಚಿಯಂದದಿಂ ಸಯ್ತುನಿರಿಸಿದಡೆ ಸೂಚ್ಯಂಗುಲವಾಗುವದು. ಸೂಚ್ಯಂಗುಲದವರ್ಗಂ ಪ್ರತರಾಂಗುಳಂ, ಪ್ರತರಾಂಗುಲಮಂ, ಸೂಚ್ಯಂಗುಲದಿಂ ನಿರಿಸಿದರೆ ಘನಾಂಗುಲವಾಗುವದು, ಮತ್ತಂ ಮುಂಪೇಳ್ದ ಪಲ್ಯೋಪಮದಚ್ಛೇದನೆಯನಸಂಖ್ಯಾತದಿಂ ಭಾಗಂಗೊಂಡು ಪಡೆದ ಲಬ್ಧಿಯುಮಂ ವಿರಳಿಸಿಮುಂಪೇಳಿದ ಘನಾಂಗುಲಮಂ ಪ್ರತ್ಯೇಕಂ ಗುಣಾಕಾರಂಗೊಂಡು ಅನ್ಯೋನ್ಯಭ್ಯಸ್ತಂ ಮಾಡಿ ಮುನ್ನಿನಂತೆ ರೋಮಾಣುಗಳೊಂದೊಂದಾಕಾಶ ಪ್ರದೇಶಂಗಳಂ ತೆಗೆದುಕೊಂಡು ಶ್ರೇಢಿಬದ್ಧವಾಗಿ ಸಯ್ತುನಿರಿಸಿದಡೆ ಜಗತ್ಶ್ರೇಢಿ ಎಂಬುವದಾಗುವದು. ಜಗತ್ಶ್ರೇಢಿಯವರ್ಗಂ ಪ್ರತರಯೆಂಬ ಪ್ರಮಾಣಂ, ಪ್ರತರೆಯಂ ಜಗತ್ಶ್ರೇಢಿಯಿಂದ ಗುಣಿಸಿದರೆ ಲೋಕವೆಂಬ ಪ್ರಮಾಣವಾಗುವದು. ಜಗತ್ಶ್ರೇಢಿಯ ಸಪ್ತಮಭಾಗೆರಜ್ಜು, ಮತ್ತಂ ಮುಂಪೇಳ್ದದ್ಧಾರಸಾಗರೋಪಮಂ ಪತ್ತುಕೋಟಾಕೋಟಿಗೊಂಡೊಡೊಂದು ಉತ್ಸರ್ಪಿಣಿಕಾಲವಾಗುವದು. ಅವಸರ್ಪಿಣಿಯೂ ಅಷ್ಟೇ ಪ್ರಮಾಣವಾಗುವದು. ಅಂತೆರಡುಮಂ ಕೂಡಿದೊಡೆ ಕಲ್ಪವೆಂಬುದಾಗುವದು.

ಕಂದ॥ ಬೆಳೆದಖಿಳ ಭೋಗದಾಯುವ।
ಕಳೆವರೋತ್ಪ್ರೇತಿ ವೃದ್ಧಿಯುತ್ಸರ್ಪಿಣಿಯೊಳ್॥
ಬಲಮುಂ ಭೋಗಮುಮಾಯುಂ।
ಕಳೆವರೋತ್ಪ್ರೇತಿಯು ಮಿಳಿಗುಮವಸರ್ಪಿಣಿಯೊಳ್॥ ೧೨॥

## ಕಾಲಪರ್ಯಾಯನಿರೂಪಣಂ—

೧ ಭಾವಾಸ್ರವ, ೨ ದ್ರವ್ಯಾಸ್ರವವೆಂದಿತ್ತೆರಂ, ಭಾವಾಶ್ರವವೆಂತೆನೆ—ಶುಭಾಶುಭ ಪರಿಣಾಮಮಂ ಭಾವಾಸ್ರವಮೆಂಬುದು, ಆ ಭಾವಾಸ್ರವನಿಮಿತ್ತಂ ಬಡೆದು ಅನವರತ ದ್ರವ್ಯಕರ್ಮಣಾವರ್ಗಸ್ಕಂಧರೂಪವಾದ ಸಮಯಪ್ರಬದ್ಧಂ ಬಂದುಪೊರ್ದುವುದುಂ, ದ್ರವ್ಯಾಸ್ರವಮೆಂಬುದು. ಈ ಆಸ್ರವ ಪರಿಹಾರಾರ್ಥ ಪರಮಸುಖಮೂರ್ತಿನಿರಾಸ್ರವ ಸಹಜಾತ್ಮಭಾವನೆಯನ್ನು ಮಾಡಬೇಕೆಂಬುವದು ತಾತ್ಪರ್ಯಂ.

---

## ಸೂತ್ರಂ॥ ಬಂಧಹೇತವಃ ಪಂಚವಿಧಾಃ ॥ ೪೮ ॥

ಟೀ—ಪಂಚಮಿಥ್ಯಾತ್ವಮುಂ, ಅವ್ರತಪಂಚಕಮುಂ, ಪಂಚದಶಪ್ರಮಾದಮುಂ, ತ್ರಿವಿಧಯೋಗಮುಂ, ಚತುಃಕಷಾಯುಮುಮೆಂದಿವು ಐದು ಭಾವಬಂಧಗಳು ॥೫॥ ಇವರ ಭೇದವು ಹ್ಯಾಗಂದರೆ—ಅಲ್ಲಿ ಪಂಚದಶ ಪ್ರಮಾದಗಳಾವುವೆಂದೊಡೆ—ಸ್ತ್ರೀ, ಭುಕ್ತ, ರಾಷ್ಟ್ರ, ಅವನೀಪಾಲ ಕಥೆಗಳೆಂದು ನಾಲ್ಕು ಕ್ರೋಧಾದಿಕಷಾಯಗಳು ನಾಲ್ಕುಂ, ಸ್ಪರ್ಶನೇಂದ್ರಿಯಾದ ಪಂಚೇಂದ್ರಿಯಂಗಳುಂ, ಸ್ನೇಹ, ನಿದ್ರೆಯುಮೆಂದು ಪಂಚದಶ ಪ್ರಮಾದಗಳಕ್ಕುಂ.

ಶ್ಲೋಕ ॥ ವಿಕಥಾಶ್ಚ ಕಷಾಯಾಖ್ಯಾ ಸ್ನೇಹನಿದ್ರಾಶ್ಚ ತುಶ್ಚತು ।
ಪಂಚೈಕೈಕಾಕ್ಷಸಂಚಾರೇ ಪ್ರಮಾದಾಶೀತಿ ಬಂಧಕಾ ॥ ೧೭ ॥

ತಾ:—ಮತ್ತಂ ಸ್ತ್ರೀಕಥೆ, ಭುಕ್ತಕಥೆ, ಅರ್ಥಕಥೆ, ಭೋಕ್ತೃಕಥೆ, ರಾಜಕಥೆ, ಚೋರ ಕಥೆ, ವೈರಕಥೆ, ಪರಪಾಷಂಡಿಕಥೆ, ದೇಶಕಥೆ, ಭಾಷಾಕಥೆ, ಗುಣವಧಕಥೆ, ವಿಕಥೆ, ನಿಷ್ಠುರ ಕಥೆ, ಪೈಶೂನ್ಯಕಥೆ, ಕಂದರ್ಪಕಥೆ, ದೇಶಕಾಲಾನುಚಿತಕಥೆ, ಭಂಡಕಥೆ, ಮೂರ್ಖಕಥೆ, ಆತ್ಮ ಪ್ರಶಂಸಾಕಥೆ, ಪರಪರಿವಾದಕಥೆ, ಪರಜುಗುಪ್ಸಾಕಥೆ, ಪರಪೀಡಾಕಥೆ, ಕಲಹಕಥೆ, ಪರಿಗ್ರಹ ಕಥೆ, ಕೃಷ್ಯಾದಿವ್ಯಾಪಾರಕಥೆ, ಸಂಗೀತಕಥೆ, ವಾದಕಥೆ ಎಂದು ಇಪ್ಪತ್ತೈದು ವಿಕಥೆಯುಂ. ಷೋಡಶಕಷಾಯಮುಂ, ಹಾಸ್ಯಾದಿನವನೋಕಷಾಯಮುಂ, ಎಂದಿಪ್ಪತ್ತೈದು ವಿಕಥೆಯುಮಂ, ಸ್ಪರ್ಶನಾದಿಷಡಿಂದ್ರಿಯಮುಂ, ಸ್ತ್ಯಾನಗೃದ್ಧ್ಯಾದಿನಿದ್ರಾಪಂಚಕಮುಂ, ಸ್ನೇಹ ಮೋಹಮೆಂದು ಪ್ರಣಯದ್ವಯಮುಂ, ಇಂತು ಸಮುದಿತಮರುವತ್ತಮೂರು ಪ್ರಮಾದಂಗಳಾಗುವವು ॥ ೬೩ ॥ ಅವುಗಳಕ್ಷಸಂಚಾರದಿಂ ಮೂವತ್ತೇಳುಸಾವಿರದೈನೂರು ( ೩೭೫೦೦ ) ಆಗುವವು. ಅಥವಾ ಪಂಚದಶಪ್ರಮಾದಂಗಳಂತರ್ಭಾವಿಗಳಾಗೆ ಚತುರ್ವಿಧಮೇಣಕ್ಕುಮೆಂತೆನೆ—

ಗಾಹೆ ॥ ಮಿಛ್ಛತ್ತಂ ಅವಿರಮಣಂ ಕಷಾಯಜೋಗಾಯ ಆಸವಾಹೊಂತಿ ।
ಪಣಬಾರಸ ಪಣವೀಸಾಪಂಣರಸಾಹೊಂತಿತಚ್ಛೇಯಾ ॥ ೪೧ ॥

ಮಿಥ್ಯಾತ್ವವೈದು ಭೇದ ಕ್ಕಾಗಾಗುವವೆಂದರೆ—ಏಕಾಂತಮಿಥ್ಯಾತ್ವಂ, ವಿಪರೀತಮಿಥ್ಯಾ ತ್ವಂ, ವಿನಯಮಿಥ್ಯಾತ್ವಂ, ಅಜ್ಞಾನಮಿಥ್ಯಾತ್ವಂ, ಸಂಶಯಮಿಥ್ಯಾತ್ವಂ ಎಂದಿವೈದು ಭೇದವಾಗು ವವು ॥೫॥ ಎಂತೆಂದೊಡೆ—ಅವರಲ್ಲಿ ಉತ್ಪಾದ, ವ್ಯಯ, ಧ್ರೌವ್ಯಾತ್ಮಕವಾದ ಜೀವಾದಿದ್ರವ್ಯಂಗ ಳುಂ, ಶರೀರೇಂದ್ರಿಯಾದಿಗಳುನೊಂದುಸಮಯದಿಂ ಮೇಲಿವು, ಪೆರಪೆರವೆ ಪುಟ್ಟುಗುಮದ ರಿಂದೆಲ್ಲಂ ಕ್ಷಣಿಕಂಗಳೇ ಎಂದು ನಿತ್ಯಂಗಳೇ ಎಂದು ಪಾತ್ರಪತಿತಂ ಪವಿತ್ರಮೆಂದಿವು ಮೊದ ಲಾಗೊಡೆಯುವನೆ, ಏಕಾಂತಪಕ್ಷಮನೇ ಪಿಡಿದು ನುಡಿವ ಬೌದ್ಧಾದಿಗಳ ದುರ್ನಯಾಭಾಸಂಗ ಳೇಕಾಂತಮಿಥ್ಯಾತ್ವವು ॥ ೧ ॥

ಸದೋಷಿದೇವಂಗೆಂತು ನೆಗಳ್ದಡಂ, ದೋಷಮಿಲ್ಲೆಂದು ನುಡಿವರು. ಬಾಲನುಂ, ಉನ್ಮ ತ್ತನುಂ, ಪಿಶಾಚನುಮೆಂಬೊಲು ಮೆಚ್ಚಿದಂತೆ ನೆಗಳುವದು ಯೋಗಿಗೆ ಲಕ್ಷಣಂ, ಆತನೆಂತಾಡಿ ದೊಡಂ, ಪದ್ಮಪತ್ರಂ ನೀರಂ ಪೊರೆಯದಂತೆ. ಪಾಪಲೇಪದೊಳು ಪೊರೆವನಲ್ಲ, ಯಜ್ಞಾದಿ ಕ್ರಿಯೆಯೊಳು ಮಾಡಿದ ಹಿಂಸೆ ಹಿಂಸೆಯಲ್ಲ, ವಿಧಿಪೂರ್ವಕದಿಂ ಪಿಶಿತ ಭಕ್ಷಣಾದಿಗಳನ್ನು ಮಾಡಿದರೆ ದೋಷವಲ್ಲ, ಅದುವೇ ಧರ್ಮಮೆಂದೋದುಗಳಂ ತೋರಿ ವಾದಂಗೆಯ್ವ ವೈನಯಿಕ ಪ್ರಭೃತಿಗಳ ಪಕ್ಷಂ ವಿಪರೀತಮಿಥ್ಯಾತ್ವವು ॥ ೨ ॥

ದೇವರುಂ, ಅರಸುಗಳುಂ, ತಾಯುಂ, ತಂದೆಯುಂ, ತಪಸ್ವಿಗಳುಂ, ಶಾಸ್ತ್ರಜ್ಞರುಂ, ಬಾಲ ಕರುಂ, ವೃದ್ಧರುಮೆಂದಿವರು ಮೊದಲಾದವರ್ಗೆ ಮನದಿಂ, ವಚನದಿಂ, ಕಾಯದಿಂ, ಹಿರಣ್ಯಾದಿ ದಾನಂಗಳಿಂ ವಿನಯಂಗೆಯ್ವುದು, ಇವೇಗತಿಗೆ ಕಾರಣಮೆಂಬ ಗುಣಾಗುಣ ಶೂನ್ಯರಾದ ತಾಪ ಸಪ್ರಭೃತಿಗಳ ಪಕ್ಷಂ ವಿನಯಮಿಥ್ಯಾತ್ವವು ॥ ೩ ॥

ಬಂಧಮೋಕ್ಷಮುಂ, ಬಂಧಕಾರಣಂಗಳುಂ, ಮೋಕ್ಷಕಾರಣಂಗಳುಂ, ಸಂಸಾರಫಲ ಮೆಂಬೀ ಪದಾರ್ಥಂಗಳೊಳೊಂದುಮಂ, ಇಂತುಟೆಂತುಂ, ಆರ್ಗಂ ನಿಶ್ಚಯಿಸಲ್ಬಾರದೆಂದು, ತಮ್ಮ ಮೂಢತ್ವವೇ ತಮಗೆ ತತ್ವಮೆಂದು ಬಗೆದು ನುಡಿವ ಇಂದ್ರವಾದಿಯ ಅಭಿಪ್ರಾಯಂ ಸಂಶಯಮಿಥ್ಯಾತ್ವವು ‖ ೪ ‖

ಜೀವಾಜೀವ, ಪುಣ್ಯ, ಪಾಪ, ಆಸ್ರವ, ಸಂವರೆ, ನಿರ್ಜರೆ, ಬಂಧ, ಮೋಕ್ಷವೆಂಬ ನವ ಪದಾರ್ಥಂಗಳನಾರರಿವರು, ಅರಿಯರೆಂದು ತಮ್ಮರಿವೇ ತಮಗೆ ಮತಮೆಂದು ಬಗೆದು ನುಡಿವ, ಮಸ್ಕರಿಪೂರಣರ ದರ್ಶನಂ ಅಜ್ಞಾನ ಮಿಥ್ಯಾತ್ವವು ‖ ೫ ‖

ಗಾಹೆ ‖ ಏಯಂತ ಬುದ್ಧದರಿಸಿವಿವರಿಯೊಬಮ್ಮತಾವಸೋವಿಣವೋ ।
ಯಿಂದೋವಿಯ ಸಂಸಯಿಯೋಮಂ ಕಡಿಯೋಜೀವ ಅಂಣಾಣಿ ‖ ೪೨ ‖

ತಾ:—ಷಡ್ಜೀವನಿಕಾಯಾಸಂಯಮಮುಂ, ಷಡಿಂದ್ರಿಯ ಸಂಯಮಮುಮೆಂದು ದ್ವಾದ ಶಾವಸಂಯಮಮುಂ ಷೋಡಶಕಕಷಾಯವುಂ, ನವನೋಕಷಾಯಮುಮೆಂದು ಪಂಚವಿಂಶತಿಕ ಷಾಯಂ, ಪಂಚದಶಯೋಗಮುಮೆಂದು ಪ್ರತ್ಯಯಂಗಳು ಐವತ್ತೇಳಾಗುವವು ‖೫೭‖ ಅವನಾ ವಗುಣಸ್ಥಾನದೊಳು ಯೋಜಿಸುಗೆ.

ಗಾಹೆ ‖ ಪಣವಂಣಂ ಪಂಣಾಸಂ, ತಿದಾಳ ಛಾದಾಳ ಸತ್ತತಿಸಾಯಾ ।
ಚವುವೀಸ ದುಬಾವೀಸಾ ಸೋಳಸ ಏಗೂಣಜಾವಣವ ಸತ್ತಾ ‖ ೪೩ ‖

ತಾ:—"ಪಣವಂಣಂ" ಐವತ್ತೇಳು ಪ್ರತ್ಯಯಂಗಳಲ್ಲಿ ಆಹಾರದ್ವಯಮಂ ಕಳೆದೊಡೆ, ಮಿಥ್ಯಾದೃಷ್ಟಿಯೊಳು ಐವತ್ತೈದಾಗುವವು ‖ ೫೫ ‖ "ಪಂಣಾಸಂ"–ಪಂಚಮಿಥ್ಯಾತ್ವಮಂ ಕಳೆದೊಡೆ, ಸಾಸಾದನನಲ್ಲಿ ಐವತ್ತಾಗುವವು ‖೫೦‖ "ತಿದಾಳ"–ಅನಂತಾನುಬಂಧಿ ಚತುಷ್ಕಮುಂ, ಔದಾರಿಕ ವೈಕ್ರಿಯಕ ಮಿಶ್ರಕಾರ್ಮಣ, ಕಾಯಯೋಗಮೆಂಬ ಏಳನ್ನು ಕಳೆದಡೆ, ಸಮ್ಯಗ್ಮಿಥ್ಯಾದೃಷ್ಟಿಯೊಳು ನಲವತ್ಮೂರಾಗುವವು. ‖೪೩‖ ಮುಂಕಳೆದ ಔದಾರಿಕಮಿಶ್ರ, ವೈಕ್ರಿಯಕ ಮಿಶ್ರ, ಕಾರ್ಮಣಕಾಯಯೋಗಮೆಂಬ ಮಿಶ್ರಯೋಗತ್ರಯಮಂ ಪೆರಗಣ ನಲವತ್ಮೂರರಲ್ಲಿ ಶೇರಿಸಿದರೆ, ಅಸಂಯತನೊಳು ನಾಲ್ವತ್ತಾರಾಗುವವು ‖೪೬‖ "ಸತ್ತತಿಸಾಯ"–ಅವರಲ್ಲಿ ಪ್ರತ್ಯಾಖ್ಯಾನ ಚತುಷ್ಕ, ವೈಕ್ರಿಯಕಮಿಶ್ರ, ಕಾರ್ಮಣಕಾಯ, ಯೋಗತ್ರಯಾಸಂಯಮಮೆಂಭೊಂಭತ್ತಂ ಕಳೆದೊಡೆ, ದೇಶಸಂಯತನಲ್ಲಿ ಮೂವತ್ತೇಳಾಗುವವು ‖೩೭‖ "ಚವುವೀಸಂ"— ಉಳಿದ ಹನ್ನೊಂದು ಸಂಯಮಂ, ಪ್ರತ್ಯಾಖ್ಯಾನ ಚತುಷ್ಕವೆಂಬ ಹದಿನೈದನ್ನು ಆ ಮೂವತ್ತೇಳರಲ್ಲಿ ಕಳೆದರೆ, ಆಹಾರದ್ವಯಮಂ ಕೂಡಿದರೆ, ಪ್ರಮತ್ತಸಂಯತನಲ್ಲಿ ಇಪ್ಪತ್ತಾಲ್ಕಾಗುವವು ‖೨೪‖ "ದುಬಾವೀಸಂ"—ಮುಂಚೆ ಕೂಡಿದಾಹಾರದ್ವಯವನ್ನು ಕಳೆದರೆ, ಅಪ್ರಮತ್ತ ಅಪೂರ್ವಕರಣ ಗುಣಸ್ಥಾನದಲ್ಲಿ ದ್ವಾವಿಂಶತಿಯುಂ ‖೨೨‖ "ಸೋಳಸ"—ಹಾಸ್ಯಾದಿಗಳಾದ ಆರುನೋಕಷಾಯಗಳನ್ನು ೨೨ ರಲ್ಲಿ ಕಳದರೆ ಅನಿವೃತ್ತಿಕರಣನ ಪೂರ್ವಭಾಗದೊಳು ಹದಿನಾರಕ್ಕುಂ ‖೧೬‖ "ಜಾವಣವ"—ಬಂಭತ್ತಂನೇವರಮುಕ್ಕು ಮನ್ನೇವರಂಪೆರಗಣ ಅಪದಿನಾರರೊಳು ನಪುಂಸಕವೇದ ಸ್ತ್ರೀವೇದ ಪುಂವೇದ ಕ್ರೋಧಮಾನ ಮಾಯಂಗಳ ನಿವೃತ್ತಿಕರಣನಕಾಲದುಳಿದ ಭಾಗದೊಳಂ ಸೂಕ್ಷ್ಮಲೋಭಮೆಂಬೊಂಭತ್ತಂನೇವರಂ ಕ್ರಮದಿಂ ಕುಂದಿ

ಪದಿನ್ನೈದಕ್ಕುಂ ॥೧೫॥ ಹದಿನಾಲ್ಕು, ಹದಿಮೂರು, ಹನ್ನೆರಡು, ಹನ್ನೊಂದು, ಹತ್ತು, ಒಂಭತ್ತು, ಮೇಗಣ ಗುಣಸ್ಥಾನದಲ್ಲಿ ಮನಶ್ಚತುಷ್ಕ, ವಚನ ಚತುಷ್ಕ, ಔದಾರಿಕಯೋಗವೊಂಭತ್ತು, ಸತ್ಯಾನುಭಯ ಮನೋಯೋಗಮುಂ ಸತ್ಯಾನುಭಯ ವಾಗ್ಯೋಗಮುಂ, ಔದಾರಿಕಮುಂ, ಔದಾರಿಕಮಿಶ್ರಮುಂ, ಕಾರ್ಮಣಕಾಯಯೋಗಮೆಂಬೇಳುಂ ಸಯೋಗಿಕೇವಲಿಗಳಲ್ಲಾಗುವವು.

---

## ಸೂತ್ರಂ ॥ ಬಂಧಶ್ಚತುರ್ವಿಧಃ ॥ ೪೯ ॥

ಟಾ:—ಏಕೈಕಾತ್ಮಪ್ರದೇಶದೊಳು ಸಿದ್ಧಾನಂತೈಕ ಭಾಗಪ್ರಮಾಣಮುಂ, ಅಭವ್ಯರಾಶಿಯನಂತಗುಣ ಪ್ರಮಿತಮಪ್ಪನಂತಾನಂತ ಪರಮಾಣುಗಳು ಪ್ರತಿಕ್ಷಣಂ ಬಂಧಕ್ಕೆ ಬಪ್ಪವೆಂಬುದು ಪ್ರದೇಶಬಂಧಮಕ್ಕುಂ ॥ ೧ ॥ ಪ್ರಕೃತಿ ಪ್ರದೇಶಬಂಧಗಳು ಯೋಗದಿಂದಾಗುವವು. ಸ್ಥಿತ್ಯನುಭಾಗಬಂಧದ್ವಯಂ ಕಷಾಯಗಳಿಂದಾಗುವವು.

---

## ಸೂತ್ರಂ ॥ ಅಷ್ಟಕರ್ಮಾಣಿ ॥ ೫೦ ॥

ಟಾ:—ಸಾಮಾನ್ಯದಿಂ ಕರ್ಮವೊಂದುತೆರವು, ಪುದ್ಗಲಪಿಂಡಮುಂ ದ್ರವ್ಯಕರ್ಮಮೆಂಬುದು, ಅದರ ಶಕ್ತಿಯುಂ ಭಾವಕರ್ಮಮೆಂಬುದು, ಇಂತು ದ್ರವ್ಯ, ಭಾವ, ನೋಕರ್ಮಮೆಂಬುದು, ಇಂತು ದ್ರವ್ಯ, ಭಾವ, ನೋಕರ್ಮವೆಂದು ಮೂರುಪ್ರಕಾರವು. ಅದರಲ್ಲಿ ದ್ರವ್ಯಕರ್ಮವು, ಮೂಲಪ್ರಕೃತಿ, ಉತ್ತರಪ್ರಕೃತಿ, ಉತ್ತರೋತ್ತರಪ್ರಕೃತಿಯೆಂದು ಮೂರುವಿಧವು.

### ಮೂಲಪ್ರಕೃತಿಗಳ ಸ್ವರೂಪವು—

ಜ್ಞಾನಾವರಣೀಯಂ, ದರ್ಶನಾವರಣೀಯಂ, ವೇದನೀಯಂ, ಮೋಹನೀಯಂ, ಆಯುಷ್ಯಂ, ನಾಮ, ಗೋತ್ರಂ, ಅಂತರಾಯ ಎಂದು ಮೂಲಪ್ರಕೃತಿ ಎಂಟು ತೆರವು. ಅದರಲ್ಲಿ ಜ್ಞಾನಾವರಣೀಯಂ, ದರ್ಶನಾವರಣೀಯಂ, ಮೋಹನೀಯಂ, ಅಂತರಾಯಮೆಂಬೀ ನಾಲ್ಕು ಘಾತಿಕರ್ಮಗಳು. ವೇದನೀಯ, ಆಯುಷ್ಯ, ನಾಮ, ಗೋತ್ರವೆಂಬೀ ನಾಲ್ಕುಕರ್ಮಗಳು ಅಘಾತಿಗಳು. ಜ್ಞಾನಾವರಣೀಯಂ ಅರಿಯಲೀಯದು, ಸೊಡರಂ ಮುಚ್ಚಿದ ಕುಂಭದ ಹಾಗೆ. ದರ್ಶನಾವರಣೀಯಂ ಕಾಣಲೀಯದು, ಆದಿತ್ಯನಿಗೆ ಮರೆಯಾದ ಮೇಘದ ಹಾಗೆ. ವೇದನೀಯಂ ಸುಖದು:ಖಗಳನ್ನು ಮಾಡುವದು, ಖಡ್ಗಧಾರೆಯ ಜೇನನ್ನು ನೆಕ್ಕಿದಂತೆ. ಮೋಹನೀಯಂ ಮರುಳನ್ನು ಮಾಡುವದು, ಮದ್ಯದ ಸೊಕ್ಕಿನಹಾಗೆ. ಆಯುಷ್ಯಂ ಭವವನ್ನು ಹಿಡಿದಿರುವದು, ಸಂಕೋಲೆಯಹಾಗೆ. ನಾಮಕರ್ಮಂ ಹೆಸರುಗಳನ್ನು ಮಾಡುವದು, ಚಿತ್ರಗಾರನಹಾಗೆ. ಗೋತ್ರಕರ್ಮಂ ಉಚ್ಚನೀಚ ಕುಲಗಳನ್ನು ಮಾಡುವದು, ಕುಂಭಕಾರನಹಾಗೆ. ಅಂತರಾಯಕರ್ಮಂ ವಿಘ್ನಗಳನ್ನು ಮಾಡುವದು, ಭಂಡಾರಿಗನ ಹಾಗೆ. ಈ ಕರ್ಮಗಳ ಆಸ್ರವವು ಹ್ಯಾಗೆಂದರೆ—

ಶುಭೋಪಯೋಗದಿಂದ ಪುಣ್ಯಾಸ್ರವವಾಗುವದು, ಮತ್ತಂ ಅಶುಭೋಪಯೋಗದಿಂದ ಪಾಪಾಸ್ರವವಾಗುವದು, ಮತ್ತು ಜ್ಞಾನದರ್ಶನಂಗಳಿಗೂ, ಅವುಗಳನ್ನುಳ್ಳವರಿಗೂ, ದ್ವೇಷ

ಮಾಡುವದುಂ, ಒಬ್ಬರಲ್ಲಿ ವಿದ್ಯಾಭ್ಯಾಸಮಾಡಿ ಅವರನ್ನು ಮರೆಯಿಸಿ ಮತ್ತೊಬ್ಬರ ಹೆಸರನ್ನು ಹೇಳುವದುಂ, ಜ್ಞಾನಿಗಳಲ್ಲಿ ಮತ್ಸರಮಾಡುವದುಂ, ಶಾಸ್ತ್ರಾಧ್ಯಯನಕ್ಕೆ ಅಂತರಾಯವನ್ನು ಮಾಡುವದುಂ, ಪದಾರ್ಥಂಗಳ ನಿಳಿಕೆಯ್ಯುವುದುಂ, ಆಗಮವನ್ನು ಓದುವವರಿಗೆ ಚಿತ್ತಸ್ಖಲನೆಯನ್ನು ಮಾಡುವದುಂ ಎಂದಿವುಗಳಿಂದ ಜ್ಞಾನಾವರಣೀಯ ಕರ್ಮದಾಸ್ರವವಾಗುವದು.

ದುಃಖವುಂ, ಶೋಕವುಂ, ಸಂತಾಪವುಂ, ಹಳಲಿಸುವದುಂ, ಹೊಡೆಯುವದುಂ, ಕೊಲ್ಲುವದುಂ, ಸಂಕ್ಲೇಶ ಪರಿಣಾಮವೆಂದಿವುಗಳನ್ನು ತನಗೆ ಮಾಡಿಕೊಳ್ಳುವದುಂ, ಅನ್ಯರಿಗೆ ಉಂಟುಮಾಡುವದುಂ, ತನಗಮಿದೀರ್ಗಮಾಡುವದುಂ ಎಂದಿವುಗಳು ಅಸಾತಾವೇದನಿಯ ಕರ್ಮಾಸ್ರವಕ್ಕೆ ಕಾರಣಂಗಳು ॥ ೨ ॥

ಪ್ರಾಣಿಗಳಲ್ಲಿ ಅನುಕಂಪೆಯುಂ, ವ್ರತಿಗಳಲ್ಲಿ ಉಂಟಾದ ಪ್ರೀತಿಯುಂ, ಪಾತ್ರದಾನಮುಂ, ಸರಾಗಾದಿ ಸಂಯಮಂಗಳುಂ, ಸಮಾಧಾನವೆಂದಿವುಂ ಕ್ಷಮೆಯುಂ, ಲೋಭರಹಿತತ್ವವುಂ ಎಂದಿವುಗಳು ಸಾತಾವೇದನೀಯಕರ್ಮಾಸ್ರವಕಾರಣಂಗಳು ॥ ೩ ॥

ಕೇವಲಜ್ಞಾನವುಂ, ಆಗಮವುಂ, ಚಾತುರ್ವರ್ಣ ( ಋಷ್ಯಾರ್ಜಿಕ ಶ್ರಾವಕ, ಶ್ರಾವಕಿ ) ಸಂಘವುಂ, ಧರ್ಮವುಂ, ದೇವ, ಗುರುಮೆಂದಿವರುಗಳನ್ನು ಹೀಯ್ಯಾಳಿಸಿ ದೂಷಣೆಯನ್ನು ಹೇಳುವದು, ದರ್ಶನಮೋಹನೀಯ ಕರ್ಮದಾಸ್ರವಕ್ಕೆ ಕಾರಣಂಗಳು ॥ ೪ ॥

ಅಧಿಕವಾದ ಪರಿಗ್ರಹಗಳುಂ, ಬಹಳವಾದ ಸಾವದ್ಯವುಂ, ನರಕಾಯುಷ್ಯದಾಸ್ರವಕಾರಣಂಗಳು ॥ ೫ ॥

ಮಾಯೆಯು ತಿರ್ಯಗಾಯುಷ್ಯದಾಸ್ರವಕಾರಣವು ॥ ೬ ॥

ಅಲ್ಪಸಾವದ್ಯವುಂ, ಸ್ವಲ್ಪಪರಿಗ್ರಹವುಂ, ಸ್ವಭಾವಮೃದುತ್ವವುಂ ಎಂದಿವುಗಳು ಮನುಷ್ಯಾಯುಷ್ಯದಾಸ್ರವಕಾರಣಂಗಳು ॥ ೭ ॥

ಸರಾಗಚಾರಿತ್ರವುಂ, ದೇಶಚಾರಿತ್ರವುಂ, ಅಕಾಮನಿರ್ಜರೆಯುಂ, ಅಜ್ಞಾನತಪವುಂ, ಸಮ್ಯಕ್ತ್ವ್ತವುಂ ಎಂದಿವುಗಳು ದೇವಾಯುಷ್ಯದಾಸ್ರವಕಾರಣಂಗಳು ॥ ೮ ॥

ಮನ, ವಚನ, ಕಾಯ, ಕುಟಿಲತೆಯ ಮಾರ್ಗವಿರೋಧಗಳಾದ ಆಚರಣೆಗಳು, ಶುಭಕರ್ಮದಾಸ್ರವ ಕಾರಣಂಗಳು ॥ ೯ ॥

ಆ ಯೋಗಂಗಳ ಋಜುತ್ವಸ್ವಭಾವವುಂ, ಯಥೋಕ್ತಾಚರಣವುಂ, ಶುಭನಾಮದಾಸ್ರವಕಾರಣಂಗಳು ॥ ೧೦ ॥

ದರ್ಶನವಿಶುದ್ಧಿ ಮೊದಲಾದ ಷೋಡಶಭಾವನೆಗಳು, ತೀರ್ಥಕರ ನಾಮಕರ್ಮದಾಸ್ರವಕಾರಣಂಗಳು ॥ ೧೧ ॥

ತನ್ನನ್ನು ಸ್ತೋತ್ರಮಾಡಿಕೊಳ್ಳುವದುಂ, ಅನ್ಯರನ್ನು ನಿಂದೆಮಾಡುವದುಂ, ತನ್ನ ಶರೀರದಲ್ಲಿಲ್ಲದ ಗುಣಗಳನ್ನು ಹುಟ್ಟಿಸಿಹೇಳುವದುಂ, ಅನ್ಯರ ಶರೀರಗಳಲ್ಲಿರುವ ಗುಣಗಳನ್ನು ಮರೆಯಿಸುವದುಂ ಎಂದಿವುಗಳು ನೀಚೈರ್ಗೋತ್ರದಾಸ್ರವ ಕಾರಣಂಗಳಾಗುವವು ॥ ೧೨ ॥

ತನ್ನನ್ನು ಪ್ರಸಂಶೆಮಾಡಿಕೊಳ್ಳುವ ಅವಗುಣಗಳನ್ನು ಬಿಡುವದುಂ, ಗುಣಾಧಿಕರಲ್ಲಿ ವಿನಯವೃತ್ತಿಯುಂ, ಅನ್ಯರಲ್ಲಿರುವ ದುರ್ಗುಣಗಳನ್ನು ಪ್ರಶಂಸೆಮಾಡದೆ ಅವರ ಗುಣಗಳನ್ನೇ ಸ್ತೋತ್ರಮಾಡುವದುಂ, ವಿಜ್ಞಾನಾದ್ಯಷ್ಟಮದಗಳ ತ್ಯಾಗವುಂ ಎಂದಿವುಗಳು ಉಚ್ಚೈರ್ಗೋತ್ರದ ಆಸ್ರವಕಾರಣಂಗಳು. ಸ್ವರ್ಗಾಪವರ್ಗಸುಖ ಹೇತುಗಳಾದ ಧರ್ಮಾಚರಣೆಗಳಿಗೆ ವಿಘ್ನಮಾಡುವದು, ಅಂತರಾಯ ಕರ್ಮಾಸ್ರವಕಾರಣಂಗಳು. ಮೂಲಪ್ರಕೃತಿಗಳುಂ ಮುಂಚೆಹೇಳಿದ ಉತ್ತರಪ್ರಕೃತಿಗಳುಂ ಕಟ್ಟುವದು ಬಂಧವೆನ್ನುವದು.

---

## ಉತ್ತರಪ್ರಕೃತಿಗಳ ಸ್ವರೂಪಂ.

### ಸೂತ್ರಂ ॥ ಜ್ಞಾನಾವರಣೀಯಂ ಪಂಚವಿಧಂ ॥ ೫೧ ॥

ತಾ:—ಮತಿಜ್ಞಾನಾವರಣೀಯಂ, ಶ್ರುತಜ್ಞಾನಾವರಣೀಯಂ, ಅವಧಿಜ್ಞಾನಾವರಣೀಯಂ, ಮನ:ಪರ್ಯಯಜ್ಞಾನಾವರಣೀಯಂ, ಕೇವಲಜ್ಞಾನಾವರಣೀಯಂ ಎಂದು ಪಂಚವಿಧವು ॥೫॥

ಆವುಗಳಲ್ಲಿ ಇಂದ್ರಿಯಂಗಳಿಂದಲುಂ, ಮನದಿಂದಲುಂ, ತಂತಮ್ಮ ವಿಷಯಗಳನ್ನು ತಿಳಿಯುವದು ಮತಿಜ್ಞಾನವು, ಅದನ್ನು ಮರೆಯಿಸುವದು ಮತಿಜ್ಞಾನಾವರಣೀಯವು, ಮತಿಜ್ಞಾನದಿಂದ ತಿಳಿದ ಅರ್ಥವನ್ನು ಆಧಾರಮಾಡಿ ಮತ್ತೊಂದು ಅರ್ಥವನ್ನು ತಿಳಿಯುವದು ಶ್ರುತಜ್ಞಾನವು, ಅದನ್ನು ಮರೆಯಿಸುವದು ಶ್ರುತಜ್ಞಾನಾವರಣೀಯವು. ರೂಪಿದ್ರವ್ಯವನ್ನು ಪ್ರತ್ಯಕ್ಷವಾಗಿ ಅರಿಯುವದು ಅವಧಿಜ್ಞಾನವು, ಅದನ್ನು ಮರೆಯಿಸುವದು ಅವಧಿಜ್ಞಾನಾವರಣೀಯವು, ಅನ್ಯರ ಮನಸ್ಸಿನಲ್ಲಿರುವ ವಿಷಯಗಳನ್ನು ಯೋಚಿಸಿ ತಿಳಿಯುವದು ಮನಃಪರ್ಯಯಜ್ಞಾನವು, ಅದನ್ನು ಮರೆಯಿಸುವದು ಮನಃಪರ್ಯಯಜ್ಞಾನಾವರಣೀಯವು, ತ್ರಿಕಾಲಗೋಚರಾನಂತ ಪದಾರ್ಥಗಳನ್ನು ಯುಗಪತ್ (ಒಂದೇಸಾರಿ) ತಿಳಯುವದು ಕೇವಲಜ್ಞಾನವೆಂಬುವದು, ಅದನ್ನು ಮರೆಯಿಸುವದು ಕೇವಲಜ್ಞಾನಾವರಣೀಯವು ॥ ೫ ॥ ಇವೈದುಂ ಜ್ಞಾನಾವರಣೀಯ ಭೇದಗಳು.

---

### ಸೂತ್ರಂ ॥ ದರ್ಶನಾವರಣೀಯಂ ನವವಿಧಂ ॥ ೫೨ ॥

ತಾ:—ಸ್ತ್ಯಾನಗೃದ್ಧಿ, ನಿದ್ರಾನಿದ್ರೆ, ನಿದ್ರೆ, ಪ್ರಚಲಾಪ್ರಚಲೆ, ಪ್ರಚಲೆ, ಚಕ್ಷುರ್ದರ್ಶನಂ, ಅಚಕ್ಷುರ್ದರ್ಶನಂ, ಅವಧಿದರ್ಶನಂ, ಕೇವಲದರ್ಶನವೆಂದು ದರ್ಶನಾವರಣೀಯವು ನವವಿಧವು. ಇವುಗಳ ಸ್ವರೂಪವು ಹ್ಯಾಗೆಂದರೆ–೧ಅವುಗಳಲ್ಲಿ ಸ್ತ್ಯಾನಗೃದ್ಧಿಯುದಯದಿಂದ ಎತ್ತಿದರೆ ಪುನ: ಮಲಗಿಕೊಳ್ಳುವದುಂ, ಕೆಲಸಮಾಡುವದುಂ, ಕನವರಿಸುವದುಂ ಉಂಟಾಗುವದು, ಸ್ತ್ಯಾನಗೃದ್ಧಿಯು. ೨ ನಿದ್ರಾನಿದ್ರೆಯುದಯದಲ್ಲಿ ಎದ್ದರೆ ಕಣ್ಣಂ ಎಂತುಂ ತೆರೆಯಲಾರದೆ ಮಲಗಿಸುವದು ನಿದ್ರಾನಿದ್ರೆಯು. ೩ ನಿದ್ರೆಯನ್ನುವದು ನಡೆಯುವವನನ್ನು ನಿಲ್ಲಿಸುವದು, ನಿಂತಿರುವವನನ್ನು ಕುಳ್ಳಿರಿಸುವದು, ಕುಳಿತಿರುವವನನ್ನು ಮಲಗಿಸುವದು, ಎದ್ದಿರುವವನನ್ನು ಕಣ್ಣು ತೆರೆಯಲಿಕ್ಕೆ ಬಿಡದೆ ಮಲಗಿಸುವದು, ನಿದ್ರೆಯು. ೪. ಪ್ರಚಲಾಪ್ರಚಲೆಯುದಯದಲ್ಲಿ ಬಾಯಿಯಿಂದ

ಲೋಳೆಸುರಿಯುವದುಂ, ಮೈಯ್ಯುತೂಗುವದುಂ, ಒರಗುವದುಂ ಉಂಟಾಗುವದು ಪ್ರಚಲಾಪ್ರಚಲೆಯು, ೫. ಪ್ರಚಲೆಯುದಯದಲ್ಲಿ ಸ್ವಲ್ಪಮಟ್ಟಿಗೆ ಕಣ್ಣನ್ನು ತೆರೆದುಕೊಂಡು ಮಲಗಿರುವದು, ಸ್ವಲ್ಪಸ್ವಲ್ಪ ಏನನ್ನಾದರೂ ತಿಳಿಯುವದು, ಪುನಃ ಪುನಃ ಮಂದವಾಗಿ ಮಲಗುವದುಂ ಆಗುವದು ಪ್ರಚಲೆಯು, ೬. ಕಣ್ಣಿನಿಂದ ಕಾಣುವದು ಚಕ್ಷುರ್ದರ್ಶನಂ, ಅದನ್ನು ಕಾಣದ ಹಾಗೆ ಮಾಡುವದು ಚಕ್ಷುರ್ದರ್ಶನಾವರಣೀಯವು, ೭. ಉಳಿದಿಂದ್ರಿಯಂಗಳಿಂದ ಕಾಣುವದು ಅಚಕ್ಷುರ್ದರ್ಶನವು, ಅದನ್ನು ಮರೆಯಿಸುವದು ಅಚಕ್ಷುರ್ದರ್ಶನಾವರಣೀಯವು ೮. ಸ್ಪರ್ಶ, ರಸ, ಗಂಧವನ್ನುಳ್ಳ ಮೂರ್ತದ್ರವ್ಯಸಾಮಾನ್ಯವನ್ನು ಪ್ರತ್ಯಕ್ಷವಾಗಿ ಕಾಣುವದು ಅವಧಿದರ್ಶನವು, ಅದನ್ನು ಮರೆಯಿಸುವದು ಅವಧಿದರ್ಶನಾವರಣೀಯವು, ೯ ಸಮಸ್ತವಸ್ತುಗಳನ್ನು ಒಂದೇಸಲೇ ಸಾಮಾನ್ಯದಿಂದ ಕಾಣುವದು ಕೇವಲದರ್ಶನವು, ಅದನ್ನು ಮರೆಯಿಸುವದು ಕೇವಲದರ್ಶನಾವರಣೀಯವೆಂಬುವದು. ಇಂತು ದರ್ಶನಾವರಣೀಯಂ ನವಭೇದವು ॥ ೯ ॥

---

## ಸೂತ್ರಂ ॥ ವೇದನೀಯಂ ದ್ವಿವಿಧಂ ॥ ೫೭ ॥

ತಾಃ—ಸಾತಾವೇದನೀಯಂ, ಅಸಾತಾವೇದನೀಯವೆಂದು ಎರಡುವಿಧವು. ಅಲ್ಲಿ ಇಂದ್ರಿಯ ಸುಖಕಾರಣಂಗಳಾದ ಬಾಹ್ಯವಸ್ತುಗಳನ್ನು ಹೊಂದಿಸುವದು ಸಾತಾವೇದನೀಯವು ॥ ೧ ॥ ದುಃಖಕಾರಣಂಗಳಾದ ವಸ್ತುಗಳ ಸಂಬಂಧವುಂಟಾಗುವದು ಅಸಾತಾವೇದನೀಯವು ॥ ೨ ॥

---

## ಸೂತ್ರಂ ॥ ಮೋಹನೀಯಮಷ್ಟವಿಂಶತಿವಿಧಂ ॥ ೫೮ ॥

ತಾ:—ಮೋಹನೀಯಕರ್ಮವು ಇಪ್ಪತ್ತೆಂಟು ಭೇದವಾಗುವದು. ಅದು ಹ್ಯಾಗಂದರೆ— ಸಾಮಾನ್ಯದಿಂ ದರ್ಶನಮೋಹನೀಯ, ಚಾರಿತ್ರಮೋಹನೀಯವೆಂದು ಎರಡುವಿಧವು. ದರ್ಶನ ಮೋಹನೀಯ ಬಂಧವನ್ನಾಶ್ರಯಿಸಿ ಮಿಥ್ಯಾತ್ವವೊಂದೇ, ಉದಯಸತ್ವವನ್ನಾಶ್ರಯಿಸಿ ಮಿಥ್ಯಾತ್ವಂ, ಸಮ್ಯಗ್ಮಿಥ್ಯಾತ್ವಂ, ಸಮ್ಯಕ್ತ್ವಪ್ರಕೃತಿಭೇದದಿಂದ ಮೂರು ಭೇದವಾಗುವದು. ಚಾರಿತ್ರ ಮೋಹನೀಯಂ ಕಷಾಯ, ನೋಕಷಾಯವೆಂದು ಎರಡುವಿಧವು. ಅಲ್ಲಿ ಅನಂತಾನುಬಂಧಿ ಚತುಷ್ಕಂ ॥೪॥ ಅಪ್ರತ್ಯಾಖ್ಯಾನ ಚತುಷ್ಕಂ ॥೪॥ ಪ್ರತ್ಯಾಖ್ಯಾನಚತುಷ್ಕಂ ॥ ೪ ॥ ಸಂಜ್ವಲನ ಚತುಷ್ಕಂ ॥೪॥ ಎಂದು ಕ್ರೋಧ, ಮಾನ, ಮಾಯಾ, ಲೋಭ ವಿಕಲ್ಪಗಳಿಂದ ಷೋಡಶ ವಿಧವು ॥೧೬॥ ಕಷಾಯಮೋಹನೀಯಂ ನೋಕಷಾಯ, ಸ್ತ್ರೀವೇದಂ, ಪುಂವೇದಂ, ನಪುಂಸಕ ವೇದಂ, ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ ಎಂದು ಒಂಭತ್ತುವಿಧವು ॥೯ ॥

ಅಲ್ಲಿ ಮಿಥ್ಯಾತ್ವದುದಯದಿಂದ ದೇವರಲ್ಲದವರನ್ನು ದೇವರೆನ್ನುವದೆಂಬ ಧರ್ಮವಲ್ಲದ್ದನ್ನು, ಧರ್ಮವೆಂಬ, ತತ್ವವಲ್ಲದುದನ್ನು ತತ್ವವೆಂಬ, ವಿಪರೀತರುಚಿಯನ್ನು ಮಾಡುವದು ಮಿಥ್ಯಾತ್ವವು ॥೧॥ ಸಮ್ಯಗ್ಮಿಥ್ಯಾತ್ವದುದಯದಿಂದ ತತ್ವಗಳಲ್ಲಿಯೂ, ಅತತ್ವಗಳಲ್ಲಿಯೂ ಸಮಾನವಾಗಿ ಪ್ರೀತಿಯನ್ನು ಮಾಡುವದು, ಸಮ್ಯಗ್ಮಿಥ್ಯಾತ್ವವು ॥ ೨ ॥ ಸಮ್ಯಕ್ತ್ವಪ್ರಕೃತಿಯುದಯದಲ್ಲಿ

ಆಗಮ, ಪದಾರ್ಥ, ತತ್ವಶ್ರದ್ಧಾನರೂಪವಾದ ಸಮ್ಯಕ್ತ್ವವನ್ನು ಚಲನವಾಗಿಯುಂ, ಮಲಿನವಾಗಿಯುಂ, ಭಲಿಷ್ಠವಾಗಿಲ್ಲದಂತಾಗಿಯುಂ ಮಾಳ್ಪದು ಸಮ್ಯಕ್ತ್ವಪ್ರಕೃತಿಯು ॥೩॥

ಅನಂತಾನುಬಂಧಿ ಕ್ರೋಧ, ಮಾನ, ಮಾಯಾ, ಲೋಭಂಗಳುಂ ಚಾರಿತ್ರಮೋಹನೀಯಂಗಳಾಗಿಯು ಕ್ರೋಧಂ ಕಲ್ಲುಬೀಟಯಂತೆ, ಮಾನಂ ಕಲ್ಲುಕಂಭದ ಹಾಗೆ, ಮಾಯೆಯು ಬಿದಿರುಗೆಡ್ಡೆಯ ಬೇರಿನ ಹಾಗೆ, ಲೋಭವು ಕ್ರಿಮಿರಾಗದ ಕಂಬಳಿಯ ಹಾಗೆ, ಇವುಗಳು ಸಮ್ಯಕ್ತ್ವವನ್ನು ಕೆಡಿಸುವವು ॥೪॥ ಅಪ್ರತ್ಯಾಖ್ಯಾನಕ್ರೋಧವು ಎರೆಮಣ್ಣಿನ ಬೀಟೆಯ ಹಾಗೆ, ಮಾನವು ಅಸ್ಥಿಯ ಹಾಗೆ, ಮಾಯೆಯು ಟಗರ ಕೋಡಿನಹಾಗೆ, ಲೋಭಂ ನೀಲಿಯ ಸೀರೆಯ ಹಾಗೆ, ಇವು ಅಣುವ್ರತವನ್ನು ಕೆಡಿಸುವವು ॥೪॥ ಪ್ರತ್ಯಾಖ್ಯಾನಕ್ರೋಧವು ಧೂಳಿಯ ರೇಖೆಯ ಹಾಗೆ, ಮಾನಂ ಬಿದಿರಿನ ಹಾಗೆ, ಮಾಯೆ ಗೋಮೂತ್ರದ ಹಾಗೆ, ಲೋಭಂ ಕೆಸರಾದ ಸೀರೆಯ ಹಾಗೆ, ಇವು ಮಹಾವ್ರತವನ್ನು ಕೆಡಿಸುವವು ॥೪॥ ಸಂಜ್ವಲನಕ್ರೋಧಂ ಜಲರೇಖೆಯ ಹಾಗೆ, ಮಾನಂ ಬೆತ್ತದ ಹಾಗೆ, ಮಾಯೆಯು ಚಮರಿಯ ರೋಮದ ಹಾಗೆ, ಲೋಭವು ಅರಸಿನವಾದ ಸೀರೆಯ ಹಾಗೆ, ಇವು ಯಥಾಖ್ಯಾತ ಚಾರಿತ್ರವು ಉಂಟಾಗಲಿಕ್ಕೆ ಬಿಡುವದಿಲ್ಲವು. ಇಂತು ಹದಿನಾರು ಕಷಾಯಮೋಹನೀಯಗಳು.

೧ ಸ್ತ್ರೀವೇದಂ=ಪುರುಷಾಭಿಲಾಷೆಯನ್ನು ಮಾಡುವದು, ೨ ಪುಂವೇದಂ=ಸ್ತ್ರೀಯರಲ್ಲಿ ಅಭಿಲಾಷೆಯನ್ನು ಮಾಡುವದು, ೩ ನಪುಂಸಕವೇದವು ಉಭಯಾಭಿಲಾಷೆಯನ್ನು ಮಾಡುವದು, ೪ ಹಾಸ್ಯ=ನಗೆಯನ್ನು ಮಾಡುವದು, ೫ ರತಿ=ಮೆಚ್ಚಿಗೆಯನ್ನು ಮಾಡುವದು, ೬ ಅರತಿ=ಅಪ್ರೀತಿಯನ್ನು ಮಾಡುವದು, ೭ ಶೋಕ=ದು:ಖವನ್ನು ಮಾಡುವದು, ೮ ಭಯಂ=ಅಂಜಿಕೆಯನ್ನು ಮಾಡುವದು, ೯ ಜುಗುಪ್ಸೆ=ಹೇಸಿಗೆಯನ್ನು ಮಾಡುವದು. ಇಂತಿವು ಒಂಭತ್ತು ನೋಕಷಾಯಗಳು.

ದರ್ಶನಮೋಹನೀಯತ್ರಯವುಂ ೩, ಷೋಡಶಕಷಾಯವುಂ ೧೬, ನವ ನೋಕಷಾಯ ೯, ಎಂದಿವು ಉದಯ ಉದೀರಣಾಸತ್ವವನ್ನು ಕುರಿತು ಅಷ್ಟಾವಿಂಶತಿಗಳಾಗುವವು ॥ ೨೮ ॥ ಅವುಗಳಲ್ಲಿ ಸಮ್ಯಕ್ತ್ವಪ್ರಕೃತಿ, ಮಿಶ್ರಪ್ರಕೃತಿಗಳು ಬಂಧಕ್ಕೆ ಬರುವದಿಲ್ಲವಾದ್ದರಿಂದ ಬಂಧಪ್ರಕೃತಿಗಳು ಷಡ್ವಿಂಶತಿಗಳಾಗುವವು ॥೨೬॥ ಅವುಗಳನ್ನು ಗುಣಸ್ಥಾನದಲ್ಲಿ ಯೋಜಿಸುವದು ಹ್ಯಾಗಂದರೆ—

ಗಾಹೆ ॥ ಮಿಚ್ಛಕಸಾಓ ವೇದೋರದಿಭಯದುಗಮೋಹಬಂಧಯಿಗಿವೀಸಂ ।
ಸತ್ತರಸತ್ತರತೇರಂ ತಿಣವಂ ಪಂಚಾದಿಏಗಂತಂ ॥ ೪೪ ॥

ತಾ:—ದೇಶವ್ರತಿಗೆ ೧೩, ಪ್ರಮತ್ತಂಗೆ ೯, ಅಪ್ರಮತ್ತನಿಗೆ ೯, ಅಪೂರ್ವಕರಣನಿಗೆ ೮, ನಿವೃತ್ತಿಕರಣಗುಣಸ್ಥಾನದಲ್ಲಿ ೫, ಸೂಕ್ಷ್ಮಸಾಂಪರಾಯನಲ್ಲಿ ೪, ಉಪಶಾಂತಕಷಾಯನಲ್ಲಿ ೩, ಕ್ಷೀಣಕಷಾಯನಲ್ಲಿ ೩, ಸಯೋಗಿಕೇವಲಿಯಲ್ಲಿ ೨, ಅಯೋಗಿಕೇವಲಿಯಲ್ಲಿ ೧, ಈ ಪ್ರಕಾರಗಳಾಗುವವು.

## ಸೂತ್ರಂ ॥ ಆಯುಷ್ಯಂ ಚತುರ್ವಿಧಂ ॥ ೫೫ ॥

ತಾ:—ನರಕಾಯುಷ್ಯಂ, ತಿರ್ಯಗಾಯುಷ್ಯಂ, ಮನುಷ್ಯಾಯುಷ್ಯಂ, ದೇವಾಯುಷ್ಯ ಮೆಂದು ನಾಲ್ಕುವಿಧವು ॥ ೪ ॥ ೧ ಅಲ್ಲಿ ನರಕಾಯುಷ್ಯವು, ನಾರಕಶರೀರವನ್ನು ಹಿಡಿದಿರುವದು, ೨ ತಿರ್ಯಗಾಯುಷ್ಯವು, ತಿರ್ಯಕ್‌ಶರೀರವನ್ನು ಹಿಡಿದಿರುವದು, ೩ ಮನುಷ್ಯಾಯುಷ್ಯವು, ಮ ನುಷ್ಯಶರೀರವನ್ನು ಹಿಡಿದಿರುವದು, ೪ ದೇವಾಯುಷ್ಯವು, ದೇವಶರೀರವನ್ನು ಹಿಡಿದಿರುವದು, ಇವುಗಳು ತಂತಮ್ಮ ಗತಿಯನ್ನು ಮಾಡುವವು.

---

## ಸೂತ್ರಂ ॥ ದ್ವಿಚತ್ವಾರಿಂಶದ್ವಿಧಂ ನಾಮಃ ॥ ೫೬ ॥

ತಾ:—ನಾಮಕರ್ಮವು ನಲವತ್ತೆರಡು ಭೇದವಾಗುವದು ಹ್ಯಾಗಂದರೆ—ಗತಿ, ಜಾತಿ, ಶರೀರ, ಬಂಧನ, ಸಂಘಾತ, ಸಂಸ್ಥಾನ, ಅಂಗೋಪಾಂಗ, ಸಂಹನನ. ವರ್ಣ, ರಸ, ಗಂಧ, ಸ್ಪರ್ಶನ, ಆನುಪೂರ್ವಿ, ಅಗುರುಲಘು, ಉಪಘಾತ, ಪರಘಾತ, ಆತಪ, ಉದ್ಯೋತ, ಉಛ್ವಾಸ ನಿಶ್ವಾಸ, ವಿಹಾಯೋಗತಿ, ತ್ರಸ, ಸ್ಥಾವರ, ಬಾದರ, ಸೂಕ್ಷ್ಮ, ಪರ್ಯಾಪ್ತಕ, ಅಪರ್ಯಾ ಪ್ತಕ, ಪ್ರತ್ಯೇಕ ಶರೀರ, ಸಾಧಾರಣ ಶರೀರ, ಸ್ಥಿರ, ಅಸ್ಥಿರ, ಶುಭ, ಅಶುಭ, ಶುಭಗ, ದುರ್ಭಗ, ಸುಸ್ವರ, ದುಸ್ವರ, ಆದೇಯ, ಅನಾದೇಯ, ಯಶಸ್ಕೀರ್ತಿ, ಅಯಶಸ್ಕೀರ್ತಿ, ನಿರ್ಮಾಣ, ತೀರ್ಥ ಕರ ನಾಮಕರ್ಮವೆಂದಿಂತು ಪಿಂಡಾಪಿಂಡ ಪ್ರಕೃತಿ ಭೇದದಿಂದ ನಾಮಕರ್ಮವು ನಲವತ್ತೆರ ಡು ಭೇದವಾಗುವದು ॥ ೪೨ ॥ ಅವುಗಳನ್ನು ಭೇದಿಸಿದರೆ ತೊಂಭತ್ಮೂರು ಭೇದಗಳಾಗುವವು. ಹ್ಯಾಗಂದರೆ—

ನರಕ, ತಿರ್ಯಂಚ, ಮನುಷ್ಯ, ದೇವಗತಿಯೆಂದು ಗತಿ ನಾಲ್ಕುತೆರವು ॥ ೪ ॥ ಅವು ತಂತಮ್ಮ ಗತಿಯ ಪರ್ಯಾಯಗಳನ್ನುಂಟುಮಾಡುವವು.

ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯ ಜಾತಿಯೆಂದು ಜಾತಿನಾಮಕರ್ಮವು ಪಂಚವಿಧವು ॥ ೫ ॥ ಅವುಗಳು ತಮ್ಮ ತಮ್ಮ ಉದಯದಲ್ಲಿ ಏಕೇಂದ್ರಿ ಯಾದಿ ಜಾತಿಯನ್ನು ಮಾಡುವವು.

ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ. ಕಾರ್ಮಣಶರೀರವೆಂದು ಶರೀರನಾಮಕ ರ್ಮವು ಐದುತೆರವು ॥೫॥ ಅವು ತಂತಮ್ಮ ಉದಯದಲ್ಲಿ ತಂತಮ್ಮ ಶರೀರವನ್ನು ಮಾಡುವವು.

ಔದಾರಿಕ, ವೈಕ್ರಿಯಕ. ಆಹಾರಕ, ತೈಜಸ, ಕಾರ್ಮಣ, ಶರೀರಬಂಧನವೆಂದು ಬಂಧ ನನಾಮಕರ್ಮವೈದುವಿಧವು. ॥ ೫ ॥ ಅವು ತಂತಮ್ಮ ಉದಯಗಳಲ್ಲಿ ಶರೀರಕ್ಕೆ ಬಂಧನಾಮ ವನ್ನು ಮಾಡುವವು.

ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ, ಕಾರ್ಮಣವೆಂದು ಶರೀರಸಂಘಾತವೈ ದುತೆರವು ॥ ೫ ॥ ಅವು ತಮ್ಮ ತಮ್ಮ ಶರೀರಸಂಘಾತಗಳ್ಗೆ ನೇರ್ಪಡಂ ಮಾಳ್ಪವು.

ಸಮಚತುರಸ್ರ, ನ್ಯಗ್ರೋಧ, ಸ್ವಾದಿ, ಕುಬ್ಜ, ವಾಮನ, ಹುಂಡಸಂಸ್ಥಾನವೆಂದು ಸಂಸ್ಥಾನನಾಮಕರ್ಮವು ಆರುವಿಧವು ॥೬॥ ಅವು ತಂತಮ್ಮಲ್ಲಿ ಸಮಚತುರಸ್ರನಾಮದುದಯ

ಮೆಂತು ನೋಳ್ಪಡಂ ಚಲ್ವನಪ್ಪ ಶರೀರವನ್ನು ಮಾಡುದು ‖೧‖ ನ್ಯಗ್ರೋಧಸಂಸ್ಥಾನನಾಮುದುದಯವು, ಆಲದಮರದ ಹಾಗೆ ಕೆಳಗೆ ಅಸಿ (ಸಣ್ಣ)ದಾಗಿ ಮೇಲಗಲವಾದ ಶರೀರವನ್ನು ಮಾಡುವದು ‖ ೨ ‖

ಸ್ವಾದಿಸಂಸ್ಥಾನನಾಮುದುದಯವು, ಹುತ್ತಿನ ಹಾಗೆ ಕೆಳಗೆ ದೊಡ್ಡದಾಗಿ ಮೇಲೆ ಸಣ್ಣದಾಗಿರುವ ಶರೀರವನ್ನು ಮಾಡುವದು ‖೩‖

ಕುಬ್ಜಸಂಸ್ಥಾನನಾಮುದುದಯವು, ಸರ್ವಾಂಗವನ್ನು ಹ್ರಸ್ವಾಕಾರವನ್ನು ಮಾಡುವದು ೪. ವಾಮನಸಂಸ್ಥಾನನಾಮುದುದಯವು, ಕೈಕಾಲ್ಗಳು ನಿಡಿಯವಾಗಿ ಅಡಿಯಲ್ಲಿಕಿರಿಯವಪ್ಪ ಶರೀರಮಂ ಮಾಡುವದು ‖ ೫ ‖

ಹುಂಡಸಂಸ್ಥಾನ ನಾಮಕರ್ಮದುದಯವು, ಗೋಣಿಯೊಳುಗುಂಡತೀವಿದಂತೆ ನೇರ್ಪಿಲ್ಲದ ಶರೀರವನ್ನು ಮಾಡುವದು ‖ ೬ ‖

ಔದಾರಿಕ, ವೈಕ್ರಿಯಕ, ಆಹಾರಕಾಂಗೋಪಾಂಗ ನಾಮಕರ್ಮ ಮೂರುವಿಧವು ‖೩‖ ಅವು ತಂತಮ್ಮ ಉದಯಗಳಲ್ಲಿ ತಮ್ಮ ತಮ್ಮ ಶರೀರಗಳಿಗೆ ಅಂಗೋಪಾಂಗಗಳನ್ನು ಮಾಡುವವು. ಎರಡು ತೊಡೆ, ಎರಡು ತೋಳು, ಕಟಿ, ಉರ, ಬೆನ್ನು, ತಲೆ ಎಂಬಿವೆಂಟು ಅಂಗಗಳು, ಉಳಿದವು ಉಪಾಂಗಂಗಳು.

ವಜ್ರವೃಷಭನಾರಾಚ, ವಜ್ರನಾರಾಚ, ನಾರಾಚ, ಅರ್ಧನಾರಾಚ, ಕೀಲಿತ, ಅಸಂಪ್ರಾಪ್ತಸ್ರುಪಾಟಿಕಾಸಂಹನನಮೆಂದು ಸಂಹನನನಾಮಕರ್ಮವು ಷಡ್ವಿಧವು ‖ ೬ ‖

ಅವರಲ್ಲಿ ವಜ್ರವೃಷಭನಾರಾಚಸಂಹನನನಾಮುದುದಯವು, ವಜ್ರದಂತಪ್ಪ ಯಲುವುಂ, ಕೀಲುಂ, ಸುತ್ತುಮಂ ಮಾಳ್ಪದು ‖ ೧ ‖ ವಜ್ರನಾರಾಚನಾಮುದುದಯವು, ವಜ್ರದಂತಪ್ಪ ಯಲುವುಂ, ಕೀಲುಂ, ಸಾಮಾನ್ಯದ ಸುತ್ತುಮಂ ಮಾಳ್ಪದು ‖ ೨ ‖ ನಾರಾಚಸಂಹನನನಾಮುದುದಯವು, ವಜ್ರದಂತಪ್ಪೆಲುವುಂ, ಸಾಮಾನ್ಯದ ಕೀಲುಂ, ಸುತ್ತುಮಂ ಮಾಳ್ಪದು ‖ ೩ ‖ ಅರ್ಧನಾರಾಚನಾಮುದುದಯವು, ಬಲ್ಲಿತ್ತಪ್ಪ ಎಲುವುಂ, ಅರ್ಧಕೀಲುಮಂ ಮಾಳ್ಪದು ‖ ೪ ‖ ಕೀಲಿತನಾಮಸಂಹನನದುದಯವು ಕೀಲ್ಗೊಟ್ಟಂತೆ ಬಲ್ಲಿತ್ತಪ್ಪೆಲುವುಂ, ಗಂಟುಗಳಂ ಮಾಳ್ಪದು ‖ ೫ ‖ ಅಸಂಪ್ರಾಪ್ತಸ್ರುಪಾಟಿಕಾಸಂಹನನನಾಮುದುದಯವು, ಒಂದನ್ನೊಂದು ಮುಟ್ಟದೆಲ್ಗಟ್ಟಂ ಮಾಳ್ಪದು. ಇವು ಆರು ನಾರಾಚಲಕ್ಷಣಂಗಳು ‖ ೬ ‖

ಶ್ವೇತ, ಪೀತ, ಹರಿತ, ಅರುಣ, ಕೃಷ್ಣಮೆಂದು ವರ್ಣನಾಮಮೈದು ವಿಧವು ‖ ೫ ‖ ಅವರುದಯಂ ತಂತಮ್ಮ ಶರೀರಕ್ಕೆ ತಂತಮ್ಮ ವರ್ಣಮಂ ಮಾಳ್ಪದು.

ಸುಗಂಧ, ದುರ್ಗಂಧಮೆಂದು ಗಂಧನಾಮಕರ್ಮಮಿತ್ತೆರವು. ಅವು ತಂತಮ್ಮ ಉದಯದೊಳು ಶರೀರಕ್ಕೆ ತಂತಮ್ಮ ಗಂಧಮಂ ಮಾಳ್ಪವು ‖ ೨ ‖

ತಿಕ್ತ, ಕಟುಕ, ಕಷಾಯ, ಆಮ್ರ, ಮಧುರಮೆಂದು ರಸನಾಮಕರ್ಮಮೈದುವಿಧವು ‖೫‖ ಅವು ತಂತಮ್ಮುದಯದೊಳು ಶರೀರಕ್ಕೆ ತಂತಮ್ಮ ರಸಮಂ ಮಾಳ್ಪವು.

ಮೃದು, ಕರ್ಕಶ, ಗುರು, ಲಘು, ಶೀತ, ಉಷ್ಣ, ಸ್ನಿಗ್ಧ, ರೂಕ್ಷಮೆಂದು ಸ್ಪರ್ಶನನಾಮ ಮೆಂಟು ತೆರವು. ಅವು ತಂತಮ್ಮುದಯದೊಳು ಶರೀರಕ್ಕೆ ತಂತಮ್ಮ ಅರಿಷ್ಟಮುಂ ಮಾಳ್ಪವು ‖ ೮ ‖ ನರಕಗತ್ಯಾನುಪೂರ್ವಿ, ತಿರ್ಯಗ್ಗತ್ಯಾನುಪೂರ್ವಿ, ಮನುಷ್ಯಗತ್ಯಾನುಪೂರ್ವಿ, ದೇವಗತ್ಯಾನುಪೂರ್ವಿಯೆಂದಾನುಪೂರ್ವಿನಾಮಂ ನಾಲ್ಕು, ಅವು ತಂತಮ್ಮುದಯದೊಳು ಜೀವಂ ನರಕಾದಿಗತಿಗೆ ಸಲುವಲ್ಲಿ ವಿಗ್ರಹಗತಿಯೊಳು ವಿಶಿಷ್ಟಾಕಾರಮಂ ಮಾಳ್ಪವು ‖ ೪ ‖ ಅಗುರುಲಘುನಾಮಕರ್ಮಂ ತಂತಮ್ಮುದಯದೊಳು ಬಿಂಣ್ಮಿತಂ, ನೊಚ್ಚಿತ್ತುಮಲ್ಲದಶರೀರಮಂ ಮಾಳ್ಪುದು ‖ ೧ ‖ ಉಪಘಾತನಾಮುದುದಯಂ ತನಗೆ ಪೀಡೆಯನ್ನು ಮಾಡುವ ಡೊಳ್ಳು ಮೊದಲಾದ ಶರೀರವನ್ನು ಮಾಡುವದು ‖ ೧ ‖ ಪರಘಾತನಾಮಕರ್ಮವು ಅನ್ಯರಿಗೆ ಪೀಡೆಯನ್ನು ಮಾಡುವ ಹಾವಿನ ಹಲ್ಲು ಮೊದಲಾದುವಂ ಮಾಳ್ಪುದು ‖ ೧ ‖ ಆ ತಪನಾಮಕರ್ಮಂ ಸೂರ್ಯಬಿಂಬದೊಳು ಪುಟ್ಟಿದ ಪೃಥ್ವಿಕಾಯಿಕಂಗಳ ಶರೀರಕ್ಕೆ ಬೆಂಕಿಯನ್ನುಳ್ಳ ಬೆಳಗಂ ಮಾಳ್ಪುದು‖೧‖ ಉದ್ಯೋತನಾಮಕರ್ಮಂ ಚಂದ್ರತಾರಕಾದಿ ಬಿಂಬಂಗಳೊಳಂ ತೇಜಃಕಾಯಿಕ ವಾತಕಾಯಿಕಂಗಳಲ್ಲದ, ಸಾಧಾರಣವನಸ್ಪತಿಕಾಯಕಂಗಳಲ್ಲದ, ಬಾದರಪರ್ಯಾಪ್ತಕಂಗಳೊಳಂ ಪುಟ್ಟಿದ ತಿರ್ಯಗ್ಜೀವಂಗಳ ಶರೀರಕ್ಕೆ ಬೆಂಕಿಯಿಲ್ಲದೆ ಬೆಳಗಂ ಮಾಳ್ಪುದು ‖ ೧ ‖ ಉಚ್ಛ್ವಾಸನಾಮುದುದಯಂ ಸುಯ್ವುದಂ ಮಾಳ್ಪುದು ‖ ನಿಶ್ವಾಸನಾಮಕರ್ಮಂ ಬಿಡಿಸುಯ್ವಂ ಮಾಳ್ಪುದು ‖ ೧ ‖ ಪ್ರಶಸ್ತವಿಹಾಯೋಗತಿಯುಂ, ಅಪ್ರಶಸ್ತವಿಹಾಯೋಗತಿಯುಮೆಂದು ವಿಹಾಯೋಗತಿನಾಮುವೆರಡು ವಿಧವು ‖ ೨ ‖ ಅದರಲ್ಲಿ ಪ್ರಶಸ್ತವಿಹಾಯೋಗತಿನಾಮಂ, ಒಳ್ಳೇ ನಡತೆಯನ್ನು ಮಾಡುವದು, ಅಪ್ರಶಸ್ತವಿಹಾಯೋಗತಿನಾಮಂ, ಕೆಟ್ಟ ನಡತೆಯನ್ನು ಮಾಡುವದು ‖ ೨ ‖ ತ್ರಸನಾಮಂ, ಶರೀರಾವಯವಂಗಳ್ಗೆ ಚಲನೆಯನ್ನು ಮಾಡುವದು ಅಂದರೆ, ದ್ವೀಂದ್ರಿಯಾದಿತ್ರಸ ಶರೀರಮಂ ಮಾಳ್ಪುದು ‖ ೧ ‖ ಸ್ಥಾವರನಾಮಕರ್ಮಂ ಚಲನೆಯಿಲ್ಲದ ಪೃಥ್ವಪ್ತೇಜೋವಾಯು ವನಸ್ಪತಿ ಶರೀರಮಂ ಮಾಳ್ಪುದು ‖ ೧ ‖ ಬಾದರನಾಮಕರ್ಮಂ ಪೆರರಿಂದ ಬಾಧೆಪಡುವ ಶರೀರಮಂ ಮಾಳ್ಪುದು ‖ ೧ ‖ ಸೂಕ್ಷ್ಮನಾಮಂ ಅನ್ಯರಿಂದ ಬಾಧೆಯನ್ನು ಹೊಂದದ ಶರೀರವನ್ನು ಮಾಡುವದು ‖ ೧ ‖ ಪರ್ಯಾಪ್ತನಾಮಂ ತಂತಮ್ಮ ಪರ್ಯಾಪ್ತಿಗಳ ನೆರವಿಯಂ ಮಾಳ್ಪುದು, ಆ ಪರ್ಯಾಪ್ತಿಗಳ್ಯಾವವೆಂದೊಡೆ—ಆಹಾರ, ಶರೀರ, ಇಂದ್ರಿಯ, ಉಚ್ಛ್ವಾಸನಿಶ್ವಾಸ, ಭಾಷಾ, ಮನಃಪರ್ಯಾಪ್ತಿಗಳೆಂದು ಪರ್ಯಾಪ್ತಿಗಳಾರು ವಿಧವು ‖ ೬ ‖ ಅಲ್ಲಿ ಆಹಾರವರ್ಗಣೆಯಿಂ ಬಂದ ಪುದ್ಗಲಸ್ಕಂಧಗಳಂ ಖಳರಸಭಾಗಸ್ವರೂಪದಿಂ ಪರಿಣಮಿಸುವಂತಪ್ಪಾತ್ಮನ ಶಕ್ತಿಯನೆರವಿ, ಆಹಾರಪರ್ಯಾಪ್ತಿಯು, ಪಿಂಡಿಯಂ ಪೋಲ್ವ ಖಳಭಾಗಂ ಅಸ್ಥಿ ಮೊದಲಾದ ಕಠಿಣಾವಯವ ಸ್ವರೂಪದಿಂ ಎಂಣೆಯಂ ಪೋಲ್ವ ರಸಭಾಗಮುಂ, ರಕ್ತಂ ಮೊದಲಾದ ದ್ರವಾವಯವ ಸ್ವರೂಪದಿಂ ಪರಿಣಮಿಸುವ ಆತ್ಮನನೆರವಿ, ಶರೀರಪರ್ಯಾಪ್ತಿ ಎಂಬುವದು ‖ ೨ ‖ ಸ್ವಯೋಗ್ಯಪ್ರದೇಶದೊಳಿರ್ದ ವರ್ಣಾದಿ ವಿಷಯಂಗಳಂ ಕೈಕೊಳ್ವ ವ್ಯಾಪಾರವಿಶಿಷ್ಟಮಪ್ಪಾತ್ಮನ ನೆರವಿ, ಇಂದ್ರಿಯ ಪರ್ಯಾಪ್ತಿ ಎಂಬುವದು ‖ ೩ ‖ ಆಹಾರವರ್ಗಣೆಯಿಂ ಬಂದ ಪುದ್ಗಲಂಗಳಂ ಉಚ್ಛ್ವಾಸನಿಶ್ವಾಸರೂಪದಿಂ ಪರಿಣಮಿಸುವಾತ್ಮನ ಶಕ್ತಿಯ ನೆರವಿ, ಉಚ್ಛ್ವಾಸನಿಶ್ವಾಸಪರ್ಯಾಪ್ತಿ ಎಂಬುವದು ‖ ೪ ‖ ಯೋಗ್ಯಕಾಲದೊಳು ಬಂದ ಭಾಷಾವರ್ಗಣೆಯ ಪುದ್ಗಲಂಗಳಂ ಚತುರ್ವಿಧಭಾಷಾಸ್ವರೂಪದಿಂ ಪರಿಣಮಿಸುವಾತ್ಮನ ಶಕ್ತಿಯನೆರವಿ, ಭಾಷಾ

ಪರ್ಯಾಪ್ತಿ ಎಂಬುದು ॥೫॥ ದೃಷ್ಟ, ಶ್ರುತಾನುಭೂತಂಗಳಪ್ಪರ್ಥಂಗಳಂ ನೆನೆವಾತ್ಮನ ನೆರವಿ, ಮನಃಪರ್ಯಾಪ್ತಿಯೆಂಬುವದು ॥ ೬ ॥ ಅಪರ್ಯಾಪ್ತನಾಮಂ ತಂತಮ್ಮ ಪರ್ಯಾಪ್ತಿಗಳ ನೆರಥಿಯ ನಾಗಲೀಯದು ॥ ೧ ॥ ಪ್ರತ್ಯೇಕ ಶರೀರನಾಮವೊಂದೇ ಜೀವಕ್ಕೊಂದೊಂದೇ ಶರೀರಮಂ ಮಾಳ್ಪುದು. ಸಾಧಾರಣನಾಮಂ, ಅನಂತಜೀವಂಗಳಿಗೆ ಒಂದೇ ಶರೀರವನ್ನು ಮಾಡುವದು. ರಸ, ರುಧಿರ, ಮಾಂಸ, ಮೇಧೋಸ್ಥಿ, ಮಜ್ಜ, ಶುಕ್ಲಂಗಳೆಂಬ ಸಪ್ತಧಾತುಗಳನ್ನು ಸ್ಥಿರವನ್ನು ಮಾಡುವದು ಸ್ಥಿರನಾಮಕರ್ಮವು. ಅಸ್ಥಿರನಾಮವು, ಸಪ್ತಧಾತುಗಳನೊಂದೊಂದಕ್ಕೆ ಸಲಿಸುವುದು. ಶುಭನಾಮಂ, ಮಸ್ತಕಾದಿ ಪ್ರಶಸ್ತಾವಯವಂಗಳಂ ಮಾಳ್ಪುದು. ಅಶುಭನಾಮಕರ್ಮವು ಕೆಟ್ಟವಯವಗಳನ್ನು ಮಾಡುವದು. ಶುಭಗನಾಮಂ, ಫಲಕರ್ಮೆಯಂ ಮಾಳ್ಪುದು. ದುರ್ಭಗನಾಮಂ ಫಲಮಂನಿವುದಂ ಮಾಳ್ಪುದು. ಸುಸ್ವರನಾಮಕರ್ಮಂ ಕಿವಿಗಿನಿದಾದ ಸ್ವರಮಂ ಮಾಡುವದು. ದುಸ್ವರನಾಮಂ ಕಿವಿಗೆ ಇನಿತಲ್ಲದ (ಕೇಳಲಿಕ್ಕಾಗದ) ಸ್ವರವನ್ನು ಮಾಡುವದು. ಆದೇಯನಾಮಂ ಅನೇಕರು ಮುನ್ನಿಸುವದನ್ನು ಮಾಡುವದು. ಅನಾದೇಯಕರ್ಮಂ, ಪಲರ್ ಮುನ್ನಿಸದುದನ್ನು ಮಾಡುವದು. ಯಶಸ್ಕೀರ್ತಿನಾಮಂ, ಗುಣಾವಳಿಯಿಂ ಸಂದಪೊಗಳ್ತೆಯನ್ನು ಮಾಡುವದು. ಅಯಶಸ್ಕೀರ್ತಿನಾಮಂ, ಕೆಟ್ಟ ಅಪಯಶಸ್ಸನ್ನು ಮಾಡುವದು. ನಿರ್ಮಾಣನಾಮಂ, ಅವಯವದೊಳುಂ, ತಂತಮ್ಮಾಕಾರದೊಳುಂ, ಪ್ರಮಾಣದೊಳುಂ ಕೂಡಿ ತಂತಮ್ಮ ಸ್ಥಾನದೊಳು ಮಾಳ್ಪುದು. ತೀರ್ಥಕರನಾಮಂ, ಪಂಚಕಲ್ಯಾಣ ವಿಭೂತಿಯನ್ನುಳ್ಳಾರ್ಹಂತ್ಯ ಪದವಿಯನ್ನು ಮಾಡುವದು. ಇಂತು ನಾಮಕರ್ಮ ತೊಂಭತ್ಮೂರು ತೆರಂ ॥ ೯೩ ॥

---

## ಸೂತ್ರಂ ॥ ದ್ವಿವಿಧಂ ಗೋತ್ರಂ ॥ ೫೭ ॥

ತಾಃ—ಉಚ್ಚೈರ್ಗೋತ್ರಂ, ನೀಚೈರ್ಗೋತ್ರಂ ಎಂದಿತ್ತೆರಂ ॥ ೨ ॥ ಅದರಲ್ಲಿ ಉತ್ತಮಕುಲಂಗಳನ್ನು ಮಾಡುವದು ಉಚ್ಚೈರ್ಗೋತ್ರವು ॥ ೧ ॥ ನೀಚಕುಲಗಳನ್ನು ಮಾಡುವದು ನೀಚೈರ್ಗೋತ್ರಕರ್ಮವು ॥ ೨ ॥

---

## ಸೂತ್ರಂ ॥ ಪಂಚವಿಧಮಂತರಾಯಂ ॥ ೫೮ ॥

ತಾಃ—ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ, ವೀರ್ಯಾಂತರಾಯಮೆಂದು ಅಂತರಾಯಕರ್ಮವು ಪಂಚವಿಧವು ॥ ೫ ॥

೧ ಅಲ್ಲಿ ಕೊಡುವದಕ್ಕೆ ವಿಘ್ನವನ್ನು ಮಾಡುವದು ದಾನಾಂತರಾಯವು. ೨ ಪಡೆಯುವದಕ್ಕೆ ವಿಘ್ನವನ್ನು ಮಾಡುವದು ಲಾಭಾಂತರಾಯವು. ೩ ಭೋಗಪಡುವದಕ್ಕೆ ವಿಘ್ನವನ್ನು ಮಾಡುವದು ಭೋಗಾಂತರಾಯವು, ೪ ಸ್ತ್ರೀ, ವಸ್ತ್ರಾಭರಣಾದಿ ಧನಧಾನ್ಯ ಮೊದಲಾದ ಉಪಭೋಗಗಳಿಗೆ ವಿಘ್ನವನ್ನು ಮಾಡುವದು ಉಪಭೋಗಾಂತರಾಯವು. ೫ ಶಕ್ತಿಯನ್ನು ಕ್ರಮದಿಂದ ಆಗಲಿಕ್ಕೆ ಬಿಡದೆ ವಿಘ್ನವನ್ನು ಮಾಡುವದು ವೀರ್ಯಾಂತರಾಯಕರ್ಮವು. ಇವೈದುಂ ಅಂತರಾಯಕರ್ಮಗಳು. ಇಂತು ನೂರುನಲವತ್ತೆಂಟು (೧೪೮) ಉತ್ತರಪ್ರಕೃತಿಭೇದಗಳು. ಉತ್ತರೋತ್ತರಪ್ರಕೃತಿಗಳು ಸಂಖ್ಯಾತ ಭೇದಗಳಾಗುವವು.

ಅಲ್ಲಿ ಜ್ಞಾನಾವರಣೀಯಂ, ದರ್ಶನಾವರಣೀಯಂ, ವೇದನೀಯಂ, ಅಂತರಾಯಮೆಂಬೀ ನಾಲ್ಕರ ಉತ್ಕೃಷ್ಟಸ್ಥಿತಿ ಮೂವತ್ತುಕೋಟಾಕೋಟಿ ಸಾಗರೋಪಮಂಗಳು. ದರ್ಶನಮೋಹನೀಯಕ್ಕೆ ಹತ್ತುಕೋಟಾಕೋಟಿ ಸಾಗರೋಪಮಂಗಳು. ಚಾರಿತ್ರಮೋಹನೀಯಕ್ಕೆ ನಲವತ್ತುಕೋಟಾಕೋಟಿ ಸಾಗರೋಪಮಂಗಳು. ನಾಮ, ಗೋತ್ರಗಳಿಗೆ ವಿಂಶತಿ ಕೋಟಾಕೋಟಿ ಸಾಗರೋಪಮಂಗಳು. ಆಯುಷ್ಯದುತ್ಕೃಷ್ಟಸ್ಥಿತಿ ಮೂವತ್ಮೂರು (೩೩) ಸಾಗರೋಪಮಂಗಳು. ವೇದನೀಯಕ್ಕೆ ಜಘನ್ಯಸ್ಥಿತಿ ದ್ವಾದಶಮುಹೂರ್ತವು. ನಾಮಗೋತ್ರಗಳಗೆ ಎಂಟು ಮುಹೂರ್ತವು. ಉಳಿದೈದಕ್ಕೂ ಅಂತರ್ಮುಹೂರ್ತಜಘನ್ಯಸ್ಥಿತಿಯಾಗುವದು. ಘಾತಿಗಳಿಗೆ, ಲತೆ, ದಾರು, ಅಸ್ಥಿ, ಶೈಲಮೆಂದು ಚತುಶ್ಶಕ್ತಿಗಳಾಗುವವು. ಅಶುಭಘಾತಿಗಳಿಗೆ, ನಿಂಬ, ಕಾಂಜೀರ, ವಿಷ, ಹಾಲಾಹಲ ಸಮಾನವಾದ ಶಕ್ತಿಗಳಾಗುವವು. ಶುಭಘಾತಿಗಳಗೆ, ಗುಡ, ಖಂಡ ಶರ್ಕರಾಮೃತಮೆಂಬಿವರೊಳು ಸಮಾನವಾದ ಶಕ್ತಿಯುಳ್ಳವುಗಳು. ಕ್ಷೇತ್ರಮನವಗಾಹಿಸಿಕೊಂಡಿರ್ದುದು ಕರ್ಮಯೋಗ್ಯಮಪ್ಪುದು, ಆತ್ಮನ ಪ್ರದೇಶದಿಂ ಸ್ವಕೀಯನಿಮಿತ್ತಂ ಬೆರಸಿತೆಗೆಯುವದು.

---

## ತ್ರಿಭಂಗಿಯ ಗಾಹೆಗಳು.

ಗಾಹೆ ॥ ಣಮಿವೂಣನೇಮಿಚಂದಂ ಅಸಹಾಯಪರಕ್ಕಮಂ ಮಹಾವೀರಂ ॥
ಬಂದುದಯಸತ್ತಜುತ್ತಂ ಓಘಾದೇಸೇಥಯಂ ಬೊಚ್ಛಂ ॥ ೪೫ ॥

ತಾ:—ಅಸಹಾಯಪರಾಕ್ರಮನುಂ ಮಹಾವೀರನುಂ ಆದ ನೇಮಿಚಂದ್ರರಿಗೆ ನಮಸ್ಕಾರವನ್ನು ಮಾಡಿ, ಬಂಧ ಉದಯಸತ್ವಯುಕ್ತವಾದ ಸ್ತವನವನ್ನು ಓಘಮೆಂದೊಡೆ=ಗುಣಸ್ಥಾನಗಳಲ್ಲಿ, ಆದೇಶವೆಂದರೆ=ಮಾರ್ಗಣಸ್ಥಾನಗಳಲ್ಲಿ ಹೇಳುವೆನು.

ಗಾಹೆ ॥ ದೇಹೋದಏಣಸಹಿಓ ಜೀವೋ ಆಹಾರದಿಕಂಮಣೋಕಮ್ಮಂ ॥
ಪಡಿಸಮಯಂಸವ್ವಂಗಂ ತತ್ತಾಯಸಪಿಂಡವೊಂಬಜಳಂ ॥ ೪೬ ॥
ಸಿದ್ಧಾಣಂತಿಮ ಭಾಗೋ ಅಭಬ್ಬಸಿದ್ಧಾದಣಂತಗುಣಮೇವ ॥
ಸಮಯಪಬಂಧ ಬಂದದಿ ಜೋಗವಸಾದೋದುವಿಸರಿಥ್ಥಂ ॥ ೪೭ ॥

ತಾ:—ಸಿದ್ಧರಾಶಿಯನಂತೈಕಭಾಗಮುಂ, ಅಭವ್ಯರಾಶಿಯನಂತಗುಣಮಪ್ಪ ಸಮಯಪ್ರಬಂಧಮಂ, ಯೋಗವಶದಿಂ ವಿಶದೃಶಮಾಗಿಕಟ್ಟುಗುಂ.

ಗಾಹೆ ॥ ಎಕ್ಕಂ ಸಮಯ ಪಬಂಧಂ ಬಂಧದಿಯೆಕ್ಕ ಉದಯೇದಿಕಂಮ್ಮಾಣಿ ॥
ಗುಣಹಾಣಿಣದಿವಡ್ಢಸಮಯ ಪಬಂಧಂ ಹವೇಸತ್ತಂ ॥ ೪೮ ॥

ತಾ:—ಒಂದು ಸಮಯಪ್ರಬಂಧಮುಂ ಕಟ್ಟುಗುಂ, ಒಂದುಸಮಯಪ್ರಬಂಧಮಂ ಉದೀರಿಸುಗುಂ, ದ್ವ್ಯರ್ಧಗುಣಹಾನಿಮಾತ್ರ ಸಮಯಪ್ರಬದ್ಧಸತ್ವಮಾಗಿಕ್ಕುಂ.

ಗಾಹೆ ॥ ದೇಹೇ ಅವಿಣಾಭಾವಿ ಬಂದಣಸಂಘಾಯಯದಿಅಬಂದುದಯಾ ॥
ವಂಣಚವುಕ್ಕೆ ಭಿಂಣೆಗಹಿದೆ ಚತ್ತಾರಿ ಬಂದುದಯಾ ॥ ೪೯ ॥

ತಾ:—ಶರೀರನಾಮಕರ್ಮದೊಡನೆ ಬಂಧನಸಂಘಾತಂಗಳು ಅಂತರ್ಭಾಗಿಗಳಾಗಲೈದಕ್ಕುಂ, ವರ್ಣಚತುಷ್ಕಂಗಳನಭೇದದಿಂ ಕೈಕೊಳಲುನಾಲ್ಕಕ್ಕುಂ. ಇದು ಉದಯಾಪೇಕ್ಷೆ.

ಗಾಹೆ ॥ ಭೇದೇ ಛಾದಾಳಸಮಂ ಯಿದಿರೆ ಬಂಹಿದೇಹವಂತಿ ॥
ವೀಸಸಯಂಭೇದೇಸಬ್ಬೆಉದಯಾಬಾವೀಸಸಯಂ ಅಭೇದವಿಸ್ಥಿ ॥ ೫೦ ॥

ತಾ:--ಅಭೇದದಿಂ ಬಂಧಪ್ರಕೃತಿ ನೂರಿಪ್ಪತ್ತಾಗುವದು (೧೨೦), ಭೇದಿಸಿದರೆ ನೂರು ನಲವತ್ತಾರಾಗುವದು (೧೪೬).

ಗಾಹೆ ॥ ಪಂಚ ಣವ ದೊಂಣಿ ಛಬ್ಬೀಸ ಮವಿಯ ಚಉರೋಕಮೇಣಸತ್ತ್ರಿ ॥
ದೊಂಣಿಯಪಂಚಯ ಭಣಿಯಾ ಏದಾಓಬಂಧಪಯಡಿಓ ॥ ೫೧ ॥

ತಾ:--೫, ೯, ೨, ೨೬. ೪, ೬೭, ೨, ೫ ಬಂಧಪ್ರಕೃತಿಗಳಾಗುವವು.

ಗಾಹೆ ॥ ಪಂಚಣವ ದೊಂಣಿ ಅಠ್ಠಾವೀಸಂ ಚಉರೊಕಮೇಣಸತ್ತ್ರಿ ॥
ದೊಂಣಿಯ ಪಂಚಯ ಭಣಿಯಾ ಏದಾವೋ ಉದಯಪಯಡಿಓ ॥ ೫೨ ॥

ತಾಃ—ಮುಂಚೆ ಹೇಳಿದ ಹಾಗೆ ಉದಯಪ್ರಕೃತಿ ಸಮ್ಯಕ್ತ್ವಪ್ರಕೃತಿಗಳಿಗೆ ಮಿಶ್ರಪ್ರಕೃತಿಗಳಿಗೆ ವಿಶೇಷ.

ಗಾಹೆ ॥ ಸಂಮೇವತಿಥ್ಥಬಂಧೋ ಆಹಾರದುಗಪ್ಪಮಾದರಹಿದೇಸು ॥
ಮಿಸ್ಸೂಣೆ ಆಉಸ್ಸಯಮಿಚ್ಛಾದಿಸುಸೇಸಬಂದೋದು ॥ ೫೩ ॥

ತಾ:—ಸಮ್ಯಗ್ದೃಷ್ಟಿಗಳಲ್ಲಿಯೇ ತೀರ್ಥಕರಬಂಧ, ಪ್ರಮತ್ತನೊಳಾಹಾರಕಾಹಾರಕಾಂಗೋಪಾಂಗದ್ವಯಂ, ಮಿಶ್ರನೊಳು ಯಾವಾಯುರ್ಬಂಧವಿಲ್ಲ ಪೇಳ್ದಸ್ಥಾನದ ಪ್ರಕೃತಿಗಳಲ್ಲದುಳಿದ ಮಿಥ್ಯಾದೃಷ್ಟಿಯಾದಿಯಾಗಿ ಬಂಧಮಕ್ಕುಂ.

ಗಾಹೆ ॥ ಸೋಳಸ ಪಣವೀಸ ಣಭಂ ದಸ ಚಉ ಛಕ್ಕೆಕ್ಕ ಬಂದಬೊಚ್ಛಿಂಣಾ ॥
ದುಗ ತಿಸ ಚದುರ ಪುಂವೆ ಪಣ. ಸೋಳಸ ಜೋಗಿಣವೋಎಕ್ಕೋ ॥ ೫೪ ॥

ತಾಃ--ಬಂಧವ್ಯುಚ್ಛಿತ್ತಿ ೧೬, ೨೫, ೦, ೧೦, ೪, ೬, ೧ ಎಂದಿವೇಳು ಗುಣಸ್ಥಾನಗುಣದೊಳಕ್ಕುಂ. ಅಪೂರ್ವಕರಣನ ಮೊದಲಭಾಗದಲ್ಲಿ ೨, ಮೂರನೇ ಭಾಗದಲ್ಲಿ ೩೦, ಕಡೆಯ ಭಾಗದಲ್ಲಿ ನಾಲ್ಕು ವ್ಯುಚ್ಛಿತ್ತಿಯುಂ ಆಗುವವು. ಅನಿವೃತ್ತಿಕರಣನಲ್ಲಿ ೫, ಸೂಕ್ಷ್ಮಸಾಂಪರಾಯನಲ್ಲಿ ೧೬, ಸಯೋಗಿಯಲ್ಲಿ ಒಂದರಬಂಧವ್ಯುಚ್ಛಿತ್ತಿಯಾಗುವದು.

ಗಾಹೆ ॥ ಮಿಚ್ಛತ್ತಹಾಂಡಸಂಡಾಸಂಪತ್ತೆ ಎಕ್ಕದಾವರಾದಾವಂ ॥
ಸುಹುಮತಿಯಂ ವಿಯಳಿಂದಿಯಣಿರಯ ದುಣಿರಯಾಉಗಂಮಿಚ್ಛೇ ॥ ೫೫ ॥

ತಾ:—ಮಿಥ್ಯಾತ್ವವುಂ, ಹುಂಡಸಂಸ್ಥಾನವುಂ, ನಪುಂಸಕವೇದವುಂ, ಅಸಂಪ್ರಾಪ್ತಸೃಪಾಟಿಕಾಸಂಹನನವುಂ, ಏಕೇಂದ್ರಿಯ ಜಾತಿಯುಂ, ಸ್ಥಾವರನಾಮವುಂ, ಆತಪನಾಮವುಂ, ಸೂಕ್ಷ್ಮಪರ್ಯಾಪ್ತಿ, ಸಾಧಾರಣತ್ರಸಂ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯವೆಂಬೀ ವಿಕಲೇಂದ್ರಿಯ ಜಾತಿನಾಮವುಂ, ನರಕಗತಿ, ತತ್ಪ್ರಾಯೋಗ್ಯಾನುಪೂರ್ವಿದ್ವಯವುಂ, ನರಕಾಯುಷ್ಯವೆಂಬೀ ಹದಿನಾರುಂ ಮಿಥ್ಯಾದೃಷ್ಟಿ ಗುಣಸ್ಥಾನದಲ್ಲಿ ವ್ಯುಚ್ಛಿನ್ನಂಗಳಾಗುವವು ॥ ೧ ॥

ಗಾ ಹೆ॥ ಬಿದಿಯಗುಣೆ ಅಣದಿಣತಿದೂಭತ್ತೀಸಂಠಾಣ ಸಂಹದಿಚ ಉಕ್ಕಂ ॥
ದುಗ್ಗಮಣಂದಿಣಿಚತ್ತಿರಿಯದುಗುಜ್ಜೋವತಿರಿಯಾವೂ ॥ ೫೬ ॥

ತಾ:—ಸಾಸಾದನ ಗುಣಸ್ಥಾನದಲ್ಲಿ ಅನಂತಾನುಬಂಧಿಚತುಷ್ಕಂ (೪), ಸ್ತ್ಯಾನಗೃದ್ಧಿ, ನಿದ್ರಾನಿದ್ರೆ, ಪ್ರಚಲಾಪ್ರಚಲೆತ್ರಯಂ (೩), ದುರ್ಭಗ, ದುಸ್ವರ, ಅನಾದೇಯತ್ರಯವುಂ (೩), ನ್ಯಗ್ರೋಧ, ಸ್ವಾತಿ, ಕುಬ್ಜ, ವಾಮನಚತುಷ್ಕಸಂಸ್ಥಾನವುಂ (೪), ವಜ್ರನಾರಾಚ, ನಾರಾಚ ಅರ್ಧನಾರಾಚ, ಕೀಲಿಕವೆಂಬೀ ನಾಲ್ಕು ಸಂಹನನವುಂ (೪), ಉದ್ಯೋತಂ, ಅಪ್ರಶಸ್ತವಿಹಾಯೋಗತಿ, ಸ್ತ್ರೀವೇದಂ, ನೀಚೈರ್ಗೋತ್ರಂ, ತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವಿದ್ವಯವುಂ (೨), ತಿರ್ಯಗಾಯುಷ್ಯವೆಂದೀ ಪಂಚವಿಂಶತಿ (೨೫) ಪ್ರಕೃತಿವ್ಯುಚ್ಛಿನ್ನಗಳಾಗುವವು ॥ ೨ ॥

ಗಾಹೆ ॥ ಅಯದೆಬಿದಿಯಕಸಾಯಾವಜ್ಜಂ ಒರಾಳಮಣುದುಮಣುವಾವೂ ॥
ದೇಸೆತದಿಯಕಸಾಯಾಣಿಯಮೇಣಿಹಬಂಧಬೋಚ್ಛಿಂಣಾ ॥ ೫೭ ॥

ತಾ:—ಅಸಂಯತಗುಣಸ್ಥಾನದಲ್ಲಿ ಅಪ್ರತ್ಯಾಖ್ಯಾನ ಚತುಷ್ಕಷಾಯವುಂ (೪), ವಜ್ರವೃಷಭನಾರಾಚಸಂಹನನವುಂ, ಔದಾರಿಕಔದಾರಿಕಾಂಗೋಪಾಂಗವುಂ, ಮನುಷ್ಯಗತಿ ತತ್ಪ್ರಾಯೋಗ್ಯಾನುಪೂರ್ವಿದ್ವಯವುಂ (೨), ಮನುಷ್ಯಾಯುಷ್ಯವೆಂದೀ ಹತ್ತು ವ್ಯುಚ್ಛಿನ್ನಂಗಳಾಗುವವು ॥ ೪ ॥ ದೇಶಸಂಯತಗುಣಸ್ಥಾನದಲ್ಲಿ ಪ್ರತ್ಯಾಖ್ಯಾನಚತುಷ್ಕಂಗಳು ನಿಶ್ಚಯದಿಂದಂ ಬಂಧವ್ಯುಚ್ಛಿನ್ನಗಳಾಗುವವು ॥ ೫ ॥

ಗಾಹೆ ॥ ಛಠ್ಠೆ ಅದಿರು ಅಸುಹಂ ಅಸಾದಮಯಸಂ ಚ ಅರದಿಸೋಗಚ್ಛ ॥
ಅಪಮತ್ತೇದೇವಾವೂಣಿಠ್ಠವಣಂಚೇವ ಅಥ್ಥಿತ್ತಿ ॥ ೫೮ ॥

ತಾ:—ಪ್ರಮತ್ತಗುಣಸ್ಥಾನದಲ್ಲಿ ಅಸ್ಥಿರನಾಮಂ, ಅಸಾತಾವೇದನೀಯಂ, ಅಯಶಸ್ಕೀರ್ತಿನಾಮಂ, ಅರತಿ ಶೋಕಮುಮೆಂಬಿವು ವ್ಯುಚ್ಛಿನ್ನಗಳಾಗುವವು ॥ ೬ ॥ ಅಪ್ರಮತ್ತಸಂಯತನಲ್ಲಿ ದೇವಾಯುಷ್ಯದ ನಿಷ್ಪತ್ತಿಯುಂಟೆಂದಿಂತು ಅವರ ವ್ಯುಚ್ಛಿತ್ತಿಯಕ್ಕುಂ ॥ ೭ ॥

ಗಾಹೆ ॥ ಮರಣೂಣಮ್ಮಿಣಿಯಟ್ಟೆಪಡಮೇಣಿಂದಾತಹೇವಪಯಳಾಯ ॥
ಛಠ್ಠೇಭಾಗೇತಿಥ್ಥಂ ನಿಮ್ಮಾಣಂ ಸಗ್ಗಮಣಪಂಚಿಂದಿ ॥ ೫೯ ॥

ತೇಜದುಹಾರದುಸಮಚವುಸುರವಂಣಗುರುಗಚಉಕ್ಕತಸಣವಯ್ಯು ॥
ಚರಿಮೇಹಸ್ಸಂ ಚರದಿಭಯಂ ದುಗುಚ್ಛಾಯಬೋಛಿಂಣಾ ॥ ೬೦ ॥

ತಾ:—ಮರಣರಹಿತಮಪ್ಪ ಅಪೂರ್ವಕರಣನ ಕಾಲದ ಪ್ರಥಮಭಾಗದೊಳು ನಿದ್ರೆಯುಂ, ಅಂತಪ್ರಚಲೆಯುಂ, ವ್ಯುಚ್ಛಿನ್ನಗಳಪ್ಪವು. ಆರನೆಯ ಭಾಗದಲ್ಲಿ ತೀರ್ಥಕರನಾಮ, ನಿರ್ಮಾಣನಾಮಮುಂ, ಪ್ರಶಸ್ತವಿಹಾಯೋಗತಿಯುಂ, ಪಂಚೇಂದ್ರಿಯ ಜಾತಿನಾಮವುಂ, ತೇಜಕಾರ್ಮಣದ್ವಯವುಂ, ಆಹಾರಕಾಹಾರಕಾಂಗೋಪಾಂಗದ್ವಯವುಂ, ಸಮಚತುರಸ್ರಸಂಸ್ಥಾನವುಂ, ದೇವಗತಿ ತತ್ಪ್ರಾಯೋಗ್ಯಾನುಪೂರ್ವಿ, ವೈಕ್ರಿಯಕ, ವೈಕ್ರಿಯಕಾಂಗೋಪಾಂಗಚತುಷ್ಕವುಂ, ವರ್ಣ, ರಸ, ಗಂಧ, ಸ್ಪರ್ಶಚತುಷ್ಕವುಂ, ಅಗುರುಲಘು ಉಪಘಾತ, ಪರಘಾತ, ಉಚ್ಛ್ವಾಸಚತುಷ್ಕವುಂ, ತ್ರಸಬಾದರಪರ್ಯಾಪ್ತಕ ಪ್ರತ್ಯೇಕ ಶರೀರ, ಸ್ಥಿರ, ಶುಭ, ಶುಭಗ, ಸುಸ್ವರ, ಆದೇಯನವಕಮೆಂಬೀ ಮೂವತ್ತು ವ್ಯುಚ್ಛಿನ್ನಗಳಾಗುವವು. ಕಡೆಯ ಭಾಗದಲ್ಲಿ ಹಾಸ್ಯ, ರತಿ, ಭಯ, ಜುಗುಪ್ಸೆಯೆಂದಿವು ವ್ಯುಚ್ಛಿನ್ನಗಳಾಗುವವು ॥ ೮ ॥

ಗಾಹೆ॥ ಪುರಿಸಂ ಚದುಸಂಜಲಣಂ ಕಮೇಣ ಅಣಿಯತ್ತಿ ಪಂಚಭಾಗೇಸು ।
ಪಡಮಂ ವಿಘ್ಘಚವುಕ್ಕಂ ದಂಸಣಚವುದಸವಚ್ಚಂಚಸುಹುಮಂತೇ ॥ ೬೧ ॥

ತಾ:—ಪುಂವೇದವುಂ, ಸಂಜ್ವಲನ ಚತುಷ್ಕಮೆಂಬಿವು ಕ್ರಮದಿಂದಂ ಅನಿವೃತ್ತಿಕರಣ ನೆಯ್ದು ಭಾಗೆಯಲ್ಲಿ ವ್ಯುಚ್ಛಿನ್ನಗಳಾಗುವವು ॥೫॥ ಸೂಕ್ಷ್ಮಸಾಂಪರಾಯ ಗುಣಸ್ಥಾನದಲ್ಲಿ ಜ್ಞಾನಾವರಣಪಂಚಕವುಂ, ಅಂತರಾಯಪಂಚಕವುಂ, ಚಕ್ಷುರ್ದರ್ಶನವುಂ ಮೊದಲಾದದರ್ಶನಾವರಣ ಚತುಷ್ಕವುಂ, ಯಶಸ್ಕೀರ್ತಿನಾಮಂ, ಉಚ್ಚೈರ್ಗೋತ್ರಮುಮೆಂಬೀ ಹದಿನಾರು ವ್ಯುಚ್ಛಿನ್ನಗಳಾಗುವವು ॥ ೧೦ ॥

ಗಾಹೆ॥ ಉವಸಂತಖೀಣಮೋಹೇಜೋಗಿಮ್ಹಿಯ ಸಮಯಟ್ಠಿದಿ ಸಾದಂ ।
ಓದವ್ವಾಪಯಡಿಓ ಬಂಧಸ್ಸಂತೋ ಅಣಂತೋಯ ॥ ೬೨ ॥

ತಾ:—ಉಪಶಾಂತಕಷಾಯ, ಕ್ಷೀಣಕಷಾಯ, ಸಯೋಗಿಕೇವಲಿ ಗುಣಸ್ಥಾನಗಳೆಂಬ ಮೂರರಲ್ಲಿ ಸಮಯಸ್ಥಿತಿಯನ್ನುಳ್ಳ ಸಾತಾವೇದನೀಯ ಬಂಧವೇ ಆಗುವದು. ಈ ರೀತಿಯಿಂದ ಪ್ರಕೃತಿ, ಬಂಧ ವ್ಯುಚ್ಛಿತ್ತಿಯುಂ, ಬಂಧಮುಂ, ಚಶಬ್ದದಿನ ಬಂಧಮುಂ ಅರಿಯಲ್ಪಡುವವು.

ಗಾಹೆ॥ ಸತ್ತರ ಸೆಕ್ಕಗ್ಗಸಯಂಚವು ಸತ್ತತ್ತರಿಸಗಟ್ಠಿ ತೆವಥ್ಥಿ ।
ಬಂದಾಣಮಟ್ಠವಿಂಣಾದುವೀಸಸತ್ತಾರಸೆಕ್ಕೋಘೇ ॥ ೬೩ ॥

ತಾ:—೧೧೭, ೧೦೧, ೭೪, ೭೭, ೬೭, ೬೩, ೫೯, ೫೮, ೨೨, ೧೭, ೧, ಮೆಂದಿವು ಹದಿಮೂರು ಗುಣಸ್ಥಾನಗಳಲ್ಲಿ ಕ್ರಮದಿಂದ ಬಂಧಂಗಳಾಗುವವು.

ಗಾಹೆ॥ ತಿಯವುಣವೀಸಂ ಛತ್ತಿಯ ತಾಳಂತೇವಂಣ ಸತ್ತವಂಣಂಚ ।
ಯಿಗಿದುಗಸಗ್ಗಿ ಬಿರಹಿಯ ಸಮತಿಯವುಣವೀಸಹಿಯ ವೀಸಸಯಂ ॥ ೬೪ ॥

ತಾ:—೩, ೧೯, ೪೬, ೪೩, ೫೩, ೫೭, ೬೧, ೬೨, ೯೮, ೧೦೩, ೧೧೯, ೧೨೦, ಅಬಂಧಗಳಾಗುವವು. ಇದು ಬಂಧತ್ರಿಭಂಗಿಯು.

ಗಾಹೆ॥ ಆಹಾರಂತುಪಮತ್ತೇತಿಥ್ಥಂ ಕೇವಳಿಣಿಮಿಸ್ಸಯಂಮಿಸ್ಸೇ ।
ಸಮ್ಮಂವೇದಗಸಂಮಂಮಿಛ್ಛದುಗಯದೇವ ಅಣುದಓ ॥ ೬೫ ॥

ತಾ:—ಆಹಾರಕಾಹಾರಕಾಂಗೋಪಾಂಗದ್ವಯಮುಂ, ಪ್ರಮತ್ತಸಂಯತನೊಳು, ತೀರ್ಥಕರನಾಮದುದಯಂ, ಸಯೋಗಾಯೋಗ ಕೇವಲಿಗಳೊಳು, ಸಮ್ಯಗ್ಮಿಥ್ಯಾತ್ವವು, ಮಿಶ್ರ ಗುಣಸ್ಥಾನದೊಳು, ಸಮ್ಯಕ್ತ್ವಪ್ರಕೃತಿ, ವೇದಕ ಸಮ್ಯಗ್ದೃಷ್ಟಿಯೊಳು, ಮಿಥ್ಯಾದೃಷ್ಟಿಸಾಸಾದನ ಸಮ್ಯಗ್ದೃಷ್ಟಿ, ಅಸಂಯತ ಸಮ್ಯಗ್ದೃಷ್ಟಿ ಎಂಬೀ ಮೂರು ಗುಣಸ್ಥಾನದೊಳು ಆನುಪೂರ್ವಿಯುದಯಮಕ್ಕುಂ.

ಗಾಹೆ॥ ಣಿರಯಂ ಸಾಸಣಸಂಮೋಣಗಂದ ದಿತ್ತಿಣತಸ್ಸಣಿರಯಾಣು ।
ಮಿಛ್ಛಾದಿಸುಸೇಸುದಓಸಗಸಗಚರಿಮೊತ್ತಿಣಾದವ್ವೋ ॥ ೬೬ ॥

ತಾ:—ನರಕಕ್ಕೆ ಸಾಸಾದನ ಸಮ್ಯಗ್ದೃಷ್ಟಿ ಸಲ್ಲನಲ್ಲೆಂದಿಂತು, ಆತನಿಗೆ ನರಕಾನುಪೂರ್ವಿಯುದಯಮಿಲ್ಲ. ಮಿಥ್ಯಾದೃಷ್ಟ್ಯಾದಿ ಗುಣಸ್ಥಾನದೊಳು ಉಳಿದ ಕರ್ಮಂಗಳುದಯಂ ತಂತಮ್ಮಗುಣಸ್ಥಾನದ ಕಡೆಯುವರಮುಕ್ಕು ಮೆಂದರಿಯಲ್ಪಡುವದು.

ಗಾಹೆ ॥ ಪಣಣವ ಇಗಿ ಸತ್ತರಸಂ ಅಡಪಂಚಯ ಚಉರ ಛಕ್ಕ ಛಚ್ಚೇವ ॥
ಇಗಿ ದುಗಸೋಳಸ ತೀಸಂ ಬಾರಸ ಉದಯೇ ಅಜೋಗತ್ತಾ ॥ ೬೭ ॥

ತಾಃ—೫, ೯, ೧, ೧೭, ೮, ೫, ೪, ೬, ೬, ೧, ೨, ೧೬, ೩೦, ೧೨, ಉದಯವ್ಯುಚ್ಛಿತ್ತಿಯೊಳು ಆಯೋಗಿಗುಣಸ್ಥಾನದವರಿಗೂ ಆಗುವವು.

ಗಾಹೆ ॥ ಮಿಚ್ಛೇಮಿಛ್ಛಾದಾವಂ ಸುಹುಮತಿಯಂ ಸಾಸಣೆ ಅಣೆಯಿಡ್ಡಿ ॥
ದಾವರವಿಯಳಂ ಮಿಚ್ಛೇಮಿಸ್ಸುಭಯು ಉದಯಬೋಛ್ಛಿಂಣಾ ॥ ೬೮ ॥

ತಾಃ—ಮಿಥ್ಯಾತ್ವಗುಣಸ್ಥಾನದೊಳು, ಮಿಥ್ಯಾತ್ವವುಂ, ಆತಪವುಂ, ಸೂಕ್ಷ್ಮಪರ್ಯಾಪ್ತ ಸಾಧಾರಣತ್ರಯವೆಂಬಿವೈದುಂ ವ್ಯುಚ್ಛಿನ್ನಂಗಳಾಗುವವು ॥೧॥ ಸಾಸಾದನ ಗುಣಸ್ಥಾನದೊಳು ಅನಂತಾನುಬಂಧಿಚತುಷ್ಕವುಂ, ಏಕೇಂದ್ರಿಯ ಸ್ಥಾವರ ವಿಕಲತ್ರಯ ಜಾತಿನಾಮವುಂ ಎಂಬೀ ಒಂಭತ್ತು ವ್ಯುಚ್ಛಿನ್ನಗಳಾಗುವವು ॥ ೨ ॥ ಮಿಶ್ರಗುಣಸ್ಥಾನದಲ್ಲಿ ಸಮ್ಯಗ್ಮಿಥ್ಯಾತ್ವಂ ಪ್ರಕೃತಿಯುದಯ ವ್ಯುಚ್ಛಿನ್ನಗಳಾಗುವವು ॥ ೩ ॥

ಗಾಹೆ ॥ ಆಯುದೆ ಬಿದಿಯಕಸಾಯಾವೇಗುಬ್ಬಿಯ ಛಕ್ಕಣಿರಯದೇವಾವೂ ॥
ಮಣುವತಿರಿಯಾಣು ಪುಬ್ಬಿದೂಭಗಣಾದೆಂಜ ಅಜ್ಜಸಯಂ ॥ ೬೯ ॥

ತಾ:—ಅಸಂಯತಗುಣಸ್ಥಾನದಲ್ಲಿ ಅಪ್ರತ್ಯಾಖ್ಯಾನ ಚತುಷ್ಕವುಂ. ನರಕಗತಿ, ನರಕಗತ್ಯಾನುಪೂರ್ವಿ, ದೇವಗತಿ, ತತ್ಪಾಯೋಗಾನುಪೂರ್ವಿ, ವೈಕ್ರಿಯಕಾಂಗೋಪಾಂಗವೆಂಬೀ ವೈಕ್ರಿಯಕ ಷಟ್ಕವುಂ, ನಾರಕ, ದೇವಾಯುಷ್ಯವುಂ, ಮನುಷ್ಯ, ತಿರ್ಯಗಾನುಪೂರ್ವಿಯುಂ, ದುರ್ಭಗನಾಮವುಂ, ಅನಾದೇಯನಾಮವುಂ, ಅಯಶಸ್ಕೀರ್ತಿನಾಮವುಂ ಎಂಬೀ ಹದಿನೇಳು ಉದಯವ್ಯುಚ್ಛಿನ್ನಗಳಾಗುವವು ॥ ೪ ॥

ಗಾಹೆ ॥ ದೇಸೇತದೀಯಕಸಾಯಾ ತಿರಿಯಾವುಜ್ಜೋವಣಿಚ ತಿರಿಯಗದಿ ॥
ಛಠ್ಠೇ ಆಹಾರದುಗಂ ಅಣದಿಯ ಉಜ್ಜೋವ ಬೋಛ್ಛಿಂಣಾ ॥ ೭೦ ॥

ತಾಃ—ದೇಶಸಂಯತ ಗುಣಸ್ಥಾನದೊಳು ಪ್ರತ್ಯಾಖ್ಯಾನ ಚತುಷ್ಕವುಂ, ತಿರ್ಯಗಾಯುಷ್ಯವುಂ, ಉದ್ಯೋತನಾಮವುಂ, ನೀಚೈರ್ಗೋತ್ರವುಂ, ತಿರ್ಯಗ್ಗತಿನಾಮವುಂ ಎಂಬೀ ಎಂಟು ವ್ಯುಚ್ಛಿನ್ನಂಗಳಾಗುವವು ॥೫॥ ಆರನೆಯ ಪ್ರಮತ್ತಗುಣಸ್ಥಾನದಲ್ಲಿ ಆಹಾರಕಾಹಾರಕಾಂಗೋಪಾಂಗದ್ವಯಮುಂ, ಸ್ತ್ಯಾನಗೃದ್ಧಿ, ನಿದ್ರಾನಿದ್ರೆ, ಪ್ರಚಲಾಪ್ರಚಲಾತ್ರಯುವೆಂಬಿವಯ್ದುಂ ಉದಯವ್ಯುಚ್ಛಿನ್ನಂಗಳಾಗುವವು ॥ ೬ ॥

ಗಾಹೆ ॥ ಆಹಾರಂ ಸುದಯೇಣಯಪಮತ್ತವಿರದಂಸಹೋದಿ ಆಹಾರಂ ॥
ಅಸಂಜಮಪರಿಹರಣಠ್ಠಂ ಸಂದೇಹವಿಣಾಸಣಠ್ಠಂ ಚ ॥ ೭೧ ॥

ತಾಃ—ಆಹಾರನಾಮಕರ್ಮದುದಯದಿಂದ ಪ್ರಮತ್ತವಿರತನಿಗೆ ಆಹಾರಶರೀರದುದಯವಾಗುವದು. ಅದೇನುಕಾರಣವೆಂದರೆ? ಅಸಂಯಮವನ್ನು ಪರಿಹರಿಸಲುಂ, ಸಂದೇಹವಿನಾಶಾರ್ಥವಾಗಿಯುಂ.

ಗಾಹೆ ॥ ಣಿಯಖೇತ್ತೇಕೇವಳಿದುಗವಿರಹೇರಿಚ್ಛಮಣಪಹುದಿಕಂಲಾಣೆ ॥
ಪರಖೇತ್ತೇಸಂವಿತ್ತೇ ಜಿಣಜಿಣಘರವಂದಣಠ್ಠಂ ಚ ॥ ೭೨ ॥

ತಾ:—ತಾವಿರ್ದಕ್ಷೇತ್ರದೊಳು ಕೇವಲಿಗಳೀರ್ವರಿಲ್ಲದೊಡಂ ನಿಷ್ಕ್ರಮಣಾದಿಕಲ್ಯಾಣದೊಳಂ, ಪರಕ್ಷೇತ್ರದೊಳೀಯುಂಟೆಂದರಿದೊಡಂ, ಜಿನರುಮಂ ಜಿನಗೃಹವಂದನಾರ್ಥವಾಗಿಯುಂ.

ಗಾಹೆ ॥ ಉತ್ತಮು ಅಂಗಮ್ಹಿಹವೇದಾದುವಿಹೀಣಂ ಸುಭಂ ಅಸಂಘಡಣಂ ॥
ಸುಹಸಠ್ಠಾಣಂ ದವಳಂ ಹಥ್ಥಪಮಾಣಪ್ಪಸಥ್ಥುದಯಂ ॥ ೭೩ ॥

ತಾ:—ಉತ್ತಮಾಂಗದೊಳು ಹುಟ್ಟುವದುಂ, ಧಾತುವಿಹೀನವುಂ, ಶುಭನಾಮವುಂ, ಸಂಹನನರಹಿತವುಂ, ಶುಭಸಂಸ್ಥಾನವುಂ, ಹಸ್ತಪ್ರಮಾಣವುಂ, ಪ್ರಶಸ್ತೋದಯಮುಂ ಮತ್ತಂ—

ಗಾಹೆ ॥ ಅಬ್ಬಾಘಾದಿ ಅಂಥೋಮುಹುತ್ತಕಾಲಠ್ಠಿದಿ ಜಹಂಣಿದರೇ ॥
ಪಜ್ಜತ್ತಿಸಂಘಣಂ ಮರಣಂ ಪಿಕದಾಚಿಸಂಭವದಿ ॥ ೭೪ ॥

ತಾ:—ವ್ಯಾಘಾತವಿಲ್ಲದುದುಂ, ಅಂತರ್ಮುಹೂರ್ತಕಾಲಸ್ಥಿತ ಜಘನ್ಯಮಧ್ಯಮೋತ್ಕೃಷ್ಟಸ್ಥಿತಿಯನುಳ್ಳುದು, ಪರ್ಯಾಪ್ತಿನೆರದೊಡಲ್ಲದೆ ಕಥಂಚಿತ್ ಮರಣವನ್ನೈದರೆಂಬುವದಭಿಪ್ರಾಯವು ॥ ೬ ॥

ಗಾಹೆ ॥ ಅಪಮತ್ತೇಸಂಮತ್ತಂ ಅಂತಿಮಂತಿಯಸಂಹದಿ ಅಪುಬ್ಬಮ್ಹಿ ॥
ಛಚ್ಚೇವಣೋಕಸಾಯಾ ಅಣಿಯಟ್ಟಿಭಾಗಭಾಗೇಸು ॥ ೭೫ ॥
ವೇದತಿಯಕೋಹಮಾಣಂ ಮಾಯಾಸಂಜಣಣ ಮೇವಸುಹುಮಂತೆ ॥
ಸುಹುಮೋಲೋಹೋಸಂತೇವಜ್ಜಂಣಾರಾಯಣಾರಾಯ ॥ ೭೬ ॥

ತಾ:—ಅಪ್ರಮತ್ತಗುಣಸ್ಥಾನದೊಳು ಸಮ್ಯಕ್ತ್ವಪ್ರಕೃತಿಯುಂ, ಅರ್ಧನಾರಾಚ, ಕೀಲಿಕ, ಅಸಂಪ್ರಾಪ್ತಸ್ರುಪಾಟಿಕಾಸಂಹನನವೆಂದು ಕಡೆಯ ಮೂರುಂ, ಎಂಬೀ ನಾಲ್ಕು ವ್ಯುಚ್ಛಿನ್ನಂಗಳಾಗುವವು ॥೭॥ ಅಪೂರ್ವಕರಣ ಗುಣಸ್ಥಾನದಲ್ಲಿ ಹಾಸ್ಯಾದಿಗಳಾದ ಆರುನೋಕಷಾಯಗಳು ವ್ಯುಚ್ಛಿನ್ನಂಗಳಾಗುವವು ॥೮॥ ಸೂಕ್ಷ್ಮಸಾಂಪರಾಯ ಗುಣಸ್ಥಾನದಲ್ಲಿ ಸೂಕ್ಷ್ಮಲೋಭಂ ವ್ಯುಚ್ಛಿನ್ನವಾಗುವದು ॥ ೧೦ ॥ ಉಪಶಾಂತಕಷಾಯಗುಣಸ್ಥಾನದಲ್ಲಿ ವಜ್ರನಾರಾಚಸಂಹನನವುಂ, ನಾರಾಚಸಂಹನನವುಂ, ವ್ಯುಚ್ಛಿನ್ನಗಳಾಗುವವು ॥ ೧೧ ॥

ಗಾಹೆ ॥ ಖೀಣಕಸಾಯದುಚರಿಮೇಣಿಂದಾಪಯಳಾಯ ಉದಯಬೊಚ್ಛಿಂಣಾ ॥
ಣಾಣಂತರಾಯದಸಯಂ ದಂಸಣಚತ್ತಾರಿಚರಿಮಮ್ಹಿ ॥ ೭೭ ॥

ತಾ:—ಕ್ಷೀಣಕಷಾಯ ಗುಣಸ್ಥಾನದಲ್ಲಿ ದ್ವಿಚರಮಸಮಯದಲ್ಲಿ ನಿದ್ರಾಪ್ರಚಲೆಗಳು ವ್ಯುಚ್ಛಿನ್ನಗಳಾಗುವವು ॥ ೧೨ ॥ ಆ ಗುಣಸ್ಥಾನದ ಕಡೆಯ ಸಮಯದಲ್ಲಿ, ಮತ್ಯಾದಿಜ್ಞಾನಾವರಣಪಂಚಕ, ದಾನಾಂತರಾಯಪಂಚಕ, ಎಂಬ ಹತ್ತುಂ, ಚಕ್ಷುರ್ದರ್ಶನಾವರಣೀಯ ಚತುಷ್ಕವುಂ ಎಂಬ ಹದಿನಾಲ್ಕು ವ್ಯುಚ್ಛಿನ್ನಗಳಾಗುವವು.

ಗಾಹೆ ॥ ತದಿಎಕ್ಕವಜ್ಜಣಿಮಿಣಾಥಿರಸುಹಸರಗದಿ ಓರಾಳತೇಜದುಗಂ ।
ಸಠ್ಠಾಣಂ ವಂಣಾಗುರುಚವುಕ್ಕಪತ್ತೇಯ ಜೋಗಿಮ್ಹಿ ॥ ೭೮ ॥

ತಾ:—ಸಾತಾಸಾತವೇದನೀಯಗಳಲ್ಲಿ ಯಾವುದಾದರೊಂದು ವೇದನೀಯವುಂ, ವಜ್ರವೃಷಭನಾರಾಚಸಂಹನನವುಂ, ನಿರ್ಮಾಣನಾಮವುಂ, ಸ್ಥಿರಾಸ್ಥಿರದ್ವಯವುಂ, ಶುಭಾಶುಭದ್ವಿಕವುಂ,

ಸುಸ್ವರದುಸ್ವರದ್ವಯವುಂ, ಪ್ರಶಸ್ತಾಪ್ರಶಸ್ತವಿಹಾಯೋಗತಿಯುಂ, ಔದಾರಿಕಔದಾರಿಕಾಂಗೋಪಾಂಗವುಂ, ತೈಜಸಕಾರ್ಮಣದ್ವಯವುಂ, ಸಮಚತುರಸ್ರ, ನ್ಯಗ್ರೋಧ, ಸ್ವಾತಿ, ಕುಬ್ಜ, ವಾಮನ, ಹುಂಡವೆಂಬಾರು ಸಂಸ್ಥಾನವುಂ, ವರ್ಣ, ರಸ, ಗಂಧ, ಸ್ಪರ್ಶ, ಚತುಷ್ಕವುಂ, ಅಗುರುಲಘು, ಉಪಘಾತ, ಪರಘಾತ, ಉಛ್ವಾಸಚತುಷ್ಕವುಂ, ಪ್ರತ್ಯೇಕಶರೀರನಾಮವುಂ ಎಂಬೀ ಮೂವತ್ತು ವ್ಯುಚ್ಛಿನ್ನಗಳಾಗುವವು.

ಸಯೋಗಿಗುಣಸ್ಥಾನದೊಳು—

ಗಾಹೆ ॥ ತದಿಎಕ್ಕಂ ಮಣುವಗತಿ ಪಂಚೆಂದಿಯ ಸುಭಗತಸತಿಗಾದೆಜ್ಜಂ ॥
ಜಸತಿಥ್ಥಂ ಮಣುವಾಊ ಉಚ್ಚಂ ಚ ಅಜೋಗಿ ಚರಿಮಮ್ಹಿ ॥ ೭೯ ॥

ತಾ:—ಸಾತಾಸಾತಾವೇದನೀಯಗಳಲ್ಲಿ ಯಾವುದಾದರೊಂದು ವೇದನೀಯವುಂ, ಮನುಷ್ಯಾಯುಷ್ಯವುಂ, ಪಂಚೇಂದ್ರಿಯ ಜಾತಿನಾಮವುಂ, ಶುಭನಾಮವುಂ, ತ್ರಸಬಾದರ ಪರ್ಯಾಪ್ತವುಂ, ಆದೇಯನಾಮವುಂ, ಯಶಸ್ಕೀರ್ತಿನಾಮವುಂ, ತೀರ್ಥಕರನಾಮವುಂ, ಮನುಷ್ಯಾಯುಷ್ಯವುಂ, ಉಚ್ಚೈರ್ಗೋತ್ರಮುಂ ಎಂದೀ ಹನ್ನೆರಡುಂ ವ್ಯುಚ್ಛಿನ್ನಗಳಾಗುವವು.

ಅಯೋಗಿಗುಣಸ್ಥಾನದೊಳು—

ಗಾಹೆ ॥ ಜೊಂಣೋಕಸಾಯ ವಿಘ್ಘಂ ಚವುಕ್ಕಾಣ ಬಳೇಣ ಸಾದಪಹುದೀಣಂ ।
ಸುಹಪಯಡಿಣುದಯಭವಂ ಇಂದಿಯತೋಸಂಹವೇಸತ್ತಂ ॥ ೮೦ ॥

ತಾ:—ಯಾವದೊಂದು ನೋಕಷಾಯ ಚತುಷ್ಕದ ಬಲದಿಂ ಸಾತಾದಿ ಶುಭಪ್ರಕೃತಿಗಳ ಉದಯದಿಂದಾದ ಇಂದ್ರಿಯ ಸಂತೋಷಮುಂ ಸಾತಾವೇದನಿಯವೆಂಬುವದು.

ಗಾಹೆ ॥ ಜೊಂಣೋಕಸಾಯ ವಿಘ್ಘಂ ಚವುಕ್ಕಾಣ ಬಳೇಣ ದುಖ್ಖಪಹುದೀಣಂ ।
ಅಸುಹಾಣಂ ಉದಯಭವಂ ಇಂದಿಯಭೇದಂ ಹವೇದುಖ್ಖಂ ॥ ೮೧ ॥

ತಾ:—ಯಾವದೊಂದು ನೋಕಷಾಯ ವಿಘ್ನಚತುಷ್ಕದ ಬಲದಿಂ ದುಃಖಂ ಮೊದಲಾದ ಅಶುಭಕರ್ಮಪ್ರಕೃತಿಗಳುದಯದಿಂದಾದ ಇಂದ್ರಿಯಭೇದಗಳು ಅಸಾತಾವೇದನೀಯವೆಂಬುದು.

ಗಾಹೆ ॥ ಣಠ್ಠಾಯರಾಯದೋಸಾ ಇಂದಿಯಣಾಣಂಚಕೇವಳಂ ಹಿ ಜದೊ ।
ತೇಣದುಸಾದಾಸಾದ ಜಸುಹ ದುಖ್ಖಾಣಂದಿಂದಿಯಜಂ ॥ ೮೨ ॥

ತಾ:—ಇಂದ್ರಿಯಜ್ಞಾನವುಂ, ರಾಗದ್ವೇಷಂಗಳುಂ, ಕೆಡುತ್ತಿರೆ ಕೇವಲಿಗಳೊಳು ಅವುದೊಂದು ಕಾರಣದಿಂದದುಕಾರಣ ಸಾತಾಸಾತಜನಿತ ಸುಖಂಗಳಲ್ಲಿ ಇಂದ್ರಿಯಜನಿತಂ.

ಗಾಹೆ ॥ ಸಮಯಟ್ಠಿದಿಗೋಬಂಧೋಸಾದಸ್ಸುದಯಂಪಿ ಗೋಜದೋಜಂಸ ।
ತೇಣ ಅಸಾದಂಸುದಓಸಾದಸುರೂವೇಣ ಪರಿಣಮದಿ ॥ ೮೩ ॥

ತಾ:—ಸಮಯಸ್ಥಿತಿಕ ಬಂಧಮನುಳ್ಳ ಸಾತೋದಯಾತ್ಮಿಕವಾವುದೊಂದುಕಾರಣಮದುಕಾರಣದಿಂದಸಾತೋದಯಂ ಸಾತಸ್ವರೂಪದಿಂ ಪರಿಣಮಿಸುಗುಂ.

ಗಾಹೆ ॥ ಏದೇಣಕಾರಣೇಣದುಸಾದಂ ಸೇವದುಣಿರಂತರೋ ಉದವೋ ।
ತೇಣಾಸಾದಾಸಾದ ಜಪರಿಸಹಾಜಿಣವರೇಣಥ್ಥಿ ॥ ೮೪ ॥

ತಾ:--ಆದುಕಾರಣದಿಂ ಸಾತಾಸಾತಾವೇದನೀಯದುದಯಮುಂಟಪ್ಪದರಿಂ ಅಸಾತಾ ವೇದನೀಯ ನಿಮಿತ್ತವಾದ ದು:ಖಪರೀಷಹಂಗಳು ಜಿನರಲ್ಲಿಲ್ಲವೆಂದು ನಿಶ್ಚಯಿಸುವದು.

ಗಾಹೆ॥ ಸತ್ತರಸೆಕ್ಕಾರ ಖಚದುಸಹಿಯುಸಯಂ ಸಗಿಗಿಸಿ ಥದುಸದತಿ ।
ಥಾವತ್ತಿ ಸತ್ತಿಣವಸಯುವಂಣಾಸದುದಾಳಬಾರದುಯಾ ॥ ೮೫ ॥

ತಾ:--೧೧೭, ೧೧೧, ೧೦೦, ೧೦೪, ಎಂದಿವು ಮಿಥ್ಯಾದೃಷ್ಟಿ ಮೊದಲಾದ ನಾಲ್ಕು ಗುಣಸ್ಥಾನದಲ್ಲಿ ಉದಯಪ್ರಕೃತಿಗಳಾಗುವವು. ೮೭, ೮೧, ೭೬, ೭೨, ೬೬, ೬೦, ೫೯, ೫೭, ೪೨, ೧೨, ಎಂದಿವು ಶೇಷಗುಣಸ್ಥಾನದಲ್ಲಿ ಉದಯಿಸುವವು.

ಗಾಹೆ॥ ಪಂಚೆಕ್ಕಾರಸಬಾವೀಸತ್ತಾರಸ ಪಂಚತೀಸ ಇಗಿಥಾದಾಳಂ ।
ಪಂಣಂಥಪ್ಪಂಣಂ ಬಿದಿಪಣಸತ್ತಿ ಅಸೀದಿದುಗುಣಪವಂಣಂ ॥ ೮೬ ॥

ತಾ:--ಪಂಚಂ ( ೫ ), ಏಕಾದಶಂ ( ೧೧ ), ದ್ವಾವಿಂಶತಿ ( ೨೨ ), ಅಷ್ಟಾದಶಂ (೧೮), ಪಂಚತ್ರಿಂಶತ್ ( ೩೫ ), ಏಕಚತ್ವಾರಿಂಶಂ ( ೪೧ ), ಷಟ್‌ಚತ್ವಾರಿಂಶಂ ( ೪೬ ), ಪಂಚಾಶತಂ ( ೫೦ ), ಷಟ್ಪಂಚಾಶತ್ ( ೫೬ ), ದ್ವಿಷಷ್ಠಿ ( ೬೨ ), ತ್ರಿಷಷ್ಠಿ ( ೬೩ ), ಪಂಚಷಷ್ಠಿ ( ೬೫ ), ಅಶೀತಿಯುಂ ( ೮೦ ), ದಶಾಧಿಕಶತಂ ( ೧೧೦ ), ಎಂದಿವು ಕ್ರಮದಿಂದ ಉದಯಪ್ರಕೃತಿಗಳಾಗುವವು. ಇದು ಉದಯತ್ರಿಭಂಗಿ.

ಗಾಹೆ॥ ಉದಯಸ್ಸುದೀರಣಂ ಸಯುಸಾಮಿತ್ತಾ ಭೇದೋಣವಿದಿವೀಸೇ ।
ಸೋಮೊತ್ತೂಣ ತಿಂಣಿರಾಣಂ ಪಮತ್ತಜೋಗಿ ಅಜೋಗೀಯ ॥ ೮೭ ॥

ತಾ:--ಪ್ರಮತ್ತಗುಣಸ್ಥಾನಮುಂ, ಸಯೋಗಿ, ಅಯೋಗಿಗುಣಸ್ಥಾನ ಎಂಬೀ ಮೂರು ಗುಣಸ್ಥಾನಮಂ ಪತ್ತುವಿಟ್ಟು, ಉದಯಕ್ಕಂ, ಉದೀರಣೆಗಂ ಸ್ವಾಮಿತ್ವದತ್ತಣಿಂ ಭೇದಮಿಲ್ಲ.

ಗಾಹೆ ॥ ತೀಸಂ ಬಾರಸಉದಉಚ್ಛೇದಂ ಕೇವಳಿಣಮೇಗದಂ ಕಿಚ್ಚಾ ॥
ಸಾದಮಸಾದಂ ಚ ತಹಿಂ ಮಣುವಾವುಗಮವಣಿದಂ ಕಿಚ್ಚಾ ॥ ೮೮ ॥
ಅವಣಿದತಿಪ್ಪಯಡೀಣಂ ಪಮತ್ತವಿರದೆ ಉದೀರಣಾಹೋದಿ ॥
ಣತ್ಥಿತ್ತಿ ಅಜೋಗಿಜಿಣೇ ಉದೀರಣಾ ಉದಯಪಯಡೀಣಂ ॥ ೮೯ ॥

ತಾ:—ಸಯೋಗ ಅಯೋಗಕೇವಲಿಗಳ ಸಂಬಂಧಗಳಪ್ಪ ೩೦, ೧೨ ಉದಯಪ್ರಕೃತಿಗಳನ್ನು ಒಂದುಮಾಡಿ, ಸಾತಾಸಾತವೇದನೀಯಮನಂತೆ ಮನುಷ್ಯಾಯುಷ್ಯಮೆಂದಿವನವರೊಳಗೆ ಕಳೆದ ಮೂರು ಪ್ರಕೃತಿಗಳು ಪ್ರಮತ್ತಗುಣಸ್ಥಾನದಲ್ಲಿ ಉದೀರಿಸುವವು. ಉಳಿದ ೩೯ ಸಯೋಗಕೇವಲಿಗಳಲ್ಲಿ ಉದೀರಣವೇ ಆಗುವದು.

ಗಾಹೆ ॥ ಪಣ ಣವ ಇಗಿ ಸತ್ತರಸ ಅಠ್ಠತ್ತಯಚದುರಥಕ್ಕಥಚ್ಚೇವ ॥
ಇಗಿದುಗಸೋಳುಗುದಾಳಂ ಉದೀರಣಾಹೊಂತಿಜೋಗಂತಾ ॥ ೯೦ ॥

ತಾ:—೫, ೯, ೧, ೧೭, ೮, ೮, ೬, ೬, ೧, ೨, ೧೬, ೩೯, ಸಯೋಗಿ ಗುಣಸ್ಥಾನದವರಿಗೂ ಉದೀರಣೆಗಳಾಗುವವು.

ಗಾಹೆ ॥ ಸತ್ತರಸೆಕ್ಕಾರಸಖಚದುಹಿಯುಸಯಂ ಸಗಿಗಿಸಿದಿತಿಯುಸ ॥
ದದಿಣವ ತಿಂಣಿಸತ್ತಸಗಥಕ್ಕವಂಣಚಉವಂಣವುುಗುದಾಳಂ ॥ ೯೧ ॥

ತಾ:—೧೧೭, ೧೧೧, ೧೦೦, ೧೦೪, ೮೭, ೮೧, ೮೩, ೬೯, ೬೩, ೫೭, ೫೬, ೫೪, ೩೯ ಎಂದಿವು ಹದಿಮೂರು ಗುಣಸ್ಥಾನಗಳಲ್ಲಿ ಕ್ರಮದಿಂದಾಗುವವು.

ಗಾಹೆ ॥ ಪಂಚೆಕ್ಕಾರಸ ಬಾವೀಸಠ್ಠಾರಸ ಪಂಚತಿಸ ಇಗಿಣವದಾಳಂ ॥
ತೇವಂಣೆಕ್ಕುಣವಂಣಂ ಪಣ ಛಕ್ಕಡಸಠ್ಠಿ ತೇಸೀದಿ ॥ ೯೨ ॥

ತಾ:—೫, ೧೧, ೨೨, ೧೮, ೩೫, ೪೧, ೪೯, ೫೩, ೫೯, ೬೫, ೬೬, ೬೮, ೮೩ ಅನುದೀರಣಾಪ್ರಕೃತಿಗಳಾಗುವವು. ಇದು ಉದೀರಣಾತ್ರಿಭಂಗಿಯು.

ಗಾಹೆ ॥ ತಿಥ್ಥಾಹಾರಂಜುಗವುಸಬ್ಬಂತಿದ್ದಣಮಿಥ್ಥಾದಿತಿಏ ॥
ತಸ್ಸಂತಿಕಮ್ಮಿಯಾಣಂತಂ ಗುಣಠಾಣಂ ಣಸಂಭವದಿ ॥ ೯೩ ॥

ತಾ:—ಮಿಥ್ಯಾದೃಷ್ಟಿ ಮೊದಲಾದ ಮೂರು ಗುಣಸ್ಥಾನಗಳಲ್ಲಿ ತೀರ್ಥಕರ ಆಹಾರದ್ವಯ ವೆಂಬಿವೊಂದಾಗಿಯುಂ, ಆ ಮೂರುಂ ಬೇರೆ ಬೇರೆಯುಂ ಒಂದೇ ತೀರ್ಥಕರನಾಮ ಮಾದುವೇಕೆಂದೊಡೆ—ಅಸತ್ವಕರ್ಮಂಗಳಿಗೆ ಆ ಮೂರು ಗುಣಸ್ಥಾನಮುಂ ಆಗವು.

ಗಾಹೆ ॥ ಚತ್ತಾರಿವಿಛ್ಛೆತ್ತಾಯಿಂ ಆವುಗಬಂಧೇಣಹೋಯಿಸಂಮತ್ತಂ ॥
ಅಣುವದಮಹವ್ವಯಾಮ್ಮಿಂ ಣಲಹಯಿದೇವಾವುಗವ್ಮೊತ್ತಂ ॥ ೯೪ ॥

ತಾ:—ನಾಲ್ಕು ಗತಿಗಳ್ಗಂ ಆಯುರ್ಬಂಧವಾದೊಡಂ ಅಕ್ಕುಂ. ಆ ಸಮ್ಯಕ್ತ್ವಂ, ಅಣುವ್ರತಮಹಾವ್ರತಂಗಳಿಂ ದೇವಾಯುಷ್ಯಂ ಪತ್ತುವಿಟ್ಟು ಜೀವಂ ಪಡೆಯಂ.

ಗಾಹೆ ॥ ಣಿರಯತಿರಿಕ್ಕಸುರಾವುಗ ಸಂತೇಣ ಹಿದೇಸಸಯಳವಿದಿಖವಗಾ ॥
ಅಯದಚ ಉಕ್ಕಂತುಖಣಂ ಅಣಿಯಟ್ಟಿರಣಚರಿಮಮ್ಹಿ ॥ ೯೫ ॥
ಜುಗವೇರಸಂಜೋಗಿತ್ತಾಪುಣೋವಿ ಅಣಿಯಟ್ಟಿಕರಣಬಹುಭಾಗಂ ॥
ಬೋಳಿಯಕಮಸೋಮಿಛ್ಛಂಮಿಸ್ಸಂಸಂಮುಂಖವೇದಿಕಮೆ ॥ ೯೬ ॥

ತಾ:—ನರಕ, ತಿರ್ಯ, ದೇವಾಯುಷ್ಯಂಗಳ ಸತ್ವಮುಂಟಾಗುತ್ತಿರೆ ಕ್ರಮದಿಂದ ದೇಶಸಂಯತಂ ಸಕಲ ಸಂಯತಕ್ಷರೆಂಬರು, ಅಸಂಯತನಾದಿಯಾಗಿ ನಾಲ್ಕು ಗುಣಸ್ಥಾನದವರಾದೊಡಂ, ಅನಿವೃತ್ತಿಕರಣನ ಪರಿಣಾಮದ ಕಡೆಯೊಳು, ಅನಂತಾನುಬಂಧಿಕ್ರೋಧ, ಮಾನ, ಮಾಯಾ, ಲೋಭಂಗಳೋರ್ಮೆಯೇ ವಿಸಂಯೋಜಿಸಿ, ಮತ್ತೆ ಕ್ರಮದಿಂದೇ ಕರಣತ್ರಯಂ ಮಾಡಿ, ಅನಿವೃತ್ತಿಕರಣನಕಾಲದ ಬಹುಭಾಗಮಂ ದಾಂಟಿ, ಮಿಥ್ಯಾತ್ವಮುಮಂ, ಸಮ್ಯಗ್ಮಿಥ್ಯಾತ್ವಮುಮಂ, ಸಮ್ಯಕ್ತ್ವಪ್ರಕೃತಿಯುಮಂ ಕ್ರಮದಿಂದಂ ಕೆಡಿಸುಗುಂ.

ಗಾಹೆ ॥ ಮಿಛ್ಛೇಸಾಸಣಮಿಸ್ಸೆಸುಂಣಂ ಏಕ್ಕೆಕ್ಕಗಂತು ಬಿಠ್ಠಾಣೆ ॥
ವಿರದಾಪಮತ್ತಪುವ್ವೇಪುಣ್ಣಡ ಸುಣ್ಣಂಚ ಸತ್ತಬೊಛ್ಛಿಣ್ಣಾ ॥ ೯೭ ॥
ಸೋಳಠ್ಠೆಕಿಗಿಛಕ್ಕಂಚದ.ಪೆಕ್ಕಂ ಬಾದರೆ ಅಥೋಯಕ್ಕಂ ॥
ಖೀಣೆಸೋಳಮಜೋಗೆ ಬಾವತ್ತರಿತೇದು ಅತ್ತಂತೆ ॥ ೯೮ ॥

ತಾ:—ಮಿಥ್ಯಾದೃಷ್ಟಿಯೊಳಂ, ಸಾಸಾದನನೊಳುಂ, ಮಿಶ್ರನೊಳಂ, ಸತ್ವವ್ಯಚ್ಛಿತ್ತಿಯಿಲ್ಲಂ. ಅಸಂಯತನೊಳುಂ, ದೇಶಸಂಯತನೊಳುಂ, ಒಂದೊಂದೇ ವ್ಯಚ್ಛಿನ್ನಂಗಳಾಗುವವು.

ಪ್ರಮತ್ತ, ಅಪ್ರಮತ್ತ, ಅಪೂರ್ವಕರಣಗುಣಸ್ಥಾನದೊಳು ಶೂನ್ಯಮುಂ ಎಂಟುಂ ಶೂನ್ಯಮೆಂದಿವು ಸತ್ವವ್ಯುಚ್ಛಿನ್ನಂಗಳಾಗುವವು. ಹದಿನಾರುಂ, ಎಂಟುಂ, ಒಂದುಂ, ಒಂದುಂ, ಆರುಂ, ನಾಲ್ಕೆಡೆಯೊಳೊಂದೊಂದು ಅಲ್ಲಿಯುಂ ಸೂಕ್ಷ್ಮಸಾಂಪರಾಯ ಗುಣಸ್ಥಾನದೊಳು ಒಂದೊಂದು ವ್ಯುಚ್ಛಿನ್ನವಾಗುವವು, ಕ್ಷೀಣಕಷಾಯ ಗುಣಸ್ಥಾನದೊಳು ೧೬ ವ್ಯುಚ್ಛಿನ್ನಂಗಳಾಗುವವು. ಅಯೋಗಿ ಗುಣಸ್ಥಾನದೊಳು ೭೨, ೧೩ ಯಥಾಕ್ರಮದಿಂ ಅಪೂರ್ವಿದ್ವಯಮುಂ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಜಾತಿನಾಮವುಂ, ಸ್ತ್ಯಾನಗೃದ್ಧಿ, ನಿದ್ರಾನಿದ್ರಾ, ಪ್ರಚಲಾಪ್ರಚಲಾತ್ರಯವುಂ, ಉದ್ಯೋತನಾಮವುಂ, ಆತಪನಾಮವುಂ, ಏಕೇಂದ್ರಿಯ ಜಾತಿನಾಮವುಂ, ಸಾಧಾರಣನಾಮವುಂ, ಸೂಕ್ಷ್ಮನಾಮವುಂ, ಸ್ಥಾವರನಾಮವುಂ ಎಂದೀ ೧೬ ವುಂ, ಅಪ್ರತ್ಯಾಖ್ಯಾನ ಪ್ರತ್ಯಾಖ್ಯಾನಕಷಾಯಾಷ್ಟಕಮುಂ ॥ ೮ ॥

ಗಾಹೆ ॥ ಸಂಡಥ್ಥಿಛಕ್ಕಸಾಯಾಪುರಿಸೋ ಕೋಹೋಯ:ವೂಣ ಮಾಯಚ್ಚ ॥
ಮಾಳೇಸುಹುಮೋಲೋಹೋ ಉದಯಂ ವಾ ಹೋದಿಖೀಣಮ್ಹಿ ॥ ೯೯ ॥

ತಾ:—ನಪುಂಸಕವೇದಂ, ಸ್ತ್ರೀವೇದಂ, ಹಾಸ್ಯಾದಿಗಳಾದ ಆರು ನೋಕಷಾಯಗಳುಂ, ಪುಂವೇದವುಂ, ಕ್ರೋಧ, ಮಾನ, ಮಾಯಾ, ಎಂದಿವಿನಿತುಂ ಅನಿವೃತ್ತಿಕರಣನಗುಣಸ್ಥಾನದೊಳು ಕಾಲದೊಂಭತ್ತು ಭಾಗಂಗಳೊಳಂ ಕ್ರಮದಿಂ ವ್ಯುಚ್ಛಿನ್ನಂಗಳಾಗುವವು. ಸೂಕ್ಷ್ಮಸಾಂಪರಾಯ ಗುಣಸ್ಥಾನದಲ್ಲಿ ಸಂಜ್ವಲನ ಲೋಭಂಗಳುವ್ಯುಚ್ಛಿನ್ನಗಳಾಗುವವು, ಕ್ಷೀಣಕಷಾಯ ಗುಣಸ್ಥಾನದೊಳು ಉದಯವ್ಯುಚ್ಛಿತ್ತಿಯೊಳು ಹೇಳಿದ ಹಾಗೆ ನಿದ್ರೆ, ಪ್ರಚಲೆ, ಜ್ಞಾನಾವರಣಪಂಚಕ ( ೫ ), ಅಂತರಾಯಪಂಚಕ ( ೫ ), ಚಕ್ಷುರಾದಿ ದರ್ಶನಾವರಣ ಚತುಷ್ಕ (೪), ವೆಂಬೀ ಹದಿನಾರು ವ್ಯುಚ್ಛಿನ್ನಗಳಾಗುವವು.

ಗಾಹೆ ॥ ಖೀಣೇಘಾದಿಚವುಕ್ಕೇ ಣಂತಚಉಕ್ಕಸ್ಸಹೊದಿ ಉಪ್ಪತ್ತಿ ॥
ಸಾದಿಅಪಜ್ಜವಸಿದ್ಧಾ ವುಕ್ಕಸ್ಸಾಣಂತಪರಿಸಂಖಾ ॥ ೧೦೦ ॥

ತಾ:—ಘಾತಿಚತುಷ್ಕಂ ನಾಶವಾಗುತ್ತಿರಲು ಅನಂತಚತುಷ್ಟಯಂಗಳು ಹುಟ್ಟುವವು. ಅವುಗಳಿಗೆ ಮೊದಲುಂಟು, ಕಡೆಯಿಲ್ಲಾ, ಉತ್ಕೃಷ್ಠಾನಂತ ಪರಿಣಾಮಂಗಳನುಳ್ಳವುಗಳು.

ಗಾಹೆ ॥ ಆವರಣದುಗಾಣಖವಿ ಕೇವಳಣಾಣಂ ಚ ದಂಸಣಂಹೊದಿ ॥
ವೀರಿಯಂತರಾಯಿ:ಯಸ್ಸಯಖಏಣವೀರಿಯಂಹವೇಣಂತಂ ॥ ೧೦೧ ॥

ತಾ:—ಕೇವಲಜ್ಞಾನಾವರಣ ಕ್ಷಯದಿಂದ ಕೇವಲಜ್ಞಾನವುಂ, ಕೇವಲದರ್ಶನಾವರಣ ಕ್ಷಯದಿಂದ ಕೇವಲದರ್ಶನವುಂ, ವೀರ್ಯಾಂತರಾಯದ ಕ್ಷಯದಿಂದ ಅನಂತವೀರ್ಯವುಂ ಉಂಟಾಗುವವು.

ಗಾಹೆ ॥ ಣವಣೋಕಸಾಯವಿಘ್ಘಚಉಕ್ಕಾಣಂ ಚಯಖಯಾಂಉ ॥
ಣಂತಸುಹಂ ಅಣೋವಮಬ್ಬಾಬಾಹಂ ಅಪ್ಪಸಮುದ್ಧಂಣಿರಾವೆಕ್ಕಂ ॥ ೧೦೨ ॥

ತಾ:—ನವನೋಕಷಾಯಂಗಳ ವಿಘ್ನಚತುಷ್ಕಗಳ ಕ್ಷಯದತ್ತಣಿಂದ ಅನಂತಸುಖಪ್ರಾಪ್ತಿಯಾಗುವದು. ಅದನುಪಮವುಂ, ಅವ್ಯಾಬಾಧವುಂ, ಆತ್ಮೋತ್ಥವುಂ, ಅನ್ಯದ್ರವ್ಯನೀರಪೇಕ್ಷವುಂ ಆಗುವದು.

ಗಾಹೆ ॥ ದೇಹಾದಿಪಸ್ಸಂತಾ ದಿರಸುಹಸರಸುರ ವಿಹಾಯದುಗದೂ ॥
ಭಂಣಿಮಿಣಜ್ಜಸಣಾದೆಜ್ಜಂ ಪತ್ತೇಯಾಪುಂಣಅಗುರುಚವು ॥ ೧೧೩ ॥
ಅಣುದಯತದೀಯಣಿಚಮಜೋಗಿದುಚರಿಮಮ್ಮಿ ಸಂತಬೊಛ್ಛಿಂಣಾ ॥
ಉದಯುಗಬಾರಣರಾವೂತೇರಸಚರಿಮಮ್ಮಿ ಬೊಛ್ಛಿಂಣಾ ॥ ೧೧೪ ॥

ತಾ:—ಶರೀರನಾಮಮಾದಿಯಾದ ಸ್ಪರ್ಶನಪರ್ಯಂತಮಪ್ಪಯ್ವತ್ತು (೫೦) ನಾಮಪ್ರಕೃತಿಗಳುಂ, ಸ್ಥಿರಾಸ್ಥಿರದ್ವಿಕಮುಂ, ಶುಭಾಶುಭದ್ವಯಮುಂ (೨), ಸುಸ್ವರದುಸ್ವರದ್ವಯಮುಂ (೨), ದೇವಗತಿ ತತ್ಪ್ರಾಯೋಗ್ಯಾನುಪೂರ್ವಿದ್ವಯಮುಂ (೨), ಪ್ರಶಸ್ತಾಪ್ರಶಸ್ತವಿಹಾಯೋಗತಿದ್ವಯಮುಂ (೨), ದುರ್ಭಗನಾಮಮುಂ, ನಿರ್ಮಾಣನಾಮಮುಂ, ಅಯಶಸ್ಕೀರ್ತಿನಾಮಮುಂ, ಅನಾದೇಯನಾಮಮುಂ, ಪ್ರತ್ಯೇಕ ಶರೀರನಾಮಮುಂ, ಅಗುರುಲಘು, ಉಪಘಾತ, ಪರಘಾತ, ಉಚ್ಛ್ವಾಸಚತುಷ್ಕಮುಂ, ಉದಯಕ್ಕೆ ಬಾರದ ವೇದನೀಯದೊಳಾವುದಾನುಮೊಂದು ನೀಚೈರ್ಗೋತ್ರಮುಮೆಂಬೀ ಎಪ್ಪತ್ತೆರಡು (೭೨) ಅಯೋಗಿ ದ್ವಿಚರಮಸಮಯದಲ್ಲಿ ಸತ್ವವ್ಯುಚ್ಛಿತ್ತಿಯಾಗುವವು. ವೇದನೀಯದೊಳೊಂದು, ಮನುಷ್ಯಗತಿ, ಪಂಚೇಂದ್ರಿಯಜಾತಿ, ತ್ರಸಬಾದರಪರ್ಯಾಪ್ತಂ, ಅಯಶಸ್ಕೀರ್ತಿ, ತೀರ್ಥಂಕರನಾಮ, ಮನುಷ್ಯಾಯುಷ್ಯ, ಉಚ್ಚೈರ್ಗೋತ್ರಮುಮೆಂದಿವು ಅರುವತ್ತೈದಕ್ಕೆ (೬೫) ಹನ್ನೆರಡು ಮನುಷ್ಯಗತ್ಯಾನುಪೂರ್ವಿಯುಮೆಂಬ ಹದಿಮೂರು ಅಯೋಗಿಯ ಚರಮಸಮಯದಲ್ಲಿ ಸತ್ವವ್ಯುಚ್ಛಿನ್ನಂಗಳಾಗುವವು.

ಗಾಹೆ ॥ ಸವ್ವಂತಿಗೇಗಹೀಣಂ ಸವ್ವಂಚೇಗದುಹೀಣಬಿತ್ತಾಣೆ ॥
ಅಡತೀಸಸಯಸ್ಸತ್ತಂ ಅಪುವ್ವಕಣೆತ್ತಿಣೋದಬ್ಬೋ ॥ ೧೧೫ ॥

ತಾ:—ನೂರುನಲವತ್ತೆಂಟು ಪ್ರಕೃತಿಗಳೆಲ್ಲಮುಮಂ, ಅವರೊಳು ಕ್ರಮದಿಂ ಮೂರುನೊಂದುಹೀನಮುಂ, ನೂರನಲವತ್ತೆಂಟು ಪ್ರಕೃತಿಗಳೆಲ್ಲಮುಂ ಅವರೊಳೊಂದೊಂದು ಹೀನಮುಂ, ಮೇಗಣೆರಡು ಗುಣಸ್ಥಾನದೊಳು ನೂರನಲವತ್ತೆಂಟರೊಳು ತಿರ್ಯಗ್, ದೇವಾಯುವೆರಡು ಹೀನಮುಂ, ನೂರನಲವತ್ತಾರರೊಳು ಸಪ್ತಪ್ರಕೃತಿಗಳಂ ದೇವಾಯುಷ್ಯಮುಂ ಕಳೆದೊಡೆ, ನೂರಮೂವತ್ತೆಂಟುಂ (೧೩೮) ಅಪೂರ್ವಗುಣಸ್ಥಾನಪರ್ಯಂತಂ ಸತ್ವವ್ಯುಚ್ಛಿನ್ನಗಳಾಗುವವು ಎಂದರಿಯಲ್ಪಡುವದು.

ಗಾಹೆ ॥ ಅಣಿಯಟ್ಟಿಪಡಮಭಾಗೇ ಅಡತೀಸಸಯಂತದುವರಿಸತ್ತಮ್ಮಿ ॥
ಸೋಳಸತ್ತಾದಿವಿಹೀಣಂ ಪಯಡಿಜಾಣಾಹಿಚರಿಮೊತ್ತಿ ॥ ೧೧೬ ॥

ತಾ:—ಅನಿವೃತ್ತಿಕರಣನ ಕಾಲದೊಳು ಮೊದಲಭಾಗದೊಳು ನೂರಮೂವತ್ತೆಂಟಾಗುವವು. ಅಲ್ಲಿಂ ಮೇಗಣಭಾಗದೊಳಂ ಮೇಗಣಗುಣಸ್ಥಾನದೊಳಂ ಹದಿನಾರುಮೆಂಟು ಮೊದಲಾದುವರಿಂ ಹೀನಮಪ್ಪ ಪ್ರಕೃತಿಸಮೂಹಮಂ ಸತ್ವಪ್ರಕೃತಿಯಿಂದಂ ಅಯೋಗಿಗುಣಸ್ಥಾನದವರಿಗೂ ತಿಳಿದುಕೊಳ್ಳುವದು.

ಗಾಹೆ ॥ ಣಭತಿಗಿಣಭಯಿಗಿದೊದ್ದೋ ದಸದಸಸೋಳಹತ್ತಗಾದಿ ॥
ಹೀಣೇಸುಸತ್ತಾಹವಂತಿ ಏವಂ ಅಸಹಾಯಪರಖ್ಖಮುದ್ದಿತ್ತಾ ॥ ೧೧೭ ॥

ತಾ:—ಅಸಹಾಯಪರಾಕ್ರಮಿಯಪ್ಪ ಜಿನೇಶ್ವರನಿಂ ಹೇಳಲ್ಪಟ್ಟವು. ೦, ೩, ೧, ೦, ೧, ೨, ೧೦, ೧೬, ೮ ಮೊದಲಾದವು ಹೀನಂಗಳಾಗುತ್ತಿರೆಯುಂ ಉಳಿದವು ಸತ್ವಂಗಳಪ್ಪವು ಇದು ಸತ್ವತ್ರಿಭಂಗಿಯುಂ.

| ಮಿಥ್ಯಾ | ಸಾಸಾ | ಮಿಶ್ರ | ಅಸಂ | ದೇಶ | ಪ್ರಮ | ಅಪ್ರ | ಅಪೂ | ಅನಿ | ಸೂ. | ಉಪ | ಕ್ಷೀ. | ಸ. | ಅ. | ಸಿ. |
|---|---|---|---|---|---|---|---|---|---|---|---|---|---|---|
| ೫ | ೯ | ೧ | ೧೭ | ೮ | ೫ | ೪ | ೬ | ೬ | ೧ | ೨ | ೧೬ | ೩೬ | ೧೨ | ೦ |
| ೧೧೭ | ೧೧೧ | ೧೦೦ | ೧೨೪ | ೮೭ | ೮೧ | ೭೬ | ೭೨ | ೬೬ | ೬೦ | ೫೯ | ೫೭ | ೪೨ | ೧೨ | ೦ |
| ೫ | ೧೧ | ೨೨ | ೧೮ | ೩೫ | ೪೧ | ೪೬ | ೫೦ | ೫೬ | ೬೨ | ೬೩ | ೬೫ | ೮೦ | ೧೧೦ | ೧೧೨ |

ಉದಯತ್ರಿಭಂಗಿ, ಉದಯವ್ಯುಚ್ಛಿತ್ತಿ, ಬಂಧಪ್ರಕೃತಿ, ಅಬಂಧ.

| ಮಿಥ್ಯಾ | ಸಾಸಾ | ಮಿಶ್ರ | ಅಸಂ | ದೇಶ | ಪ್ರಮ | ಅಪ್ರ | ಅಪೂ | ಅನಿ | ಸೂ. | ಅಪ | ಕ್ಷೀಣ | ಸಯೋ | ಅಯೋ |
|---|---|---|---|---|---|---|---|---|---|---|---|---|---|
| ೫ | ೯ | ೧ | ೧೭ | ೮ | ೮ | ೪ | ೬ | ೬ | ೧ | ೨ | ೧೬ | ೩೯ | ೦ |
| ೧೧೭ | ೧೧೧ | ೧೦೦ | ೧೦೪ | ೮೭ | ೮೧ | ೭೩ | ೬೯ | ೬೩ | ೫೭ | ೫೬ | ೫೪ | ೩೯ | ೦ |
| ೧೧ | ೧೧ | ೨೨ | ೧೮ | ೩೫ | ೪೧ | ೪೯ | ೫೩ | ೫೯ | ೬೫ | ೬೬ | ೬೮ | ೮೩ | ೧೨೨ |

| ಮಿಥ್ಯಾ | ಸಾಸಾ | ಮಿಶ್ರ | ಅಸಂ | ದೇಶ | ಪ್ರಮ | ಅಪ್ರ | ಅ. | ಅನಿ | ಸೂ. | ಉಪ | ಕ್ಷೀಣ | ಸಯೋ | ಅಯೋ | ಸಿ. |
|---|---|---|---|---|---|---|---|---|---|---|---|---|---|---|
| ೧೬ | ೨೫ | ೦ | ೧೦ | ೪ | ೬ | ೧ | ೩೬ | ೫ | ೧೬ | ೦ | ೦ | ೧ | ೧ | ೦ |
| ೧೧೭ | ೧೦೧ | ೭೪ | ೭೭ | ೬೭ | ೬೩ | ೫೯ | ೫೮ | ೨೨ | ೧೭ | ೧ | ೧ | ೧ | ೧ | ೦ |
| ೩ | ೧೯ | ೪೬ | ೪೩ | ೫೩ | ೫೭ | ೬೧ | ೬೨ | ೯೮ | ೧೦೩ | ೧೧೯ | ೧೧೯ | ೧೧೯ | ೧೧೯ | ೧೨ |

| ಮಿ | ಸಾಸಾ | ಮಿಶ್ರ | ಅಸಂ | ದೇ | ಪ್ರಮ | ಅಪ್ರ | ಅಪೂ | ಅನಿ ವೃತ್ತಿ ಕರಣ ಗುಣ ಸ್ಥಾ ನಸ್ಯ | | | | | |
|---|---|---|---|---|---|---|---|---|---|---|---|---|---|
| ೦ | ೦ | ೦ | ೧ | ೧ | ೦ | ೮ | ೦ | ೦ | ೮ | ೧ | ೧ | ೬ | ೧ |
| ೧೪೮ | ೧೪೫ | ೧೪೭ | ೧೪೮ | ೧೪೭ | ೧೪೬ | ೧೪೬ | ೧೩೯ | ೧೩೯ | ೧.೨೨ | ೧೨೨ | ೧೧೪ | ೧೧೩ | ೧೧೩ |
| ೦ | ೩ | ೧ | ೦ | ೧ | ೨ | ೨ | ೧೦ | ೧೦ | ೨೬ | ೩೪ | ೩೫ | ೩೬ | ೪೨ |

ಸತ್ವತ್ರಿಭಂಗಿ, ಸತ್ವವ್ಯುಚ್ಛಿತ್ತಿ, ಸತ್ವಪ್ರಕೃತಿ, ಅಸತ್ವಪ್ರಕೃತಿ.

| ಸತ್ವ | ವಿಚ್ಛೇ | ಸೂಕ್ಷ್ಮ | ಉಪ | ಕ್ಷೀಣ | ಸಯೋಗಿ | ಅ | ಅಚೋ |
|---|---|---|---|---|---|---|---|
| ೧ | ೧ | ೧ | ೧ | ೦ | ೧೬ | ೦ | ೭೨ |
| ೧೦೬ | ೧೦೫ | ೧೦೪ | ೦ | ೦ | ೧೦೧ | ೮೫ ೮೫ | ೧೩ |
| ೪೩ | ೪೪ | ೦ | ೦ | ೪೭ | ೬೩ | ೬೩ | ೧೩೫ |

---

## ಸೂತ್ರಂ॥ ಪುಣ್ಯಂ ದ್ವಿವಿಧಂ ॥ ೫೯ ॥

ತಾ:—ದ್ರವ್ಯ, ಭಾವಭೇದದಿಂ ಪುಣ್ಯವೆರಡು ವಿಧವು. ಸಮ್ಯಕ್ತ್ವಂ, ಅಣುವ್ರತ, ಮಹಾವ್ರತಮೆಂಬೀ ಪರಿಣಾಮವು ಭಾವಪುಣ್ಯವೆಂಬುವದು. ಅದೆಂತೆನೆ-ಸಾತಾವೇದನೀಯಮುಂ, ತಿರ್ಯಗ್ಮನುಷ್ಯ ದೇವಾಯುಷ್ಯತ್ರಯಮುಂ, ಉಚ್ಚೈರ್ಗೋತ್ರಮುಂ, ಮನುಷ್ಯಗತಿ ತತ್ಪ್ರಾಯೋಗ್ಯಾನುಪೂರ್ವಿದ್ವಯಮುಂ (೨), ದೇವದ್ವಿಕಮುಂ (೨), ಏಕೇಂದ್ರಿಯ ಜಾತಿಯುಂ,

ಪಂಚಶರೀರನಮುಂ, ಪಂಚಬಂಧನಮುಂ, ಪಂಚಸಂಘಾತಮುಂ, ಅಂಗೋಪಾಂಗತ್ರಯಮುಂ (೩), ಪ್ರಶಸ್ತವರ್ಣಗಂಧಗಸಸ್ಪರ್ಶಮೆಂಬಿವಂ ಭೇದಿಸಿದೊಡೆ ಎಪ್ಪತ್ತುಮಕ್ಕುಂ (೨೦). ಸಮಚತುರಸ್ರಸಂಸ್ಥಾನಮುಂ, ವಜ್ರವೃಷಭನಾರಾಚಸಂಹನನಮುಂ, ಅಗುರುಲಘುಕಮುಂ, ಪರಘಾತಮುಂ, ಆತಪಮುಂ, ಉದ್ಯೋತನಾಮಮುಂ, ಉಚ್ಛ್ವಾಸನಿಶ್ವಾಸಮುಂ, ಪ್ರಶಸ್ತ ವಿಹಾಯೋಗತಿಯುಂ, ತ್ರಸಬಾದರಪರ್ಯಾಪ್ತಪ್ರತ್ಯೇಕಶರೀರ, ಶುಭಶುಭಗ, ಸುಸ್ವರ, ದುಸ್ವ ರ, ಆದೇಯ, ಯಶಸ್ಕೀರ್ತಿ, ನಿರ್ಮಾಣ, ತೀರ್ಥಕರನಾಮಮೆಂದು ಅರುವತ್ತೆಂಟು (೬೮) ದ್ರವ್ಯಪುಣ್ಯಪ್ರಕೃತಿಗಳಕ್ಕುಂ.

---

## ಸೂತ್ರಂ ॥ ಪಾಪಂ ಚ ದ್ವಿವಿಧಂ ॥ ೬೦ ॥

ತಾ:—ಭಾವ, ದ್ರವ್ಯಭೇದದಿಂದ ಪಾಪಪದಾರ್ಥಮಿತ್ತೆರಂ ॥ ೨ ॥ ತೀವ್ರ ಮಿಥ್ಯಾತ್ವ ಕಷಾಯಾದ್ಯಶುಭಪರಿಣಾಮ ನಿಮಿತ್ತಂ ಬಡೆದು ಬಂದು ಪೊರ್ದಿ ಅನ್ಯೋನ್ಯಾನುಪ್ರದೇಶಾನು ಪ್ರವೇಶಾತ್ಮಕವಾಗಿ ಆತ್ಮನೊಳ್ನೆಲಸಿದ ಪುದ್ಗಲಮಂ ದ್ರವ್ಯಪಾಪಮೆಂಬುದು. ಆದೆಂತೆನೆ—ನಲ ವತ್ತೇಳು ಘಾತಿಗಳುಂ, ನೀಚೈರ್ಗೋತ್ರಮುಂ, ಅಸಾತಾವೇದನೀಯಮುಂ, ನರಕಾಯುಷ್ಯ ಮುಂ, ನರಕದ್ವಿಕಮುಂ, ತಿರಿಯಕಮುಂ, ಜಾತಿಚತುಷ್ಕಮುಂ, ಸಂಸ್ಥಾನಪಂಚಕಮುಂ, ವಿಂಶತ್ಯಶುಭವರ್ಣಾದಿಗಳುಂ, ಉಪಘಾತಪ್ರಶಸ್ತವಿಹಾಯೋಗತಿಯುಂ, ಸ್ಥಾವರದಶಕಮು ಮೆಂಬೀ ಸಪ್ತಪ್ರಕೃತಿಗಳಾಗುವವು.

ಗಾಹೆ ॥ ಅಸುಹಸುಹಭಾವಜುತ್ತಾಘುಣಂ ಪಾವಂ ಹವಂತಿಖಲುಜೀವಾ ॥
ಸಾದಸ್ಸಹಾವುಣಾಮುಗ್ಗೋದಂ ಪುಂಣಂಪರಾಣಿಪಾವಂ ವಾ ॥ ೧೦೮ ॥

---

## ಸೂತ್ರಂ ॥ ಸಂವರಶ್ಚ ॥ ೬೧ ॥

ತಾ:—ಭಾವ, ದ್ರವ್ಯಭೇದದಿಂದ ಸಂವರಪದಾರ್ಥವು ಎರಡುತೆರಂ ॥೨॥ ಹ್ಯಾಗಂದರೆ— ನಿಜಪರಮಾತ್ಮರುಚಿಪರಿಚ್ಛಿತ್ತಿನಿಶ್ಚಲಾನುಭೂತಿರೂಪದಿಂ ನಿಶ್ಚಯರತ್ನತ್ರಯಾತ್ಮಕಮಪ್ಪ ಪರಿ ಣಾಮವನ್ನು ಕರ್ಮಸ್ಕಂಧ ಪರಿಣತಿಯಿಂ ತಡೆಯಲಿಕ್ಕೆ ಕಾರಣವಾಗುವದೋ ಆ ಪರಿಣಾ ಮವು ಭಾವಸಂವರೆಯು. ದ್ರವ್ಯಕರ್ಮದ ಆಗಮನವನ್ನು ತಡೆಯುವದು ದ್ರವ್ಯಸಂವ ರೆಯು. ನಿಶ್ಚಯನಯದಿಂ ತನ್ನಿಂದ ತಾನೇ ಸಿದ್ಧವಾದುದರಿಂದ ಪರಕಾರಣನಿರಾಪೇಕ್ಷವಂ, ಸಹಜ ಪರಮ ಪಾರಿಣಾಮಿಕ ಭಾವಪೇಕ್ಷೆಯಿಂ ನಿತ್ಯಮುಂ, ಪರಮೋದ್ಯೋತಸ್ವಭಾವದಿಂ ಸ್ವಪರಪ್ರಕಾಶನ ಸಮರ್ಥನಮುಂ, ಅನಾದ್ಯನಂತತ್ವದಿಂದ್ಯಾದಿಮಧ್ಯಾವಸಾನಮುಕ್ತಮುಂ, ದೃಷ್ಟ ಶ್ರುತಾನುಭೂತಭೋಗಕಾಂಕ್ಷಾರೂಪನಿಧಾನ ಬಂಧಾದಿ ಸಮಸ್ತರಾಗಾದಿಮಲರಹಿತದಿನತ್ಯಂತ ನಿರ್ಮಲಮುಂ, ಪರಮಚೈತನ್ಯವಿಲಾಸ ಲಕ್ಷಣತ್ವದಿಂ ಪರಮಸುಖಮೂರ್ತಿಯುಂ ನಿರಾ ಸ್ರವ ಸಹಜ ಭಾವದಿಂದೆಲ್ಲಾ ಕರ್ಮದ ಸಂವರೆಗೆ ಕಾರಣಮೆಂಬೀ ಲಕ್ಷಣಮನುಳ್ಳ ಪರ ಮಾತ್ಮಭಾವನೆಯಿಂದ ಹುಟ್ಟಿದ ಯಾವುದಾದರೊಂದು ಶುದ್ಧಚೈತನ್ಯಭಾವಮಂ ಸಂವರೆ

ಯೆಂಬುದು. ಯಾವದಾದರೊಂದು ಭಾವಸಂವರೆಯನ್ನೇ ಕಾರಣವಾಗಿ ಹುಟ್ಟಿದ ಕಾರ್ಯರೂಪವಾದ ನವತರ ದ್ರವ್ಯಕರ್ಮದ ಬರವನ್ನು ನಿಲ್ಲಿಸುವದು ದ್ರವ್ಯಸಂವರೆಯೆಂಬುವದು.

ಪ್ರಸ್ತುತಗಾಹೆ ॥ ವದ ಸಮಿತಿಗುತ್ತಿಓಧಮ್ಮಾಣುಪೇಹಾಪರೀಸಹಜಯೋಯ ॥
ಚಾರಿತ್ತಂ ಬಹುಭೇಯಾ ಣಾದವ್ವಾ ಭಾವರವಿಸೇಸಾ ॥ ೧೯ ॥

---

## ಸೂತ್ರಂ ॥ ಏಕಾದಶನಿರ್ಜರಾಃ ॥ ೬೨ ॥

ತಾ:—೧ ಶುದ್ಧಾತ್ಮರುಚಿರೂಪ ಸಮ್ಯಕ್ತ್ವೋತ್ಪತ್ತಿಯಲ್ಲಿಯುಂ, ೨ ಶ್ರಾವಕವ್ರತ ಗ್ರಹಣದಲ್ಲಿಯುಂ, ೩ ಮಹಾವ್ರತಗ್ರಹಣದಲ್ಲಿಯುಂ, ೪ ಅನಂತಾನುಬಂಧಿಯನ್ನು ವಿಸಂಯೋಜಿಸುವಲ್ಲಿಯುಂ, ೫ ದರ್ಶನಮೋಹನೀಯವನ್ನು ಕ್ಷಪಿಯಿಸುವಲ್ಲಿಯುಂ, ೬ ಉಪಶಮಿಸುವಲ್ಲಿಯುಂ, ೭ ಉಪಶಾಂತಕಷಾಯನಲ್ಲಿಯುಂ, ೮ ಕ್ಷಪಕನಲ್ಲಿಯುಂ, ೯ ಕ್ಷೀಣಕಷಾಯನಲ್ಲಿಯುಂ, ೧೦ ಸ್ವಸ್ಥಾನಜಿನರಲ್ಲಿಯುಂ, ೧೧ ಸಮುದ್ಘಾತಜಿನರಲ್ಲಿಯುಂ ಪೇಳ್ದೇಕಾದಶ ನಿರ್ಜರೆಗಳ ಸಂಖ್ಯಾತ ಗುಣಿತಕ್ರಮದಿಂ ಕರ್ಮಗಳಂ ನಿರ್ಜರಿಸುಗುಂ, ಕಾಲಂ ಸಂಖ್ಯಾತಗುಣಹೀನಕ್ರಮದಿಂ ನಿರ್ಜರಿಸುಗುಂ, ಮೇಣ್ ಸ್ಥಿತಿನೆರದು ಗಳಯಿಸುಗುಮದು ನಿರ್ಜರೆಯೆಂಬುದು. ರತ್ನತ್ರಯಾತ್ಮಕಮಪ್ಪ ಪರಿಣಾಮರೂಪದಿಂ ಅವಿಪಾಕನಿರ್ಜರೆಯುಂ, ನಿರ್ವಿಕಾರ ಪರಮ ಚೈತನ್ಯಲಕ್ಷಣ ನಿಜಪರಮಾತ್ಮರೂಪಭಾವನೆಯೊಳು ಪದುಳಮಿಪ್ಪಾತ್ಮನ ಪರಿಣಾಮವೇ ಸಂವರೆಪೂರ್ವಕವಾದ ಉತ್ಕೃಷ್ಟತಪಮೆಂಬುದಕ್ಕುಂ. ಅದರಿಂದಲೇ ಕರ್ಮನಿರ್ಜರೆ ಶೀಘ್ರದಲ್ಲಿ ಆಗುವದೆಂದರ್ಥವು.

---

## ಸೂತ್ರಂ ॥ ತ್ರಿವಿಧೋ ಮೋಕ್ಷಹೇತುಃ ॥ ೬೩ ॥

ತಾಃ—ಸಮ್ಯಗ್ದರ್ಶನ, ಸಮ್ಯಜ್ಞಾನ, ಸಮ್ಯಕ್ಚಾರಿತ್ರವೆಂದು ಮೋಕ್ಷಕಾರಣವು ತ್ರಿವಿಧಗಳಾಗುವದು. ॥ ೩ ॥ ಅದು ಹ್ಯಾಗೆಂದರೆ—

ವೀತರಾಗ ಸರ್ವಜ್ಞನಿರ್ದೋಷಿ ಪರಮೇಶ್ವರ ಪರಮಭಟ್ಟಾರಕನನ್ನೂ, ತನ್ಮುಖಕಮಲವಿನಿರ್ಗತ ಪೂರ್ವಾಪರಾದಿ ದೋಷರಹಿತಮಪ್ಪ ಪರಮಾಗಮವನ್ನೂ, ಆ ಪರಮಾಗಮದೊಳು ಹೇಳಿದ ಷಡ್ದ್ರವ್ಯ, ಪಂಚಾಸ್ತಿಕಾಯ, ಸಪ್ತತತ್ವ, ನವಪದಾರ್ಥಂಗಳನ್ನೂ, ಆ ಸರ್ವಜ್ಞಪ್ರಣೀತಮಪ್ಪ ಕ್ರಮದಿಂ ತಪ್ಪದೆ ನೆಗಳುವ ತಪಸ್ವಿಗಳನ್ನೂ, ಮೂಢತ್ರಯಾದಿ ಪಂಚವಿಂಶತಿ (೨೫) ಮಲರಹಿತವಾಗಿ ನಂಬುವುದು ವ್ಯವಹಾರ ಸಮ್ಯಗ್ದರ್ಶನವು ॥ ೧ ॥

ಈ ಪೇಳ್ದಾಗಮ ಪದಾರ್ಥತಪಸ್ವಿಗಳುಮಂ ಸಂಶಯಾದಿದೋಷರಹಿತವಾಗಿ ಅರಿಯುವದು ವ್ಯವಹಾರ ಸಮ್ಯಜ್ಞಾನವು ॥ ೨ ॥

ಪರಮಜಿನೇಶ್ವರ ಪ್ರಣೀತ ಪರಮಾಗಮೋಕ್ತಾಣುಗುಣ ಶಿಕ್ಷಾವ್ರತಾದಿದೇಶವ್ರತದೊಳಂ, ಅಷ್ಟವಿಂಶತಿಮೂಲಗುಣ ಚತುಸ್ತ್ರಿಂಶ ( ೩೪ ) ದುತ್ತರಗುಣಾತ್ಮಕಮಪ್ಪ ಮಹಾವ್ರತದೊಳಂ ನೆಗಳ್ವುದು ವ್ಯವಹಾರಸಮ್ಯಕ್ಚಾರಿತ್ರವು ॥ ೩ ॥ ಇಂತೀ ವ್ಯವಹಾರ ರತ್ನತ್ರಯಂ ಸಾಧಕವು.

ಜ್ಞಾನಾವರಣಾದಿ ಸಕಲಕರ್ಮ ನಿರ್ಮುಕ್ತನುಂ ಕೇವಲಜ್ಞಾನಾದಿ ಸಕಲಗುಣ ಸಮೇತನುಪ್ಪೆನ್ನಾತ್ಮಂ ಎನಗೆ ಸಾಕ್ಷಾನ್ಮೋಕ್ಷಕ್ಕೆ ಕಾರಣಂ ಅತ್ಮೋತ್ಥಮುಪ್ಪಸುಖಮೇಸುಖಂ ಮೋಕ್ಷಮೇನಿತ್ಯಮುಪ್ಪನೆಲೆಯೆಂದು ನಂಬುವುದು ನಿಶ್ಚಯ ಸಮ್ಯಗ್ದರ್ಶನವು ॥೧॥

ನಿ:ಕರ್ಮನಿತ್ಯ ನಿರಂಜನ ನಿರುಪಮಲೇಪ ನಿಜಶುದ್ಧಾತ್ಮನೇ ಎನಗೆ ಸಾಕ್ಷಾನ್ಮೋಕ್ಷಕ್ಕೆ ಕಾರಣವು. ಅತ್ಮೋತ್ಥಸುಖಮೇಸುಖಂ, ಮೋಕ್ಷಮೇನಿತ್ಯಮುಪ್ಪ ನೆಲೆಯೆಂದರಿಯುವುದು ನಿಶ್ಚಯ ಸಮ್ಯಜ್ಞಾನವು ॥೨॥

ಕರ್ಮೋಪಾಧಿ ನಿರಪೇಕ್ಷ ಪರಮಸುಖಮೂರ್ತಿ ಸದಾನಂದ ಚಿದಾನಂದ ಪರಮಾನಂದ ನಿತ್ಯಾನಂದ ಜ್ಞಾನಾನಂದ ನಿಜಶುದ್ಧಾತ್ಮನಂ ಸವಿಕಲ್ಪ ನಿರ್ವಿಕಲ್ಪರೂಪದಿಂ ಧ್ಯಾನಿಸುವುದು ನಿಶ್ಚಯ ಸಮ್ಯಕ್ಚಾರಿತ್ರವು ॥೩॥ ಇಂತೀ ನಿಶ್ಚಯರತ್ನತ್ರಯಂ ಸಾಧ್ಯವು. ಉಭಯರತ್ನತ್ರಯದಿಂದಾದ ಮೋಕ್ಷಂ ಸಾಧ್ಯವು.

---

## ಸೂತ್ರಂ ॥ ದ್ವಿವಿಧೋ ಮೋಕ್ಷ: ॥ ೬೪ ॥

ತಾ:—ಭಾವಮೋಕ್ಷ, ದ್ರವ್ಯಮೋಕ್ಷಮೆಂದಿತ್ತೆರಂ, ಅದೆಂತೆನೆ—ಘಾತಿಕರ್ಮಕ್ಷಯಮೆಂದೊಡಂ, ಅರ್ಹದವಸ್ಥೆಯೆಂದೊಡಂ, ಭಾವಮೋಕ್ಷಮೆಂದೊಡಂ, ಏಕಾರ್ಥವು. ॥೧॥ ಆತ್ಮನು ಕರ್ಮಮುಮೆಂಬೆರಡರತ್ಯಂತ ಪೃಥಗ್ಭಾಗಮೆಂದೊಡಂ, ಸ್ವರೂಪಲಬ್ಧಿಯೆಂದೊಡಂ, "ಮೋಕ್ಷ್ ಕೃತ್ಸ್ನಕರ್ಮ ವಿಪ್ರಮೋಕ್ಷೋಮೋಕ್ಷ:," ಎಂದೊಡಂ, ಏಕಾರ್ಥವು ॥೨॥ ಇದು ದ್ರವ್ಯಮೋಕ್ಷಮೆಂಬುದಿಂತೀ ಎಲ್ಲಾ ಕರ್ಮಂಗಳಿಂದಗಲ್ದ ಪರಮಾತ್ಮಸ್ವರೂಪಮುಪಾದೇಯಮೆಂಬುದು ತಾತ್ಪರ್ಯವು.

ಗಾಹೆ॥ ಮೂಲುತ್ತರ ಪಯಿಡೀಣಂ ಬಂಧೋದಯ ಸತ್ತಕಮ್ಮ ಉಮ್ಮುಕ್ಕಾ ।
ಮಂಗಳಭೂದಾಸಿದ್ಧಾ ಅಷ್ಟಗುಣಾತೀದ ಸಂಸಾರಾ ॥ ೧೧೦ ॥

ತಾ:—ಪ್ರಕೃತ್ಯಾದಿ ಕರ್ಮಯುಕ್ತ ಜೀವಂಗಳು ಬಹಿರಾತ್ಮ, ಅಂತರಾತ್ಮ, ಪರಮಾತ್ಮ ಭೇದದಿಂ ತ್ರಿವಿಧಮಾಗಿರುವವು.

ಶ್ಲೋಕ ॥ ಬಹಿರಂತ: ಪರಶ್ಚೇತಿ ತ್ರಿಧಾತ್ಮಾ ಸರ್ವದೇಹಿಷು ।
ಉಪೇಯಾಸ್ತತ್ರ ಪರಮಂ ಮಧ್ಯೋಪಾಯಾದ್ಬಹಿಸ್ತ್ಯಜೇತ್ ॥ ೧೮ ॥

ತಾ:—ಈ ತ್ರಿವಿಧಾತ್ಮ ಲಬ್ಧಿಲಕ್ಷಣಮೆಂತೆನೆ—೧ ಸ್ವಶುದ್ಧಾತ್ಮ ಸಂವಿತ್ತಿಸಮುತ್ಪನ್ನನಾಸ್ರವ ಸುಖಕ್ಕೆ ಪ್ರತಿಪಕ್ಷಮುಪ್ಪಿಂದ್ರಿಯ ಸುಖಾಸಕ್ತಂ ಬಹಿರಾತ್ಮಂ, ೨ ತದ್ವಿಪರೀತನಂತರಾತ್ಮಂ, ಅಥವಾ ಅಮೂರ್ತನಿಜ ಶುದ್ಧಾತ್ಮತತ್ವಭಾವನಾಲಕ್ಷಣಮಿಲ್ಲದೆ ದೇಹಾದಿದ್ರವ್ಯದೊಳೇಕತ್ವಭಾವನಾಪರಂ ಮೇಣ್ ಬಹಿರಾತ್ಮಂ, ತತ್ಪ್ರತಿಪಕ್ಷಭಾವನಾಪರನಂತರಾತ್ಮಂ, ಹಿಂಸೋಪಾದೇಯತತ್ವವಿಚಾರಚಿತ್ತದೊಳಂ, ತನ್ನಿಂ ಬೇರಾದ ಪುದ್ಗಲಕರ್ಮನಿರ್ಮಿತರಾಗಾದಿ ದೋಷಂಗಳಂ, ಶುದ್ಧ ಚೈತನ್ಯಲಕ್ಷಣ ನಿಜಾತ್ಮಸ್ವರೂಪದೊಳಂ, ವೀತರಾಗ ಸರ್ವಜ್ಞಪ್ರಣೀತಮುಪ್ಪ ನವಪದಾರ್ಥಂಗಳೊಳಾವನಾನುಮೋರ್ವಂಗೆ ಪರಸ್ಪರ ಸಾಪೇಕ್ಷಾನಯ ವಿಭಾಗೆಯಿಂ ಶ್ರದ್ಧಾನಜ್ಞಾನಾ

ದಿಯಿಲ್ಲದಾತಂ ಬಹಿರಾತ್ಮಂ, ತದ್ವಿಲಕ್ಷಣಭಾವಾಂತರಂಗನಂತರಾತ್ಮಂ ಇಂತು ಬಹಿರಾತ್ಮಾಂತರಾತ್ಮಸ್ವರೂಪಂ ಪೇಳಲ್ಪಟ್ಟಿತು.

ಇನ್ನು ಪರಮಾತ್ಮಸ್ವರೂಪಮೆಂತೆನೆ---ಸಮಸ್ತ ಲೋಕಾಲೋಕಮಂ ಸಕಲ ವಿಮಲ ಕೇವಲಜ್ಞಾನದಿಂ ವ್ಯಾಪಿಸಿ ಅರಿವನಪ್ಪುದರಿಂದ ವಿಷ್ಣುವೆಂಬುದು. ಆ ಶಬ್ದವಾಚ್ಯದಿಂ ನಿತ್ಯೈಕ ಲಕ್ಷ್ಮಿಗೆರದವನಪ್ಪುದರಿಂ ಮಾಧವನೆಂಬುದು. ಪರಬ್ರಹ್ಮಾಭಿದಾನ ನಿಜಶುದ್ಧಾತ್ಮಭಾವನಾಸಮುತ್ಪನ್ನ ಸುಖಾಮೃತತೃಪ್ತನಪ್ಪುದರಿಂ ಊರ್ವಸಿ, ರಂಭೆ, ತಿಲೋತ್ತಮಾದಿ ದೇವಕನ್ನೆಯರಿಂದಾವನೋರ್ವನ ಬ್ರಹ್ಮಚರ್ಯವ್ರತಭಂಗಮಾಗದು ಆತಂ ಬ್ರಹ್ಮನೆಂಬುದು. " ನಜಾಯತ ಇತ್ಯಜ: " ಕೇವಲಜ್ಞಾನಾದ್ಯೈಶ್ವರ್ಯಯುಕ್ತನಪ್ಪುದರಿಂದ ಆತನ ಗುಣವನ್ನು ಪಡೆಯಲಿಕ್ಕೋಸ್ಕರವಾಗಿ ದೇವೇಂದ್ರಾದಿಗಳು ಆತನ ಆಜ್ಞೆಯನ್ನ ಮಾಡುವದರಿಂದ ಈಶ್ವರನೆಂಬುದು ಶಂ=ಸುಖಂ ಕರೋತಿ ಶಂಕರ:. " ಸರ್ವೇಗತ್ಯರ್ಥ:, ಜ್ಞಾನಾರ್ಥ: " ಯೆಂಬೀ ನ್ಯಾಯದಿಂ ಸುಗತನೆಂಬುದು. ಅಥವಾ " ಶೋಭನ ಮವಿನಶ್ವರ ಮುಕ್ತಿಪದಂಗತ " ಸುಗತನೆಂಬುದು. " ಅನೇಕ ಭವಗಹನ ವ್ಯಸನ ಪ್ರಾಪಣಹೇತೂನ್ ಕರ್ಮಾರಾತಿಂಜಯಂತೀತಿ ಜಿನಾಃ " ಎಂಬೀ ವ್ಯುತ್ಪತ್ತಿಯನ್ನುಳ್ಳ ಜಿನರುಂ ದೇವೇಂದ್ರಾದಿಗಳ್ಳು ಮಾಡುವ ಪೂಜೆಗೆ ಅರ್ಹರಾಗುವದರಿಂದ ಅರ್ಹರುಂ. " ಅರಿರ್ಮೋಹನೀಯಸಂಹಂತೀತ್ಯರಿಹನನ " ಯೆಂಬೀ ವ್ಯುತ್ಪತ್ತಿಯನ್ನುಳ್ಳನೆಂಬೀ ನ್ಯಾಯದಿಂ, ಮೋಹನೀಯವೆಂಬ ಶತ್ರುವನ್ನು ನಾಶಮಾಡಿದವನಾದದ್ದರಿಂದ ಅರಿಹನನನೆಂಬುವದು. " ರಜಸಿ ಜ್ಞಾನದೃಗಾವರಣಯೋಃ " ಯೆಂಬ ಜ್ಞಾನದರ್ಶನಾವರಣಂಗಳನ್ನು ಗೆದ್ದದ್ದರಿಂದ ರಜೋಹರನನುಂ. ರಹಸ್ಯವೆಂಬ ಅಂತರಾಯವನ್ನು ಗೆದ್ದದ್ದರಿಂದ ರಹಸ್ಯದೂರನುಂ ಎಂಬಿವು ಮೊದಲಾದ ಸಹಸ್ರದೆಂಟು ( ೧೦೦೮ ) ಅನ್ವರ್ಥ ನಾಮಗಳನ್ನುಳ್ಳವನು ಪರಮಾತ್ಮನೆಂದರಿಯುವದು. ಮತ್ತಂ ಈ ತ್ರಿವಿಧಾತ್ಮಸ್ವರೂಪದಲ್ಲಿ ಭವ್ಯನಾದ ಮಿಥ್ಯಾದೃಷ್ಟಿಯಲ್ಲಿ ಬಹಿರಾತ್ಮಸ್ವರೂಪಂ ವ್ಯಕ್ತಿಯಿಂದಿರುವದು. ಅಂತರಾತ್ಮ ಪರಮಾತ್ಮಸ್ವರೂಪದ್ವಯಂ, ಶಕ್ತಿರೂಪದಿಂ ಭಾವಿನೈಗಮನಯದಿಂ ವ್ಯಕ್ತಿರೂಪದಿಂದಿರುವದು. ಅಭವ್ಯಜೀವನಲ್ಲಿ ಮತ್ತೆ ಬಹಿರಾತ್ಮತ್ವಂ ವ್ಯಕ್ತಿರೂಪದಿಂ ಅಂತರಾತ್ಮ, ಪರಮಾತ್ಮದ್ವಯಂ ಶಕ್ತಿರೂಪದಿಂದುಂಟು, ಭಾವಿನೈಗಮನಯದಿಂ ವ್ಯಕ್ತಿಯಿಲ್ಲಾ, ಎತ್ತಲಾನುಂ ಅಭವ್ಯಜೀವನಲ್ಲಿ ಪರಮಾತ್ಮಸ್ವರೂಪದಿಂ ಉಂಟಾಗಿರುವನಾದೊಡೆ, ಅಭವ್ಯತ್ವವು ಯಾವರೀತಿ ಸಂಭವಿಸುವುದೆಂದು ಕೇಳಿದರೆ? ಪರಿಹಾರವನ್ನು ಹೇಳುವರು, ಪರಮಾತ್ಮತ್ವಂ ಶಕ್ತಿಯಿಂದುಂಟು, ಕೇವಲಜ್ಞಾನಾದಿವ್ಯಕ್ತಿ ಕಾಲತ್ರಯಗಳಲ್ಲಿಯೂ ದೊರೆಕೊಳ್ಳದ್ದರಿಂದ ಶುದ್ಧನಯಮಂ ಕುರಿತು ಭವ್ಯಾಭವ್ಯರುಗಳಲ್ಲಿ ಪರಮಾತ್ಮತ್ವಂ ಸಮಾನತ್ವಂ, ಸಮಾನತ್ವಂ ಹ್ಯಾಗೆಂದರೆ—" ಸವ್ವೇಸುದ್ಧಾ ಹು ಸುದ್ಧಣಯಾ " ಎಂಬಭಿಪ್ರಾಯದಿಂದೆತ್ತಲಾನುಂ ಭವ್ಯಜೀವನೊಳು ಶಕ್ತಿಯಿಂ ಕೇವಲಜ್ಞಾನವಿಲ್ಲದೇ ಹೋದರೆ, ಕೇವಲಜ್ಞಾನಾವರಣವು ದೊರೆಕೊಳ್ಳುವದಿಲ್ಲಾ, ದೊರೆಕೊಳ್ಳದಿದ್ದರೆ, ಆಗಮವಿರೋಧಂ ಅದರಿಂದ ಭವ್ಯಾಭವ್ಯದ್ವಯಂ ಅಶುದ್ಧನಯವೆಂದರಿಯಲ್ಪಡುವದು. ಮಿಥ್ಯಾದೃಷ್ಟಿ ಬಹಿರಾತ್ಮನೊಳು ಆತ್ಮತ್ರಯಂ ನಯವಿಭಾಗದಿಂ ಹೇಳಲ್ಪಟ್ಟದ್ದು ಹ್ಯಾಗೆಂದರೆ—ಶೇಷಗುಣಸ್ಥಾನದೊಳಂ ನಯವಿಭಾಗದಿಂ ಯೋಜಿಸುಗೆ, ಬಹಿರಾತ್ಮಸ್ವರೂಪದೊಳಂತರಾತ್ಮದ್ವಯಂ ಶಕ್ತಿರೂಪದಿಂ ಭಾವಿನೈಗಮನ

ಯದಿಂ ವ್ಯಕ್ತಿಸ್ವರೂಪದಿಂ, ಅಂತರಾತ್ಮಾವಸ್ಥೆಯೊಳಂ ಬಹಿರಾತ್ಮತ್ವಂ ಘೃತಘಟನ್ಯಾಯದಿಂ ಪರಮಾತ್ಮತ್ವಂ ಭಾವಿನೈಗಮನಯದಿಂ ಶಕ್ತಿಯಿಂದ ಇರುವದು. ಪರಮಾತ್ಮಾವಸ್ಥೆಯೊಳಂ ಅಂತರಾತ್ಮ, ಬಹಿರಾತ್ಮದ್ವಯಂ ಭೂತನೈಗಮನಯದಿಂದಿರುವುದು.

ಮತ್ತೂ ಈ ತ್ರಿವಿಧಾತ್ಮಕಂ ಗುಣಸ್ಥಾನದೊಳು ಯೋಜಿಸುವೆನು. ಅದು ಹ್ಯಾಗೆಂದರೆ—ಮೊದಲ ೧, ೨, ೩, ಗುಣಸ್ಥಾನದ ಮೂರರಜೀವಂಗಳು ತರತಮಭಾವದಿಂ ಬಹಿರಾತ್ಮರು ಅಸಂಯತ ಗುಣಸ್ಥಾನವರ್ತಿಗಳು ಜಘನ್ಯಾಂತರಾತ್ಮರು ॥ ೪ ॥ ದೇಶವ್ರತಿಯಿಂದ, ಉಪ ಶಾಂತಕಷಾಯನವರಿಗೂ, ( ೫, ೬, ೭, ೮, ೯, ೧೦, ೧೧), ತರತಮಭಾವದಿಂ ಮಧ್ಯಮಾಂತ ರಾತ್ಮರು. ಕ್ಷೀಣಕಷಾಯ ಗುಣಸ್ಥಾನವರ್ತಿಗಳು ಉತ್ಕೃಷ್ಟಾಂತರಾತ್ಮರು ॥೧೨॥ ಸಯೋಗಿ ಕೇವಲಿಗಳುಂ, ಅಯೋಗಿಕೇವಲಿಗಳುಂ, ವಿವಕ್ಷಿತೈಕದೇಶ ಶುದ್ಧನಿಶ್ಚಯನಯದಿಂ ಸಿದ್ಧಸದೃಶ ಪರಮಾತ್ಮರು ॥ ೧೩, ೧೪॥ ಸಿದ್ಧಪರಮೇಷ್ಠಿಗಳುಂ ಸಾಕ್ಷಾತ್ಪರಮಾತ್ಮರು. ಇಂತೀ ಮೂರು ಪ್ರಕಾರದ ಆತ್ಮಸ್ವರೂಪದೊಳು ಸಂಸಾರಕಾರಣತ್ವದಿಂದ ಬಹಿರಾತ್ಮಸ್ವರೂಪಂ ಹೇಯವು. (ತ್ಯಜಿಸತಕ್ಕದ್ದು)ಮೋಕ್ಷಸುಖಕ್ಕೆ ಕಾರಣವಾದುದರಿಂದ ಅಂತರಾತ್ಮಸ್ವರೂಪಂ ಉಪಾದೇಯವಾ ಗುವದು. (ಸ್ವೀಕರಿಸತಕ್ಕದ್ದು.) ಶುದ್ಧಜ್ಞಾನಾನಂದಮಯವಾದುದರಿಂದಂ ಪರಮಾತ್ಮಸ್ವರೂಪಂ ಸಾಕ್ಷಾದುಪಾದೇಯವೆಂದು ತಾತ್ಪರ್ಯವು. ಪರಮಾತ್ಮಸ್ವರೂಪದೆಯ್ದುಗೆಗೆ ಧ್ಯಾನವೇ ಕಾರಣಂ, ಆ ಧ್ಯಾನವು ಪರಾಶ್ರಿತಂ, ಸ್ವಾಶ್ರಿತಂ ಎಂದೆರಡುಭೇದವು ॥೨॥ ಅವುಗಳಲ್ಲಿ ಪರಾಶ್ರಿತಧ್ಯಾನಸ್ವರೂ ಪವು ಹ್ಯಾಗೆಂದರೆ—ಅಪ್ರಶಸ್ತವಿಷಯಕಷಾಯಾದಿ ದುಷ್ಪರಿಣಾಮವನ್ನು ಪರಿಹರಿಸಲಿಕ್ಕೋ ಸ್ಕರ ಸವಿಕಲ್ಪಾವಸ್ಥೆಯಲ್ಲಿ ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯ ಸರ್ವಸಾಧುಗಳ ಗುಣಸ್ಮರಣ ಪೂರ್ವಕವಾದ ಭಕ್ತಿಯಿಂ ಜಪಿಸುತ್ತಂ ಧ್ಯಾನಿಸುತ್ತಂ ಇರುವನಿಗೆ ಭಾವವಿಶುದ್ಧಿದೊರಕೊಳ್ಳು ವದು. ಅಪ್ರಾರ್ಥಿತಮುಭಯ ಭವಂ ಸಫಲವಾಗುವವು.

ಗಾಹೆ॥ ಪಣತಿಸಸೋಳಥಪ್ಪಣ ಚದುದುಗಮೇಗಂಚ ಜವಹಝಾಯೇಹ ॥
ಪರಮೇಠ್ಠಿವಾಚಯಾಣಂ ಅಂಣಂಚಗೂರೂವದೇಸೇಣ ॥ ೧೧೧ ॥
ಅರಹಂತಾ ಅಸರೀರಾ ಆಇರಿಯಾತಹ ಉವಝ್ಝಿಯಾಮುಣಿಣೋ ॥
ಪಡಮಖ್ಖರಣಿಂಪಂಣೋ ಓಂಕಾರಂ ಪಂಚಪರಮೇಠ್ಠಿ ॥ ೧೧೨ ॥

ತಾಃ—ಇಂತು ಪರಾಶ್ರಿತಧ್ಯಾನವನ್ನು ಹೇಳಿದನಂತರಂ ಸ್ವಾಶ್ರಿತಧ್ಯಾನವೆಂತೆಂದರೆ—ಭೋಗೋಪಭೋಗಾದಿ ಚೇತನಾಚೇತನ ಸಮಸ್ತ ಪರದ್ರವ್ಯನಿರಾಲಂಬನಮಪ್ಪ ಪರಿಣಾಮಮಂ ಸ್ವಸಂವೇದನ ಜ್ಞಾನಗುಣಮೆಂಬುದು ತದ್ಗುಣಾವಲಂಬನದಿನ್ನಾವನೋರ್ವಂ ಖ್ಯಾತಿ ಪೂಜಾ ಲಾಭದೃಷ್ಟಶ್ರುತಾನುಭೂತ ಭೋಗಕಾಂಕ್ಷರೂಪನಿದಾನ ಬಂಧಾದಿ ಸಮಸ್ತರಾಗಾದಿ ವಿಭಾ ವಮುದರಹಿತನಾಗಿ ತ್ರಿಕರಣಶುದ್ಧಿಯಿಂ ವಿಷಯ ಸುಖಾನಂದ ವಾಸನಾವಾಸಿತ ಚಿತ್ತಮಂ ಸ್ವಶು ದ್ಧಾತ್ಮ ಭಾವನೋತ್ಥ ವೀತರಾಗ ಪರಮಾನಂದ ಸುಖದಲ್ಲಿ ರಂಜಿಸುಗು ಮತ್ತಂ ಮತಿ ಶ್ರುತಾವಧಿ ಮನಃಪರ್ಯಯಕ್ಕೆಯ ಕೇವಲಜ್ಞಾನಾಭೇದರೂಪಮುಂ ಪರಮಾರ್ಥ ಶಬ್ದಾಭಿ ದೇಯಮುಂ ಸಹಜ ಶುದ್ಧ ಚಿತ್ತತ್ವಸಂವಿತ್ತಿಲಕ್ಷಣಮಪ್ಪ ನಿಜಪರಮಾತ್ಮ ತತ್ವಮೇ ಸಮ್ಯಕ್ ಶ್ರದ್ಧಾನ ಜ್ಞಾನಾಚರಣ ಲಕ್ಷಣಮಪ್ಪ ನಿಶ್ಚಯ ರತ್ನತ್ರಯಾತ್ಮಕ ಭಾವನೆಯಿಂ ಪುಟ್ಟಿದ ಸರ್ವಾ ತ್ಮ ಪ್ರದೇಶಾಹ್ಲಾದನಕಾರಣಮಪ್ಪ ಪರಮ ಸಮರಸಿ ಭಾವ ಸುಖಾಮೃತದೊಳು ತನ್ಮಯನಾಗಿ

ತಣ್ಣನೆ ತಣಿದು ಪರಮ ನಿರಾಪೇಕ್ಷೆಯಿಂ ನಿರ್ವಿಕಾರಮುಂ ನಿಸ್ತರಂಗಮುಮಾಗಿ ಕರಂಪದುಳ ಮಪ್ಪಾತ್ಮನ ಪರಿಣಮನಮಂ ನಿಶ್ಚಯ ಧ್ಯಾನಮೆಂಬುದು, ನಿರ್ವ್ಯಗ್ರತೆಯಿಂದ ತಂ ಧ್ಯಾನಪರಿಣತ ನಪ್ಪ ದಿವ್ಯಯೋಗಿಗಳ ಸ್ವರೂಪದೊಳಾವುದೊಂದು ವೀತರಾಗ ಪರಮಾನಂದ ಸುಖಾಮೃತಂ ಸ್ಫುರಿಯಿಸುತ್ತಮಿಕ್ಕುಮದನೇ ದಿವ್ಯಕಳೆ ಎಂಬುದು, ಶುದ್ಧಾತ್ಮಸ್ವರೂಪಮೆಂಬುವದು, ಪರಮ ಜ್ಯೋತಿ ಎಂಬುವದು, ಸ್ವಾತ್ಮೋಪಲಬ್ಧಿ ಎಂಬುವದು, ಶುದ್ಧಾತ್ಮಾನುಭೂತಿ ಎಂಬುವದು, ಶುದ್ಧಾತ್ಮಸಂವಿತ್ತಿ ಎಂಬುವದು, ಮತ್ತಮದನೇ ಪರಮಾನಂದಮೆಂಬುವದು, ಸಹಜಾನಂದ ಮೆಂಬುವದು, ಸದಾನಂದಮೆಂಬುವದು, ಚಿದಾನಂದಮೆಂಬುವದು, ನಿತ್ಯಾನಂದಮೆಂಬುವದು, ಜ್ಞಾನಾನಂದಮೆಂಬುವದು, ಭೂತಾರ್ಥಮೆಂಬುವದು, ಪರಮಾರ್ಥಮೆಂಬುವದು, ನಿಶ್ಚಯ ಪಂಚಾಚಾರಮೆಂಬುವದು, ಸಮಯಸಾರ ಸಮೂಹಮೆಂಬುವದು, ಅಧ್ಯಾತ್ಮಸಾರಮೆಂಬು ವದು, ಮತ್ತಮದನೇ ಪರಮಮಂಗಳಮೆಂಬುವದು, ಪರಮೋತ್ತಮಮೆಂಬುವದು, ಪರಮ ಶರಣಮೆಂಬುವದು, ಪರಮಕೇವಲಜ್ಞಾನೋತ್ಪತ್ತಿಕಾರಣಮೆಂಬುವದು, ಕರ್ಮಕ್ಷಯಕಾರಣ ಮೆಂಬುವದು, ಪರಮಾದ್ವೈತಮೆಂಬುವದು, ಶುದ್ಧೋಪಯೋಗಮೆಂಬುವದು, ಶುಕ್ಲಧ್ಯಾನ ಮೆಂಬುವದು, ರೂಪಾತೀತಧ್ಯಾನಮೆಂಬುವದು, ಮತ್ತಮದನೇ ಚತುರ್ವಿಧಾರಾಧನೆಯೆಂಬು ವದು, ನಿಶ್ಚಯಷಡಾವಶ್ಯಕಮೆಂಬುವದು, ಪರಮಸ್ವಾಧ್ಯಾಯಮೆಂಬುವದು, ಪರಮಸಮಾಧಿ ಎಂಬುವದು, ಪರಮಸ್ವಾಸ್ಥ್ಯಮೆಂಬುವದು. ಪರಮಭೇದಜ್ಞಾನಮೆಂಬುವದು, ಪರಮಸ್ವಸಂವೇ ದನಮೆಂಬುವದು, ಮತ್ತಮದನೇ ಪರಮಸಮರಸಿಭಾವಮೆಂಬುವದು, ಮತ್ತಮಾಶುದ್ಧೋಪ ಯೋಗ ಜನಿತ ಪರಮಾನಂದಕ್ಕೆ ಪಲವುಂ ಪ್ರಶಸ್ತಪರ್ಯಾಯನಾಮಂಗಳಕ್ಕುಮೆಂಬುದುಭಾ ವವು. ಈ ಸ್ವರೂಪಾಶ್ರಿತಧ್ಯಾನದಿಂದ ಮೋಹನೀಯಂ ಕೆಡುವುದು. ತದನಂತರಂ ಜ್ಞಾನಾವರ ಣೀಯಂ, ದರ್ಶನಾವರಣೀಯಂ, ಅಂತರಾಯಮೆಂಬ ಮೂರುಂ ಘಾತಿಗಳುಂ ಕೆಡೆ, ಕೇವಲ ಜ್ಞಾನೋದಯಮಾಗೆ ಬಂಧಕಾರಣವಿಲ್ಲಮೆಯಿಂ ಸಕಲನಿರ್ಜರೆಯುಮೆಂಬೀ ಎರಡುಂ ಕಾರ ಣಮಾಗಿ, ಪ್ರಕೃತಿ ಸ್ಥಿತ್ಯನುಭಾಗ ಪ್ರದೇಶ ಬಂಧ ಭಿನ್ನಮಪ್ಪೀ ಬಂಧೋದಯೋದೀರಣ ಸತ್ವ ಕರ್ಮಂಗಳ ನಿರವಶೇಷಮಪ್ಪಗಲ್ಕೆ ಮೋಕ್ಷಮೆಂಬುದು. ಕ್ಷಾಯಿಕಸಮ್ಯಕ್ತ್ವ, ಕೇವಲಜ್ಞಾನ, ಕೇವಲದರ್ಶನ ಅನಂತಸುಖವುಂ, ಸಿದ್ಧತ್ವಂ ಪೊರಗಾಗಿ ಉಳಿದೌಪಶಮಿಕಾದಿಭಾವಂಗಳ ಕೇಡು ಮೋಕ್ಷಮೆಂಬುದು. ಎಲ್ಲಾ ಕರ್ಮಂಗಳು ನೆರೆಕೆಟ್ಟಬಳಿಕ್ಕಂ ಮೇಗಣ್ಗೆ ಸಲ್ಗಂ, ಲೋ ಕದ ಕಡೆವರಂ ಸಲವಿನ ಪ್ರಕಾರಕ್ಕೆ ಕಾರಣಮಪ್ಪ ಧರ್ಮಾಸ್ತಿಕಾಯಂ ಮೇಲಿಲ್ಲಪ್ಪುದರಿಂ ಆಲೋಕಕ್ಕೆ ಫಲವಿಲ್ಲ. ಸಂದೊಡೆ ಲೋಕಾಲೋಕವಿಕಲ್ಪ ಭಾವಮೆಯ್ದುಗುಮದೆಂತೆಂದೊಡೆ, ತಿರುಗಿಸಿ ಬಿಟ್ಟ ಕುಂಭಾರಚಕ್ರದಂತೆ ಪೂರ್ವಪ್ರಯೋಗದಿಂದ ಮೃತ್ತಿಕಾಲೇಪದಿಂದಗಲ್ದ ಶ್ರೀಫಲದನ್ತೆ, ಸಿಲಕಿಲ್ಲಪ್ಪುದರಿಂ ತೊಗಟನ ಕೂಟದಿಂದಗಲ್ದ ಮೇಗಣ್ಗೆ ಸಲ್ವೇರಂಡದ ಬಿತ್ತಿ ನಂತೆ, ಬಂಧಮಿಲ್ಲಪ್ಪುದರಿಂದಲುಂ ತಿರ್ಯಗ್ಗತಿ ಸ್ವಭಾವಮಿಲ್ಲದ ಪ್ರದೀಪದ ಶಿಖಿಯಂತೆ ಕರ್ಮ ಗಳಗಲ್ಕೆಯಿನ್ನೂರ್ಧ್ವಗತಿ ಸ್ವಭಾವಮಪ್ಪುದರಿಂದಲುಂ ಮೇಗಣ್ಗೆಸಲ್ಗುಂ. ಗತಿಜಾತ್ಯಾದಿ ಭೇದ ಕಾರಣಮಿಲ್ಲಪ್ಪುದರಿಂದನಂತಜ್ಞಾನಾದಿಗುಣಂಗಳಿಂ ಸಿದ್ಧರ್ಗೆ ಭೇದವ್ಯವಹಾರಮಿಲ್ಲಾಗಿಯುಂ, ಕಥಂಚಿದ್ಭೇದಮನರಿಯಲ್ಪಡುಗುಮೆಂದು ಬಂದುದು ಭಾವಾರ್ಥವು.

---

## ಸೂತ್ರಂ ॥ ದ್ವಾದಶಸಿದ್ಧಸ್ಯಾಷ್ಟಯೋಗದ್ವಾರಾಣಿ ॥ ೬೫ ॥

ತಾಃ—ಕ್ಷೇತ್ರ, ಕಾಲ, ಗತಿ, ಲಿಂಗ, ತೀರ್ಥ, ಚಾರಿತ್ರ, ಪ್ರತ್ಯೇಕ ಬುದ್ಧಬೋಧಿತ ಬುದ್ಧ, ಜ್ಞಾನ, ಅವಗಾಹ, ಅಂತರಸಂಖ್ಯೆ, ಅಲ್ಪಬಹುತ್ವವೆಂಬ ಬಹುಭೇದದ ವಿಕಾರಂಗಳಿಂ ವರ್ತಮಾನಾತೀತಾನುಗ್ರಾಹಕನಯದ್ವಯದಿಂ ಸಿದ್ಧಪರಮೇಷ್ಠಿಗಳು ಪೇಳಪಡುವರು. ಅದೆಂತೆಂದೊಡೆ—ಕ್ಷೇತ್ರದಿಂದಂ ಪ್ರತ್ಯುತ್ಪನ್ನಗ್ರಾಹಕನಯಾಪೇಕ್ಷೆಯಿಂ ಸಿದ್ಧಕ್ಷೇತ್ರದೊಳು ಸ್ವಪ್ರದೇಶದೊಳಾಕಾಶ ಪ್ರದೇಶದೊಳು ಮೋಕ್ಷ ಸಿದ್ಧಿಯಕ್ಕುಂ. ಭೂತಗ್ರಾಹಕನಯದ್ವಯಮುಂ ಜನ್ಮಮುಂ ಕುರಿತು ಹದಿನೈದು ಕರ್ಮಭೂಮಿಗಳಕ್ಕುಂ.

ಸಂಹನನಮುಂ ಕುರಿತು ಮನುಷ್ಯಕ್ಷೇತ್ರದೊಳು ಸಿದ್ಧಿಕಾಲದಿಂ ಪ್ರತ್ಯುತ್ಪನ್ನನಯಾಪೇಕ್ಷೆಯಿಂದೊಂದೇ ಸಮಯದೊಳು ಸಿದ್ಧಿಯಕ್ಕುಂ. ಭೂತಪ್ರಜ್ಞಾಪನನಯಾಪೇಕ್ಷೆಯಿಂ ಜನ್ಮಾವಸಾನಪರ್ಯಂತಂ ಉತ್ಸರ್ಪಿಣಿಯುಂ ಅವಸರ್ಪಿಣಿಯುಂ ಎಂಬೆರಡುಕಾಲದೊಳು ಮುಕ್ತರಕ್ಕುಂ. ಗತಿಯೊಳು ಸಿದ್ಧರಕ್ಕುಂ.

ವಿಶೇಷದಿನವಸರ್ಪಿಣಿಯ ತೃತೀಯಕಾಲದ ಕಡೆಯೊಳಂ ಚತುರ್ಥಕಾಲದ ಕಡೆಯೊಳ್ಪುಟ್ಟದಂ ಸಿದ್ಧನಕ್ಕುಂ. ದುಷ್ಷಮಕಾಲದೋಳ್ ಮುಕ್ತನಾಗಂ, ಉಳಿದ ಕಾಲದೊಳು ಮುಕ್ತನಾಗಂ, ಸಂಹನನದೊಳುತ್ಸರ್ಪಿಣಿಯ ಎಲ್ಲಾಕಾಲದೊಳಂ ಮುಕ್ತರಕ್ಕುಂ. ಗತಿಯೊಳು ಸಿದ್ಧಗತಿಯೊಳು, ಮನುಷ್ಯಗತಿಯೊಳು, ಮೋಕ್ಷ ಸಿದ್ಧಲಿಂಗದಿಂ ಅವೇದತ್ವದಿಂ ಭಾವಮುಂ ಕುರಿತು ಸಿದ್ಧಿವರ್ತಮಾನನಯಾಪೇಕ್ಷೆಯಿಂ ನಿರ್ಗ್ರಂಥಲಿಂಗದಿಂ, ಭೂತನಯಾಪೇಕ್ಷೆಯಿಂ, ಸಗ್ರಂಥಲಿಂಗದಿಂ, ಮೋಕ್ಷ ಸಿದ್ಧಿತೀರ್ಥಕರಂತರವಿಕಲ್ಪದಿನಿತ್ತೆರವು.

ತೀರ್ಥಕರಿದ್ದಕಾಲದೊಳಾದ ಸಿದ್ಧರೆಂದುಂ, ಇಲ್ಲದಕಾಲದೊಳಾದ ಸಿದ್ಧರೆಂದುಂ, ಚಾರಿತ್ರದಿಂ ಪ್ರತ್ಯುತ್ಪನ್ನನಯಾಪೇಕ್ಷೆಯಿಂದವಾಚ್ಯಂಭೂತನಯಾಪೇಕ್ಷೆಯಿಂದೊಂದರಿಂದಂ, ನಾಲ್ಕರಿಂದಂ, ಪರಿಹಾರಸಹಿತವೈಯ್ದರಿಂದಂ, ಮೋಕ್ಷ ಸಿದ್ಧಿಯಕ್ಕುಂ. ಸ್ವಶಕ್ತಿನಿಮಿತ್ತದಿನಾದಜ್ಞಾನಮನೊಡೆಯರುಂ, ಪ್ರತ್ಯೇಕಬುದ್ಧರುಂ, ಪರೋಪದೇಶದಿನಾದೀನಾದಿಬುದ್ಧರುಂ, ಜ್ಞಾನಮಯಮೊಡೆಯರುಂ, ಬೋಧಿತಬುದ್ಧರುಮಿರ್ವರ್ಗಂ ಸಿದ್ಧಿಯಕ್ಕುಂ. ಜ್ಞಾನದಿಂ ೧, ೨, ೩, ೪, ಜ್ಞಾನವಿಶೇಷದಿಂ ಸಿದ್ಧಿಯು. ಆತ್ಮಪ್ರದೇಶವ್ಯಾಪಿತ್ವಮವಗಾಹನದುತ್ಕೃಷ್ಟ ಜಘನ್ಯದಿನಿತ್ತೆರನಲ್ಲಿಯುತ್ಕೃಷ್ಟಮಯ್ನೂರಿಪ್ಪತ್ತೈಯ್ದುಬಿಲ್ಲು, ಜಘನ್ಯದಿಂ ಮೂರುವರವೊಳ, ಎರಡರ ಮಧ್ಯವಿಕಲ್ಪಮವಗಾಹಂಗಳು ಸಿದ್ಧಿಯಕ್ಕುಂ.

ವರ್ತಮಾನನಯಾಪೇಕ್ಷೆಯಿಂದಿವೇವೇದೋಕೋನ್ನತಗಳು ಮುಕ್ತಿಗಾಯಂ ಸಲ್ಲದಿರ್ಪಕಾಲಮಂತರಮದು, ಜಘನ್ಯದಿನ್ನೊಂದು ಸಮಯಂ, ಉತ್ಕೃಷ್ಟದಿನರುದಿಂಗಳು ತದನಂತರ ಮುಕ್ತಿಗೆ ಸ್ವಲ್ಪಕಾಲಂ ಜಘನ್ಯದಿನ್ನೊಂದು ಸಮಯಂ,ಉತ್ಕೃಷ್ಟದಿನ್ನೆಂಟು ಸಮಯ ಸಂಖ್ಯೆಯಿನ್ನಲ್ಲಿಯೊಂದು ಸಮಯದೊಳು ಮುಕ್ತಿಗೆ ಸಲ್ಪರ ಸಂಖ್ಯೆಯೋರ್ವರಾದಿಯಾಗಿ ಕ್ರಮದಿಂ ೩೨, ೪೮, ೬೨, ೭೨, ೮೪, ೯೬, ೧೦೮, ೧೦೮ ಮಂದಿಯಾಗುವರು. ಕ್ಷೇತ್ರಾದಿಗಳನ್ನಾಶ್ರಯಿಸಿ ಪರಸ್ಪರಾಪೇಕ್ಷೆಯಿಂ ಸಂಖ್ಯಾತವಿಶೇಷಮಲ್ಪ ಬಹುತ್ವಮೆಂದಿಲ್ಲಿ ಕ್ಷೇತ್ರದೊಳು ಸಿದ್ಧವರನಪ್ಪುದರಿಂ,

ಅಲ್ಪಬಹುತ್ವಮಿಲ್ಲ, ಭೂತಪೂರ್ವನಯಾಪೇಕ್ಷೆಯಿಂ, ಕ್ಷೇತ್ರಜನ್ಮಸಿದ್ಧಿ ಜನ್ಮಸಂಹ್ಮರಣ ಭೇದ ದಿನಲ್ಲಿ ಇತ್ತರಂ, ಸಂಹ್ಮರಣಸಿದ್ಧರ್ಕೆಲರು, ಜನ್ಮಸಿದ್ಧರು ಸಂಖ್ಯಾತಗುಣಂ ಕ್ಷೇತ್ರವಿಕಲ್ಪದಿಂ ಕರ್ಮಭೂಮಿ, ಅಕರ್ಮಭೂಮಿ, ಸಮುದ್ರದ್ವೀಪ ಮೂರ್ದ್ಧ್ವಾಧಸ್ತಿರ್ಯಗ್ಭೇದ ಭಿನ್ನಮಲ್ಲಿ ಯೂರ್ಧ್ವಲೋಕದ ಸಿದ್ಧರ್ಕೆಲವರು, ಅಧೋಲೋಕದ ಸಿದ್ಧರ್ಸಂಖ್ಯಾತಗುಣಂ, ತಿರ್ಯಗ್ಲೋಕದ ಸಿದ್ಧರ್ಸಂಖ್ಯಾತಗುಣಂ, ಸಮುದ್ರಸಿದ್ಧರ್ಕೆಲರು, ದ್ವೀಪಸಮುದ್ರಸಿದ್ಧರ್ಕೆಲರು, ಸಂಖ್ಯಾತ ಗುಣಂ, ಮತ್ತಮವರೊಳು ಲವಣೋದಕದ ಸಿದ್ಧರ್ಕೆಲರು, ಕಾಳೋದಧಿಯ ಸಿದ್ಧರ್ಸಂಖ್ಯಾತ ಗುಣಂ, ಜಂಬೂದ್ವೀಪದ ಸಿದ್ಧರ್ಸಂಖ್ಯಾತಗುಣಂ, ಧಾತಕೀಷಂಡದ ಸಿದ್ಧರ್ಸಂಖ್ಯಾತಗುಣಂ, ಪುಷ್ಕರದ್ವೀಪಾರ್ಧದಸಿದ್ಧರು ಸಂಖ್ಯಾತಗುಣಂ, ಕಾಲವಿಭಾಗಮುತ್ಸರ್ಪಿಣಿಯುಮವಸರ್ಪಿಣಿಯುಮಾರೆರಡುಂ, ಅಲ್ಲದುದಮೂರುತೆರವು. ಅಲ್ಲಿಯೆಲ್ಲರುಂ ಕೆಲರು ಉತ್ಸರ್ಪಿಣಿಯುಸಿದ್ಧರುಂ, ಅವಸರ್ಪಿಣಿಯ ವಿಶೇಷಾಧಿಕರುಂ, ಅನುಭವಸಿದ್ಧರ್ಸಂಖ್ಯಾತಗುಣವು.

ವರ್ತಮಾನನಯಾಪೇಕ್ಷೆಯಿಂದ, ಒಂದೇಸಮಯದಿಂ ಅಲ್ಪಬಹುತ್ವಮಿಲ್ಲ, ಒಂದುಗತಿ ಯಂತರಿಸಿದಲ್ಲಿ, ತಿರ್ಯಗ್, ಮನುಷ್ಯ, ದೇವ, ನರಕಗತಿಯಿಂ ಬಂದು ಮನುಷ್ಯರಾಗಿ ಸಿದ್ಧ ರಾದವರು ಕ್ರಮದಿನೋರ್ವರಂ ನೋಡಲೋರ್ವರ್ಸಂಖ್ಯಾತಗುಣಂ, ವರ್ತಮಾನನಯಾಪೇಕ್ಷೆಯಿಂ ಅವೇದಮುಕ್ತರಪ್ಪುದರಿಂ, ಅಲ್ಪಬಹುತ್ವಮಿಲ್ಲ, ಭೂತವಿಷಯನಯಾಪೇಕ್ಷೆಯಿಂ, ಎಲ್ಲರಿಂಕೆಲಂಬರ್ನಪುಂಸಕವೇದರ್ಭವಸಿದ್ಧರು, ನಪುಂಸಕವೇದಚರಸಿದ್ಧರು, ಕ್ರಮದಿಂ ಸಂಖ್ಯಾತಗುಣಂ ತೀರ್ಥದೊಳೆಲ್ಲರಿಂ ಕೆಲರ್ ತೀರ್ಥಕರಸಿದ್ಧರು, ಇತರ ಸಿದ್ಧರ್ಸಂಖ್ಯಾತ ಗುಣಂ, ಚಾರಿತ್ರದೊಳು ವರ್ತಮಾನನಯಾಪೇಕ್ಷೆಯಿಂ, ಸಿದ್ಧರ್ಗೆ ಸಂಯತಾಸಂಯತವ್ಯಪದೇಶಮಿಲ್ಲಪ್ಪುದರಿಂ ಅಲ್ಪಬಹುತ್ವಮಿಲ್ಲ, ಭೂತವಿಷಯನಯಾಪೇಕ್ಷೆಯಿಂದೆಲ್ಲರ್ಗಂ ಅನಂತರಂ ಯಥಾಖ್ಯಾತಚಾರಿತ್ರದಿಂದಲೇ ಸಿದ್ಧಯಪ್ಪುದರಿಂ ಅಲ್ಪಬಹುತ್ವಮಿಲ್ಲ, ಎಲ್ಲರಿಂ ಕೆಲಂಬರು ಪಂಚಾಚಾರಚಾರಿತ್ರರು, ಪರಿಹಾರರಹಿತರು, ಚತುಶ್ಚಾತಿಸಿದ್ಧರು, ಸಂಖ್ಯಾತಾಸಂಖ್ಯಾತಾ ಸಂಖ್ಯಾತಗುಣಂ, ಪ್ರತ್ಯೇಕ ಬುದ್ಧರುಂ, ಕೆಲಬೋಧಿತಬುದ್ಧರುಂ, ಸಂಖ್ಯಾತಗುಣಂ, ಜ್ಞಾನೋಪಯೋಗದೊಳು ವರ್ತಮಾನನಯಾಪೇಕ್ಷೆಯಿಂ ಕೇವಲಿಗಳೀಗಳು ಕೆಲರ್ಸಿದ್ಧರಪ್ಪುದರಿಂ, ಅಲ್ಪಬಹುತ್ವಮಿಲ್ಲ, ಸಾತಪ್ರಜ್ಞಾಪನನಯಾಪೇಕ್ಷೆಯಿಂ, ಅವಧಿಮನಃ ಪರ್ಯಯಂಗಳನೆಂದುಂ ಪಡೆಯದೆ, ಮತಿಶ್ರುತಗಳಿಂದಲೇ ಸಿದ್ಧರಾದರ್ಕೆಲಂಬರು. ಮತಿಶ್ರುತಮನ:ಪರ್ಯಯಸಿದ್ಧರ್ಸಂಖ್ಯಾತಗುಣಂ. ಮತಿಶ್ರುತಾವಧಿಮನಃಪರ್ಯಯಸಿದ್ಧರ್ಸಂಖ್ಯಾತಗುಣಂ. ಮತಿಶ್ರುತಾವಧಿಸಿದ್ಧರ್ಸಂಖ್ಯಾತಗುಣಂ. ಭಾವಾಭಾವಾಪೇಕ್ಷೆಯಿಂದೆಲ್ಲರಿಂಕೆಲರು ಚತುಃಜ್ಞಾನಸಿದ್ಧರು. ತ್ರಿಜ್ಞಾನಸಿದ್ಧರ್ಸಂಖ್ಯಾತಗುಣಂ. ದ್ವಿಜ್ಞಾನಸಿದ್ಧರ್ಸಂಖ್ಯಾತಗುಣಂ. ಅವಗಾಹನಯೋಗದಿಂ ಜಘನ್ಯಾವಗಾಹನಸಿದ್ಧರ್ಕೆಲರು. ಉತ್ಕೃಷ್ಟಾವಗಾಹನ ಸಿದ್ಧರ್ಸಂಖ್ಯಾತಗುಣಂ. ಯವಮಧ್ಯಸಿದ್ಧರ್ಸಂಖ್ಯಾತಗುಣಂ. ಯವಮಧ್ಯದಿಂ ಕೆಳಗಣ ಸಿದ್ಧರ್ಸಂಖ್ಯಾತಗುಣಂ ಯವಮಧ್ಯದಿಂ ಮೇಗಣಸಿದ್ಧರು ವಿಶೇಷಾಧಿಕರು. ಅಂತರಾನುಯೋಗದಿನೆಲ್ಲರಿಂ ಕೆಲರ್ನಿರಂತರಾಷ್ಟಸಮಯಸಿದ್ಧರು. ಸಪ್ತ, ಷಟ್, ಪಂಚ, ಚತುಸ್ತ್ರಿದ್ವಿ ಸಮಯಸಿದ್ಧರು ಕ್ರಮದಿಂ ಸಂಖ್ಯಾತಗುಣಂ. ಶಾಂತರಸಸಿದ್ಧರೊಳೆಲ್ಲರಿಂ ಕೆಲರುಷಣ್ಮಾಸಾಂತರಸಿದ್ಧರು. ಏಕಸಮಯಾಂತರಸಿದ್ಧರು. ಸಂಖ್ಯಾತಗುಣಂ, ಯವ

ಮಧ್ಯಾಂತರ ಸಿದ್ಧರ್ಸಂಖ್ಯಾತಗುಣಂ, ಯವಮಧ್ಯದಿಂ ಕೆಳಗಣ ಸಿದ್ಧರ್ಸಂಖ್ಯಾತಗುಣಂ. ಯವಮಧ್ಯದಿಂ ಕೆಳಗಣ ಸಿದ್ಧರ್ವಿಶೇಷಾಧಿಕರು. ಎಲ್ಲರಿಂಕೆಲವರು ಯುಗಪದಷ್ಟೋತ್ತರಶತ ಸಿದ್ಧರು. ಸಪ್ತೋತ್ತರಸಿದ್ಧರಿಂ ತೊಟ್ಟು, ಪಂಚಾಶತಸಿದ್ಧರುವರೆಗಮನಂತಗುಣರು. ಏಕಾಂನ ಪಂಚಾಶತ್ಸಿದ್ಧರಿಂ ತೊಟ್ಟು, ಪಂಚವಿಂಶತಿಸಿದ್ಧರ್ವರಂ ಕ್ರಮದಿಂದ ಸಂಖ್ಯಾತಗುಣರು. ಚತುರ್ವಿಂಶತಿ ಸಿದ್ಧಾದಿಗಳೇಕ ಸಿದ್ಧರ್ವರಂ ಕ್ರಮದಿಂ ಸಂಖ್ಯಾತಗುಣರು. ಇಂತನಂತಮಪ್ಪ ಸಿದ್ಧ ಪರಮೇಷ್ಠಿಗಳಿಗೆ, ಮನುಷ್ಯಕ್ಷೇತ್ರ ಪ್ರಮಾಣವಾದ ಸಿದ್ಧಕ್ಷೇತ್ರದೊಳಡೆ ಎಂತಕ್ಕುಮೆಂದೊಡೆ—ಅದು ವಿರುದ್ಧಮಲ್ಲದೆಂತೆಂದೊಡೆ—ಅತಿಏಕಾಪವರಾಭ್ಯಂತರದೊಳು, ಅನೇಕದೀಪ ಪ್ರಕಾಶಕ್ಕಿರವೆಂತಂತೆ, ಮತ್ತಮಂಗುಳಾಸಂಖ್ಯೇಯ ಭಾಗಮಾತ್ರಮಪ್ಪೊಂದು ಸೂಕ್ಷ್ಮನಿಗೋದನ ಶರೀರದೊಳು ಸಿದ್ಧರಾಶಿಯನೋಡೆಯನಂತಗುಣಮಪ್ಪ ಸೂಕ್ಷ್ಮನಿಗೋದ ಜೀವಂಗಳ್ಗೆ ಪ್ರತಿ ಪರಮಾಣು ಸರ್ವಜೀವರಾಶಿಯಂ ನೋಡೆಯನಂತಗುಣಮಪ್ಪ ವಿಶ್ರೋಪಚಯ ಸಹಿತ, ಔದಾರಿಕ, ತೈಜಸಿಕ, ಕಾರ್ಮಣ, ವರ್ಗಣಾಸಯುಕ್ತಂಗಳ್ಗೆ ಅವಗಾಹನಾಸಾಮರ್ಥ್ಯದಿಂದಿರವೆಂತಂತೆ, ಅಮೂರ್ತರಪ್ಪ ಸಿದ್ಧಪರಮೇಷ್ಠಿಗಳೋರ್ವರಿರ್ಪ್ಪೆಡೆಯೊಳು ಅನಂತಸಿದ್ಧರ್ಗಿರವಕ್ಕುಂ, ಎಂಬುದಂ ನಿಶ್ಚಯಿಸುವದು. ಮತ್ತಂ ಸಿದ್ಧಪರಮೇಷ್ಠಿಗಳಗೆ ಉತ್ಪತ್ತಿವ್ಯಯಂಗಳೆಂತೆನೆ—ಅಗುರುಲಘುತ್ವದಿಂ, ಷಡ್ವೃದ್ಧಿ, ಷಡ್ಹಾನಿ, ರೂಪವಾಗಿ ಪರಿಣಮಿಸುವ ವರ್ತನಾನಪರ್ಯಾಯಮನಪೇಕ್ಷಿಸುವುದು ಉತ್ಪಾದವ್ಯಯಂಗಳಕ್ಕುಂ. ಅಥವಾ ಸ್ವಭಾವದಿಂ ಪ್ರತಿಸಮಯಮುತ್ಪಾದ ವ್ಯಯರೂಪದಿಂ ಪರಿಣಮಿಸುವ ಸಮಸ್ತಜ್ಞೇಯ ಪದಾರ್ಥಂಗಳಂ ಪರ್ಯಾಯಂಗಳೊಳು ತತ್ಪರಿಚ್ಛಿತ್ತಿಕಾರಣದಿಂ ಸಿದ್ಧಪರಮೇಷ್ಠಿಗಳು ಅನಂತಜ್ಞಾನಮನಿಹಿತವೃತ್ತಿಯಿಂ. ವರ್ತಿಸುಗು, ಮದುಕಾರಣದಿಂದುತ್ಪಾದವ್ಯಯಂಗಳಕ್ಕುಂ.

ಶ್ಲೋಕ॥ ಅನಾದಿನಿಧನೇದ್ರವ್ಯೇಸಪರ್ಯಾಯಾಃ ಪ್ರತಿಕ್ಷಣಂ ॥
ಉನ್ಮಜ್ಜಂತಿ ನಿಮಜ್ಜಂತಿ ಜಲಕಲ್ಲೋಲವಜ್ಜಲೆ ॥ ೧೯ ॥

ತಾ:—ಅಥವಾ ವ್ಯಂಜನಪರ್ಯಾಯಾಪೇಕ್ಷೆಯಿಂ ಸಂಸಾರಪರ್ಯಾಯಪೇಕ್ಷೆಯಿಂ ನಾಶನಂ ಸಿದ್ಧಪರ್ಯಾಯದುತ್ಪತ್ತಿ ಶುದ್ಧಜೀವದ್ರವ್ಯತ್ವಂಕ್ರಾವ್ಯಮಕ್ಕು ಮೆಂದರಿಯುವದು.

---

## ಸೂತ್ರಂ॥ ಅಷ್ಟೌ ಸಿದ್ಧಗುಣಾಃ ॥ ೬೬ ॥

ತಾ:—ಸಿದ್ಧರಿಗೆ ಎಂಟು ಗುಣಗಳೆಂತೆನೆ—ಕ್ಷಾಯಿಕಸಮ್ಯಕ್ತ್ವ, ಕೇವಲಜ್ಞಾನ, ಕೇವಲದರ್ಶನ, ಅನಂತವೀರ್ಯ, ಪರಮಸೂಕ್ಷ್ಮತ್ವ, ಅವಗಹನತ್ವ, ಅಗುರುಲಘುತ್ವ, ಅವ್ಯಾಬಾಧತ್ವಮೆಂದಿವಷ್ಟಗುಣಂಗಳು ॥ ೮ ॥

ಪ್ರಸ್ತುತಗಾಹೆ॥ ಸಮ್ಮತ್ತಣಾಣದಂಸಣವೀರಿಯಸುಹಮಂತಹೇವ ಅವಗಹಣಂ ॥
ಅಗುರುಲಘುಗಮಬಾಹಂ ಅಠ್ಠಗುಣಾಹೊಂತಿಸಿದ್ಧಾಣಂ ॥ ೧೧೩ ॥

ಅಠ್ಠವಿಹಕಮ್ಮಮುಕ್ಕಾಸೀದೀಭೂದಾಣಿರಂಜಣಾಣಿಚ್ಚಾ ॥
ಅಠ್ಠಗುಣಾಕಿದಕಿಚ್ಚಾಲೋಯಗ್ಗಣಿವಾಸಿಣೋಸಿದ್ಧಾ ॥ ೧೧೪ ॥

ತಾ:—ಅಶರೀರಿಗಳಪ್ಪ ಸಿದ್ಧರ್ಗೆ ಪಂಚೇಂದ್ರಿಯಾನುಭವಮಿಲ್ಲಪ್ಪುದರಿಂ ಸುಖಮೆಂತಕ್ಕು ಮೆನವೇಡ, ಮತ್ತಂ ವಿಷಯಸುಖಮೆಂಬುದು ದುಃಖಪ್ರತೀಕಾರಮಲ್ಲದೆ ಸುಖವಲ್ಲವು. ಸಿದ್ಧಪರ ಮೇಷ್ಠಿಗಳಸುಖಂ, ಅನ್ಯದ್ರವ್ಯನಿರಪೇಕ್ಷವಮುಂ, ಆತ್ಮೋತ್ಥಮುಂ, ಅವ್ಯಾಬಾಧಮುಂ, ಅನುಪ ಮವುಂ, ಅಚಿಂತ್ಯಮುಂ, ಅತರ್ಕ್ಯಮುಂ, ಅಪ್ರಮೇಯಮುಂ, ಅತಿಶಯಮುಂ, ಅಕ್ಷಯ ಮುಂ, ಅನಂತಜ್ಞಾನಾದಿಸ್ವರೂಪಮಪ್ಪುದು ಮಂತೆಯು ಪೇಳಿಪಟ್ಟುದು.

ಪ್ರಸ್ತುತಗಾಹೆ॥ ಸಪರಬ್ಬಾದಾಸಹಿಯಂ ವಿಚ್ಛಿಣ್ಣಂ ಬಂಧಕಾರಣಂ ವಿಸಮಂ ॥
ಜಂ ಇಂದಿಯೇಹಿ ಅದ್ದಂ ತಂಸೊಖ್ಖಂ ದುಖ್ಖಮೇವತಹಾ ॥ ೧೧೫ ॥

ಜಂಭಂ ಕಾಮುಸುಹುಮೋ ಏ ಜಂಭದಿವ್ವಮಹಾಸುಹಂ ॥
ವಿಹರಾಯಸುಹಸ್ಸೇದಂ ಅಣಂತಭಾಗಂ ಪಿಣಗ್ಘದಿ ॥ ೧೧೬ ॥

ವೃತ್ತ॥ ಆತ್ಮೋಪಾದಾನಸಿದ್ಧಂ ಸ್ವಯಮತಿಶಯವದ್ವೀತಬಾಧಂ ವಿಶಾಲಂ ।
ವೃದ್ಧಿಹ್ರಾಸವ್ಯಪೇತಂ ವಿಷಯವಿರಹಿತಂ ನಿಃಪ್ರತಿದ್ವಂದ್ವಭಾವಂ ॥
ಅನ್ಯದ್ರವ್ಯಾನಪೇಕ್ಷಂ ನಿರುಪಮಮಮಿತಂ ಶಾಶ್ವತಂ ಸರ್ವಕಾಲಂ ।
ಉತ್ಕೃಷ್ಟಾನಂತಸಾರಂ ಪರಮಸುಖಮತಸ್ತಸ್ಯಸಿದ್ಧಸ್ಯಜಾತಂ ॥ ೧೮ ॥

ತಾ:—ಸ್ವಪರಮುಂ, ಬಾಧಾಸಮನ್ವಿತವುಂ, ನಾಶಸ್ವಭಾವಮುಂ, ಬಂಧಕಾರಣಮುಂ, ವಿಷಯಮುಪ್ಪುದರಿಂ ಇಂದ್ರಿಯಜನಿತಸುಖಂ, ದುಃಖಮಲ್ಲದೆ ಸುಖವಲ್ಲವು. ಲೋಕದಲ್ಲಿ ಯಾ ವುದಾದರೊಂದು ಕಾಮಸುಖಂ, ಯಾವುದೊಂದು ದಿವಿಜರಸುಖಂ, ವೀತರಾಗದ ಸುಖದ ಅನಂತೈಕಭಾಗಮುಮಲ್ಲೆಂದು ನಿಶ್ಚಯಿಸುವುದು.

ಶ್ಲೋಕ॥ ತ್ರೈಕಾಲ್ಯೇ ತ್ರಿಷುಲೋಕೇಷು ಪ್ರಾಣಿನಾಂ ಪಿಂಡಿತಾತ್ಸುಖಾತ್ ॥
ಅನಂತಗುಣಿತಂ ಪ್ರೋಕ್ತಂ ಸಿದ್ಧಕ್ಷಣಸುಖಂಬುಧೈಃ ॥ ೨೦ ॥

ತಾ:—ತ್ರಿಕಾಲತ್ರಿಲೋಕಧರವರ್ತಿಸಮಸ್ತ ಜೀವಂಗಳ ಸುಖವನ್ನೆಲ್ಲವನ್ನೂ ಒಂದೇ ಪಿಂಡವನ್ನಾಗಿ ಮಾಡಿದರೆ, ಏಕಸಿದ್ಧಪರಮೇಷ್ಠಿಯ ವರ್ತಮಾನೈಕಲಕ್ಷಣಸುಖಸಮಾನವಾ ಗುವದಿಲ್ಲವಾದ್ದರಿಂ ಆತ್ಮೋಪಾದಾನಮುಂ, ಸಹಜಾತಿಶಯಮುಂ, ವಿಗತಬಾಧಮುಂ, ವಿಶಾಲ ಮುಂ, ವೃದ್ಧಿಹಾನಿಯಿಲ್ಲದುದುಂ, ವಿಷಯಾಧೀನವಿಲ್ಲದಿರುವುದುಂ, ಪ್ರತಿಪಕ್ಷಮಿಲ್ಲದುದುಂ, ಸ್ರಕ್ಚಂದನಾದಿ ಅನ್ಯದ್ರವ್ಯನಿರಾಪೇಕ್ಷವಮುಂ, ನಿಖಿಳೋಪಮಾನರಹಿತಮುಂ, ಅಪ್ರಮಾಣಮುಂ, ಶಾಶ್ವತಮುಂ, ಸರ್ವಕಾಲಮುಂ, ಸರ್ವ ಉತ್ಕೃಷ್ಟಾನಂತಸಾರಮುಂ, ಅತರ್ಕ್ಯಮುಂ, ಅನಂತ ಜ್ಞಾನರೂಪಮಪ್ಪಸುಖವು ಸಕಲ ಕರ್ಮಕ್ಷಯಾನಂತರ ಮುಕ್ತಿಜೀವಕಕ್ಕುಂ.

ಈ ನಿರೂಪಿತ ಪಂಚಶತ (೫೦೦) ವಿಶೇಷಣವಿಶಿಷ್ಟಸುಖಮುಂ, ಕರ್ಮತ್ರಯನಿರ್ಮು ಕ್ತಸುಖಂ, ಅಕ್ಷಯಸುಖಂ, ಅವ್ಯಾಬಾಧಸುಖಂ, ಅಮೂರ್ತಸುಖಂ, ಅತೀಂದ್ರಿಯಸುಖಂ, ಆತ್ಮೋತ್ಥಸುಖಂ, ಅಖಂಡಸುಖಂ, ನಿತ್ಯಸುಖಂ, ಸಿದ್ಧಸುಖಮುಮೆಂದಿವು ಮೊದಲಾದವು ಪ್ರಶ ಸ್ತನಾಮದೋಳ್ಕೂಡಿದ ಸುಖವು. ೧ ಶಾಸ್ತ್ರಸಾರಸಮುಚ್ಚಯದ ಪ್ರಥಮಾನುಯೋಗ, ೨ ಕರ ಣಾನುಯೋಗ, ೩ ಚರಣಾನುಯೋಗ, ೪ ದ್ರವ್ಯಾನುಯೋಗ ಸಾರಪದಭಾವನಾಸಾಮ ರ್ಥ್ಯದಿಂ ಪಡೆಯಲಕ್ಕುಮೆಂದು ನಿಶ್ಚಯಿಸುವುದು.

ಕಂದ॥ ಇದನೊಲಿದೋದುವ ಕೇಳುವ ।
ಮುದದಿಂದಂ ಪೇಳ್ವನೆನೆವಭಾಜಿಪಬರೆವ- ॥
ರ್ಚ್ಚಿದಮಲ ನಿಜಾತ್ಮಸುಖದೊಳ್ ।
ಪುದಿದೊಪ್ಪುವ ಮುಕ್ತಿಲಕ್ಷ್ಮಿಗಧಿಪರೆನಿಪ್ಪರ್ ॥ ೧೯ ॥

ಗಾಹೆ ॥ ತಿರದಯಸಯಣವಣವುದಿತಂಣಉದೀ ಅಪ್ಪಮತ್ತಬೇಕೋಡಿ ॥
ತದ್ದುಗುಣಾಹುಪಮತ್ತಾ ಅಜೋಗಿಜೋಖವಗಪರಿಮಾಣಾಏ ॥ ೧೧೭ ॥
ಊಣತಿಸಯಂ ಸಮುಗಾಖವಗಾತಂದುಗುಣಜೋಗಿ ಅಡಲಖ್ಖಾ ॥
ಅಡಣಉದಿಹಸಪಣಸಯದುಗಂಚಸಂಖೇತಿಹೀಣಣವಕೋಡೀ ॥ ೧೧೮ ॥
ಸತ್ತಾರಿ ಅಠ್ಠಂತಾಥಂಣಾವಮುಝ್ಝಾಯಸಂಜದಾಸಬ್ಬೇ ॥
ಅಂಜಳಿಮೌಳಿಯಹಥ್ಥೋ ತಿಯರಣಸುದ್ಧೇಣಮಸ್ಸಾಮಿ ॥ ೧೧೯ ॥

ಶ್ಲೋಕ॥ ಗುರುಭಕ್ತ್ಯಾವಯಂಸಾರ್ಧದ್ವೀಪದ್ವಿತಯವರ್ತಿನಃ ॥
ವಂದಾಮಹೇತ್ರಿಸಂಖ್ಯೋನ ನವಕೋಟಿಮುನೀಶ್ವರಾನ್ ॥ ೨೧ ॥
ತ್ರ್ಯೂನಕೋಟಿನವಾಚಾರ್ಯಾಜ್ಞಾನದೃಕ್ಚರಣಾಂಚಿತಾನ್ ॥
ಜ್ಞಾನದೃಕ್ಸುಖವೀರ್ಯಾರ್ಥಂ ಮಾನಭೂರ್ವ್ಯಾರ್ಯವಂದಿತಾನ್ ॥ ೨೨ ॥
ನಮೋ ವೃಷಭಸೇನಾದಿ ಗೌತಮಾಂತ್ಯ ಗಣೇಶಿನೇ ॥
ಮೂಲೋತ್ತರಗುಣಾಢ್ಯಾಯ ಸರ್ವಸ್ಮೈಮುನಯೇ ನಮಃ ॥ ೨೩ ॥
ಭೇದಾಭೇದಸಮಾಖ್ಯಾತ ಸದ್ರತ್ನತ್ರಯ ಶೋಭಿನೇ ॥
ಸರ್ವಸ್ಮೈಯೋಗಿವರ್ಗಾಯ ನಮುಸ್ಕುರ್ವೇಸ್ವಸಿದ್ಧಯೇ ॥ ೨೪ ॥

ತಾ:—ಶ್ರೀ ವರ್ಧಮಾನಸ್ವಾಮಿಗಳ ತದನಂತರಂ ಗೌತಮ, ಸುಧರ್ಮ, ಜಂಬೂನಾಥ ರೆಂಬನುಬದ್ಧಕೇವಲಿತ್ರಯಮುಂ ವಂದಿಸುವೆನು ॥ ೩ ॥

ನಂದಿ, ನಂದಿಮಿತ್ರ, ಅಪರಾಜಿತ, ಗೋವರ್ಧನ, ಭದ್ರಬಾಹುಸ್ವಾಮಿಗಳೆಂಬೈವರು ಶ್ರುತಕೇವಲಿಗಳಂ ಸ್ತುತಿಯಿಸುವೆನು ॥ ೫ ॥

ವಿಶಾಲಮುನಿ, ಪ್ರೋಷ್ಠಿಲಯತಿ, ಕ್ಷತ್ರಿಯಯೋಗಿ, ಜಯಋಷಿ, ಜಯನಾಗಯೋಗಿ, ಸಿದ್ಧಾರ್ಥನಾಮ, ಧೃತಿಷೇಣ, ವಿಜಯಸೇನ, ಬುದ್ಧಿಲ, ಗಂಧದೇವ, ಸುಧರ್ಮರೆಂಬ ದಶಪೂರ್ವಧರರೈಕಾದಶರುಮಂ ಸ್ಮರಿಯಿಸುವೆನು ॥ ೧೧ ॥

ನಕ್ಷತ್ರಯೋಗಿ, ಜಯಪಾಲ, ಪಾಂಡುಮುನಿ, ಧ್ರುತಸೇನ, ಕಂಸಭಟ್ಟಾರಕರೆಂಬೀ ಹನ್ನೊಂದಂಗಮಂ ತಾಳ್ದಿದ ಮುನಿಪಂಚಕಮಂ ಪೊಗಳ್ವೆನು ॥ ೫ ॥

ಸುಭದ್ರ, ಜಯಭದ್ರ, ಜಯಬಾಹು, ಲೋಹಾರ್ಯನು ಮೆಂದಾಚಾರಾಂಗಧರಚತುಷ್ಟಯಮಂ ನೆನೆವೆನು ॥ ೪ ॥

ವಿನೆಯಂಧರ, ಶ್ರೀದತ್ತ, ಶಿವದತ್ತ, ಅರ್ಹದತ್ತರೆಂಬೀ ನಾಲ್ವರು ಪೂರ್ವೈಕದಶಧರರಂ ಸ್ಮರಿಯಿಸುವೆನು ॥ ೪ ॥

ಅರ್ಹದ್ಬಲ್ಯಾಚಾರ್ಯರುಂ, ಮಾಘನಂದಿಯೋಗಿಗಳುಂ, ಧರಸೇನಯೋಗಿಗಳುಂ, ಭೂತಬಲಿಗಳುಂ, ಪುಷ್ಪದಂತರುಂ, ಪೂರ್ವೈಕಧರ್ಮೈಕದೇಶಧರ ಪಂಚಕಮುಂ ಸ್ತುತಿಯಿಸುವೆನು ॥ ೫ ॥

ಶ್ರೀದತ್ತ, ಶಿವದತ್ತ, ಅರ್ಹದತ್ತ, ಸಿದ್ಧಾಂತಷಟ್ಖಂಡ ಕರ್ತೃಗಳಂ ಪೊಗಳ್ವೆನು ॥೬॥

ನಾಗಹಸ್ತಿಗಳುಂ, ಯತಿವೃಷಭರುಂ, ಉಚ್ಚಾರಣಾಚಾರ್ಯರುಂ, ಮಾಘನಂದ್ಯಾಚಾರ್ಯರುಂ, ಶ್ಯಾಮಕುಂದಾಚಾರ್ಯರುಂ, ಸಮಂತಭದ್ರಾಚಾರ್ಯರುಂ, ಶುಭನಂದ್ಯಾಚಾರ್ಯರುಂ, ವೀರನಂದಿಗಳುಂ, ಬೊಪ್ಪದೇವಾಚಾರ್ಯರುಂ, ಲಲಾಚಾರ್ಯರುಂ, ವೀರಸೇನ ಭಟ್ಟಾರಕರುಂ, ಜಿನಸೇನ ಭಟ್ಟಾರಕರುಂ, ಗುಣಭದ್ರಸ್ವಾಮಿಗಳುಂ. ಇಂತಿವರ್ಮೊದಲಾಗಿ ಶ್ರುತಸಂತಾನಮುವ್ಯವಚ್ಛಿನ್ನಮಾಗಿ ಬಂದು ಧರಸೇನಾಚಾರ್ಯ, ಕೃತನಂದಿಗಳದ್ವಯದೊಳು

ವೃತ್ತ ॥ ಶ್ರೀಮಜ್ಜೈನೇಂದ್ರಧರ್ಮಾಂಬರ ಕಮಲಶಿಖೇ, ವಿಶ್ರುತಮೂಲಸಂಘೇ ।
ತತ್ಸಂಘಶ್ರೀಕಭೂಷಾವಿಲಸದಿಹಗಣ ಶ್ರೀಬಲಾತ್ಕಾರನಾಮಿ ॥
ಕೇಚಿತ್ತ್ರೈವಿದ್ಯದೇವಾ: ಕವಿಕುಲತಿಲಕಾ ಕೇಚಿದಾಚಾರ್ಯವರ್ಯಾಂ ।
ಕೇಚಿದ್ವಾಧೀಭಸಿಂಹಾ ಗುರುಕುಲತಿಲಕಾ: ಕೇಚಿಕೇವಂ ಪ್ರಸಿದ್ಧಾ: ॥ ೨೦ ॥

ಸ್ವಸ್ತಿ ಶ್ರೀಮೂಲಸಂಘಬಲಾತ್ಕಾರಗಣಾನ್ವಯದೊಳನೇಕಾಚಾರ್ಯಪ್ರವರ್ತಿಸುವಂಥಾ ಕಾಲದೊಳು, ಶ್ರೀವರ್ಧಮಾನ ಭಟ್ಟಾರಕರ ಶಿಷ್ಯರು ಪದ್ಮನಂದಿತ್ರೈವಿದ್ಯದೇವರು, ಇವರ ಶಿಷ್ಯರು ಶ್ರೀಧರಾಚಾರ್ಯದೇವರು, ಇವರ ಶಿಷ್ಯರು ವಾಸುಪೂಜ್ಯಸಿದ್ಧಾಂತದೇವರು, ಇವರ ಶಿಷ್ಯರು ಅಷ್ಟೋಪವಾಸಿ ಕನಕಚಂದ್ರದೇವರು, ಇವರ ಶಿಷ್ಯರು ನಯಕೀರ್ತಿಭಟ್ಟಾರಕದೇವರು, ಇವರ ಶಿಷ್ಯರು ಮಾಸೋಪವಾಸಿ ರವಿಚಂದ್ರಸಿದ್ಧಾಂತದೇವರು, ಇವರ ಶಿಷ್ಯರು ಶ್ರುತಕೀರ್ತಿತ್ರೈವಿದ್ಯದೇವರು, ಇವರ ಶಿಷ್ಯರು ವೀರನಂದಿಸಿದ್ಧಾಂತದೇವರು, ಇವರ ಶಿಷ್ಯರು ಗಂಡವಿಮುಕ್ತನೇಮಿಚಂದ್ರಭಟ್ಟಾರಕದೇವರು, ಇವರ ಶಿಷ್ಯರು ಪಕ್ಷೋಪವಾಸಿ ಜಿನಚಂದ್ರಭಟ್ಟಾರಕದೇವರು, ಇವರ ಶಿಷ್ಯರು ವರ್ಧಮಾನ ಭಟ್ಟಾರಕದೇವರು, ಇವರ ಶಿಷ್ಯರು ಶ್ರೀಧರಪಂಡಿತದೇವರು, ಇವರ ಶಿಷ್ಯರು ( ವಾಸುಪೂಜ್ಯತ್ರೈವಿದ್ಯದೇವರು, ಇವರಶಿಷ್ಯರು ಉದಯಚಂದ್ರಸಿದ್ಧಾಂತದೇವರು, ಇವರಶಿಷ್ಯರು. )

ಶ್ಲೋಕ ॥ ಸ್ವಸ್ತಿಶ್ರೀ ಮೂಲಸಂಘಪ್ರವರಗಣ ಬಲಾತ್ಕಾರ ಸಂಜ್ಞೀ ಪ್ರಸಿದ್ಧ: ।
ಸಜ್ಞಾನಾಂಭೋಜಮಿತ್ರಃ ಸಕಲಗುಣಗಣಾಲಂಕೃತೋ ವಾಸುಪೂಜ್ಯ: ॥ ೨೫ ॥
ತ್ರೈವಿದ್ಯಾಖ್ಯಸ್ಯ ಸೂನುರ್ವಿಲಸದುದಯಚಂದ್ರೋ ಮುಮುಕ್ಷು ಪ್ರಮುಖ್ಯ: ।
ತಚ್ಛಿಷ್ಯಸ್ತತ್ವವೇದೀ ಪರಮ ಕುಮುದಚಂದ್ರೋಲ್ಲಸಕೀರ್ತಿರುಂದ್ರ: ॥ ೨೬ ॥

ಅರ್ಥ:—ಶ್ರೇಯಸ್ಕರವಾದಂಥ ಪ್ರವರಸಂಘದೊಳಗಿನ ಬಲಾತ್ಕಾರಗಣದೊಳಗೆ ಪ್ರಸಿದ್ಧರೂ ಸಮ್ಯಗ್ಜ್ಞಾನವೆಂಬ ಕಮಲಕ್ಕೆ ಮಿತ್ರರೂ, ಸರ್ವಗುಣಗಣಾಲಂಕೃತರೂ ಆದಂಥ ವಾಸುಪೂಜ್ಯತ್ರೈವಿದ್ಯದೇವರು. ಇವರ ( ಪುತ್ರರು ) ಶಿಷ್ಯರು ಸಂಸಾರದಿಂದ ಬಿಡುಗಡೆ ಹೊಂದಲು ಇಚ್ಛೆಯುಳ್ಳವರಲ್ಲಿ ಪ್ರಮುಖ್ಯರಾದಂಥ ಉದಯಚಂದ್ರರು. ಇವರ ಶಿಷ್ಯರೂ ತತ

ಜ್ಞಾನಕೋವಿದರೂ ಕೀರ್ತಿಯಿಂದ ಪ್ರಕಾಶಮಾನರೂ ಆದಂಥ "ಕುಮುದಚಂದ್ರರು" ನನ್ನ ಗುರುಗಳು.

ಶ್ಲೋಕ ॥ ದುಶ್ಚಿತ್ತ ದುರ್ಭಾವ ವಿವರ್ಜಿತಾಯ ಸಜ್ಞಾನಚಾರಿತ್ರ ದ್ರುಗೂರ್ಜಿತಾಯ ।
ಸದ್ಧರ್ಮತತ್ವಂ ಹಿ ಸಮರ್ಜಿತಾಯ ಶ್ರೀಕೌಮುದೀಂದುಂ ದ್ಯುತನಿರ್ಜಿತಾಯ ॥ ೨೭ ॥
ಅಜ್ಞಾನತಮಸಾ ಲುಪ್ತೋ ಮಾರ್ಗೋ ರಜತ್ರಯಾಲಕಃ ।
ತತ್ಪ್ರಕಾಶಸಮರ್ಥಾಯ ನಮೋಸ್ತು ಕುಮುದೇಂದುವೇ ॥ ೨೮ ॥

ಅರ್ಥ:—ಮನಸಿನೊಳಗಿನ ಕೆಟ್ಟ ಕಲ್ಪನೆಗಳನ್ನು ಬಿಟ್ಟಂಥವರೂ, ಸಮ್ಯಗ್‌ಜ್ಞಾನಚಾರಿತ್ರ ದರ್ಶನಗಳಿಂದ ವೃದ್ಧಿಹೊಂದಿದವರೂ ಸತ್ಯಧರ್ಮದೊಳಗಿನ ತತ್ವಗಳನ್ನು ಪೂಜಿಸುವವರೂ ಪ್ರಕಾಶಮಾನಚಂದ್ರನನ್ನು ಗೆದ್ದಂಥವರೂ, ಅಜ್ಞಾನವೆಂಬ ಕತ್ತಲೆಯಿಂದ ವ್ಯಾಪಿಸಲ್ಪಟ್ಟ ರಜತ್ರಯರೂಪಿ ದಾರಿಯನ್ನು ಪ್ರಕಾಶಗೊಳಿಸುವದಕ್ಕೆ ಸಮರ್ಥರೂ ಆದಂಥ ಕುಮುದಚಂದ್ರರಿಗೆ ನಮಸ್ಕಾರವು.

ಸಂಸಾರದುಃಖಭೀತಾಯ ಸ್ವಾತ್ಮೋತ್ಥ ಸುಖಸೇವಿನೇ ।
ರತ್ನತ್ರಯಪವಿತ್ರಾಯ ನಮೋಸ್ತು ಕುಮುದೇಂದುವೇ ॥ ೨೯ ॥

ಅರ್ಥ:—ಸಂಸಾರದೊಳಗಿನ ದುಃಖಗಳಿಗೆ ಅಂಜಿದಂಥ ಆತ್ಮತತ್ವಗಳಿಂದುಂಟಾದ ಸುಖವನ್ನು ಸೇವಿಸುವಂಥ ಮತ್ತು ರತ್ನತ್ರಯ (ಸಮ್ಯಗ್ದರ್ಶನ ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರ) ಗಳಿಂದ ಶುದ್ಧರಾದಂಥ ಕುಮುದಚಂದ್ರರಿಗೆ ನಮಸ್ಕಾರವು.

ಜಿನವಾಕ್ಯಾರ್ಣವಾದ್ಭೂತ ರತ್ನತ್ರಯ ಸುನಿರ್ಮಲಮ್ ।
ಚಿತ್ತಂ ಸಂಧಾರಕಸ್ತಸ್ಮೈ ನಮೋಸ್ತು ಕುಮುದೇಂದುವೇ ॥ ೩೦ ॥

ಅರ್ಥ:—ಜಿನವಾಣಿಯೆಂಬ ಅದ್ಭುತವಾದ ಸಮುದ್ರದೊಳಗೆ ಹುಟ್ಟಿದಂಥ ರತ್ನತ್ರಯಗಳಿಂದ ನಿರ್ಮಲವಾದ ಧ್ಯಾನವನ್ನು ಸ್ಥಿರಪಡಿಸುವಂಥ ಕುಮುದಚಂದ್ರರಿಗೆ ನಮಸ್ಕಾರವು.

ಅಧ್ಯಾತ್ಮಾಂಬುಧಿಸಂಜಾತ ಸದ್ರತ್ನತ್ರಯಧಾರಿಣೇ ।
ಭವ್ಯಸಾರ್ಥೋಪದೇಶಾಯ ನಮೋಸ್ತು ಕುಮುದೇಂದುವೇ ॥ ೩೧ ॥

ಅರ್ಥ:—ಅಂತರಾತ್ಮರೂಪಿ ಸಾಗರದೊಳಗಿಂದ ಹುಟ್ಟಿದಂಥ ರತ್ನತ್ರಯಗಳನ್ನು ಧರಿಸಿದಂಥ ಮತ್ತು ಭವ್ಯಜನರಿಗೆ ಉಪದೇಶ ಮಾಡುವಂಥ ಕುಮುದಚಂದ್ರರಿಗೆ ನಮಸ್ಕಾರವಿರಲಿ.

ರುಚಿನಿಶ್ಚಿತ್ತಿ ಚಾರಿತ್ರ ಪದಾರ್ಥನಾಗಮಾದಧ್ರುವಮ್ ।
ಚಿತ್ತೇ ಸಂಧಾರಕಸ್ತಸ್ಮೈ ನಮೋಸ್ತು ಕುಮುದೇಂದುವೇ ॥ ೩೨ ॥

ತಾಃ—ಶಾಸ್ತ್ರದಲ್ಲಿ ಹೇಳಿದ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರ ಮತ್ತು ಪದಾರ್ಥ ಇವುಗಳನ್ನು ಅಂತಃಕರಣದೊಳಗೆ ಇಡುವಂಥ ಕುಮುದಚಂದ್ರರಿಗೆ ನಮಸ್ಕಾರವು.

ಶ್ರದ್ಧಾನಜ್ಞಾನಚಾರಿತ್ರ ಶುದ್ಧಾತ್ಮೇ ನೈವವರ್ತತೇ ।
ಬುದ್ಧೇತ್ಥಂದೇಶಕಸ್ತಸ್ಮೈ ನಮೋಸ್ತು ಕುಮುದೇಂದುವೇ ॥ ೩೩ ॥

ಅರ್ಥಃ—ಈ ಸಂಸಾರದಲ್ಲಿ ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಮತ್ತು ಸಮ್ಯಕ್ಚಾರಿತ್ರ ಇವುಗಳಿಂದಲೇ ಆತ್ಮನು ಶುದ್ಧನಾಗುತ್ತಾನೆಂದು ಯಾರು ತಿಳಿಯುತ್ತಾರೋ ಅಂಥಾ ಕುಮುದಚಂದ್ರರಿಗೆ ನನ್ನ ನಮಸ್ಕಾರವು.

ಶ್ಲೋಕ ॥ ಔಜಸಂ ದರ್ಶನಂ ಸಮ್ಯಗೌಜಸಂ ಜ್ಞಾನಮುತ್ತಮಮ್ ।
ಔಜಸಂ ಚರಣಂ ತಸ್ಮೈ ನಮೋಽಸ್ತು ಕುಮುದೇಂದುವೇ ॥ ೩೪ ॥

ಅರ್ಥ:—ಉಜ್ವಲಸಮ್ಯಗ್‌ದರ್ಶನ, ಉಜ್ವಲಸಮ್ಯಗ್‌ಜ್ಞಾನ ಮತ್ತು ಉಜ್ವಲಸಮ್ಯಕ್ಚಾರಿತ್ರವು ಯಾರಲ್ಲಿ ಇರುವದೋ ಆ ಕುಮುದಚಂದ್ರರಿಗೆ ನನ್ನ ನಮಸ್ಕಾರವು.

ಭೇದಸಮ್ಯಕ್ತ್ವಯುಕ್ತಾಯ ಭೇದಜ್ಞಾನಪ್ರವೇದಿನೇ ।
ಭೇದಚಾರಿತ್ರಧಾರಾಯ ನಮೋಽಸ್ತು ಕುಮುದೇಂದುವೇ ॥ ೩೫ ॥

ಅರ್ಥ:—ಸಮ್ಯಗ್‌ದರ್ಶನದಿಂದಲೂ ಅದರ ಭೇದಗಳಿಂದಲೂ ಯುಕ್ತನಾದಂಥ, ಸಮ್ಯಗ್‌ಜ್ಞಾನವನ್ನೂ ಅದರ ಭೇದಗಳನ್ನೂ ತಿಳಿದಂಥ ಮತ್ತು ಸಮ್ಯಕ್ಚಾರಿತ್ರವನ್ನೂ ಅದರ ಭೇದಗಳನ್ನೂ ಧರಿಸಿದಂಥ ಕುಮುದಚಂದ್ರರಿಗೆ ನಮಸ್ಕಾರವು.

ಎರಡನೇ ಅರ್ಥ:—ಬಹಿರಾತ್ಮನಲ್ಲಿಯೂ ಅಂತರಾತ್ಮನಲ್ಲಿಯೂ ಪರಮಾತ್ಮನಲ್ಲಿಯೂ ಭೇದಬುದ್ಧಿಯಿಂದ ಇರುವವರೂ, ಹಾಗು ಈ ಮೂರೂ ಬೇರೆ ಬೇರೆ ಎಂದು ತಿಳಿಯುವವರೂ, ಮತ್ತು ಈ ಮೂರರಲ್ಲಿಯೂ ಭೇದಬುದ್ಧಿಯಿಂದ ವರ್ತಿಸುವವರೂ ಆದ, ಕುಮುದಚಂದ್ರರಿಗೆ ನಮಸ್ಕಾರವು.

ಪ್ರಶಸ್ತದರ್ಶನಾಢ್ಯಾಯ ಸಮಸ್ತವಸ್ತುವೇದಿನೇ ।
ನಿರಸ್ತರಾಗದೋಷಾಯ ನಮೋಽಸ್ತು ಕುಮುದೇಂದುವೇ ॥ ೩೬ ॥

ಅರ್ಥಃ—ಉತ್ಕೃಷ್ಟವಾದ ದರ್ಶನದಿಂದ ಸಂಪನ್ನರೂ, ಸರ್ವಪದಾರ್ಥವನ್ನು ತಿಳಿಯುವವರೂ, ರಾಗಾದಿದೋಷಗಳನ್ನು ನಾಶಗೊಳಿಸುವವರೂ ಆದ, ಕುಮುದಚಂದ್ರರಿಗೆ ನನ್ನ ನಮಸ್ಕಾರವು.

ಸಮ್ಯಕ್ತ್ವರತ್ನಪಾತ್ರಾಯ ಜ್ಞಾನರತ್ನಪ್ರಕಾಶಿನೇ ।
ವೃತ್ತರತ್ನಪವಿತ್ರಾಯ ನಮೋಽಸ್ತು ಕುಮುದೇಂದುವೇ ॥ ೩೭ ॥

ಅರ್ಥ:—ಸಮ್ಯಗ್ದರ್ಶನವೆಂಬ ರತ್ನಕ್ಕೆ ಪಾತ್ರರೂ, ಜ್ಞಾನವೆಂಬ ರತ್ನವನ್ನು ಪ್ರಕಾಶಗೊಳಿಸುವವರೂ, ಸಮ್ಯಗ್ದರ್ಶನವೆಂಬ ರತ್ನದಿಂದ ಪವಿತ್ರರೂ ಆದ, ಕುಮುದಚಂದ್ರರಿಗೆ ನಮಸ್ಕಾರವು.

ಶ್ರದ್ಧಾನೇ ಬುದ್ಧಿಚಿತ್ತಾಯ ಸಜ್ಞಾನಾಮೃತಪಾಯಿನೇ ।
ಸತ್ಸಂಯಮಧಾರಾಯ ನಮೋಽಸ್ತು ಕುಮುದೇಂದುವೇ ॥ ೩೮ ॥

ಅರ್ಥ:—ಸಮ್ಯಗ್ದರ್ಶನದಲ್ಲಿ ದೃಢಚಿತ್ತವುಳ್ಳವರೂ, ಸಮ್ಯಗ್‌ಜ್ಞಾನವೆಂಬ ಅಮೃತವನ್ನು ಪಾನಮಾಡುವವರೂ, ಹಾಗೂ ಉತ್ತಮವಾದ ಸಂಯಮವನ್ನು ಧರಿಸುವವರೂ ಆದ, ಕುಮುದಚಂದ್ರರಿಗೆ ನಮಸ್ಕಾರವು.

ಶ್ಲೋಕ ॥ ದ್ವಿಪ್ರಕಾರಮಿದಂ ಪ್ರೋಕ್ತಂ ರತ್ನತ್ರಯಂ ಸುನಿರ್ಮಲಮ್ ।
ತತ್ಸಾರ ಚೇತಕಸ್ತಸ್ಮೈ ನಮೋಸ್ತು ಕುಮುದೇಂದುವೇ ॥ ೩೯ ॥

ಅರ್ಥ:—ಬಾಹ್ಯ ಹಾಗು ಅಂತರ ಎಂದು ರತ್ನತ್ರಯದಲ್ಲಿ ಎರಡು ಪ್ರಕಾರ ಇರುವದು. ಅದರ ಸಾರವನ್ನು ತಿಳಿದಿರುವಂಥ ಕುಮುದಚಂದ್ರರಿಗೆ ನಮಸ್ಕಾರವು.

ದ್ರವ್ಯಾಸ್ತಿಕಾಯತತ್ವಾರ್ಥಂ ಬಂಧಮೋಕ್ಷಾದಿ ಕಾರಣಮ್ ।
ಯೋ ನರೋ ವಿಂಯತೇ ತಸ್ಮೈ ನಮೋಸ್ತು ಕುಮುದೇಂದುವೇ ॥ ೪೦ ॥

ಅರ್ಥ:—ಬಂಧಮೋಕ್ಷಾದಿಗಳಿಗೆ ಕಾರಣವಾದಂಥ ದ್ರವ್ಯಾಸ್ತಿಕಾಯ ತತ್ವಗಳ ಜ್ಞಾನವು ಯಾರಿಗೆ ಉಂಟಾಗಿರುವದೋ ಆ ಕುಮುದಚಂದ್ರರಿಗೆ ನಮಸ್ಕಾರವು.

ದ್ರವ್ಯಾಸ್ತಿಕಾಯತತ್ವಾರ್ಥಂ ಸಾರಭೂತಂ ನಿಜಾತ್ಮಕಮ್ ।
ತದ್ಧ್ಯಾನಯೋಗಯುಕ್ತಾಯ ನಮೋಸ್ತು ಕುಮುದೇಂದುವೇ ॥ ೪೧ ॥

ಅರ್ಥ:—ಆತ್ಮಸ್ವರೂಪವಾದ ಸಾರಭೂತ ದ್ರವ್ಯಾಸ್ತಿಕಾಯ ತತ್ವಗಳನ್ನು ಧ್ಯಾನಿಸುವಂಥ ಕುಮುದಚಂದ್ರರಿಗೆ ನಮಸ್ಕಾರವು.

ದ್ರವ್ಯತ್ವಂ ಚ ಗುಣತ್ವಂ ಚ ಪರ್ಯಾಯಾರ್ಥಂ ನಿಜಾತ್ಮನಾ ॥
ಯೋಜಾನಾತಿ ಸ್ಫುಟಂ ತಸ್ಮೈ ನಮೋಸ್ತು ಕುಮುದೇಂದುವೇ ॥ ೪೨ ॥

ಅರ್ಥ:—ದ್ರವ್ಯತ್ವವನ್ನೂ ಗುಣತ್ವವನ್ನೂ ಪರ್ಯಾಯಾರ್ಥವನ್ನೂ ಯಾರು ಸ್ಪಷ್ಟವಾಗಿ ತಿಳಿಯುತ್ತಾರೋ ಆ ಕುಮುದಚಂದ್ರರಿಗೆ ನಮಸ್ಕಾರವು.

ಸರ್ವದ್ರವ್ಯಂತು ಸರ್ವಜ್ಞೈ: ಪೂರ್ವಾಚಾರ್ಯೇಶ್ಚ ವರ್ಣಿತಮ್ ।
ತದ್ವೈವ ವರ್ಣಕಸ್ತಸ್ಮೈ ನಮೋಸ್ತು ಕುಮುದೇಂದುವೇ ॥ ೪೩ ॥

ಅರ್ಥ:—ಯಾವಪ್ರಕಾರ ಸರ್ವಜ್ಞ ಪರಮೇಶ್ವರರೂ ಪೂರ್ವಾಚಾರ್ಯರೂ ಸರ್ವದ್ರವ್ಯಗಳ ವರ್ಣನೆಯನ್ನು ಮಾಡಿರುವರೋ, ಅದೇ ಪ್ರಕಾರ ಅವುಗಳ ವರ್ಣನೆಯನ್ನು ಮಾಡುವಂಥ ಕುಮುದಚಂದ್ರರಿಗೆ ನಮಸ್ಕಾರವು.

ದ್ರವ್ಯೋತ್ಪತ್ತಿ ವ್ಯಯಾತ್ಮಾನಂ ಶುದ್ಧಾತ್ಮಾನಂ ನಯಾದಿಭಿ: ।
ಜ್ಞಾತ್ವೋಪದೇಶಕಸ್ತಸ್ಮೈ ನಮೋಸ್ತು ಕುಮುದೇಂದುವೇ ॥ ೪೪ ॥

ಅರ್ಥ:—ದ್ರವ್ಯಗಳ ಉತ್ಪತ್ತಿವ್ಯಯಗಳ ಸ್ವರೂಪವನ್ನೂ ಶುದ್ಧಾತ್ಮನನ್ನೂ ನಯಮೊದಲಾದವುಗಳಿಂದ ಅರಿತುಕೊಂಡು ಅವುಗಳ ಉಪದೇಶವನ್ನು ಮಾಡುವಂಥ ಕುಮುದಚಂದ್ರರಿಗೆ ನಮಸ್ಕಾರವು.

ಶುದ್ಧೋಪಯೋಗಯುಕ್ತಾಯ ಶುದ್ಧತತ್ವೋಪದೇಶಿನೇ ।
ಶುದ್ಧಾತ್ಮಧ್ಯಾನನಿಷ್ಠಾಯ ನಮೋಸ್ತು ಕುಮುದೇಂದುವೇ ॥ ೪೫ ॥

ಅರ್ಥ:—ಶುದ್ಧೋಪಯೋಗಯುಕ್ತರೂ, ಶುದ್ಧತತ್ವೋಪದೇಶವನ್ನು ಮಾಡುವವರೂ ಶುದ್ಧ ಆತ್ಮಧ್ಯಾನನಲ್ಲಿ ಲೀನರಾದವರೂ ಆದ ಕುಮುದಚಂದ್ರರಿಗೆ ನಮಸ್ಕಾರವು.

ನಮ: ಕುಮುದಚಂದ್ರಾಯ ಚಂದ್ರಜ್ಯೋತಿ ಪ್ರಕೀರ್ತಯೇ ।
ಕೀರ್ತಿತಾಶೇಷ ಭವ್ಯಾಯ ಭವ್ಯವ್ಯೂಹಪ್ರಬೋಧಿನೇ ॥ ೪೬ ॥

ಅರ್ಥ:--ಚಂದ್ರಜ್ಯೋತಿಯಂತೆ ಪ್ರಕಾಶಮಾನವಾದ, ಯಾವ ಭವ್ಯಜೀವನ ಸಂಪೂರ್ಣ ಕೀರ್ತಿಯು ಬೆಳಗುತ್ತಿದೆಯೋ ಮತ್ತು ಯಾವನು ಭವ್ಯಜೀವಸಮೂಹಕ್ಕೆಲ್ಲಾ ಉಪದೇಶವನ್ನು ಮಾಡುತ್ತಾನೋ ಅಂಥ ಕುಮುದಚಂದ್ರರಿಗೆ ನಮಸ್ಕಾರವು.

ಶ್ಲೋಕ ॥ ಸಮ್ಯಕ್ತ್ವವಜ್ರಪಾತೇನ ಮಿಥ್ಯಾತ್ವಾದ್ರಿ ಪ್ರಭೇದಿನೇ ॥
ಸದ್ವೃತ್ತಚಕ್ರಧಾರಾಯ ನಮೋಸ್ತು ಕುಮುದೇಂದುವೇ ॥ ೪೭ ॥

ಅರ್ಥ:—ಯಾವನು ಸಮ್ಯಕ್ತ್ವವೆಂಬ ವಜ್ರದ ಹೊಡತದಿಂದ ಮಿಥ್ಯಾತ್ವವೆಂಬ ಪರ್ವತವನ್ನು ಒಡೆದುಬಿಟ್ಟಿರುವನೋ, ಮತ್ತು ಯಾವನು ಸದ್ವೃತ್ತವೆಂಬ ಚಕ್ರವನ್ನು ಧರಿಸಿರುವನೋ ಅಂಥ ಕುಮುದಚಂದ್ರರಿಗೆ ನಮಸ್ಕಾರವು.

ಮಿಥ್ಯಾತ್ವಾದ್ರೇ: ಸುವಜ್ರಾಯ ಅಜ್ಞಾನಧ್ವಾಂತಭಾನವೇ ॥
ಅವ್ರತಾಗ್ನಿಂ ಚ ತೋಯಾಯ ನಮೋಸ್ತು ಕುಮುದೇಂದುವೇ ॥ ೪೮ ॥
ರುಚಿವಲ್ಯಾ.........ಬೋಧಾಬ್ಧೇರ್ವಿಧುರೋಚಿನೇ ।
ಚಾರಿತ್ರಾಂಬುಜ ಮಿತ್ರಾಯ ನಮೋಸ್ತು ಕುಮುದೇಂದುವೇ ॥ ೪೯ ॥

ಅರ್ಥ:—ಸಮ್ಯಕ್ತ್ವಬೋಧರೂಪಿಸಾಗರದೊಳಗಿಂದ ಹೊರಟಂಥ ಚಂದ್ರನ ಕಿರಣದಂತೆ ಇದ್ದಂಥ, ಚಾರಿತ್ರರೂಪಿ ಕಮಲಗಳಿಗೆ ಮಿತ್ರನಂತೆ ಇದ್ದಂಥ ಕುಮುದಚಂದ್ರರಿಗೆ ನಮಸ್ಕಾರವು.

ಜೀವಪುದ್ಗಲಮಾಕಾಶಂ ಧರ್ಮಾಧರ್ಮೌ ಚ ಕಾಲಕಮ್ ।
ಯೇನ ಪ್ರಯಾಸಿತಂ ತಸ್ಮೈ ನಮೋಸ್ತು ಕುಮುದೇಂದುವೇ ॥ ೫೦ ॥

ಅರ್ಥ:—ಜೀವ, ಪುದ್ಗಲ, ಆಕಾಶ, ಧರ್ಮ, ಅಧರ್ಮ ಮತ್ತು ಕಾಲ ಇವುಗಳನ್ನು ಅರಿತುಕೊಳ್ಳುವದಕ್ಕಾಗಿ ಯಾರು ಪ್ರಯತ್ನ ಪಟ್ಟಿರುವರೋ, ಆ ಕುಮುದಚಂದ್ರರಿಗೆ ನಮಸ್ಕಾರವು.

ವಿದೃಕ್ತಪೋಬಲಂ ವೃತ್ತಮಾಚಾರಂ ಪಂಚಭೇದಕಮ್ ।
ಮನೋಮಂದಿರಧಾರಾಯ ನಮೋಸ್ತು ಕುಮುದೇಂದುವೇ ॥ ೫೧ ॥

ಅರ್ಥ:—ತಪೋಬಲ ಮತ್ತು ಐದುಪ್ರಕಾರದ ಆಚಾರ ಇವುಗಳನ್ನು ಮನರೂಪಿ ಮನೆಯಲ್ಲಿ ಇಟ್ಟುಕೊಂಡಿರುವ ಕುಮುದಚಂದ್ರರಿಗೆ ನಮಸ್ಕಾರವು.

ಮಾರಮಾತಂಗ ಸಿಂಹಾಯ ಚಾರಿತ್ರಾಂಬುಜ ಭಾನವೇ ।
ಕಾರುಣ್ಯಾರ್ಣವ ಚಂದ್ರಾಯ ನಮೋಸ್ತು ಕುಮುದೇಂದುವೇ ॥ ೫೨ ॥

ಅರ್ಥ:—ಮದನರೂಪಿ ಆನೆಗೆ ಸಿಂಹನಂತೆಯೂ, ಚಾರಿತ್ರರೂಪಿ ಕಮಲಗಳಿಗೆ ಸೂರ್ಯನಂತೆಯೂ, ದಯೆ ಎಂಬ ಸಮುದ್ರಕ್ಕೆ ಚಂದ್ರನಂತೆಯೂ ಇರುವ ಕುಮುದಚಂದ್ರರಿಗೆ ನಮಸ್ಕಾರವು.

ಇಂತನಾದಿ ನಿಧನಮಪ್ಪ ಶ್ರುತಸ್ಕಂಧೋದ್ಭೂತಮಪ್ಪ ಪರಮಾಗಮದೊಳು ಸಾರಪದ ಸಮೂಹದರ್ಥಮಂಕೊಂಡು, ಜಗತ್ರಯ ಕಾಲತ್ರಯವರ್ತಿ ಸಕಲ ಪದಾರ್ಥಯುಗಪದವಲೋಕನಸಮರ್ಥ ಸಕಲ ವಿಮಲ ಕೇವಲಜ್ಞಾನಾಧೀಶ್ವರನಾದ ಶ್ರೀವೃಷಭತೀರ್ಥಕರ ಶ್ರೀಪಾದ ಸನ್ನಿಧಿಯೊಳು, ವೃಷಭಸೇನ ಗಣಧರರು ಭರತೇಶ್ವರ ಚಕ್ರವರ್ತಿಗೆ ಪೇಳ್ದುದಂ, ಶ್ರೀವರ್ಧ

ಮಾನಸ್ವಾಮಿಯ ಶ್ರೀಪಾದಪಾರ್ಶ್ವದೊಳು, ಶ್ರೀಗೌತಮಗಣಧರರು ಶ್ರೀ ಮಗಧೇಶ್ವರನಪ್ಪ ಶ್ರೇಣಿಕಮಹಾರಾಜಂಗೆ ಪೇಳ್ದುದಂ, ಜ್ಞಾನವೈರಾಗ್ಯಸಂಪನ್ನರು ವರ್ಜ್ಯಭೀರುಗಳುಮಪ್ಪ ಗುರು ಪರಂಪರಾಕ್ರಮದಿಂ ಪ್ರಸಿದ್ಧಮಾಗಿ ಬಂದುದಂ ಪ್ರಾಕೃತ ಸಂಸ್ಕೃತಭೇದದಿಂದನೇಕ ವಿಧಮ ಪ್ಪುದಂ ಕರ್ಣಾಟದ ಜನಂಗಳರಿವಂತಾಗಿ ಜಡಮತಿಗಳಂ ಕುರಿತು ಸಂಧಿಸಮಾಸಕ್ರಿಯಾಕಾ ರಕವಿಶೇಷ್ಯ ವಿಶೇಷಣ ವಾಕ್ಯಪರಿಸಮಾಪ್ತಿಪುನರುಕ್ತ್ಯಾದಿಯಾಗಿರ್ದ ದೋಷಂಗಳಂ ವಿಚಾರಿ ಸದೆ, ವ್ಯಕ್ತ್ಯರ್ಥಮಾಗಿ ನಿತ್ಯಾನಂದ ಶ್ರೀ ಕುಮುದಚಂದ್ರಭಟ್ಟಾರಕದೇವರ ಪ್ರಿಯಶಿಷ್ಯರುಮಪ್ಪ ಶ್ರೀಮಾಘನಂದಿ ಸಿದ್ಧಾಂತದೇವರಿಂ ಪೇಳ್ದ, ಶಾಸ್ತ್ರಸಾರಸಮುಚ್ಚಯಮೆಂಬ ಶಾಸ್ತ್ರಮಂ, ಭೇದಾ ಭೇದರತ್ನತ್ರಯಭಾವನಾಪ್ರಿಯರುಂ, ನಿರ್ಮತ್ಸರರುಂ, ಬಹುಶ್ರುತರುಮಪ್ಪವರ್ಗಳು, ಇಲ್ಲಿ ಯೇನಾನುಂ ತಪ್ಪಿದುದುಳ್ಳೊಡೆ ಶೋಧಿಸಿ ಶುದ್ಧಮಾಡಿ ಬರೆದು ಬರೆಯಿಸಿ ಪೇಳ್ದು ಕೇಳ್ದು ಪ್ರವ ರ್ತಿಸಿ ಪುಣ್ಯವೃದ್ಧಿಯುಮಂ, ಯಶೋವೃದ್ಧಿಯುಮಂ, ಸ್ವರ್ಗಮುಮಪವರ್ಗಮುಮಂ ವಿವೇಕಿ ಗಳಿಲ್ಲಿ ಮಾಡಿಕೊಳ್ಗೆ ಎಂಬುದು ತಾತ್ಪರ್ಯಮು.

ವೃತ್ತ॥ ದೇಯಾತ್ಶ್ರೀಧರದೇವಶಿಷ್ಯತಿಲಕಃ ಶ್ರೀವಾಸುಪೂಜ್ಯೋಮುನಿಃ ।
ತ್ರೈವಿದ್ಯಸ್ತದಪತ್ಯನುತ್ಯನುದಯೇಂದುಖ್ಯಾತ ಸೈದ್ಧಾಂತಿಕಸ್ತತ್ಪುತ್ರಃ ॥
ಕುಮುದೇಂದು ಯೋಗಿತಿಲಕಃ ತತ್ಸೂನುರತ್ಯುನ್ನತಃ ।
ಸಿದ್ಧಾಂತಾರ್ಣವ ಚಂದ್ರಮಾಸ್ಸುಖಪದಂ ಶ್ರೀಮಾಘನಂದೀವ್ರತಿ ॥ ೨೧ ॥

ಶ್ಲೋಕ॥ ಮೂಲಸಂಘಕ್ಷಿತೌಭಾತಿ ಬಲಾತ್ಕಾರಗಣಾಂಬುಧಿಃ ॥
ನೂತ್ನರತ್ನಸಮೂಹಂ ವಾ ಶೋಭಂತೇಮಿ ಮುನೀಶ್ವರಾಃ ॥ ೨೨ ॥

ವೃತ್ತ॥ ಶ್ರೀನಾಥಜೈನಮಾರ್ಗೋತ್ತಮರೆನಿಸಿ ತಪಖ್ಯಾತಿಯಂತಾಳಿಸರ್ವ- ।
ಜ್ಞಾನಾತ್ಮಾರ್ಥಮಾನ ಪ್ರವರರವರಶಿಷ್ಯರ್ಮಹಾವಾದಿಗಳ್ ವಿ- ॥
ದ್ಯಾನಂದಸ್ವಾಮಿಗಳ್ ತನ್ಮುನಿಗಳನುಜರ್ತಾರ್ಕಿಕಾರ್ಕಾಭಿ- ।
ದಾನಾದಿಮಾಣಿಕ್ಯನಂದಿ ವ್ರತಿಪತಿಗಳವರ್ಶಾಸನೋದ್ಧಾತ್ರಹಸ್ತರ್ ॥ ೨೨ ॥
ತದಪತ್ಯಗುಣಕೀರ್ತಿಪಂಡಿತರವರ್ತರ್ಚಾಸನಖ್ಯಾತಕೋ- ।
ವಿದರಾಸೂರಿಗಳಾತ್ಮಜರ್ವಿಮಲಸ್ತತ್ಪದಾಂಭೋಜಷ- ॥
ಟ್ಪದರುದ್ಯದ್ಗುಣಚಂದ್ರರಂತವರ ಶಿಷ್ಯರೆಂದೀಶಾಸ್ತ್ರಾರ್ಥದೊಳ್ ।
ವಿದಿತಗ್ಗಂಡ ವಿಮುಕ್ತರಿಂ ನಭಯನಂದ್ಯಾಚಾರ್ಯರಾರ್ಯೋತ್ತಮರ್ ॥ ೨೩ ॥

ಕಂದ॥ ಕೃತಕೃತ್ಯರಭಯನಂದಿಗ ।
ಳತನುಜರ್ಸಕಲಚಂದ್ರಸಿದ್ಧಾಂತಿಕರ- ॥
ಪ್ರತಿಮುಸ್ಸರ್ವಾಂಗಮಳಾ- ।
ನ್ವಿತರ್ಗಂಡವಿಮುಕ್ತದೇವಮುನಿಶಿಷ್ಯರ್ ॥ ೨೪ ॥
ಎನಿಸಿದ ಗಂಡವಿಮುಕ್ತರ ।
ತನೂಭವರ್ಚ್ಛರಕರಣಪದವಿದ್ಯಾಪಾ- ॥
ವನ ಮಂತ್ರವಾದದೊಳು ತ್ರಿಭು- ।
ವನಚಂದ್ರ ಮುನೀಂದ್ರರಲ್ತೆ ಬುಧಜನವಂದ್ಯರ್ ॥ ೨೫ ॥

ವೃತ್ತ ॥ ಅತಿಶಯಚಂದ್ರಕೀರ್ತಿಮುನಿರಾಜತಪೋವನರಾಜಕೀರನೂ- ।
ರ್ಜಿತಗುಣಮೇಘಚಂದ್ರಮುನಿವಾಕ್ಯಪಯಃಪ್ಲವರಾಜಹಂಸನು- ॥
ದ್ಯದ್ಗುಣವತ್ಸಲಂ ಸುಕವಿವತ್ಸಲನೂರ್ಜಿತಕೀರ್ತಿಭಾರತಿ ।
ಪತಿಎನೆಪೋಲಲಾರ್ತಪರಮತ್ತಿನವರ್ ಶ್ರುತಕೀರ್ತಿದೇವರಂ ॥ ೨೬ ॥

ಕಂದ॥ ಶ್ರೀವರ್ಧಮಾನಯತಿವರ- ।
ರಾವಿಶ್ರಿತಬೋಧವಾರ್ಧಿವಾಕ್ ಶ್ರೀಧರರಂ ॥
ತ್ರೈವಿದ್ಯಾವಾಸುಪೂಜ್ಯರ ।
ನಿವಸುಧಾವಂಧ್ಯರೆನಿಸಿದುದಯೇಂದುಗಳಂ ॥ ೨೭ ॥
ನೆನೆವೆಂ ಕುಮುದೇಂದುಗಳಂ ।
ಜನನುತನೇಮಿಚಂದ್ರಭಟ್ಟಾರಕರಂ ॥
ವಿನುತತ್ರಿಭುವನಚಂದ್ರರ ।
ನನವರತಂ ಬಾಲಚಂದ್ರವಿದ್ಯಾತ್ರಯರಂ ॥ ೨೮ ॥

ಶ್ರೀವೀರನಂದಿ ತ್ರೈವಿದ್ಯದೇವರ ಸಧರ್ಮಗಪ್ಪ—

ಶ್ಲೋಕ॥ ತೂರ್ಯಾಧ್ಯಯನಸಂಪನ್ನೇ ಶಾಸ್ತ್ರಸಾರಸಮುಚ್ಚಯೇ ॥
ಪಠಿತೇತ್ರೋಪವಾಸಾರ್ಥಂ ಫಲಂ ಸ್ಯಾನ್ಮುನಿಭಾಷಿತಂ ॥ ೫೪ ॥
ಚತುರಧ್ಯಾಯಸಂಶುದ್ಧೇ ಶಾಸ್ತ್ರಸಾರಸಮುಚ್ಚಯೇ ॥
ಪಠಿತೇನಂತಸೌಖ್ಯಂ ಸ್ಯಾದ್ಭಾಷಿತಂ ಮುನಿಪುಂಗವೈಃ ॥ ೫೫ ॥
ಉಕ್ತಂ ಶ್ರೀಮೂಲಸಂಘೇ ಶ್ರೀಬಲಾತ್ಕಾರಗಣಾಧಿಪೈಃ ॥
ಶ್ರೀಮಾಘನಂದಿ ಸೈದ್ಧಾಂತೈಃ ಶಾಸ್ತ್ರಸಾರಸಮುಚ್ಚಯಂ ॥ ೫೬ ॥
ಸ್ವಸ್ತಿಶ್ರೀಮೂಲಸಂಘೇಸ್ಮಿನ್ ಬಲಾತ್ಕಾರಗಣೇಜನಿ ॥
ಶ್ರೀಮಾಘನಂದಿ ಸೈದ್ಧಾಂತಿ ಶಾಸ್ತ್ರಸಾರಾಖ್ಯಶಾಸ್ತ್ರಕೃತ್ ॥ ೫೭ ॥

ವೃತ್ತ॥ ಶ್ರೀಯುಂ ಶ್ರೀದೇವರಾಜಸ್ತುತನನುಪನಿಃಕಾಮನಾಚಾರಸಾರಂ ।
ನ್ಯಾಯಾನ್ಯಾಯಪ್ರಭೇದಪ್ರಕಟನಪಟುಶ್ಶುಂಭದ್ವಯಾಂಭೋಧಿಯೋಗೀ ॥
ಜ್ಯಾಯಂ ಶ್ರೀಮಾಘನಂದಿವ್ರತಿಪತಿನುತರಾದ್ಧಾಂತಚಕ್ರೇಶ್ವರಂ ವಾ- ।
ಕ್ಶ್ರೀಯುಂ ಕೂರ್ತಿಗೆ ಭವ್ಯಾವಳಿಗೆ ಗುರುಗಳಪ್ಪೈವರಂತೊಪ್ಪೆತೋರ್ಪಂ ॥ ೨೯ ॥
ಅರವೆಣ್ಣಾದನದೋರ್ವನೋರ್ವನುರಮಂ ಕೂರ್ತಿತ್ತನೋರ್ವಗ್ಗೆದೇ- ।
ವರೊಳೋರ್ವಂ ಮೋರೆಗೆಟ್ಟನೆನ್ನೊಳೆಡರ್ದಂದಂಗೋದ್ಭವಂ ಬಿಂಕಮೇ- ॥
ರಿರೆ ತನ್ನೊಳ್ ಗುಣದಿಂದೆ ಕಟ್ಟೆ ವೃಷದಿಂದಂ ಪೆಟ್ಟುಮಂ ಪೂಡಿನೋ- ।
ಡೀ ಸೈದ್ಧಾಂತಿಕ ಮಾಘನಂದಿಯೆಳದಂ ಪ್ರೋದ್ಧಾಮನಂ ಕಾಮನಂ ॥ ೩೦ ॥
ವಾರಿಜನಾಭನಂ ಮದುಪನಂ ಹರಿಯಂ ಪಶುಗಾದನಂ ಜಟಾ- ।
ಧಾರಿಕಪರ್ದಿಯಂ ತಿರಿವನಂ ಬಲಗರ್ವದೆಲ್ದನೆಂದಹಂ- ॥
ಕಾರದಿ ಬಂದು ನೀಂ ತೊಡರ್ದೆಯಪ್ಪೊಡೆದರ್ಪಕಮಾಘನಂದಿ ಸೈ- ।
ದ್ಧಾಂತಿಕದೇವರಿಂ ಪಡೆವೆಭಂಗಜಯಂಗಳನಾಜಿರಂಗದೊಳ್ ॥ ೩೧ ॥

ಕಂದ॥ ಮಲ್ಲಿಗೆಯ ನಗೆಮೊಗಂಗಳ್ ।
ಮೆಲ್ಲನೆಬೆಳುಪೇರೆ ಮಂದಮರುತಂ ಭಯದಿಂ- ॥
ದಲ್ಲಲ್ಲಿಗೆ ಹುಗೆ ಮದನನ- ।
ಬಿಲ್ಲಂ ಶ್ರೀಮಾಘನಂದಿಯತಿಪತಿಮುರಿದಂ ॥ ೩೨ ॥

ವೃತ್ತ॥ ಬೆಸೆಯಲುದರ್ಪಕ ನಿನ್ನೊಳುಗ್ರನಳಿಪಂ ಮಾಯಾವಿಳಂ ಪೋಲ್ಪುಡಂ ।
ಪಶುಪಕ್ಕಿನೇರುವನ್ನನೆಲಸದ್ಬೋಧಾಸನಂ ನಿಸ್ಪೃಹಂ ॥
ಬಿಸುಟಂ ಮಾಯೆಯನೊಕ್ಕನುಗ್ರತೆಯನೀಂ ಕೋಡಿಟ್ಟು ಬೋಡಾಗದಿರ್ ।
ಕುಸುಮೋಗ್ರಾಯುಧ ಮಾಘನಂದಿಯತಿಯೊಳ್ ಸೈದ್ಧಾಂತಚಕ್ರೇಶನೊಳ್ ॥ ೩೩ ॥

ಪರಮಾರ್ಹತ್ಸ್ವಮತಾಬ್ಧಿವರ್ಧಿಹಿಮಕೃದ್ಬಿಂಬಂವಿನೇಯಾಂಬುಹೋ- ।
ದ್ಯದ್ರವಿಬಿಂಬನನ್ಯ ಸಮಯಕ್ಷ್ಮೇಭಂ ಬಹತ್ಸಂಬನ- ॥
ಸ್ಮರತಿಶೋಘವಿಡಂಬನೆಂದು ಭರದಿಂ ವ್ಯಾವರ್ಣಿಕುಂ ಸಂತತಂ ।
ಧರೆಯೋರಂತಿರೆ ಮಾಘನಂದಿಯತಿಯಂ ಸಿದ್ಧಾಂತಚಕ್ರೇಶನಂ ॥ ೩೪ ॥

ಯೇನಾರೇಷಪದಾರ್ಥಸಾರ್ಥಕಥನಂ ಜಾಗದ್ಯತೇ ಸಂತತಂ ।
ಏನಾತಂಕಕಳಂಕಪಂಕಮನಿಶಂ ದೋಧೂಯತೇ ಭೂಯಶಾ ॥
ಏನಶ್ರೀಜಿನರಾಜರಾಜಿತಯಶೋ ಜೇಗೀಯತೇ ಸಾಂಪ್ರತಂ ।
ಸೋಯಂ ಜೀವತು ಮಾಘನಂದಿಯತಿಪಂ ಸೈದ್ಧಾಂತಚಕ್ರೇಶ್ವರಂ ॥ ೩೫ ॥

ಶ್ರುತಕಾಂತಾಕಾಂತಕಾಂತಾಮಲಗುಣಮಣಿಕಾಂತಿಮೋಹವ್ಯೂಹ ।
ದೂರೀಕೃತ ವಿತತ ತಪೋರೂಪರೂಪಾಯತೋದ್ಯ- ॥
ತ್ಪರಮಾನಂದಾಯಲೀಲಾಹೃದಯ ಜಾಜ್ವಾಜ್ವವರ್ಧಸ್ವಲೋಕೇ ।
ಯತಿಪಶ್ರೀಮಾಘನಂದಿರ್ಮುನಿಜನನುತರಾದ್ಧಾಂತಚಕ್ರೇಶನಿತ್ಯಂ ॥ ೩೬ ॥

ತ್ವತ್ಪಾದಾಂಭೋಜಭಕ್ತೇರ್ದ್ಧಿಕತುನಿರುಪಮಂ ಚಿತ್ಸುಖಂ ದೋಷದೂರಂ ।
ನಿತ್ಯಾನಂದಂ ನಿಜೋತ್ಥಂ ಪರಮಸಮರಸಿಭಾವಮತ್ಯಂತಸೇವ್ಯಂ ॥
ರಾದ್ಧಾಂತಾಂಬೋಧಿಚಂದ್ರಂ ಪ್ರತಿತಗುಣನಿಧೇ ಮಾಘನಂದೀವ್ರತೀಂದ್ರಂ ।
ಶ್ರೇಯಾತ್ಸಂ ಸಶ್ವಮದ್ದುದಯಕುಮುದಕೇ ಕಂತುಗರ್ವಾದಿವಜ್ರೀ ॥ ೩೭ ॥

ಸ್ವಸ್ತಿ ಸಮಸ್ತ ಶಮುಖಪ್ರಮುಖಲೇಖಲೇಖರ ಶೋಣಮಣಿಮಾಣಿಕ್ಯಪುಂಜರಂಜಿತಚಾರುಚರಣಾರವಿಂದದ್ವಂದ್ವ ಪರಮಜಿನೇಂದ್ರಚರಣಸ್ಮರಣಪರಿಣಾಂತಃಕರಣಪಾರಸಂಸಾರಪಾರಾವಾರೋತ್ತರಣರುಂ, ಶ್ರೀಮೂಲಸಂಘಕ್ಷೀರವಾರಾಶಿರಂಜಿತ ಬಲೋತ್ಕಾರಗಣೋದಯಾದ್ರಿಂದ್ರಸಮುತ್ಪನ್ನೋದಯ ಚಂದ್ರರಾದ್ಧಾಂತಾತ್ಮಜ ಶ್ರೀಕುಮುದಚಂದ್ರಭಟ್ಟಾರಕದೇವರ ಮನಃಪ್ರಿಯಶಿಷ್ಯರುಂ, ಸ್ವಶುದ್ಧಾತ್ಮಭಾವನಾಧೀಶ್ವರ ಗುಣೋಪೋಷ್ಯರುಂ, ರಾಗದ್ವೇಷದ್ವಯವರ್ಜಿತರುಂ, ಭಕ್ತಿಭರವಿನಯಜನನೀರೇಜಮಿತ್ರರುಂ, ಭೇದಾಭೇದರತ್ನತ್ರಯ ಪವಿತ್ರಗಾತ್ರರುಂ, ತ್ರಿಮೂಢ, ತ್ರಿಶಲ್ಯ, ತ್ರಿಗಾರವ, ತ್ರಿದಂಡ ಖಂಡಿತರುಂ, ಚತುರ್ವಿಧಪಾಂಡಿತ್ಯಗುಣಮಂಡಿತರುಂ, ನಿಶ್ಚಯವ್ಯವಹಾರಪಂಚಾಚಾರಾಂಚಿತರುಂ, ಪಂಚೇಂದ್ರಿಯೇಭಪಂಚಾನನರುಂ,

ಷಡಾವಶ್ಯಕಷಡಾನನರುಂ, ಸಪ್ತಭಯವಿಪ್ರಮುಕ್ತರುಂ, ನವವಿಧಬ್ರಹ್ಮಚರ್ಯಸಮೇತರುಂ, ದಶಧರ್ಮಧರಖ್ಯಾತರುಂ, ಏಕಾದಶೋಪಾಸಕದಶಧರ್ಮೋಪದೇಶನಾಸಮೇತಕರರುಂ, ದ್ವಾದಶಾನುಪ್ರೇಕ್ಷಭಾವನಾಚತುರರುಂ, ನಿಜನಿರಂಜನಪರಮಾತ್ಮತತ್ವಸೇವನಾಕುಶಲರುಂ, ಅಧ್ಯಾತ್ಮಶಾಸ್ತ್ರವೇದಿಗಳುಮಪ್ಪ ಸಿದ್ಧಾಂತಸಾರಸರ್ವಶ್ವಕೋಶಾವಾಸ್ಯೈಕಮೂರ್ತಯೇ ನಮ: ॥ ಶ್ರೀಮಾಘನಂದಾಖ್ಯವಿಶ್ವವಿಖ್ಯಾತಕೀರ್ತಯೇ: ॥

ಶ್ಲೋಕ॥ ನಮೋನಮ್ನಜನಾನಂದಸ್ಯೇಂದಿನೇ ಮಾಘನಂದಿನೇ ॥
ಜಗತ್ಪ್ರಸಿದ್ಧಸಿದ್ಧಾಂತವೇದಿನೇ ಚಿತ್ರಮಾದಿನೇ ॥ ೫೮ ॥

ಟಾ:—ಇತಿ ಶಾಸ್ತ್ರಸಾರಸಮುಚ್ಚಯೇ ಚತುರ್ಥೋಧ್ಯಾಯ: ॥ ೪॥ ಇದು ಪರಮಾಗಮಾಧ್ಯಾತ್ಮವೇದಿಗಳುಂ, ನಿಜಾತ್ಮೋತ್ಥಸುಖ ಸಂಪಾದಿಗಳುಂ, ಶ್ರೀಕುಮುದಚಂದ್ರಭಟ್ಟಾರಕದೇವರ ಪ್ರಿಯಶಿಷ್ಯರುಂ, ಚತುರ್ರಾನುಯೋಗಕುಶಲರುಂ, ಸಿದ್ಧಾಂತಾಮರ್ಧನಿಸುಧಾಕರರುಮಪ್ಪ, ಶ್ರೀಮಾಘನಂದಿ ಸಿದ್ಧಾಂತದೇವರಿಂ ವಿರಚಿಸಲ್ಪಟ್ಟ, ಚತುರಾನುಯೋಗಮೆಂಬೆರಡನೆಯ ಹೆಸರನುಳ್ಳ, ಶಾಸ್ತ್ರಸಾರಸಮುಚ್ಚಯದ ೪ನೆಯ ದ್ರವ್ಯಾನುಯೋಗದ ಕರ್ಣಾಟದವೃತ್ತಿ ಸಮಾಪ್ತವಾಯಿತು.

ಆರ್ಯಾವೃತ್ತ ॥ ಆನಂದಾಬ್ದೇಮಹಿತೇಲೋಕಜನಾನಂದ ಕಂದಳಸಮೇತೇ ॥
ಶ್ರಾವಕಬೃಂದಸನಾಥೇ ಸೋಮೇವಾರೇಹ್ನಿ ಮಕರಗೇಚಂದ್ರೇ ॥ ❁ ॥
ಅಥವಿಜಯದಶಮ್ಯಾಮಾಶ್ವನೇ ನೆಲ್ಲಿಕಾರೇ ।
ವಿಪುಲಮಹಿತಶೋಭೇನಂತನಾಥಸ್ಯ ಗೇಹೇ ॥
ಜಿನಪಗುಣನಿಧಾನಂ ಶಾಸ್ತ್ರಸಾರಾತ್ಮಸಾರಂ ।
ವ್ಯಲಿಖದಮಿತಕೀರ್ತಿಶ್ಚಂದ್ರವಾರಾಶಿಸೂರಿಃ ॥ ❁ ॥
ವೀತರಾಗನೇಶರಣು ॥ ಶ್ರೀವೀತರಾಗಾಯ ನಮಃ ॥
ಶ್ರೀಸರಸ್ವತಿಯೇ ಶರಣು ॥ ಶ್ರೀಲಲಿತಕೀರ್ತಿಮುನಯೇ ನಮ: ॥
ತಪ್ಪಂ ಬರದಾತಂ ಕಡುಜಡನಪ್ಪಾತಂ ಬರದನೆಂದು ಬಯ್ಯಲುಬೇಡಂ ।
ತಪ್ಪಕ್ಕು ಶುದ್ಧಮಕ್ಕುಂ ಇದನಾಂಪ್ರತಿಸಮಾನಮಾಗಿಂ ಬರೆದೆಂ ॥
ಶ್ರೀವೀರನಿರ್ವಾಣ ಸಂವತ್ ೨೪೪೨ । ಸನ್ನ ೧೯೧೬ ಶಕೆ ೧೮೩೭ ಮಾಘ ಶುದ್ಧ ೮.
॥ ಶ್ರೀಶಾರದಾಗುರುಭ್ಯೋ ನಮ: ॥

ಶಾಸ್ತ್ರಸಾರಸಮುಚ್ಚಯಂ ಸಮಾಪ್ತಂ

ಈ ಗ್ರಂಥವನ್ನು

ಸರಗೂರು ಏಲಕ ಚಂದ್ರಸಾಗರ ಸ್ವಾಮಿಯವರು

ಬೆಳಗಾವಿ

ಶ್ರೀಮಹಾವೀರ ಮುದ್ರಣಾಲಯದಲ್ಲಿ

ಅಚ್ಚುಹಾಕಿಸಿದರು.

ತಾ|| ೧೧-೨-೧೯೧೬.

जेथें वागति तिर्यक्प्राणी देखिल त्यजूनिया वैर ।
ऐसा जिनधर्माचा महिमा वर्णू अगाध कोठवर ॥





